॥ ಹರಿಃ ಓಂ ॥

ಶ್ರೀ ಜಗನ್ನಾಥದಾಸಾರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ

ಪ್ರಕಟನೆ : ೭೦ ( ಭಾಗ ೪ )





... ಶಕೆ ೧೬೪೯ ಕೀಲಕ ಸಂ॥ ಶ್ರಾವಣ ಶು॥ ೨

... ಯಾತ್ರೆ. ಶಕೆ ೧೭೩೧ ಶುಕ್ಲ ಸಂ॥ ಭಾದ್ರಪದ ಶು॥ ೯

ಹರಿಃ ಓಂ

**ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ,**
**ಲಿಂಗಸೂಗೂರು.** **ಪ್ರಕಟನೆ (೭೦)**

— ಶ್ರೀ ಅಪರೋಕ್ಷಜ್ಞಾನಿಗಳಾದ —

**ಶ್ರೀಮಜ್ಜಗನ್ನಾಥ ದಾಸಾರ್ಯರ ವಿರಚಿತ**

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ ಭಾಗ—೪.

ಸಂಧಿ ೧೪ರಿಂದ—ಸಂಧಿ ೧೮ ಪೂರ್ತಿ

೧. ಸಂಧಿಗಳ ಸಾರ ಮತ್ತು ಪದ್ಯಾರ್ಥ ಸವಿಸ್ತರ—ಸಂಪಾದಕರು.
೨. ದ್ರೌಪದೀಶಪತಿ ವಿಠಲರ ಟೀಕಾ—೧೪ನೇ ಸಂಧಿ, ೨ ಪದ್ಯ. ೧೫ನೇ ಸಂಧಿ
೩. ಶ್ರೀ ಜಂಬುಖಂಡಿ ಆಚಾರ್ಯರ ಭಾವಸೂಚನೆ ಟೀಕಾ.
೪. ಶ್ರೀ ಜಂಬುಖಂಡಿ ಆಚಾರ್ಯರ ವ್ಯಾಸದಾಸ ಸಿದ್ಧಾಂತ ಕೌಮುದೀ.
೫. ಸಂಸ್ಕೃತ ಟೀಕೆಗೆ



ಕನ್ನಡ ಅನುವಾದಕರು :

**ಪಂಡಿತವರ್ಯ ಶ್ರೀ ಕೇಶವಾಚಾರ್ಯರು ಜಾಲಿಹಾಳ,**
**ಮುಕ್ಕಾಂ, ಗದಗ.**

ಶಕೆ ೧೮೬೩ ಪ್ಲವ ಸಂ॥ ಮಾರ್ಗಶಿರ ಶು॥ ೧೫
೨೧ನೇ ಡಿಶಂಬರ್ ೧೯೬೧ನೇ ಇಸವಿ.

ಮೊದಲನೇ ಆವೃತ್ತಿ ೧೦೦೦ ಪ್ರತಿಗಳು

ಪುಟಗಳು ಬೆಲೆ ೬ ರೂ.

ಮುಂಗಡಕೊಟ್ಟ ಚಂದಾದಾರರಿಗೆ ೬ ಭಾಗಕ್ಕೆ ೩೦ ರೂ.
ಅಂಚೆ ವೆಚ್ಚ ಸಹ

ಸಂಪಾದಕ, ಸಂಗ್ರಾಹಕ :
**ಹನುಮಂತರಾವ ಗೊರಾಬಾಳ,**
ಲಿಂಗಸೂಗೂರು.

ಪ್ರಕಾಶಕರು :
**ಸಂಚಾಲಕ ಶ್ರೀ ವರದೇಂದ್ರ**
**ಹರಿದಾಸ ಸಾಹಿತ್ಯ ಮಂಡಲ,**
ಲಿಂಗಸೂಗೂರು.



## ಅ ರ್ಪ ಣೆ

ಶ್ರೀಮಜ್ಜಗನ್ನಾಥ ದಾಸಾರ್ಯರ ವಿದ್ಯಾ ಗುರುಗಳು
ಶ್ರೀ ವರದೇಂದ್ರ ಗುರು ಸಾರ್ವಭೌಮರ
ಹೃತ್ಕಮಲ ಮಧ್ಯನಿವಾಸಿ ಶ್ರೀಮದ್ರಾಘವೇಂದ್ರ ಗುರು
ಸಾರ್ವಭೌಮರ ಅಂತರ್ಗತ ಮಧ್ವೇಶನಾದ
ಶ್ರೀ ಮೂಲ ರಾಮಚಂದ್ರನ ಅಡಿದಾವರೆಗಳಲ್ಲಿ

## ಮಹದುಪಕಾರಸ್ಮರಣೆ

**ಶ್ರೀ ಹರಿಕಥಾಮೃತಸಾರ ಪಂಚರತ್ನ ಪ್ರಕಾಶಿಕಾ ಭಾಗ ೧-೨ಕ್ಕೆ**
ಮಾನ್ಯ ಮೈಸೂರು ಸರಕಾರದ
**ಶ್ರೀ ಡೈರೆಕ್ಟರ್ ಆಫ್ ಲಿಟೆರರಿ ಅಂಡ್ ಕಲ್ಚರಲ್ ಡೆವಲಪ್‌ಮೆಂಟ್**
ಇವರು ಬಹುಮಾನರೂಪವಾಗಿ ಆರುನೂರು (೬೦೦) ರೂಪಾಯಿಗಳನ್ನು
ಸಹಾಯ ನೀಡಿದ ಮಹನೀಯರಲ್ಲಿ ವಂದನಪೂರ್ವಕ
ಧನ್ಯವಾದಗಳನ್ನರ್ಪಿಸುತ್ತೇವೆ.

ಮುದ್ರಕರು :

ಸಂಧಿ ೧೪ರಿಂದ ೧೭ ನೇ ಸಂಧಿಯವರೆಗೆ
೧೮೩೬ ಪುಟ. ೨೨ ಫಾರಮು
**ಶ್ರೀ ಪಿ. ಎನ್. ವೈದ್ಯನಾಥನ್,**
ಯುಗಾಂತರ ಮುದ್ರಣಾಲಯ,
೧ನೇ ಮೈನ್ ರೋಡು,
ಚಾಮರಾಜಪೇಟೆ, ಬೆಂಗಳೂರು-೧೮.

ಪುಟ ೧೮೩೭ (ಫಾರಂ ೨೩)ರಿಂದ ಮುಂದೆ
ಸಮಗ್ರ ಮುಖಪತ್ರ ಇತ್ಯಾದಿ
**ಸುಬೋಧ ಮುದ್ರಣಾಲಯ,**
ಅಂಗಡಿ ಬೀದಿ, ಚಾಮರಾಜಪೇಟೆ,
ಬೆಂಗಳೂರು-೧೮.

ಶ್ರೀ ಶ್ರೀ ಉಪೇಂದ್ರ ತೀರ್ಥ ಶ್ರೀಪಾದಂಗಳವರಿಂದ ಅನುಗೃಹೀತ
ಶ್ರೀಮಜ್ಜಗನ್ನಾಥದಾಸರ ಉಪಾಸ್ಯ
**ಗರುಡವಾಹನ ಶ್ರೀ ಲಕ್ಷ್ಮೀನರಸಿಂಹ ದೇವರು**



**ನರಸಿಂಹ ಪಾಹಿ ಲಕ್ಷ್ಮೀನರಸಿಂಹ। ಗರುಡವಾಹನ ಲಕ್ಷ್ಮೀನರಸಿಂಹ**

# ವಿಷಯಾನುಕ್ರಮಣಿಕೆ

## ಒಪ್ಪೋಲೆ

(೧೬೭೭ ಪುಟದಿಂದ ೧೭೪೦ ಪುಟದವರೆಗೆ ೧೭೭೭ ಎಂದೂ, ೧೮೪೦ ಎಂದೂ ತಪ್ಪು ಬಿದ್ದಿದೆ ತಿದ್ದಿಕೊಳ್ಳಿರಿ.)

ಪೋಷಕರು ಮತ್ತು ಮುಂಗಡ ಚಂದಾ ಕೊಟ್ಟ ಚಂದಾದಾರ ಮಹದುಪಕಾರ ಸ್ಮರಣೆ.

## ಚಿತ್ರಗಳು

೧. ಮುಖಪತ್ರ-ಶ್ರೀ ಜಗನ್ನಾಥದಾಸಾರ್ಯರು ಇದ್ದಾಗ್ಗೆ ಅವರನ್ನು ನೋಡಿ ಗರುಡಾದ್ರಿ ಸುರಪುರ ಇವರು ಬರೆದುದು.

೨. ವೈಕುಂಠ-೧೫ನೇ ಸಂಧಿಯಲ್ಲಿ ಪೂರ್ವ, ದಕ್ಷಿಣ, ಪಶ್ಚಿಮೋತ್ತರ ದ್ವಾರಗಳ ನಾಲ್ಕು ಚಿತ್ರಗಳು, ಶ್ರೀಮಜ್ಜಗನ್ನಾಥದಾಸಾರ್ಯರ ರಥ, ಸಂಪಾದಕನಿಂದ ಶಾಸ್ತ್ರೋಕ್ತ ಶ್ರೀ ದಾಸಾರ್ಯ ಪ್ರೇರಣೆಯಂತೆ ೩೫ ವರ್ಷಗಳ ಹಿಂದೆ ಮಾಡಿಸಿದ್ದು.

ಶ್ರೀ ಲಕ್ಷ್ಮೀ ವೆಂಕಟೇಶಾತ್ಮಕ ಶ್ರೀ ಲಕ್ಷ್ಮೀನರಸಿಂಹ ಪ್ರಸನ್ನ

ಶ್ರೀ ಗುರುರಾಜೋ ವಿಜಯತೇ

# ಭಕ್ತರ ಆಪತ್ತು ಕಳೆದು ಚಿನ್ಮೂರ್ತಿ ಮನದಿ ಸ್ಫೂರ್ತಿಸಲು ಲಿಂಗಾಕಾರನಾದ ಕನಕಾಚಲಪತಿ ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ

## ಮಂಗಳ ಪದಗಳು

ಪದ ರಾಗ ಕಾಂಬೋಧಿ—ಝಂಪಿ ತಾಳ

ಕನಕಮುನಿ ಕರಕಮಲ ಪೂಜಿತಾಂಘ್ರೀ ।
ಮನುಜ ಮೃಗವೇಷ ಮಾರಮಣ ನಿನಗಾ ನಮಿಪೆ ॥ ಪಲ್ಲವಿ ॥

ನಿರ್ದೋಷ ಸುಖಪೂರ್ಣ ನಿರವಧಿಕ ಮಹಮಹಿಮ ।
ಸ್ವರ್ಧುನಿ ಪಿತ ಸಮಾಭ್ಯಧಿಕ ಶೂನ್ಯ ॥
ವರ್ಧಿಸಲಿ ನಿನ್ನಲ್ಲಿ ಸದ್ಭಕ್ತಿ ಖಳ ಸಂ ।
ಪ್ರಮರ್ದನ ಮಮಃ ಸ್ವಾಮಿ ಸರ್ವರಂತರ್ಯಾಮಿ ॥ ೧ ॥

ತೀರ್ಥ ಪದ ನಿನ್ನ ಸತ್ಕೀರ್ತಿ ಸರ್ವತ್ರ ಸಂ ।
ಕೀರ್ತಿಸುವ ಭಕ್ತರ ಭವಾಬ್ಧಿ ಹರನೆ ॥
ಪಾರ್ಥಸಖ ಸರ್ವದಾ ಪ್ರಾರ್ಥಿಸುವೆ ನಿನ್ನ ಚಿ ।
ನ್ಮೂರ್ತಿ ಮನದಲ್ಲಿ ಸ್ಫೂರ್ತಿಸಲಿ ಸರ್ವದಾ ॥ ೨ ॥

ಸೂತ್ರನಾಮಕ ಪ್ರಾಣ ಮಿತ್ರ ಭಾರತ ಪಂಚ ।
ರಾತ್ರಾದಿ ಆಗಮಸ್ತೋತ್ರ ಪ್ರಿಯಾ ॥
ಕ್ಷೇತ್ರಜ್ಞ ಶ್ರೀ ಜಗನ್ನಾಥ ವಿಠಲ ಅಹೋ ।
ರಾತ್ರಿ ನಿನ್ನವರ ಸಹವಾಸವೇ ಕೊಡು ಎನಗೆ ॥ ೩ ॥

॥ ಶ್ರೀಗುರು ಮಧ್ವೇಶಾರ್ಪಿತವು ॥

# ಶ್ರೀ ವೆಂಕಟೇಶ ದೇವರ ಸ್ತೋತ್ರ

ರಾಗ ಪೂರ್ವಿ—ತ್ರಿವಿಡಿ ತಾಳ

ಗಿರಿರಾಜಾ ಗಿರಿರಾಜಾ । ತರಣಿ ಶತ ಸುರುಚಿ ತೇಜ ವೆಂಕಟ ॥ ಪಲ್ಲವಿ ॥

ಆತನ ಕಾಣದೆ । ಸಾರಿದೆ ತ್ರಿಜಗ ವಿ ।
ಹಾರ ಪಿಡಿಕರ ಸ । ವಿಾರಾಶನ ಶ್ರೀ ॥ ೧ ॥

ಶ್ರೀ ಕಮಲಭವ ಪಿ । ನಾಕಿ ಮುಖಸರಾ ।
ನೀ ಕರಾಳ್ದ ಲೋ । ಕೈಕ ಶರಣ್ಯ ॥ ೨ ॥

ಮನೋವಾಕ್ಕಾಯದಿ । ಮನಸಿಜ ಪಿತ ನಿ ।
ನ್ನನು ಧೇನಿಸುವಂ । ತನುದಿನ ಮಾಡೋ ॥ ೩ ॥

ನಂಬಿದ ಭಕ್ತ ಕು । ಟುಂಬಿಯೆಂಬದು ।
ಜಾಂಬಕ ಬಲ್ಲೆ ಕೃ । ಪಾಂಬುಧಿ ಕರುಣಿಸೊ ॥ ೪ ॥

ಸಟಿಯಲ್ಲೀ ನುಡಿ । ದಿಟವೆಂಬರು ಬುಧ ।
ಕಟಕ ಜಗನ್ನಾಥ ವಿಠಲ ವಿಹಂಗಪ ॥ ೫ ॥

॥ ಶ್ರೀ ಗುರು ಮಧ್ವೇಶ ಕೃಷ್ಣಾರ್ಪಣಮಸ್ತು ॥

---

# ಮಂಡಲದ ಬಿನ್ನಹ

ಈವರೆಗೆ ಹರಿಕಥಾಮೃತಸಾರ ಟೀಕಾ ಪಂಚರತ್ನ ಪ್ರಕಾಶಿಕಾ ಅಚ್ಚಿನ ಕೆಲಸ ಪ್ರಾರಂಭವಾಗಿ ಸುಮಾರು ೨ ವರ್ಷ ೧೦ತಿಂಗಳಾಯಿತು. ಹೋದ ವರುಷ ಪುಷ್ಯಮಾಸದಲ್ಲಿಯೇ ೩ನೇ ಭಾಗ ಅಚ್ಚಾಗಿ ಪೋಷಕರು, ಚಂದಾ ದಾರರು ಇತರ ಓದುಗರ ಕೈ ಸೇರಿದೆ.

೪ನೇ ಭಾಗವು ಮಾರ್ಚಿ ತಿಂಗಳ ಪ್ರಾರಂಭಕ್ಕೆ ಯುಗಾಂತರ ಪ್ರೆಸ್ಸಿನಲ್ಲಿ ಕೆಲಸ ಶುರು ಮಾಡಿತು. ಮೇ ತಿಂಗಳ ಆಖೈರ ಒಳಗಾಗಿ ಕೊಡುವೆನೆಂದು ವಾಗ್ದಾನಗಳಾದವು. ಮುಂದೆ ೪-೫ ತಿಂಗಳಲ್ಲಿ ಬಹು ವಿಶ್ವಪ್ರಯತ್ನದಿಂದ ೧೨ ಫಾರಮು (೧೯೨) ಪುಟ ಅಚ್ಚಾಗಿ ಕೆಲಸ ನಿಂತಿತು. ಪುನಃ ಬೆಂಗಳೂರಿಗೆ ಬಂದು ಕಾಗದ ಕೊಡಿಸಿದರೂ ೭ ಫಾರಮು (೧೧೨) ಪುಟ ಅಚ್ಚಾಯಿತು. ಅಲ್ಲಿಂದ ಪ್ರೆಸ್ಸಿನವರು ಕಾಗದ ಸಿಗುವುದಿಲ್ಲವೆಂಬ ನೆಪದಿಂದ ೩ ತಿಂಗಳ ಕೆಲಸ ನಿಲ್ಲಿಸಿಯೇಬಿಟ್ಟರು. ಮುಂದೆ ಕೆಲಸ ಸಾಗಲಿಲ್ಲ. ೪ ತಿಂಗಳ ಅವಧಿಯಲ್ಲಿ ಈ ಕೆಲಸ ಬದಿಗೊತ್ತಿ, ಅನಾದರಮಾಡಿ, ಕೆಲಸವೇ ನಿಲ್ಲಿಸಿ, ತಮ್ಮ ೧೮-೧೯ ಟೆಕ್ಸ್ಟ್ ಬುಕ್ ಅಚ್ಚುಮಾಡಿಕೊಂಡರು.

ಕೆಲಸ ನಿಂತ ವರ್ತಮಾನ ತಿಳಿದೊಡನೆ ಕಾರ್ತಿಕ ಶುದ್ಧದಲ್ಲಿ ಬಂದು ೨೦ ದಿನ ಎದುರಿಗೆ ಕುಳಿತರೆ ೧೬ ಪುಟ ಕಂಪೋಜ್ ಆಗಿ ಪ್ರಿಂಟ್ ಆಗಲು ವಿಶ್ವ ಪ್ರಯತ್ನವಾಯಿತು. ಮುಂದೆ ಸಾಗುವುದಿಲ್ಲವೆಂದು ತಿಳಿದು, ೨೫ನೇ ಫಾರಂ ನಿಂದ ಎರಡನೇ ಪ್ರೆಸ್ಸಿನಲ್ಲಿ ಕೆಲಸ ಕೊಟ್ಟು ಪ್ರಾರಂಭಿಸಿ ಈ ೧೦-೧೧ ತಿಂಗಳ ಅವಧಿಯಲ್ಲಿ ಮಹಾ ಪ್ರಯಾಸದಿಂದ ೧೮ನೇ ಸಂಧಿ ಪೂರ್ತಿ ಅಚ್ಚಾಗಲು ತಡ ವಾಯಿತು. ೨೦ನೇ ಸಂಧಿ ಪೂರ್ತಿ ಮಾಡಲು ಇಚ್ಛೆ ಪ್ರೇರಿಸಿದ ದಾಸರ ಮನಸ್ಸಿಗೆ ಬರಲಿಲ್ಲ. ಹೀಗಾಗಿ ಬಹು ತಡವಾದ ಕಾರಣ ಎಲ್ಲರಲ್ಲಿಯೂ ಕ್ಷಮಾಪಣೆ ಬೇಡುತ್ತೇವೆ.

೧೪ನೇ ಸಂಧಿಯಿಂದ ೧೮ನೇ ಸಂಧಿ ಪೂರ್ತಿ ಬಹು ಪ್ರಮೇಯ ಶಾಸ್ತ್ರಾರ್ಥ ವಿಚಾರವಿದೆ. ಪದ್ಯಾರ್ಥ ಸರ್ಗಸಾರವು ಅನೇಕ ಆಧಾರದೊಂದಿಗೆ

ಬಿಂಬ ಪ್ರತಿಭಾವ ವಿಚಾರ, ಕಾಲೋಪಾಸನೆ ಕರ್ಮದಿಂದ ಬಿಡುಗಡೆ ಮಾಡಲು ಶ್ರೀಹರಿ ಸ್ವಾತಂತ್ರ ಕರ್ತೃನೆಂಬ ಸ್ವಗತ ಸ್ವಾತಂತ್ರ್ಯ, ದತ್ತ ಸ್ವಾತಂತ್ರ್ಯ ವಿಚಾರ ವಿಷದೀಕರಿಸಿದೆ. ಬಿಂಬೋಪಾಸನ ೧೮ನೇ ಸಂಧಿ ಯಲ್ಲಿಯೂ ಬಹು ಗಹನ ವಿಚಾರಗಳನ್ನು ಸರ್ಗಸಾರ ಪದ್ಯಾರ್ಥದಲ್ಲಿ ವಿವರಣೆ ಮಾಡಿದೆ. ಸಜ್ಜನರು ಬಿಡದೇ ಓದಿ ಆನಂದಪಡಲೆಂದು ಪ್ರಾರ್ಥಿಸುವೆ.

## ಉಪಕಾರ ಸ್ಮರಣೆ

ಈ ನಾಲ್ಕನೇ ಭಾಗ ಪ್ರಕಟಿಸಲು ಧನ ಸಹಾಯು ನೀಡಿದ ಎಲ್ಲರ ಉಪ ಕಾರ ಸ್ಮರಿಸುತ್ತದೆ. ಈ ನಾಲ್ಕನೇ ಭಾಗಕ್ಕೆ ಸುಂದರವಾಗಿ ಬಹು ಶಾಸ್ತ್ರ ಗರ್ಭಿತವಾಗಿ ವಿಶದವಾಗಿ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ ಆದ್ಯವಂಶಜ ರಾದ ಪಂಡಿತರತ್ನ ಶ್ರೀಮದ್ಭಾಗವತ ಪ್ರವಚನ ಧುರೀಣ, ಭಾಗವತರತ್ನ, ಶ್ರೀ ವ್ಯಾಸದಾಸ ಸಾಹಿತ್ಯ ಮುಕುಟ ಮಣಿ, ಹರಿಕಥಾಮೃತಸಾರ ವಕ್ತಾರ ಜ್ಞಾನಾ ನಂದ, ಅನೇಕ ಪದವೀಧರರಾದ ಶ್ರೀ ವೇದಶಾಸ್ತ್ರ ಸಂಪನ್ನ ಆದ್ಯ ಸೇತೂ ರಾಮಾಚಾರ್ಯ (ತಾತಾಚಾರ್ಯ) ಮುಕ್ಕಾಂ ಬೆಂಗಳೂರು ಇವರ ಚರಣಾರವಿಂದದಲ್ಲಿ ಅನೇಕ ಪ್ರಣಾಮುಗಳನ್ನರ್ಪಿಸಿ, ಚಿರ ಋಣಿಯಾಗಿದ್ದೇವೆ. ಅಲ್ಲದೆ ಶ್ರೀ ಆಚಾರ್ಯರು ಈ ಸಂಚಾಲಕನಿಗೆ ಭಾಗ ೨-೩-೪ ಅಚ್ಚಿನ ಕಾಲ ದಲ್ಲಿ ೬-೮ ಸಲ ಬೆಂಗಳೂರಿಗೆ ಬಂದಿರುವಾಗ್ಗೆ ಸಂಚಾಲಕನ ಇರುವಿಕೆಗೆ ಆಶ್ರಯಕೊಟ್ಟು ಅನೇಕ ರೀತಿ ಸೌಕರ್ಯಗಳನ್ನು ಒದಗಿಸಿಕೊಟ್ಟ ಶ್ರೀ ಆಚಾರ್ಯರಿಗೂ, ಶ್ರೀ ಆಚಾರ್ಯರ ಎಲ್ಲ ಕುಟುಂಬದವರ ಮಹದುಪಕಾರ ಸ್ಮರಿಸಿ ದಂಡಪ್ರಣಾಮುಗಳನ್ನರ್ಪಿಸುವೆ. ಮತ್ತು ನಿಂತಿದ್ದ ಅಚ್ಚಿನ ಕಾರ್ಯ ಪುನಃ ಕೈಯ್ಯಲ್ಲಿ ತೆಗೆದುಕೊಂಡು ಬೇಗನೆ ಪೂರೈಸಿಕೊಟ್ಟ ಸುಬೋಧ ಪ್ರೆಸ್ಸಿ ನವರಲ್ಲಿ ಕೃತಜ್ಞತೆ.

ಶಕೆ ೧೮೮೩ ಪ್ಲವ ಸಂ॥<br>ಮಾರ್ಗಶಿರ ಶು॥ ೧೫<br>೨೧-೧೨-೬೧.

ದಾಸರ ದಾಸ,<br>**ಹನುಮಂತರಾವ ಗೊರಾಬಾಳ,**<br>ಸಂಚಾಲಕ ಮಂಡಲ.

# ಸೂಚನೆ

ಶಾ|| ಶಕೆ ೧೮೬೬ರಲ್ಲಿ ನಮ್ಮ ಮಂಡಲವು ಸ್ಥಾಪಿತವಾಗಿದೆ. ಆಷಾಢ ಶು|| ೭ ಶ್ರೀ ವರದೇಂದ್ರರ ರಥೋತ್ಸವ ಸಮಯಕ್ಕೆ ೧೭ ವರ್ಷವಾಗಿದೆ. ಇದೇ ಈ ವರ್ಷ ರಥೋತ್ಸವ ಸುಸಮಯದಲ್ಲಿ ಸಾರ್ವಜನಿಕ ಸಭೆಯಲ್ಲಿ ಮಂಡಲ ಅಧ್ಯಕ್ಷರೂ, ಸದಸ್ಯರನ್ನಾಗಿ ಒಮ್ಮತದಿಂದ ೧೩ ವರ್ಷದವರೆಗೆ ಆರಿಸಿದ ಕೆಳಕಂಡ ಅಧ್ಯಕ್ಷಾದಿಗಳ ವಿವರ :—

೧. ಶ್ರೀ ರಾಮಪ್ಪಯ್ಯನವರು ದೆ|| ಕಾಟಾಪುರ. ಹಿಂದಿನಂತೆ **ಅಧ್ಯಕ್ಷರು.**

೨. ಶ್ರೀ ಭೋಗೇಂದ್ರರಾಯರು, ಅಡ್ವೋಕೇಟ್, ಲಿಂಗಸೂಗೂರು. ಹಿಂದಿನಂತೆ **ಉಪಾಧ್ಯಕ್ಷರು.**

೩. ಶ್ರೀ ಹನುಮಂತರಾವ ಗೊರಾಬಾಳ, ಹಿಂದಿನಂತೆ **ಸಂಚಾಲಕ.** ಈತನಿಗೆ ಹಿಂದಿನಂತೆ ಮಂಡಲ ಸರ್ವಾಧಿಕಾರವನ್ನೂ, ಇನ್ನೊಬ್ಬ ಸಹಾಯಕ ಕಾರ್ಯದರ್ಶಿಯನ್ನೂ ನೇಮಿಸಿಕೊಳ್ಳಲು ಅಧಿಕಾರವಿತ್ತಿದೆ.

## ಸದಸ್ಯರು

೪. ಶ್ರೀ ಕಾಳಾಪುರ ವೆಂಕಟರಾಯರು, ವಕೀಲರು, **ಹಿಂದಿನಂತೆ ಸದಸ್ಯರು.**

೫. ಶ್ರೀ ಭೀಮಾಚಾರ ಕೊಳ್ಳಿ, ಅಡ್ವೋಕೇಟ್, ರಾಯಚೂರು **ಹಿಂದಿನಂತೆ ಸದಸ್ಯರು.**

೬. ಶ್ರೀ ಕೋಲಾರ ರಾಮರಾಯರು, ಅಡ್ವೋಕೇಟ್, ಬಳ್ಳಾರಿ. **ಹಿಂದಿನಂತೆ ಸದಸ್ಯರು.**

## ಹೊಸದಾಗಿ ಆರಿಸಿದ ಸದಸ್ಯರು

೭. ಶ್ರೀಮಾನ್ ಕೆ. ಸೀತಾರಾಮರಾಯರು, ದಾಸ ಪ್ರಕಾಶ, ಮದ್ರಾಸ್. ನಮ್ಮ ಮಂಡಲದ ಮಹಾಪೋಷಕರು. **ನೂತನ ಸದಸ್ಯರು.**

೮. ಶ್ರೀ ವೇ|| ನಾರಾಯಣಾಚಾರ್ಯರು, ಚಿತ್ರಾಪುರ ಜಹಗೀರದಾರರು, ಅಡ್ವೊಕೇಟ್, ಲಿಂಗಸೂಗೂರು. **ನೂತನ ಸದಸ್ಯರು.**

೯. ಶ್ರೀ ವೇ|| ಬುರ್ಲಿ ಬಿಂದು ಮಾಧವಾಚಾರ್ಯರು, ಮಿಂಚಿನಬಳ್ಳಿ, ಧಾರವಾಡ. **ನೂತನ ಸದಸ್ಯರು.**

೧೦. ಶ್ರೀ ವೇ|| ಜಯರಾಮಾಚಾರ್ಯ, ಸದರ ಜೋಶಿ ಗಂಗಾವತಿ. **ನೂತನ ಸದಸ್ಯರು.**

ಈ ಎಲ್ಲ ಮಹನೀಯರಲ್ಲಿ ಪ್ರಾರ್ಥನೆ.

ಮಂಡಲದ ಏಳಿಗೆಗೆ ಕಾಲಕಾಲಕ್ಕೆ ಸೂಕ್ತ ಸಲಹೆಗಳನ್ನಿತ್ತು ಮಂಡಲ ಮಹತ್ವ ಕಾರ್ಯ ಸಾಗಿಸುವದು. ಸ್ವಹಸ್ತದಿಂದ ವಿಶೇಷ ಧನಸಹಾಯ ನೀಡುವದೂ, ಎರಡನೇವರ ದ್ವಾರಾ ಹಣ ಸಹಾಯ ನೀಡಿ ಪ್ರಚಾರ ಮಾಡಿ ಸಹಾಯ ನೀಡುವದಾಗಿ ಪ್ರಾರ್ಥನೆ.

**ರಾಮಪ್ಪಯ್ಯ ದೇ||**
ಅಧ್ಯಕ್ಷರ ಆಜ್ಞೆಯಂತೆ ಸಂ. ಮ.

# ಮುನ್ನುಡಿ

ಸಪ್ತ ದ್ವೀಪವುಳ್ಳ ಭೂಮಂಡಲದಲ್ಲಿ ಜಂಬೂದ್ವೀಪ, ಅದರಲ್ಲಿಯೂ ಅನಧಿಕಾರಿ ದೇವತೆಗಳಿಂದ ಮೋಕ್ಷಾರ್ಥವಾಗಿ ಯಜ್ಞ ಯಾಗ ದಾನ ಮುಂತಾದವುಗಳಿಂದ ಅನುಭವಿಸಿ ಅಶೇಷ ಪುಣ್ಯದಿಂದ ಅಬ್ಜನಾಭ ಸ್ಮರಣ ದಾಯಕ ಜನ್ಮ, ಭಾರತ ಭೂಮಿಯಲ್ಲಿ ನೀಡು ಸ್ವಾಮಿ ಎಂತ ದೇವತೆಗಳಿಂದಲೂ ಇಚ್ಛೆ ಮಾಡಲ್ಪಟ್ಟ ಭಾರತ ಭೂಮಿಯಲ್ಲಿ ಜನ್ಮ ತಾಳಿದ ಪ್ರತಿಯೋಗ್ಯ ಅಧಿಕಾರಿಗಳಾದ ಸಾತ್ವಿಕ ಜೀವರುಗಳಿಂದ ಲಬ್ಧವಾದ ಸಾಧನ ಶರೀರದಲ್ಲಿ ಬ್ರಹ್ಮಜ್ಞಾನ ಸಂಪಾದಿಸಲು ಪರಮ ಅರ್ಹವಾದುದು.

ಅನಧಿಕಾರಿಣೋ ದೇವಾಃ ಸ್ವರ್ಗಸ್ಥಾ ಭಾರತೋದ್ಭವಂ ।
ವಾಂಛತ್ಯಾತ್ಮ ವಿಮೋಕ್ಷಾರ್ಥಂ ಉದ್ರೇಕಾರ್ಥೇ ಅಧಿಕಾರಿಣಃ ॥

ಇತಿ ಭಾಗವತ ಪಂ. ೧೮ನೇ ಅ. ತಾತ್ಪರ್ಯ.

ಅದರಲ್ಲೂ—

ಮಹಿಸ್ಮಥೀ (ಶ್ರೀ ಪೂರ್ಣಪ್ರಜ್ಞ) ರ ಮತ್ತದಲ್ಲಿ ಜನ್ಮ ತಾಳಿದವರು ನಿರ್ದುಃಖ ಆನಂದಾನುಭವರೂಪ ಸುಖವನ್ನು ಹೊಂದಲು ಅರ್ಹವಾದ ಮಾರ್ಗತ್ರಯದಲ್ಲಿ, ಜ್ಞಾನಮಾರ್ಗವು ಮೊದಲನೆಯ ಮೆಟ್ಟಲು. ಅದರಿಂದ ಭಗವಂತನಲ್ಲಿ ಭಕ್ತಿಬಹುಲವಾಗಿ, ವಿಷಯ ವೈರಾಗ್ಯದಿಂದ ಮತ್ತೂ ಹೆಚ್ಚಿನ ಜ್ಞಾನ ಭಕ್ತಿ ಅಭಿವೃದ್ಧಿಯಾಗಿ, ವಿಶೇಷ ಭಗವದ್ಗುಣ ಕರ್ಮ ಜಿಜ್ಞಾಸಾ ಮಾಡಲು ಉತ್ಪನ್ನವಾದ ಭಗವತ್ಪ್ರಸಾದದಿಂದಲೇವೇ ಮೋಕ್ಷ ಸುಖವೆಂಬುದು ಶ್ರುತಿ ಸ್ಮೃತಿ ಇತಿಹಾಸ ಭಾಗವತಾದಿ ಸದ್ಗ್ರಂಥಗಳಲ್ಲಿ ಪ್ರಸಿದ್ಧವಾದ ಮಾತು.

ಇಂತಹ ಸಮ್ಯಜ್ಞಾನ ಸಾಧನಭೂತ ಮಾರ್ಗದಲ್ಲಿ ಶ್ರೀಮದಾಚಾರ್ಯರ ಶಾಸ್ತ್ರಾಧ್ಯಯನ ಒಂದೇ ಶ್ರೇಷ್ಠವಾದ ದಾರಿ. ಅದನ್ನು ಅನುಸರಿಸಿ ಆಚಾರ್ಯರ ಸಿದ್ಧಾಂತದಲ್ಲಿ ಚೆನ್ನಾಗಿ ಮುಳುಗಿ ತೇಲಿ, ಕರತಳಾಮಲಕದಂತೆ ಸಿದ್ಧಾಂತ ಜ್ಞಾನಿಗಳಲ್ಲಿ ಅಗ್ರೇಸರರೂ, ದೇವಾಂಶರೂ, ಅಪರೋಕ್ಷಜ್ಞಾನಿಗಳಾದ ಶ್ರೀ **ಜಗನ್ನಾಥ ದಾಸಾರ್ಯರಿಂದ ರಚಿತವಾದ ಶ್ರೀ ಹರಿಕಥಾಮೃತಸಾರವು** ಸರ್ವ ವೇದ, ಇತಿಹಾಸ, ಭಾಗವತ, ಉಪನಿಷತ್,

ಪಂಚರಾತ್ರ, ಪ್ರಕಾಶ ಸಂಹಿತಾ ಮುಂತಾದ ಸದ್ಗ್ರಂಥಗಳ ಅಭಿಪ್ರಾಯ ವನ್ನೂ, ಪ್ರತ್ಯಕ್ಷರ ಪ್ರತಿ ಪದಗಳನ್ನೂ ಕನ್ನಡದಲ್ಲಿ ಭಾಮಿನೀ ಷಟ್ಪದಿ ರೂಪ ವಾಗಿ ರಚಿಸಿದರು.

ಇವರ ಶಬ್ದರಚನೆಯು ವರ್ಣಾಭಿಮಾನಿಗಳಾದ ದೇವತೆಗಳು "ಅಹ ಮಹಮಿಕಯಾ" ಮುಂದೆ ಬಂದು ದಾಸಾರ್ಯರ ನಾಲಿಗಿ ತುದಿಯಮೇಲೆ ನಿಂದು ಮಾಡಿದ್ದಾಗಿದೆ. ಮತ್ತು ಮೂವತ್ತೆರಡು ಸಂಧಿಯುಕ್ತವಾದ ಈ ಸದ್ಗ್ರಂಥವು ಮೂವತ್ತೆರಡು ಸಂಪೂರ್ಣ ಲಕ್ಷಣಯುತ ಭಾವೀ ಬ್ರಹ್ಮ ಪದಾರ್ಹ ಶ್ರೀಮದಾಚಾರ್ಯಪ್ರಣೀತ ಬ್ರಹ್ಮಸೂತ್ರ ಅನುವ್ಯಾಖ್ಯಾನದಲ್ಲಿ ಹೇಳಿರುವ, ಸಮನ್ವಯ–ಅವಿರೋಧ–ಸಾಧನ–ಫಲಾಧ್ಯಾಯ ಚತುಷ್ಟಯ ಅರ್ಥವನ್ನು ಪ್ರತಿ ಎಂಟು ಸಂಧಿಗೆ ಒಂದು ಅಧ್ಯಾಯವಂ ನಿರೂಪಿಸಿದಂತೆ ಶ್ರೀ ಜಗನ್ನಾಥ ದಾಸಾರ್ಯರು ರಚಿಸಿದ ಹರಿಕಥಾಮೃತಸಾರದ ಅರ್ಥವನ್ನು ಸುಧಾ ಚಂದ್ರಿಕಾ ಉದ್ಗ್ರಂಥಗಳಲ್ಲಿ ಪಂಡಿತರೆನಿಸುವ ಮಾತ್ಸರ್ಯ ಅಹಂ ಕಾರರಹಿತ ಪಂಡಿತಗೇವೆ ಅರ್ಥವಾಗಬೇಕಾದರೆ, ಅವರ ಅನುಗ್ರಹವಿದ್ದರೇನೇ ಅರ್ಥ ಆಗಲು ಶಕ್ಯ. ಕನ್ನಡ ನಾಮದಿಂದ ರಚಿತವಾದುದೇ ವಿನಾ, ಸಂಸ್ಕೃತ ಶಬ್ದಗಳೇ ಬಾಹುಳ್ಯವುಳ್ಳ ಈ ಗ್ರಂಥ, ದಾಸ ಶಾಸ್ತ್ರದಲ್ಲಿ ನೈಜಭಕುತಿವುಳ್ಳ ಭಾವುಕರಿಗೆ ವಿಚಾರಿಸೆ ತುಳಸೀ ಮಿಶ್ರಿತವಾದ ಭಗವತ್ಪಾದೋದಕದಂತೆ, ವಾಸುದೇವ ಪದೋದ್ಭವ ಗಂಗೆಯಂತೆ, ಪುನೀತರನ್ನು ಮಾಡಿ ಭಗದಪರೋಕ್ಷ ಕೊಡುವದರಲ್ಲಿ ಸಂದೇಹವಿಲ್ಲ.

## ಈ ಗ್ರಂಥದ ಮಹತ್ವ

ಶ್ರೀಮದಾಚಾರ್ಯ ಪ್ರಣೀತವಾದ ಮತ್ತು ಇತರ ಸಂಸ್ಕೃತ ಗ್ರಂಥ ಗಳಿಗೆ ಸಂಸ್ಕೃತ ಟೀಕಾ ಟಿಪ್ಪಣಿಗಳು ಜಗತ್ತಿನಲ್ಲಿ ಉಪಲಬ್ಧವಿರುವುದು ಸಹಜ. ಏಕಂದರೆ ಮಧ್ವ ಪ್ರಣೀತ ಗ್ರಂಥಗಳ ಅಭಿಪ್ರಾಯವನ್ನು ಬಲ್ಲವರಾದ ಸರ್ವಜ್ಞ ಕಲ್ಪರಾದ, ಶ್ರೀಮಜ್ಜಯತೀರ್ಥರಿಂದ ಪ್ರಣೀತು, ಸುಧಾಗ್ರಂಥದ ಅಭಿಪ್ರಾಯ ಶ್ರೀ ರಾಘವೇಂದ್ರ ಗುರುಗಳ ಪರಿಮಳವಿಲ್ಲದೇ, ಯಾದುಪತ್ಯವಿಲ್ಲದೇ ತಿಳಿ ಯಲು ಶಕ್ಯವಿಲ್ಲ. ಅಂತೆಯೇ ಆ ಗ್ರಂಥಗಳ ಅಭಿಪ್ರಾಯ ವ್ಯಕ್ತವಾಗಬೇ ಕಾದರೆ, ಟಿಪ್ಪಣೀ ಕರ್ತರು ಸಂಸ್ಕೃತದಲ್ಲಿಯೇ ಮಾಡಿದ್ದಾರೆ.

ಆದರೆ ಕನ್ನಡ ಗ್ರಂಥವೇನು ಎಂದು ಪಾಮರರು ಅನಾದರ ಮಾಡುವ

ಈ ಹರಿಕಥಾಮೃತಸಾರಕ್ಕೆ ಶ್ರೀ ಮದಾಚಾರ್ಯರ ಗ್ರಂಥಗಳಿಗೆ ಟಿಪ್ಪಣಿ ಬರೆದ ತಾಮ್ರಪರಣಿ ಆಚಾರ್ಯರು ಅಪರೋಕ್ಷ ಜ್ಞಾನಿಗಳು ಸಂಸ್ಕೃತದಲ್ಲಿ ೧೧೦ ವರ್ಷ ಕೆಳಗೆ ಟಿಪ್ಪಣಿ ಬರೆದಿದ್ದಾರೆ.

ಮತ್ತು ಅಪರೋಕ್ಷ ಜ್ಞಾನಿಗಳು, ಅವಧೂತ ಶಿರೋಮಣಿಗಳು ಆದ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರು ತಮ್ಮ ಗುರುಗಳಾದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಕೃಷ್ಣಾಪುರಮಠ ಉಡುಪಿಲಿ ವ್ಯಾಸಂಗ ಮಾಡುವ ಕಾಲ ೧೦೦ ವರ್ಷದ ಮುಂಚೆ ಗುರುಗಳ ಪ್ರೀತಿಗೋಸುಗ, ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿ ಟೀಕೆಯನ್ನು ಸಂಸ್ಕೃತದಲ್ಲಿ ಅನೇಕ ಶ್ರುತಿ - ಬೃಹತೀ ಸಹಸ್ರ ಋಗಾರ್ಥಗಳನ್ನೇ ಬರೆದು ಗುರುಗಳಿಗೆ ಅರ್ಪಿಸಿದ್ದಾರೆ. ಈ ಮೊದಲೇ ಜಂಬುಖಂಡಿ ಆಚಾರ್ಯರು ಸಂಸ್ಕೃತ – ಕನ್ನಡಮಿಶ್ರಿತ ಭಾವ ಸೂಚನೆ ಎಂಬ ಟೀಕಾ ಕಾಶಿಯಲ್ಲಿ ಬರೆದಿದ್ದಾರೆ. ಹೀಗೆ ವ್ಯಾಸ ಸಿದ್ಧಾಂತ ದಾಸ ಸಿದ್ಧಾಂತವೆರಡೂ ಬೇರೆ ಅಲ್ಲವೆಂದು ತೋರಿಸಿ ಎರಡರನ್ನೂ ಏಕೀಕರಣ ಮಾಡಿ ಸಂಸ್ಕೃತದಲ್ಲಿಯೇ ಟಿಪ್ಪಣಿ ಬರೆದ ಮೇಲೆ, ಮೂಲ ಮೂವತ್ತೇಳು ಗ್ರಂಥಗಳನ್ನು ರಚಿಸಿರುವ ವಾಯ್ವವತಾರ ಶ್ರೀಮದಾನಂದ ತೀರ್ಥರಿಗೆ ಈ ಗ್ರಂಥವು ಅತಿ ಪ್ರೀತಿ ಪಾತ್ರವಾಗಿದೆಯೆಂಬುದುಕ್ಕೆ ಸಂದೇಹವಿಲ್ಲ. ಮತ್ತು ಕೇವಲ ಭಗವದುಪಾಸನೆ ಬಿಂಬಾ ಪರೋಕ್ಷಕ್ಕೆ ಮುಖ್ಯ ಕಾರಣವಾದ ಗ್ರಂಥ ವಿದೆಂದು ಶ್ರೀ ತಾಮ್ರ ಪರಣಿ ಆಚಾರ್ಯರೆ ಮೊದಲನೆ ಶ್ಲೋಕದ ಟೀಕಾ ದಲ್ಲಿ ವಿಶದೀಕರಿಸಿದ್ದಾರೆ. ಮತ್ತು ವ್ಯಾಸದಾಸ ಸಾಹಿತ್ಯವು ಬಹು ವಿಸ್ತೃತ ವಾಗಿರುವುದರಿಂದ ಅಲ್ಪರಿಂದ ಸಾಧ್ಯವಾಗದೆಂದು ಶ್ರೀಹರಿವಾಯುಗಳು ಶ್ರೀ ದಾಸಾರ್ಯರಿಗೆ ಪ್ರೇರಿಸಿ, ರಚನೆ ಮಾಡಿಸಿಬ – ಅತ್ಯುತ್ತಮ ಗ್ರಂಥ ಪಾರಾ ಯಣ ಅರ್ಥಾನುಸಂಧಾನದಿಂದ ಪಠಿಸಿದರೆ ಸಕಲ ಶಾಸ್ತ್ರಾರ್ಥ ಪಾರಾಯಣ ಪುಣ್ಯ ಲಭಿಸಲಿಕ್ಕೆ ಏನು ಸಂಶಯವಿಲ್ಲ.

ಇಂತಹ ಪರಮ ಶ್ರೇಷ್ಠವಾದ ಶ್ರೀ ಹರಿಕಥಾಮೃತಸಾರಕ್ಕೆ ಮೇಲೆ ಹೇಳಿ ದಂತೆ **ಪಂಚರತ್ನ ಪ್ರಕಾಶಿಕಾ** ಎಂಬ ನಾಮಧೇಯ ಮಾಡಿ ಐದು ವಿಧವಾದ ಟೀಕೆ ಟಿಪ್ಪಣಿಗಳು ಅಪರೋಕ್ಷಾ ಜ್ಞಾನಿಗಳಾದ ಪೂರ್ವಿಕರಿಂದ ಶಾಸ್ತ್ರಸಮ್ಮ ತವಾಗಿ ರಚಿತವಾದವೂ, ಮತ್ತು ಎಂದೂ ಈವರೆಗೆ ಪ್ರಕಟವಾಗದೇ ಇರುವ ಈಗ್ಗೆ ಮೂರು ಭಾಗ ಅಚ್ಚಾಗಿ ಓದುಗರ ಕೈ ಸೇರಿದೆ. ಇದನ್ನು ಸ್ವತಂತ್ರ

ಓದಿ ತಿಳಿಯದೇ ಇದ್ದಲ್ಲಿ ಜ್ಞಾನಿಗಳಿಂದ ತಿಳಿದುಕೊಂಡು, ತಿಳಿದು ಆನಂದ ಪಡಲು ಅವಕಾಶವಾಗಿದೆ, ಮೂರು ಭಾಗದಲ್ಲಿ ೧೩ ಸಂಧಿಗಳು ಅಲ್ಲಿರುವ ಮೂಲ ಪದ್ಯಗಳು, ಸಂಧಿಗಳ ಸಾರಾರ್ಥ, ಸಂಧಿಗಳ ಸಂಬಂಧ ವಿವೇಚನೆ, ವಿಶದವಾದ ಪದ್ಯಾರ್ಥ–ಟೀಕೆ ಟಿಪ್ಪಣಿಗಳ ಭಾವವು ವಿಶದವಾಗಿದೆ.

## ಈಗ ನಾಲ್ಕನೇ ಭಾಗದಲ್ಲಿ

ಹದಿನಾಲ್ಕನೇ ಜೀವನ ಪ್ರಕ್ರಿಯಾ (ಪಿತೃಗಣ) ಸಂಧಿ ಪ್ರಾರಂಭವಾಗಿ ೧೮ನೇ ಬಿಂಬಾ ಪರೋಕ್ಷ ಸಂಧಿ ಪೂರ್ತಿಯಾಗಿದೆ. ಈ ೧೪ನೇ ಸಂಧಿಯ ಸಾರವೇನೆಂದರೆ; ೧೧ನೇ ಸಂಧಿಯಲ್ಲಿ ಪ್ರಕೃತಿಸ್ವರೂಪ ಪ್ರಕೃತಿಬಂಧ ಅದರ ಬಿಡುಗಡೆ ನಿಮಿತ್ಯ ಧ್ಯಾನಪ್ರಕ್ರಿಯಾ ಹೇಳುತ್ತಾ, ನಾಡೀ ಪ್ರಕರಣ ೧೨ನೇ ಸಂಧಿಯಲ್ಲಿ ಪ್ರಕೃತಿಯಲ್ಲಿರುವ ತೇಜೋಮಯ ರೂಪ–ಪ್ರಕೃತಿ ಬಂಧವಿಮೋಚನ, ೧೩ನೇ ಸಂಧಿಯಲ್ಲಿ ಸ್ವತಃ ಪ್ರಮಾಣವಾದ ಅಪೌರುಷೇಯ ವೇದ ವಿಚಾರ, ಓಂಕಾರದಲ್ಲಿ ಇರುವ ಅಕಾರದಲ್ಲಿರುವ ೫೧ ವರ್ಣಗಳು ನಾಮ ಶಬ್ದಾದಿಗಳಿಗೆ ಮೂಲವಾದುದು ಎಂತ ಹೇಳಿ, ಸರ್ವ ಶಬ್ದ ವಾಚ್ಯನಾದ ಭಗವಂತನ ಸ್ಮರಣೆ ಹೇಗೆ ಮಾಡಬೇಕು ಮತ್ತು ನಾಮಸ್ಮರಣೆಗೆ ಅಧಿಕಾರಿ ಯಾರು, ನಾಮ ಸಂಕೀರ್ತನೆ ಮಹತ್ಮೆ ಏನೆಂಬುವದು ತಿಳಿಯಬೇಕಾದರೆ ತ್ರಿಕಾಲದಲ್ಲಿ ಶಾಶ್ವತವಾದ ವೇದ ಉಪನಿಷತ್ತುಗಳ ಮೂಲಕ ಭಗವದ್ಗುಣೋತ್ಕರ್ಷಪೂರ್ವಕ ನಾಮಸ್ಮರಣೆಯೇ ನಿತ್ಯಾನಂದದಾಯಕವಾದುದೆಂದು ಹೇಳಿದ್ದಾರೆ. ಇದೆಲ್ಲ ಸಾಧನ ಅನುಭವವಿಲ್ಲದ ಕಾರಣ ಜಡಕ್ಕೆ ಸಾಧನಾಭಾವ ರಮಾನಾರಾಯಣರು ನಿತ್ಯಮುಕ್ತರಾದ ಅವರಿಗಂತೂ ಸಾಧನ ಇಲ್ಲೇ ಇಲ್ಲ.

ಪರಮಾತ್ಮನ ಇಚ್ಛೆಯಿಂದ ಅನಾದಿ ನಿತ್ಯನಾದ ಚೇತನನಾದ ಜೀವನಿಗೇನೆ ಅವನ ಸ್ವಭಾವ ಅನಾದಿ ಕರ್ಮ ದೇಶ ಕಾಲ ಬಾಧೆ ಪ್ರಕೃತಿ ಬದ್ಧತ್ವ ಅಲ್ಪಜ್ಞ ಅಲ್ಪಶಕ್ತಿ ಅತ್ಯಂತ ಅಸ್ವಾತಂತ್ರನಾದ ಜೀವನಿಗೇನೆ ಈ ಅನಾದಿ ಬಂಧಮೋಚನವಾಗಲು ಸಾಧನ ಉಂಟೆಂಬುದು ಸಕಲ ಶಾಸ್ತ್ರ ಸಮ್ಮತ. ಕಾರಣ ನಿತ್ಯರಾದ ಜೀವರ ಸ್ವರೂಪ, ಪ್ರತಿ ಜೀವರುಗಳಲ್ಲಿ ಭೇದವಿದ್ದರೂ, ಪಿತೃ ಮಾತೃ ಭಾರ್ಯಾ ಪತಿ ಇತ್ಯಾದಿ ವ್ಯಾಮೋಹವನ್ನು ದೂರ ಓಡಿಸಲು ದಾಸಾರ್ಯರು ಜೀವನಪ್ರಕ್ರಿಯಾ ಸಂಧಿಯೆಂಬ ೧೪ನೇ ಸಂಧಿಯನ್ನು ಉಪಕ್ರಮ ಮಾಡಿದ್ದಾರೆ.

ಜೀವನೊಳಗೆ ಇದ್ದು ಜೀವನಿಯಾಮಕನಾಗಿ ಜೀವ ವಿಲಕ್ಷಣ ಎಂದು ದಾಸಾರ್ಯರು ದೇವರ ನಾಮದಲ್ಲಿ ಹೇಳಿದಂತೆ, "ಶುದ್ಧ ಸ್ವಭಾವ ಜೀವ ಜ್ಞಾನಾನಂದ ಶರೀರ ನಿರ್ದೋಷ ನಿರ್ವಿಕಾರ ಅನಾದಿ ಲಿಂಗಬದ್ಧವಾಗಿಪ್ಪ ಸಂಸೃತಿಯಲ್ಲಿ ನೆಲೆಯಾಗಿ ಬಿದ್ದು ನಾನಾಯೋನಿಯಲ್ಲಿ ಸಂಚರಿಸುವ" ಎಂಬ ಶ್ರೀ ವಿಜಯರಾಯರ ವಚನದಂತೆ ನಿತ್ಯನಾದ ಪ್ರಾಣಿಜೀವ, ಚಿದಾನಂದ ಶರೀರವುಳ್ಳವನಾದರೂ, ಅನಾದಿಯಾದರೂ, ಅನಿತ್ಯವಾದ ಲಿಂಗದೇಹ ಭಂಗ ಮಾಡಲು ಗೋವಿಂದನೆ ಸಮರ್ಥನು.

ಜೀವನಿಗೆ ಸ್ವಾಮಿಯಾಗಿ, ಜೀವ ವಿಲಕ್ಷಣನಾಗಿ, ಜೀವನಲ್ಲಿ ಇರುವ ಪ್ರಾಣದೇವರಿಗೆ ಪ್ರೇರಕನಾಗಿ, ಒಳಗೆ ಹೊರಗೆ ಇದ್ದು, ಸರ್ವ ಚೇಷ್ಟೆಗಳನ್ನು ಮಾಡಿಸುತ್ತಾ, ಜೀವನ ಸ್ವರೂಪದಂತೆ ಆಕಾರವುಳ್ಳವನಾಗಿ, ಸದಾ ಜೀವರಿಗೆ ಸ್ವಾಮಿಯಾಗಿ, ಕಮಲೋದ್ಭವಾದಿ ಸಕಲ ಚೇತನ ಸೃಷ್ಟಿಕರ್ತನೆಂದು ಉಪಾಸನೆ ಗೈದರೆ, ಲಿಂಗದೇಹ ಭಂಗಮಾಡಿ ಸ್ವರೂಪಾನಂದ ನೀಡುವನು. ಕಾರಣ ಶ್ರೀಹರಿಯೇ ಬಿಂಬಚೇತನರು ಪ್ರತಿಬಿಂಬರು. ಜೀವರು ಈಶತವ್ಯರು ಪರೇಶನೆ ಈಶನೆಂದು ಭಜನೆ ಮಾಡಬೇಕು ಎಂಬ ಅಂಶವನ್ನು ಚನ್ನಾಗಿ ಹೇಳಿದ್ದಾರೆ. ಇದನ್ನು ಸರ್ಗಸಾರದಲ್ಲಿಯೂ ಮತ್ತು ಪದ್ಯಗಳ ಅಡಿಯಲ್ಲಿಯೂ ಬಿಂಬ ಪ್ರತಿಬಿಂಬ-ಭಾವಲಕ್ಷಣ-ಬ್ರಹ್ಮಸೂತ್ರ ಭಾಷ್ಯ-ತತ್ವಪ್ರಕಾಶಾದಿ ಅನೇಕ ಗ್ರಂಥಗಳ ವಿಮರ್ಶೆಯೊಡನೆ ಸಕಲ ಶಾಸ್ತ್ರಾರ್ಥ ವಿಚಾರ ಮಾಡಲಾಗಿದೆ. ಇದು ಬಹು ಗಮನಾರ್ಹವಾಗಿದೆ. ಇಂತು ಅಂಶಾಂಶ ನಿರ್ಣಯವನ್ನೂ, ಪಿತೃ ಮಾತ್ರಾದಿ ಋಣಮೋಚನ ವಿವರ ಶ್ರಾದ್ಧಕಲ್ಪ ವಿಶದ ವಿಚಾರ ಬಹು ವಿಸ್ತ್ರುತವಾಗಿದೆ. ಹೀಗೆ ಜೀವನ ಮೋಹವನ್ನು ಬಿಡಿಸಿ, ಸರ್ವಜೀವ ಜೀವರಿಗೆ ಭೇದ ಎಲ್ಲರೂ ಭಗವದ್ದಾಸರು, ಪ್ರತಿಬಿಂಬರು ಎಂಬ ವಿಚಾರವನ್ನು.

ಈ ಸಂಧಿಯು ೧ನೇ ಪದ್ಯದಿಂದ ೬ನೇ ಪದ್ಯದವರೆಗೆ ಜೀವರಿಗೆ ಸೃಷ್ಟಿಯಲ್ಲಿ ಪುಟ್ಟಲು ಕಾರಣರಾದ ಪಿತಾ ಪಿತಾಮಹಾ ಪ್ರಪಿತಾಮಹಾದಿ ಜೀವ ನಿಯಾಮಕನಾದ ಶ್ರೀ ಶ್ರೀಧರನ ಆರಾಧನೆ, ಪಿತೃಗಳಲ್ಲಿ ಶ್ರಾದ್ಧ ಭಕ್ತಿಯಿಂದ ಮಾಡುವ ಕ್ರಮ, ಪಿತೃಗಣಾಂತರ್ಯಾಮಿ ಅನಿರುದ್ಧಾದಿ ಪಂಚರೂಪಗಳ ಪೂಜೆಯನ್ನು ಮಾಡುವ ರೀತಿಯನ್ನೂ, ಪದ್ಯ ೧೦ರ ಆರಭ್ಯ ೧೫ರವರೆಗೆ ಜೀವರಿಗೆ ಪ್ರಾಣದಾಯಕವಾದ ಅನ್ನನಾಮಕ ಅನಿರುದ್ಧ ಪ್ರದ್ಯುಮ್ನ ಸಂಕ

ರ್ಷಣ ವಾಸುದೇವ ನಾರಾಯಣ—ಪಂಚರೂಪಗಳಿಂದ, ದೇವ ಋಷಿ ಪಿತೃ ನರಪಶು ಜೀವಿಗಳಿಗೆ, ಸ್ವಾಹಾ ಸ್ವಧಾ ಫಲ ತೃಣಾದಿ ಚತುರ್ವಿಧ ಅನ್ನದಿಂದ ತೃಪ್ತಿ. ದೇಹದಿಂದ ವಾಚಾದಿಂದ ಮನಸ್ಸಿನಿಂದ ಮಾಡುವ ಕ್ರಿಯೆಗಳೆಲ್ಲ ಅನ್ನವಾಗಿರುವ ಸಪ್ತಾನ್ನ ಪ್ರಕರಣವನ್ನು ಪದ್ಯ ೧೬ರಿಂದ ೨೨ ಪದ್ಯ ಪೂರ್ತಿ ಜ್ಞಾನ ಸಾಧನಕ್ಕೆ ಕಾರಣವಾದ, ನಾಮ ರೂಪ ಗುಣ ಕ್ರಿಯೆಗಳಿಂದ ಭಗವನ್ಮಹಿಮಾ.

೨೩ರಿಂದ ೨೫ ಪದ್ಯಬವರೆಗೆ ಕ್ಷರಾಕ್ಷರ ಚೇತನ ವಿವೇಚನ ಮತ್ತು ಅಂಶ ಅಂಶ ಅಂತರ್ಗತ ವಿವೇಚನ ೨೬ನೇ ಪದ್ಯದಿಂದ ಸವಿಸ್ತಾರವಾಗಿ ಬಿಂಬ ಪ್ರತಿಬಿಂಬ ಭಾವಲಕ್ಷಣ, ಶ್ರೀ ಲಕ್ಷ್ಮೀನಾರಾಯಣರಿಗೆ ನಿತ್ಯಮುಕ್ತತ್ವ, ಭೇದ ವಿಚಾರ. ೨೯ನೇ ಪದ್ಯದಿಂದ ಮುಂದೆ ಮೂರು ಪದ್ಯಗಳಿಂದ ಭಕ್ತರು ಮತ್ತು ಅಭಕ್ತರಿಗೆ ಆಗತಕ್ಕ ಗತಿ, ಗತಿದಾಯಕನ ವಿಚಾರ, ಈ ಸಮಗ್ರ ಸಂಧಿಯಲ್ಲಿಪ್ಪ ಭಗವಂತನ ಲೀಲೆ, ಶ್ರೀಹರಿಗೆ ಸಮರ್ಪಣ ವಿಚಾರವನ್ನು ಬ್ರಹ್ಮಸೂತ್ರ ಅನುವ್ಯಾಖ್ಯಾನದ ಅಂಶಾಧಿಕರಣದಲ್ಲಿ ಹೇಳಿರುವ ಶ್ರೀ ಸರ್ವಜ್ಞರ ಉಕ್ತಿಯಂತೆ "ಅಂಶಾ ಏವ ಹಿ ಮೇ ಜೀವಾ ಅಂಶೀ ಹೀ ಪರಮೇಶ್ವರಃ ॥ ಸ್ವಯಮಂ ಶ್ರೈರಿದಂ ವಿಶ್ವಂ ಕಾರತ್ಯಚಲೋ ಹರಿಃ ॥" ಇತ್ಯಾದಿ ಪ್ರಮಾಣಗಳಿಂದ ಆಚಾರ್ಯರ ಶಾಸ್ತ್ರ ಬಲ್ಲವರಿಗೂ, ತಿಳಿಯುವಂತೆ ಚನ್ನಾಗಿ ವಿವರಿಸಿದ್ದಾರೆ.

ಮತ್ತು ಪರಮಾತ್ಮನ ಭಿನ್ನಾಂಶರಾದ ಜೀವರು ಶ್ರೀಹರಿಯ ಪ್ರತಿಬಿಂಬರು. "ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುವದು. ಬಿಂಬ ಪೂರ್ಣ ಪ್ರತಿಬಿಂಬ ಅಪೂರ್ಣ. ಉಂಬುಡುವ ಕ್ರಿಯಾ ಬಿಂಬಮಾಡಿಸೆ ಪ್ರತಿಬಿಂಬಕೆ ಉಂಟೆಂಬೊ ಬಿಂಬಕ್ರಿಯವೆನಗೆ" ಎಂಬ ಗೋಪಾಲದಾಸರಾಯರ ಉಕ್ತಿಯಂತೆ, ಪರಮಾತ್ಮನ ಸ್ವಾತಂತ್ರ್ಯ, ಜೀವನ ಅಸ್ವಾತಂತ್ರ್ಯ ಮೊದಲಾದವುಗಳನ್ನು ಪೇಳಿದ ಟೀಕಾ ಟಿಪ್ಪಣಿಗಳ ಆಧಾರದಿಂದ ಜಂಬುಖಂಡಿ ಆಚಾರ್ಯರು ಮಾಡಿದ ಟಿಪ್ಪಣಿ ನೋಡಿದರೆ ಸ್ವಲ್ಪ ಅರ್ಥವಾಗಿ ಪ್ರಮೇಯವು ಸುಲಭವಾಗಿ ಪಂಡಿತರಿಗೆ ವಿದಿತವಾಗಬಹುದು.

ಇನ್ನು ೧೫ನೇ ಸಂಧಿಯಲ್ಲಿ ಜೀವರಲ್ಲಿ ಶ್ವಾಸನಿಯಾಮಕನಾಗಿ ಪ್ರತಿಕ್ಷಣದಲ್ಲಿ ಶ್ವಾಸೋಚ್ಛ್ವಾಸ ಕ್ಷಣ-ಮುಹೂರ್ತ ಘಟಿ ಯಾಮಗಳಲ್ಲಿ ಶ್ವಾಸ

ವ್ಯಾಪಾರ ಆ ಕಾಲದಲ್ಲಿ ಎಷ್ಟೆಷ್ಟು ಆಗಬೇಕೊ ಅದು ಶ್ರೀ ಪ್ರಾಣದೇವರ ದ್ವಾರಾ ಮಾಡಿಸುವದು ಹಂಸನಾಮಕ ಭಗವದಧೀನವೇ ಎಂಬ ವಿಷಯ ಕಾಲನಾಮಕ ಭಗವಂತನ ಉಪಾಸನೆ, ದೇಶ ಕಾಲ ಬಾಧೆ ತಪ್ಪಿಸಲು ಭಗವದುಪಾಸನೆ ಹೇಳಿದ್ದಾರೆ.

ಅನಾದಿ ಕರ್ಮದಿಂದ ಬದ್ಧನಾದ ಜೀವನ ಕರ್ಮದಿಂದ ಕಡೆಹಾಯಿಸಲು ಭಗವಂತನು ತಾನು ಸ್ವತಃ ಜೀವರಲ್ಲಿ ತನ್ನ ಸ್ವರೂಪ ಸ್ವಾತಂತ್ರ್ಯ ಗುಣಗಳನ್ನಿಟ್ಟು ಆದಿ ಸೃಷ್ಟಿಯಿಂದ ಜೀವರಲ್ಲಿ ಸ್ವಗತ ಸ್ವಾತಂತ್ರ್ಯ ಗುಣಗಳ ಸ್ವರೂಪವೇನು ? ಜೀವರಧಿಕಾನುಸಾರವಾಗಿ ಯಾರ್ಯಾರಲ್ಲಿ ಎಷ್ಟೆಷ್ಟು ಗುಣಗಳನ್ನಿಟ್ಟದ್ದನ್ನು ಬಹು ರಹಸ್ಯವಾಗಿ ಪೇಳಿದ್ದಾರೆ.

ಮುಂದೆ ಸೃಷ್ಟಿ ಪ್ರಾರಂಭ ನಂತರ ೧೭ನೇ ದತ್ತಸ್ವಾತಂತ್ರ್ಯ ಸಂಧಿಯಲ್ಲಿ ಕರ್ತೃತ್ವ ಕರಣತ್ವ ಸ್ವಭಾವ ಚೇತನಾಧೃತಿ, ಯಾವನ ಅನುಗ್ರಹದಿಂದ ಜೀವನಿಗೆ ಉಂಟು, ಯಾವನು ಉಪೇಕ್ಷಿಸಿದರೆ ಜೀವನಿಗೆ ಯಾವ ಶಕ್ತಿಯೂ ಇಲ್ಲ ಎಂಬ ಬ್ರಹ್ಮಸೂತ್ರಾರ್ಥವನ್ನು ವಿವರಮಾಡುವ ಪೈಂಗಿ ಶ್ರುತಿಯಲ್ಲಿ ನಿರೂಪ ಮಾಡಿದಂತೆ ಕೊನೆಗೆ ಸಿದ್ಧಾಂತವಾಗಿ, ಜೀವನಿಗೆ ಪರಮಾತ್ಮನು ಪ್ರೇರಕನಾಗಿ, ಜೀವನ ಯೋಗ್ಯತಾ ಸ್ವಭಾವಾನುಗುಣವಾಗಿಯೇ ಕರ್ಮ ಮಾಡಿಸುತ್ತಾನೆ. ಜೀವನಿಗೆ ಕಿಂಚಿತ್ತಾದರೂ ಕರ್ತೃತ್ವ ಇಲ್ಲ ಕರ್ತೃತ್ವಶಕ್ತಿ ಜೀವನಿಗೆ ಅಂಟಿಕೊಂಡಿದ್ದರೂ ಜೀವನ ಜ್ಞಾನೇಚ್ಛಾ ಪ್ರಯತ್ನಕ್ಕೆ ಪ್ರಚೋದಕನು ಶ್ರೀಹರಿಯೇ ಸ್ವಗತ ದತ್ತಸ್ವಾತಂತ್ರ್ಯ ರೂಪದ್ವಯಗಳಿಂದೇ ಇದ್ದು ಕಾರ್ಯಮಾಡುತ್ತಾನೆ. ಆದಕಾರಣ ಜೀವನಿಗೆ ಕರ್ತೃತ್ವ ಇಲ್ಲದೇ ವಿಧಿ ನಿಷೇಧರೂಪ ಶಾಸ್ತ್ರ ಅಪ್ರಯೋಜಕವಾದೀತು ಎಂದರೆ ಜೀವನ ಸ್ವರೂಪವೇ ಭಗವದಧೀನವಿದ್ದ ಕಾರಣ, ಶಾಸ್ತ್ರ ಅಪ್ರಯೋಜಕವಲ್ಲಾ ಎಂಬುವ ವಿಷಯ ಶ್ರೀಮದಾಚಾರ್ಯರ ಶಾಸ್ತ್ರ ಅಭಿಪ್ರಾಯವನ್ನೇ ಕನ್ನಡ ಪದ್ಯದಲ್ಲಿ ನಿರೂಪಣೆ ಮಾಡಿದ್ದಾರೆ.

ಮುಂದೆ ೧೮ನೆಯ ಬಿಂಬಾಪರೋಕ್ಷ ಸಂಧಿಯಲ್ಲಿ ಮುಕ್ತಬಿಂಬನೇ ವಿಶ್ವನು, ಸೃತಿ ಸಂಸಕ್ತ ಜೀವರ ಬಿಂಬನು ತೈಜಸ ಅಸೃಜ್ಯ ಜೀವರಿಗೆ ಬಿಂಬನು, ಪ್ರಾಜ್ಞನಾಮಕ ಹರಿಯು ಎಂದು ಹರಿರೂಪಗಳನ್ನು ಪೇಳುತ್ತಾ, ಪ್ರಕೃತಿ ವೇದ ಕಾಲ ದೇಶಾದಿ ನಿತ್ಯವಸ್ತುಗಳಲ್ಲಿ ಇರುವ ಬಿಂಬರೂಪಗಳನ್ನು

ಹೇಳುವದಲ್ಲದೇ ಲಿಂಗಾರಂಭಿಸಿಕೊಂಡು ಅನಿರುದ್ಧ ಸ್ಥೂಲದೇಹಸ್ಥ ೨೪ ಜಡ ತತ್ವಗಳಲ್ಲಿಪ್ಪ ಶ್ರೀ ರಮಾವರನ ಕಾರಣ ಕಾರ್ಯರೂಪಗಳು ಧ್ಯಾನೋಪಾಸನೆ ಕ್ರಮ ಶಾಸ್ತ್ರಸಮ್ಮತವಾಗಿ ರಚಿಸಿದ್ದಾರೆ. ೪ನೇ ಭಾಗದಲ್ಲಿ ೧೪ ಸಂಧಿ ಪೂರ್ತಿ ಯಾಗಿದೆ.

ಹೀಗೆ ಮುಂದೆ ಆರೋಹಣ ಅವರೋಹಣಾದಿ ಧ್ಯಾನೋಪಾಸನಾದಿ ವಿಸ್ತಾರವನ್ನು ವಿವರಿಸುತ್ತಾ ೩೨ ಸಂಧಿಯಲ್ಲಿಯೂ, ಸಂಸ್ಕೃತದಲ್ಲಿದ್ದ ಆಚಾರ್ಯರ ಶಾಸ್ತ್ರವನ್ನೇ ಕನ್ನಡದಲ್ಲಿ ಮಾಡಿರುವ ಈ ಗ್ರಂಥಕ್ಕೆ ಟೀಕೆ ಟಿಪ್ಪಣಿಗಳು ಗೀರ್ವಾಣ ಭಾಷೆಯಲ್ಲಿ ಇದ್ದಮೇಲೆ ಈ ಗ್ರಂಥದ ಹಿರಿಮೆ ಏನೆಂದು ಪೇಳೋಣ.

ನಮ್ಮ ವಿದ್ಯಾಗುರುಗಳಾದ ಶ್ರೀ ಶ್ರೀ ಸತ್ಯಧ್ಯಾನತೀರ್ಥ ಗುರುರಾಜರು ಶ್ರೀ ಹರಿಕಥಾಮೃತಸಾರ ಗ್ರಂಥ ಅದು ಹೆಸರಿಗೆ ಮಾತ್ರ ಕನ್ನಡವಯ್ಯಾ, ಅದರ ಭಾವ ಸರಿಯಾಗಿ ಬೋಧವಾಗಬೇಕಾದರೆ, ಶ್ರೀಮದಾಚಾರ್ಯರ ಅನುಗ್ರಹವಿದ್ದರೇನೇ ಸರಿಯಾದ ಅರ್ಥವಾಗುವದು. ಇಲ್ಲದೇಹೋದರೆ ಆಗಲಾರದು ಎಂತ ಎಷ್ಟೋ ಸಲ ಉದ್ಗಾರ ತೆಗೆದದ್ದು ಕಂಡು ಕೇಳಿ ನಾನು ಓದಿದೆನು. ಇಂತಹ ಪರಮ ಉತ್ತಮವಾದ ಗ್ರಂಥ ಅಭಿಪ್ರಾಯವನ್ನು ಕೆಲ ಮಟ್ಟಿಗೆ ಶ್ರೀ ಸಂಕರ್ಷಣ ಒಡೆಯರು ಮತ್ತು ಕಮಲಾಪತಿದಾಸರು ಟಿಪ್ಪಣಿ ಬರೆದಿರುವರೆಂದು ಕೇಳಿದ್ದೆ ಹೊರ್ತು, ೧೦೪ ಸಲ ಶ್ರೀಮದ್ಭಾಗವತ ಹೇಳುವ ಕಾಲ ಶ್ರೀ ಹರಿಕಥಾಮೃತಸಾರ ಮೂಲ ಪದ್ಯಗಳೇ ಭಾಗವತಕ್ಕೆ ಅನುಗುಣ ವಾಗಿರುವದನ್ನು ಮನದಟ್ಟಿ ತಿಳಿದು, ಭಾಗವತಕ್ಕೆ ಸಂಬಂಧಿಸಿದ ಪದ್ಯಗಳನ್ನು ಜೋಡಿಸಿ ಶ್ರೀ ಹರಿಕಥಾಮೃತಸಾರವನ್ನು ಸಹ ೪-೫ ಸಲ ಪ್ರವಚನ ಮಾಡಿಸಿದರು.

ಇತ್ತೀಚಿಗೆ ಈ ಪಂಚರತ್ನ ಪ್ರಕಾಶಿಕಾ ಎಂಬ ಈ ಅಮೌಲ್ಯ ಗ್ರಂಥ ರೂಪವಾದ ವಸ್ತುವನ್ನು ಎಲ್ಲರಿಗೆ ಲಾಭವಾಗಲಿ ಎಂಬ ಸದ್ಭಾವನೆಯಿಂದ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ ಸಂಚಾಲಕರಾದ ಶ್ರೀಮಾನ್ ದಾಸಶ್ರೇಷ್ಠರ ಅನುಗ್ರಹಕ್ಕೆ ಪಾತ್ರರಾದ ಗೋರಾಬಾಳ ಹನುಮಂತರಾಯರು ಪ್ರಕಾಶಕ್ಕೆ ತಂದುದು ತುಂಬಾ ಆನಂದದ ಸಂಗತಿ.

ದಾಸಶಾಸ್ತ್ರವನ್ನು ಬೆಳಕಿಗೆ ತಂದು ಅವುಗಳ ತಿರುಳನ್ನು ಹೊರಗೆಡ

ವಲು ಪ್ರಯತ್ನಮಾಡಿದವರಲ್ಲಿ ಮೇಲೆ ಹೇಳಿರುವ ಸಂಚಾಲಕರು ಪಟ್ಟ ಪ್ರಯತ್ನವು ಇಷ್ಟೆಂದು ಹೇಳಲಾರೆ. ಎಲ್ಲ ದಾಸ ಶಿರೋಮಣಿಗಳ ಮೂಲ ಹಳೆಯ ನೂರಾರು ವರ್ಷಗಳ ಮುಂಚೆ ಬರೆದವನ್ನು ಶೋಧನಮಾಡಿ ಸ್ವಂತ ತಮ್ಮ ಹಸ್ತದಿಂದ ಬರೆದು ಅವುಗಳನ್ನು (ವಲ್ಕಲ) ಅಂದರೆ ನಾರುಮಡಿಯಿಂದ ಬೈಂಡು ಮಾಡಿದ ಪುಸ್ತಕಗಳು ನೂರಾರು ಎರಡು ಕಪಾಟ ತುಂಬಾ ನಾನು ಕಣ್ಣಾರೆ ನೋಡಿ ಆನಂದಪಟ್ಟಿದ್ದೇನೆ. ಅಲ್ಲದೆ, ಇವರಲ್ಲಿ ೪-೫ ತಿಂಗಳು ಇದ್ದು ಸಂಪೂರ್ಣ ಭಾಗವತ ಹೇಳುವ ಕಾಲದಲ್ಲಿ ೨೫ ವರ್ಷ ಮುಂಚೆಯೇ— ಶ್ರೀ ಹರಿಕಥಾಮೃತಸಾರ ಮೂರು ಮೂಲಪ್ರತಿಗಳು ಶುದ್ಧವಾಗಿರುವದನ್ನು ನೋಡಿದ್ದೇನೆ.

ಶ್ರೀ ಜಗನ್ನಾಥದಾಸರು ಹರಿಕಥಾಮೃತ ರಚನೆ ಮಾಡುವ ಕಾಲದಲ್ಲಿಯೇ ದಾಸರ ಪ್ರೀತಿಪಾತ್ರರಾದ ಅವರ ಶಿಷ್ಯರಾದ ಶ್ರೀಗುರು ಶ್ರೀಶ ವಿಠ್ಠಲರು ಕಂಪಲಿದಾಸರು ಬರೆದದ್ದು ಬಹು ಹಳೆಯ ಪ್ರತಿ ೧೫೦ ವರ್ಷ ಕಾಲ ಮುಂಚಿನದು ಬಹು ಶುದ್ಧವಾಗಿದೆ. ಎರಡನೇ ಪ್ರತಿ ಶ್ರೀ ದಾಸಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಪ್ರಾಣೇಶವಿಠಲರ ಶಿಷ್ಯರು ಸುಮಾರು ೧೨೦-೧೨೫ ವರ್ಷದ ಹಿಂದೆ ಶುದ್ಧವಾಗಿ ಮೂಲ ಪ್ರತಿ ಬರೆದಿರುವರು. ಶ್ರೀಗುರು ಶ್ರೀಶ ರಾಯರ ಬರೆದ ಹಸ್ತಪ್ರತಿಗೂ ಮತ್ತು ಪ್ರಾಣೇಶದಾಸಾರ್ಯರ ಶಿಷ್ಯರು ಬರೆದ ಪ್ರತಿಗೂ ಏನೂ ವ್ಯತ್ಯಾಸವಿಲ್ಲ. ಇವೆರಡು ಶುದ್ಧ ಮೂಲಪ್ರತಿಗಳ ಕೊನೆಗೆ ಪದ್ಯಗಳು ೩೮೫ ಎಂದು ಬರೆದಿರುವರು. ಸಂಧಿಕ್ರಮಗಳು ಒಂದೇ ರೀತಿಯಾಗಿವೆ. ಮತ್ತು ಮೂರನೇಪ್ರತಿ ಶ್ರೀ ಪ್ರಾಣೇಶವಿಠಲರ ಸಾಕ್ಷಾತ್ ದೌಹಿತ್ರರು ಶ್ರೀ ರಾಮದಾಸರು ಶ್ರೀಶ ಪ್ರಾಣೇಶವಿಠಲರು ಅಪರೋಕ್ಷಜ್ಞಾನಿಗಳಾದ ಕೊನೆಯದಾಸರು ಕನ್ನಡ ಲಿಪಿಯಲ್ಲಿ ಶುದ್ಧವಾಗಿ ಮೇಲ್ಕಂಡ ಪ್ರತಿಗಳಂತೆ ಸಂಧಿಕ್ರಮಾನುಸಾರವಾಗಿ ಬರೆದು ತಮ್ಮ ಭಾವನಿಗೋಸುಗ ಕೊಟ್ಟಿದ್ದಾರೆ. ಈ ಮೂರು ಪ್ರತಿಗಳಲ್ಲಿ ಸಾಕ್ಷಾತ್ ಶ್ರೀ ಜಗನ್ನಾಥದಾಸಾರ್ಯರು ಹರಿಕಥಾಮೃತಸಾರ ಸಮರ್ಪಣೆಮಾಡಿದ ಗದ್ಯವು ಬಹು ರಹಸ್ಯವಾದುದು. ಜಗನ್ನಾಥ ವಿಠಲಾರ್ಪಣಮಸ್ತು ಎಂದು ಬರೆದ ಗದ್ಯವು ಈ ಮೂರೇ ಪುಸ್ತಕಗಳಲ್ಲಿ ಮಾತ್ರ ಇದೆ ಹೊರತಾಗಿ ಪ್ರಕಟವಾದ ಅನೇಕ ಪ್ರತಿಗಳಲ್ಲಿ ಇಲ್ಲ.

ಇಂತು ಶ್ರೀಹರಿಕಥಾಮೃತಸಾರ ಆ ಮೂಲ ಶುದ್ಧ ಪದ್ಯಗಳು. ಇವರು

(ಸಂಚಾಲಕರು) ಆ ಮೂಲ ಪ್ರತಿಗಳ ಆಧಾರದಿಂದ ಬರೆದವು ಶುದ್ಧವಾಗಿವೆ. ಮತ್ತು ಶ್ರೀ ವ್ಯಾಸದಾಸ ಸಿದ್ಧಾಂತಕಾರರು ರಚಿಸಿದ ಟೀಕೆಯು ಸಹ ಮೂಲ ಪ್ರತಿಗಳ ಶುದ್ಧ ಪಾಠ ಸಂಧಿಕ್ರಮವಾದರೂ ಶುದ್ಧವಾಗಿವೆ. ಈ ಟೀಕೆಯು ರಚನೆಯೂದರೂ ಒಂದುನೂರು ವರ್ಷದ ಮೊದಲಿಗಾಗಿದೆ.

ಮತ್ತು ಹನುಮಂತರಾಯರ ಚಿಕ್ಕಪ್ಪನವರು ಸುಮಾರು ೯೦ ವರ್ಷದ ಮುಂಚೆ ಶುದ್ಧವಾಗಿ ಬರೆದಿದ್ದಾರೆ. ಇದರಲ್ಲಿ ಶ್ರೀಗುರು ಶ್ರೀಶ ವಿಠ್ಠಲರ ಫಲ ಶ್ರುತಿ ಹೆಚ್ಚಿಗೆ ಇದೆ.

ಈ ನಾಲ್ಕು ಮೂಲ ಶುದ್ಧಿಪ್ರತಿಯಲ್ಲದೆ ಶ್ರೀ ಜಗನ್ನಾಥ ದಾಸಾರ್ಯರ ಸ್ವಂತ ಮಕ್ಕಳಾದ ಶ್ರೀ ದಾಮೋದರದಾಸರು ಶುದ್ಧವಾಗಿ ೧೨ ಸಂಧಿಯವರೆಗೆ ದಾಸರಾಯರ ಕಾಲದಲ್ಲೆ ಬರೆದಿದ್ದಾರೆ. ಕಾಲನಾಮಕ ಭಗವಂತನ ಇಚ್ಛೆ ಯಿಂದ ದಾಸಾರ್ಯರಿರುವಾಗಲೇ ವೈಕುಂಠವಾಸಿಗಳಾಗಿದ್ದಾರೆ.

ಈ ಎಲ್ಲ ಮೂಲಪ್ರತಿಗಳನ್ನು ಸಂಶೋಧಿಸಿ ಶ್ರೀ ಹನುಮಂತರಾಯರು ಈಗ ೧೦-೧೧ ವರ್ಷ ಮುಂಚೆ ಮೂಲ ಶುದ್ಧ ಪ್ರತಿ ಹರಿಕಥಾಮೃತಸಾರ ಆಚ್ಚು ಮಾಡಿಸಿದ ಮೇಲೆ, ಉಡುಪಿ ಪ್ರತಿ ಬಿಟ್ಟು ಶ್ರೀ ವರದ್ರೇಂದ್ರ ಹರಿದಾಸ ಸಾಹಿತ್ಯ ಮಂಡಲದಿಂದ ಪ್ರಕಟವಾದ ಶುದ್ಧ ಪ್ರತಿ – ಪಾರಾಯಣದಲ್ಲಿಟ್ಟು ಶಾಸ್ತ್ರ ಸಮ್ಮತವಾದ ಸರಿಯಾಗಿ ಅರ್ಥಮಾಡಿಕೊಂಡದ್ದು ನಿಜ.

ಇತ್ತೀಚೆಗೆ ಹಿಂದೆ ಕೆಲವು ಅಚ್ಚಾದ ಪ್ರತಿಗಳು ಬಹು ತಪ್ಪಾಗಿ ಸಂಧಿ ಕ್ರಮ ಬದಲಾಗಿವೆ. ಇದರಲ್ಲಿ ತಿಳಿಯದೇ ತಿದ್ದಿರುವ ಸಾವಿರಾರು ಶಬ್ದಗಳು ವಾಕ್ಯಗಳು ನೋಡಿದರೆ ಶಾಸ್ತ್ರ ವಿರುದ್ಧ ಪ್ರಮಾಣಪ್ರಮೇಯಕ್ಕೆ ವಿರುದ್ಧ ವಾಗಿರುವದನ್ನು ನೋಡಿ ವ್ಯಾಕುಲವಾಗಿದೆ. ಮೇಲೆ ವಿವರಿಸಿದ ಮೂಲ ಶುದ್ಧ ಪ್ರತಿಗಳನ್ನು ನೋಡದೆ ಇದರ ನಿಜಭಾವಗಳನ್ನು ತಿಳಿಯದೇ ಶಾಸ್ತ್ರ ವಿಚಾರ ವನ್ನು ಅರಿಯದ ಅದರಲ್ಲಿ ಏನೂ ಗತಿ ಇಲ್ಲದೇ ಕೇವಲ ಆಧುನಿಕ ಪದವಿ ಖ್ಯಾತಿಗೋಸುಗ ನಾನೇ ಹರಿಕಥಾಮೃತಸಾರ ಶೋಧನೆ ಮಾಡಿ ಬರೆದಿರುವೆ ವೆಂಬ ಅಹಂಭಾವದಿಂದ, ಅದನ್ನು ಬರೆಯಲು ಹೋದವರು ದಾಸರ ದ್ರೋಹಿ ಗಳು ಎಂಬಲ್ಲಿ ಸಂಶಯವಿಲ್ಲ. ಇದು ಕೇವಲ ಲೌಕಿಕರಿಗಾದರೂ ಇದು ಸಮ್ಮತವಾಗಿಲ್ಲ. ಅನೇಕ ವಿಷಯದಲ್ಲಿ ಬಹು ದುರ್ಲಕ್ಷಿಸಿದ್ದಾರೆ. ಸ್ವಂತ ನಾನು ನನ್ನ ಇಡೀ ಆಯುಷ್ಯದಲ್ಲಿ ಐದು ಸಲ ಸಂಪೂರ್ಣ ಹರಿಕಥಾಮೃತ

ಸಾರ ಹೇಳಿ, ಅವರ ಕಿಂಚಿತ್ ಪ್ರಸಾದದಿಂದ ಮಂಗಳ ಮಾಡಿದರೂ ನನಗೆ ಆದರ ಅರ್ಥ ಸರಿಯಾಗಿ ಆಗಿಲ್ಲ. ಮೊದನೇ ಸಲ ನನ್ನ ಕಡಿಯಿಂದಾ ದಾಸಾರ್ಯರು ಅನುಗ್ರಹಮಾಡಿ ಅವರೇ ಎನ್ನ ನಾಲಿಗೆಯ ಮೇಲೆ ನಿಂತು ಹೇಳಿಸಿದಾಗ್ಗೆ ಹತ್ತನೇ ತಿಂಗಳಲ್ಲಿ ಆ ಗ್ರಂಥ ಮಂಗಳ ಮಾಡಿದೆವು ಯೆಂತ ನಮ್ಮ ಮನಸ್ಸಿಗೆ ಸಮಾಧಾನ ತಂದುಕೊಂಡದೆ ಹೊರ್ತು ನಾನು ಹೇಳಿದೆ ಯೆಂತ ಹೆಮ್ಮೆ ಅಲ್ಲ. ೩೨ ಸಂಧಿಯ ಪದ್ಯಗಳನ್ನು ಮಾತ್ರ ಮುಖದಿಂದ ಉಚ್ಚಾರ ಮಾಡಿದುದಾಯಿತು. ನಾವೇನು ಶಾಸ್ತ್ರದಲ್ಲಿ ಪಂಡಿತರು ಆದ್ಯ ಆಚಾರ್ಯ ವಂಶಜರು ಕನ್ನಡ ಗ್ರಂಥ ಹೇಳುವದೇನು ಯೆಂತ ಗರ್ವ ಪಟ್ಟರೆ ಅಲ್ಲಾ. ದಾಸ ಸಾಹಿತ್ಯದಲ್ಲಿ ಶ್ರದ್ಧಾ ಭಕ್ತಿ ಇದ್ದವರಿಗೇನೆ ಹರಿಕಥಾಮೃತ ಸಾರದ ಅರ್ಥ ನಿಜವಾಗಿ ಸ್ವಲ್ಪ ಆಗಬಹುದು.

ಈ ಪಂಚರತ್ನ ಪ್ರಕಾಶವು ೪ ಭಾಗಗಳಾಗಿವೆ ಶ್ರೀ ತಾಮ್ರಪರಣಿ ಆಚಾರ್ಯ ಟೀಕಾ ಪೂರ್ತಿ ಶಿಕ್ಕಿಲ್ಲ. ಭಾವಸೂಚನ ವ್ಯಾಸದಾಸ ಸಿದ್ಧಾಂತ ಕೌಮುದೀ ಎರಡೂ ಟೀಕೆಗಳು ಪೂರ್ಣವಾಗಿವೆ. ಉಳಿದ ದ್ರೌಪದೀಶಪತಿ ವಿಠಲರ ಟೀಕಾ, ಚಿಕ್ಕದಾದರೂ ೧೪ ಸಂಧಿ ಪರಿಯಂತ ಬಹು ಅರ್ಥಗರ್ಭಿತ ಮಾರ್ಗಪ್ರದರ್ಶಕವಾಗಿದೆ. ಶ್ರೀ ಗುರು ಶ್ರೀಶವಿಠಲರ ಶಿಷ್ಯರ ವ್ಯಾಖ್ಯಾನ ದಲ್ಲಿ ಕೆಲ ಸಂಧಿಗಳಿಗೆ ಮಾತ್ರ ಅಲ್ಲಲ್ಲೇ ಬಹು ವಿಸ್ತಾರವಾದ-ನಿಜವಾದ ಪ್ರಮೇಯಗಳಿಂದ ತುಂಬಿದೆ ಇದರಲ್ಲಿ.

ದೊರೆತಷ್ಟು – ಶ್ರೀ ತಾಮ್ರಪರಣಿ ಆಚಾರ್ಯರ ಟೀಕಾ ಮತ್ತು ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿ ಜಟಿಲ ವ್ಯಾಖ್ಯಾನ ಬ್ರಹತೀ ಸಹಸ್ರ ಋಗಾರ್ಥಗಳಿಂದ ತುಂಬಿದ ಈ ಸಂಸ್ಕೃತ ವ್ಯಾಖ್ಯಾನಗಳಿಗೆ ಮಾತ್ರ, ಶ್ರೀ ಪಂಡಿತೋತ್ತಮರೂ ಸಂಪ್ರದಾಯಜ್ಞರೂ ಆದ ಶ್ರೀ ಜಾಲಿಹಾಳ ಶ್ರೀನಿವಾಸಾ ಚಾರ್ಯರು ಕೇಶವಾಚಾರ್ಯರು ಶ್ರೀ ಹನುಮಂತರಾಯರ ಪ್ರಾರ್ಥನೆಯಂತೆ ಬಹು ಸುಗಮವಾಗಿ ಕನ್ನಡಿಸಿರುವವರಿಗೆ ನಾವೆಲ್ಲರೂ ಚಿರಋಣಿಯಾಗಿದ್ದೇವೆ.

ಹನುಮಂತರಾಯರಾದರೂ, ಸ್ವಯಂ ಲೌಕಿಕದಲ್ಲಿ ಪಂಡಿತರೂ ಪ್ರಸಿದ್ಧ ವಕೀಲರಾಗಿದ್ದರೂ, ಚಿಕ್ಕ ವಯಸ್ಸಿನಲ್ಲಿಯೇ ಶ್ರೀಮದಾಚಾರ್ಯರ ಶಾಸ್ತ್ರವನ್ನೂ ಗುರುಮುಖೇನ ಅಭ್ಯಾಸ ಮಾಡಬೇಕಾಗಿ ಶ್ರೀ ಅಕ್ಷೋಭ್ಯ ತೀರ್ಥ ಸಂಸ್ಥಾನಾಧೀಶ್ವರರಾದ ಶ್ರೀ ರಘುಕಾಂತತೀರ್ಥ ಶ್ರೀಪಾದಂಗಳವರು

(ಕೊಡಂಗಲ್ ಸ್ವಾಮಿಗಳ) ಸನ್ನಿಧಾನದಲ್ಲಿ ಶಾಂತಿಪೂರ್ವಕ ಎಲ್ಲ ಮಂತ್ರೋಪದೇಶ ಪಡೆದು ಉದ್ಗ್ರಂಥಗಳ ಅಧ್ಯಯನ ಮಾಡಿದ ಹನುಮಂತರಾಯರಲ್ಲಿ ಎಲ್ಲ ದಾಸಾರ್ಯರು ನಿಂತು ಈ ದಾಸಸಾಹಿತ್ಯ ಪ್ರಚಾರಕಾರ್ಯ ಮಾಡಿಸಿದ್ದಾರೆ. ಹಿಂದೆ ಇವರು ಶ್ರೀ ಸುಮಧ್ವವಿಜಯ ಪ್ರಕಟಮಾಡಿದಂತೆಯೇ ಈಗಲೂ ಶ್ರೀ ಹರಿಕಥಾಮೃತಸಾರದ – ಸಂಧಿಗಳ ಸಂಬಂಧ, ಪ್ರತಿಯೊಂದು ಸಂಧಿಗಳ ಸಾರಾರ್ಥ ಮತ್ತು ಪ್ರತಿಯೊಂದು ಪದ್ಯಗಳ ಅನ್ವಯಾರ್ಥ, ವಿಶೇಷ ಸೂಚನೆ, ಬ್ರಹ್ಮಸೂತ್ರ, ಭಾಷ್ಯ – ಅನೇಕ ಉಪನಿಷತ್ ಖಂಡಾರ್ಥ, ಶ್ರೀ ವಿದ್ಯಾಧಿರಾಜೀಯ ವಿಷ್ಣು ಸಾಸಿರನಾಮ ನಿರ್ವಚನ, ವಿಗ್ರಹಕೋಶ, ಪ್ರಕಾಶ ಸಂಹಿತಾ ವಿಷ್ಣು ರಹಸ್ಯಗಳ ಪ್ರಮಾಣದೊಂದಿಗೆ ಮತ್ತು ಈ ಪ್ರಮಾಣಗಳಿಗೆ ತಕ್ಕ ಸುಳಾದಿಗಳ ಆಧಾರದೊಂದಿಗೆ ಬಹು ಅರ್ಥಗರ್ಭಿತವಾಗಿ ಪ್ರಮಾಣ ಪ್ರಮೇಯಗಳಿಗೆ ವಿರೋಧ ಬಾರದಂತೆ ನಿಜಾರ್ಥವನ್ನು ಬರೆದು ಪ್ರಕಾಶ ಮಾಡಿದ್ದಾರೆ. ಈವರೆಗೆ ಯಾವ ಟೀಕಾಕಾರರೂ ಇಂತಹ ಕೆಲಸ ಮಾಡಿಲ್ಲ. ಅವರ ದ್ವಾರಾ ನಮ್ಮೆಲ್ಲರಿಗೂ ದಾಸರಾಯರು ಅನುಗ್ರಹಿಸಲೆಂದು ಪ್ರಾರ್ಥನೆ ಮಾಡಿ, ಶ್ರೀ ದಾಸಾರ್ಯರು ಇವರಿಗೆ ಆಯುಷ್ಯ ಆರೋಗ್ಯವನ್ನು ಕೊಟ್ಟು ಇದಕ್ಕಿಂತಲೂ ಹೆಚ್ಚಿನ ಕೆಲಸ ಮಾಡಿಸಲೆಂದು ಎಲ್ಲ ದಾಸರಾಯರಂತರ್ಗತ ಶ್ರೀ ಪ್ರಾಣಪತಿ, ಶ್ರೀ ಹಯಗ್ರೀವ ಶ್ರೀಹರಿಯನ್ನು ಪ್ರಾರ್ಥಿಸುತ್ತೇನೆ. ಬರೆಯುವಲ್ಲಿ ಅನಭಿಜ್ಞ ನಾನು. ತಿಳಿಯದೇ ಇದ್ದರೂ, ಶ್ರೀ ಹನುಮಂತರಾಯನ ಸೂಚನೆಯಂತೆ – ಏನೋ ಬರೆಯಲು ಉದ್ಯೋಗ ಮಾಡಿದ ನನ್ನ ಅಬದ್ಧ ಮಾತುಗಳನ್ನು ಅದರಲ್ಲಿರುವ ದೋಷಗಳೇ ಬಹಳ ಅವುಗಳನ್ನು ತ್ಯಜಿಸಿ, ಗುಣಜ್ಞರು ಗುಣ ಸ್ವೀಕಾರ ಮಾಡಿ, ಈ ಪಾಮರನಿಗೆ ಮುಂದೆ ಬರುವ ಜನ್ಮದಲ್ಲಿ ಶ್ರೀ ಆನಂದತೀರ್ಥರ ಮತದ – ವ್ಯಾಸದಾಸ ಸಾಹಿತ್ಯ ಈ ಶಾಸ್ತ್ರದಲ್ಲಿ ಗತಿ ಕೊಡುವಂತೆ ಶ್ರೀಹರಿಯನ್ನು ಪ್ರಾರ್ಥನ ಮಾಡಿರಿ ಯೆಂತು ವಿದ್ವಜ್ಜರಲ್ಲಿ ವಿನಂತಿ ಮಾಡಿಕೊಳ್ಳುವ.

| | |
|---|---|
| ಬೆಂಗಳೂರು ನಗರ | ಸಜ್ಜನ ವಿಧೇಯ |
| ೧೮೮೩ ಪ್ಲವ-ಕಾರ್ತೀಕವದ್ಯ ಪಂಚಮಿ | **ಆದ್ಯ ಸೇತೂರಾಮಾಚಾರ್ಯ** |
| **ಶ್ರೀ ಆದ್ಯ ದೈ ಯಪಾನಾಚಾರ್ಯರ** | ಭಾಗವತರತ್ನ, ವ್ಯಾಸದಾಸಸಾಹಿತ್ಯ |
| **ಪಂಚಿಮಿ ೨೭—೧೧—೬೧** | ಮುಕುಟಮಣಿ |

ಶ್ರೀಲಕ್ಷ್ಮೀನರಸಿಂಹಾತ್ಮಕ ಶ್ರೀಲಕ್ಷ್ಮೀವೆಂಕಟೇಶ ಪ್ರಸನ್ನ
ಶ್ರೀಗುರುರಾಜೋ ವಿಜಯತೇ

**ಸಂಧಿಯ ಪೀಠಿಕೆ**

# ೧೪ನೆಯ ಜೀವನಪ್ರಕ್ರಿಯಾಸಂಧಿಸಾರ

ನಿತ್ಯವಾದ ವಸ್ತುಗಳ ವಿವೇಚನೆ, ತದುಪಾಸನೆಕ್ರಮ, ೧೧ನೇ ಸಂಧಿಯಲ್ಲಿ ಪ್ರಕೃತಿಯ ಸ್ವರೂಪ, ತದ್ಬಂಧನೆ, ಮೋಚನ ನಿಮಿತ್ಯಧ್ಯಾನ ಪ್ರಕ್ರಿಯೆ ಸಂಧಿ ಹೇಳುತ್ತಾ ೧೨ ಸಂಧಿನಾಡಿ ಪ್ರಕರಣದಲ್ಲಿ ಪ್ರಕೃತಿಗತ ತೇಜೋರೂಪ ನಾಡಿಗಳ ವಿವರ, ತದ್ಗತ ಸಪ್ತಕಮಲಗಳ ವಿವರ, ಭಗವದುಪಾಸನೆಯಿಂದ ಪ್ರಕೃತಿಬಂಧಮೋಚನ ಹೇಳುತ್ತಾ, ನಿತ್ಯವಾದ ವೇದಗಳ ವಿಚಾರ, ಪ್ರಣವಗತ ಅಕಾರಾದಿ ೫೧ ವರ್ಣಗಳೇ ನಾಮಶಬ್ದಾದಿಗಳಿಗೆ ಮೂಲಬೀಜವಾದುದೆಂದು ಅರುಹಿ ಶ್ರೀಹರಿನಾಮಸ್ಮರಣೆ ಹೇಗೆ ಮಾಡುವದು, ಅಧಿಕಾರಿಪುರುಷ ಯಾರು, ನಾಮಮಾಹಾತ್ಮ್ಯ ಏನೆಂಬುದು, ನಿತ್ಯವಾದ ವೇದವಿಚಾರದಿಂದ ಭಗವಂತನ ಗುಣೋತ್ಕರ್ಷಪೂರ್ವಕ ನಾಮಸ್ಮರಣೆಯೇ ಆನಂದದಾಯಕವಾದುದೆಂದು ಹೇಳಿದ್ದಾರೆ. ಇದೆಲ್ಲ ಸಾಧನ ಯಾರಿಗೆ? ಜಡಕ್ಕೆ ಅನುಭವವಿಲ್ಲ ಕಾರಣ ಜಡಕ್ಕೆ ಸಾಧನವಿಲ್ಲ. ನಿತ್ಯಮುಕ್ತರಾದ ರಮಾನಾರಾಯಣರಿಗೆ ಸಾಧನವಂತೂ ಇಲ್ಲೇ ಇಲ್ಲ. ಹರಿ ಇಚ್ಛೆಯಿಂದ ಅನಾದಿನಿತ್ಯನಾದ ಚೇತನನಾದ ಜೀವನಿಗೇನೇ ಅವನ ಸ್ವಭಾವ, ಅನಾದಿಕರ್ಮ, ದೇಶಕಾಲಬಾಧೆ, ಪ್ರಕೃತಿಬಂಧನ, ಅಲ್ಪಜ್ಞ ಅಲ್ಪಶಕ್ತಿ ಅಸ್ವತಂತ್ರನಾದ ಜೀವಗೆ ಉಂಟೆಂದು ಶಾಸ್ತ್ರಸಿದ್ಧ. ಅನುಭವಸಿದ್ಧ. ಕಾರಣ ಈ ನಿತ್ಯರಾದ ಜೀವರುಗಳ ಸ್ವರೂಪ, ಜೀವಜೀವರಿಗೆ ಭೇದವಿದ್ದರೂ, ಪಿತೃಪುತ್ರಾದಿ ವ್ಯಾಮೋಹ. ಇದನ್ನು ಬಿಡಿಸಲು ಶ್ರೀದಾಸಾ-ರ್ಯರು ಈ ಜೀವನಪ್ರಕ್ರಿಯಾಸಂಧಿ ಪ್ರಾರಂಭಿಸುತ್ತಾರೆ. "ಜೀವಾಂತರ್ಗತ ಜೀವನಿಯಾಮಕ ಜೀವವಿಲಕ್ಷಣ ಜೀವನದ ॥ ಜೀವಾಧಾರಕ ಜೀವ ರೂಪ ರಾಜೀವಭವಜನಕ ಜೀವೇಶ್ವರ ತವ॥ ದಾಸೋಹಂ ತವ ದಾಸೋ-ಹಮ್॥ ಎಂದು ದಾಸರ ಉಕ್ತಿ. ಶುದ್ಧಸ್ವಭಾವಜೀವ ಜ್ಞಾನಾನಂದ ಶರೀರ । ನಿರ್ದೋಷನಿರ್ವಿಕಾರ ಅನಾದಿಲಿಂಗಬದ್ಧವಾಗಿಪ್ಪ ಸಂಸೃತಿಯಲ್ಲಿ ನೆಲೆಯಾಗಿ । ಬಿದ್ದು ಸಂಚರಿಸುವ ನಾನಾಯೋನಿ" ॥ ಎಂದು ವಿಜಯದಾಸರ ವಚನ. ನಿತ್ಯ

ನಾದ ಪ್ರಾಣಿ ಜೀವ, ಜ್ಞಾನಾನಂದಶರೀರವುಳ್ಳವನಾದರೂ, ಅನಾದಿ ಅನಿತ್ಯ ವಾದ ಲಿಂಗದಿಂದ ಬದ್ಧನಾಗಿ ಸಂಸಾರದಲ್ಲಿ ನಾನಾಯೋನಿ ಚರಿಸುವನೆಂದು ಆಜ್ಞೆ ಇತ್ತಿರುವರು. ಅನಾದಿ ಅನಿತ್ಯಲಿಂಗ ದೂರಗೈಸಲು ಹರಿಯೇ ಸಮರ್ಥನು. ಶ್ರೀಹರಿಯು, ೧ ಜೀವನ ಅಂತರ್ಗತ–ಜೀವನಲ್ಲಿರುವ ಬಿಂಬನು, ಜೀವನು ಪ್ರತಿಬಿಂಬನು, ೨ ಜೀವನಿಯಾಮಕ–ಜೀವನಿಗೆ ಒಡೆಯು ಆಜ್ಞೆ ಮಾಡುವ ಸಂಚಾಲಕ, ಪ್ರೇರಕ, ಬಿಂಬನ ಆಜ್ಞೆಯಲ್ಲಿರುವ ಅಸ್ವತಂತ್ರನು, ೩ ಜೀವವಿಲಕ್ಷಣ–ಒಳಗೆ ಅಂತರ್ಗತ ಹೊರಗೆ ನಿಯಾಮಕನಾದರೂ, ಜೀವನಿಗೆ ವಿಲಕ್ಷಣನಾಗಿ ಬೇರೆಯಾಗಿಪ್ಪನು, ಭಿನ್ನನು, ೪ ಜೀವನದ–ಜೀವನಿಗೆ ಜೀವನ ಪ್ರಾಣ ಇರುವಿಕೆಗೆ, ಸದಾಜೀವನತ್ವವನ್ನು ಕೊಟ್ಟು ಪಾಲನೆ ಮಾಡುವವನು, ೫ ಜೀವಾಧಾರಕ–ಜೀವನಿಗೆ ಇರಲು ಆಶ್ರಯನಾಗಿರುವನು. ೬ ಜೀವರೂಪ–ಜೀವನ ಸ್ವರೂಪದಂತೆ ತಾನು ಜೀವರೂಪ, ಆಕಾರ ಉಳ್ಳವನಾಗಿರುವನು, ೭ ಜೀವೇಶ್ವರ–ಸಕಲ ಜೀವರಿಗೆ ಸದಾ ಇವನು ಸ್ವಾಮಿಯು ಆಗಿದ್ದರೂ, ೮ ರಾಜೀವಭವಜನಕ-ಕಮಲದಲ್ಲಿ ಪುಟ್ಟಿದ ಬ್ರಹ್ಮಾದಿ ಸಕಲಚೇತನರಿಗೆ ತಂದೆ ಸೃಷ್ಟಿ ಮಾಡಿದವನೆಂದು. ಉಪಾಸನೆ ಮಾಡಿದರೆ ಸಂಸೃತಿ ನಾನಾ ಯೋನಿ ಆತ್ಮ, ಜಾಯಾಸುತಾದಿ ನಾನಾ ಯೋನಿಗಳನ್ನು ಬಿಡಿಸಿ ಲಿಂಗಾಂಗ ಕೆಡಿಸಿ ಜೀವನ ಸ್ವರೂಪಾನಂದಾವಿರ್ಭಾವ ಮಾಡುವನು. ಕಾರಣ ಶ್ರೀಹರಿಯೇ ಬಿಂಬ–ಜೀವರು ಹರಿಯ ಪ್ರತಿಬಿಂಬರು, ದಾಸರೆಂದು ಭಜನೆ ಮಾಡಬೇಕೆಂದು ಈ ಸಂಧಿಯಲ್ಲಿ ವಿವರಿಸಿರುವರು. (ಜೀವಾಂತರ್ಗತ) ಈ ನುಡಿಯಲ್ಲಿ ಬಹು ಶಾಸ್ತ್ರಾರ್ಥವಿಚಾರ, ಶ್ರುತ್ಯಾದಿ ಪ್ರಮಾಣಗಳು ಅಡಗಿವೆ. ಇಲ್ಲಿ ವಿಸ್ತರಿಸಲು ದಾಸರು ಸಮರ್ಥರಾದರೂ ಗ್ರಂಥಬಾಹುಲ್ಯಭಯ. ಮುಂದೆ ಜೀವನ ತ್ರೈವಿಧ್ಯ, ಬಿಂಬ ಪ್ರತಿಬಿಂಬಭಾವ ಸಂಕ್ಷಿಪ್ತವಾಗಿ ವಿವರಿಸುವ.

ಇಂತು ಜೀವವ್ಯಾಮೋಹವನ್ನು ಬಿಡಿಸಿ ಸಕಲಜೀವರೂ ಒಬ್ಬರಿಗೊಬ್ಬರು ಭೇದ, ಎಲ್ಲರೂ ಶ್ರೀ ಹರಿಯದಾಸರು, ಪ್ರತಿಬಿಂಬರು ಎನ್ನುವದನ್ನು ತಿಳಿಸಲು ಈ ಸಂಧಿಯಲ್ಲಿ ೧ ಮೊದಲಿಗೆ ಪದ್ಯ ೧ ರಿಂದ ೯ರವರೆಗೆ ಜೀವನು ಸಂಸಾರದಲ್ಲಿ ಪುಟ್ಟಲಿಕ್ಕೆ ಕಾರಣರಾದ ಪಿತೃ, ಪಿತಾಮಹ, ಪ್ರಪಿತಾಮಹಾದಿ ಜೀವನಿಯಾಮಕನಾದ ಶ್ರೀಹರಿಯ ಸಮಾರಾಧನೆ, ಪಿತೃಗಳಲ್ಲಿ ಶ್ರದ್ಧಾಭಕ್ತಿ ವಿಶ್ವಾಸದಿಂದ ಶ್ರಾದ್ಧ ಮಾಡುವ ಬಗೆ, ಅಲ್ಲಿ ಪಿತೃಗಣಗಳಂತರ್ಯಾಮಿ ಪ್ರಾಣಾಂತಸ್ಥ

ಶ್ರೀಹರಿಯ ಅನಿರುದ್ಧಾದಿ ಪಂಚರೂಪಗಳ ಯಜನ, ೨ ಪದ್ಯ ೧೦ರಿಂದ ೧೫, ಜೀವನಿಗೆ ಜೀವನೋಪಾಯವಾದ ಅನ್ನನಾಮಕ ಅನಿರುದ್ಧಾದಿ ೫ರೂಪಗಳಿಂದ, ದೇವ-ಋಷಿ-ಪಿತೃ-ನರ-ಪಶುಗಳಿಗೆ ಸ್ವಾಹಾ, ಸ್ವಧಾ, ಫಲ ತೃಣಾದಿ ನಾಲ್ಕು ವಿಧ ಅನ್ನದಿಂದ ತೃಪ್ತಿ, ಮೂರು ಅನ್ನ ಕಾಯೇನ, ವಾಚಾ, ಮನಸ್ಸಿನಿಂದ ಆಗುವ ಕ್ರಿಯೆಗಳೆಲ್ಲ ಶ್ರೀಹರಿಗೆ ಅನ್ನವಾಗಿರುವುವು. ಎಂದು ಸಪ್ತಾನ್ನಪ್ರಕರಣ ಉಪನಿಷತ್‌ಪ್ರಮೇಯವನ್ನು ವಿಸ್ತರಿಸುವರು. ೩ ಪದ್ಯ ೧೬ ರಿಂದ ೨೨ ಪದ್ಯ ಪೂರ್ತಿ. ಜ್ಞಾನಸಾಧನ ವಿಶೇಷವಾಗಿ ನಾನಾಗುಣರೂಪ ಕ್ರಿಯಾನಾಮದಿಂದ ಭಗವನ್ಮಹಿಮಾ ಸ್ತೋತ್ರ. ೪ ಅಕ್ಷರ ಕ್ಷರಚೇತನರವಿವೇಚನ ಪದ್ಯ ೨೩ ೨೫. ೫ ಅಂಶಿ, ಅಂಶ, ಅಂತರ್ಗತಾದಿರೂಪವಿವೇಚನ, ಪದ್ಯ ೨೬. ೬ ಬಿಂಬ ಪ್ರತಿಬಿಂಬ ಭಾವಲಕ್ಷಣಗಳ ಸವಿಸ್ತರ ೨೭ನೇ ಪದ್ಯ ೭ ಶ್ರೀಲಕ್ಷ್ಮೀ ಹರಿಗೆ ನಿತ್ಯಮುಕ್ತತ್ವ ಭೇದವಿಚಾರ ೨೯ ಪದ್ಯ ೮ ಪದ್ಯ ೨೮, ೩೦, ೩೧ರಲ್ಲಿ ಭಕ್ತರು, ಅಭಕ್ತರಿಗೆ ಗತಿದಾಯಕನ ವಿಚಾರ ಈ ಸಂಧಿಯಲ್ಲಿಪ್ಪ ಭಗವಲ್ಲೀಲೆ, ಬಿಂಬನಾದ ಜಗನ್ನಾಥ ವಿಠಲಗೆ ಸಮರ್ಪಣ ವಿಚಾರವನ್ನು ಬ್ರಹ್ಮಸೂತ್ರ ಭಾಷ್ಯ ಅ ೨, ಪಾದ ೩, ಸೂತ್ರ ೧ ಅಂಶಾಧಿಕರಣದಲ್ಲಿ, ಶ್ರೀ ಸರ್ವಜ್ಞರ ಉಕ್ತಿಯಂತೆ ದಾಸರಾಯರು, ಜೀವನಪ್ರಕ್ರಿಯಾಸಂಧಿಯಲ್ಲಿ–

## ಜೀವರು ಹರಿಯ ಭಿನ್ನಾಂಶರು

**ಭಾಷ್ಯ** "ಅಂಶಾ ಏವ ಹೀವೇ ಜೀವಾ ಅಂಶೀ ಹಿ ಪರಮೇಶ್ವರಃ ।
ಸ್ವಯಮಂಶೈರಿದಂ ಸರ್ವಂ ಕಾರಯತ್ಯಚಲೋ ಹರಿಃ ॥
ಇತಿ ಗೌಪವನಶ್ರುತ್ಯಾಮಂಶತ್ವಂ ಜೀವಸ್ಯೋಪಲಭ್ಯತೇ" ॥

ಜೀವರು ಪಿತೃ ಪುತ್ರಾದಿ ಸಂಬಂಧದಿಂದ ಶ್ರೀಹರಿಯನ್ನು ಉಪಜೀವಿಸಿ ಕೊಂಡು ಶ್ರೀಹರಿಗೆ ಅಂಶಭೂತರೇ ಆಗಿದ್ದಾರೆ. ಇದು ಪ್ರಸಿದ್ಧ. ಪರಮೇಶ್ವರನು ಅಂಶಿಯಾಗಿದ್ದಾನೆ. ಇದು ಪ್ರಸಿದ್ಧ. ಶ್ರೀಹರಿಯು ಸ್ವರೂಪಾಂಶಗಳಾದ ಅನಿರುದ್ಧಾದಿ ರೂಪದಿಂದ, ಅಥವಾ ಭಿನ್ನಾಂಶರಾದ ಚತುರ್ಮುಖಾದಿಗಳಿಂದ ಜಗತ್ತನ್ನು ಸೃಷ್ಟಿಸುತ್ತಾನೆ. ಹೀಗೆ ಗೌಪವನಶ್ರುತಿಯಲ್ಲಿ ಜೀವರಿಗೆ ಅಂಶತ್ವವು ಹೇಳಲ್ಪಟ್ಟಿರುತ್ತದೆ. ಇನ್ನೊಂದು ಶ್ರುತಿಯಲ್ಲಿ ಅನಂಶತ್ವವೂ ಹೇಳಲ್ಪಟ್ಟಿದೆ. ಇದನ್ನು ಪರಿಹರಿಸಲು ಶ್ರೀ ಬಾದರಾಯಣರು, ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತೇ ಏಕೇ ಓಂ ॥ ಪಿತೃತ್ವ

ಪುತ್ರತ್ವಾದಿ ನಾನಾ ಪ್ರಕಾರದಿಂದ ಜೀವರು ಪರಮಾತ್ಮನಿಂದ ಉಪಕೃತ ರಾದುದರಿಂದ ಜೀವನಿಗೆ ಈಶ ಸಂಬಂಧತ್ವ ಹೇಳಿದ್ದರಿಂದ ಅಂಶತ್ವವು ಕೂಡುತ್ತದೆ. ಕೆಲವರು ಅನಂಶನೆಂತಲೂ, ಕೆಲವರು ಭೇದಾಭೇದ ಹೇಳುತ್ತಾರೆ. ಉಪಜೀವಕತ್ವರೂಪ ಭಗವಚ್ಛೇಷ ಶ್ರೀಹರಿಯಿಂದ ನ್ಯೂನತೆ, ಶ್ರೀಹರಿಯ ಸದೃಶತ್ವ, ಅಂಶತ್ವ ಎಂದು ಎರಡುವಿಧ. ಜೀವನು ಉತ್ಪತ್ತಿ ನಾಶವುಳ್ಳವನೆಂದು ಪ್ರಸಿದ್ಧನಾದ ಪುರುಷನು. ಪರಮಾತ್ಮನ ಅಂಶನು, ಏಕೆಂದರೆ ಪರಮಾತ್ಮನಿಗೆ ಪಿತನೆಂದು, ಪುತ್ರನೆಂದು, ಭ್ರಾತೃನೆಂದು, ಸಖಿಯೆಂದು ನಾನಾ ಪ್ರಕಾರವಾಗಿ ಪಾರಾಶರ್ಯನಾರಯಣ ಶ್ರುತಿಯು ಜೀವನು ಪರಮಾತ್ಮನ ಅಂಶವೆಂದು ಪ್ರತಿ ಪಾದಿಸುತ್ತದೆ. ಯಾವ ಕಾರಣದಿಂದ ಶ್ರೀಹರಿಯು ಜೀವನಿಗೆ ಪುತ್ರನೆಂದೂ ಸಖಿ ಎಂದೂ, ಭಾತೃನೆಂದೂ, ಸ್ವಾಮಿಯೆಂದೂ ಬಹುವೇದಗಳಿಂದ ಹೇಳಲ್ಪಡು ತ್ತಾನೋ; ಆದಕಾರಣ ಜೀವನು ಶ್ರೀಹರಿಗೆ ಅಂಶನು ಎಂದು ಹೇಳಿದೆ. ಜೀವನು ಶ್ರೀಹರಿಗೆ ಭಿನ್ನಾಂಶನೋ? ಸ್ವರೂಪಾಂಶನೋ? ಎಂದು ಶಂಕಾ ಬಂದರೆ, '**ಓಂ ಅಪಿ ಸ್ಮರ್ಯತೇ ಓಂ**' ಎಂಬ ಸೂತ್ರ ಭಾಷ್ಯ "ಮಮೈವಾಂಶೋ ಜೀವ ಲೋಕೇ ಜೀವಭೂತಃ ಸನಾತನಃ" ಎಂದು ಹೇಳಿದೆ. ಜೀವಚಿಛ್ಛರೀರದಲ್ಲಿರತಕ್ಕ ನಿತ್ಯವಾದ ಬ್ರಹ್ಮಾದಿಚೇತನರಾಶಿಯು ನನ್ನ ಭಿನ್ನಾಂಶರೇ ಎಂದು ಹೇಳಿದ್ದಾರೆ. ಈ ಭಿನ್ನಾಂಶರಾದ ಜೀವರೂ ಸಹ ಪರಸ್ಪರ ಭೇದವುಳ್ಳವರೆಂದು "ಜೀವನ ಪ್ರಕ್ರಿಯಾಸಂಧಿ ಉಪಕ್ರಮಿಸುತ್ತಾರೆ.

## ಪಿತೃಯಜ್ಞ ವಿಚಾರ

ಪಿತ್ರಾದಿಋಣಮೋಚನ ವಿಷಯವನ್ನು ಶ್ರೀ ಬಾದರಾಯಣರೇ ಶ್ರೀಮನ್ ಮಹಾಭಾರತಾಂತರ್ಗತ ಹರಿವಂಶಪರ್ವ (೧) ಅಧ್ಯಾಯ ೧೬ರಲ್ಲಿ ಶ್ರೀ ಜನಮೇಜಯುರಾಯನು, ಶ್ರೀ ವೈಶಂಪಾಯನರನ್ನು ಕುರಿತು ಪ್ರಶ್ನೆ ಮಾಡಿದ್ದಾನೆ. ವೈವಸ್ವತ ಮನುವಿಗೆ ಶ್ರಾದ್ಧದೇವ ಎಂತ ಯಾಕೆ ಹೆಸರು ಪ್ರಾಪ್ತಿಯಾಯಿತು? ಶ್ರಾದ್ಧದ ಶ್ರೇಷ್ಠವಿಧಿ ಆವುದು? ಇದೇ ಪ್ರಕಾರ ಪಿತರ ಪಿತೃಗಳು ಎಂದು ವೇದಜ್ಞಾನಿಗಳು ಹೇಳುತ್ತಾರೆ. ಇವರು ದೇವತೆಗಳಿಗೆ ದೇವತೆಗಳು, ಮಾನ್ಯರೆಂದೂ ಅನ್ನುತ್ತಾರೆ. ಇದು ಹೇಗೆ? ಮತ್ತು ಈ ಪಿತೃಗಳ ಎಷ್ಟೋ ಗಣವಿರುವದು. ಆಗಣ ಯಾವುದು? ಈ ಪಿತೃಗಳ ಸಾಮರ್ಥ್ಯವೇನು? ನಾವು ಇಲ್ಲೆ ಈ ಭೂಲೋಕದಲ್ಲಿ ಶ್ರಾದ್ಧ ಮಾಡಿದರೆ, ಆ ಸ್ವರ್ಗದಲ್ಲಿರುವ ಪಿತೃಗಳು ಹೇಗೆ ತೃಪ್ತರಾಗುವರು? ಅವರು ಸ್ವರ್ಗದಲ್ಲಿ ತೃಪ್ತರಾಗಿ ನಮಗೆ ಆಶೀರ್ವದಿಸಿದರೆ ಆಯೋಗದಿಂದ ನಮಗೆ ಇಲ್ಲಿ ಕಲ್ಯಾಣ

ವಾಗುವ ಬಗೆ ಹೇಗೆ? ಈ ವಿಚಾರವನ್ನು ವಿವರಿಸಬೇಕೆಂದು ಪ್ರಾರ್ಥಿಸಲು ಶ್ರೀ ವೈಶಂಪಾಯನರು ಹೇಳುತ್ತಾರೆ. ಜನಮೇಜಯನೇ! ಒಳ್ಳೇ ಪ್ರಶ್ನೆ ಮಾಡಿರುವೆ, ಇದೇ ಪ್ರಶ್ನೆಯನ್ನು ಧರ್ಮರಾಜನು, ಶರಶಯ್ಯಾದ ಮೇಲೆ ಮಲಗಿ ಉಪದೇಶ ಮಾಡುವ ಶ್ರೀ ಭೀಷ್ಮಾಚಾರ್ಯರನ್ನು ಕುರಿತು ಪ್ರಶ್ನೆ ಮಾಡಿದನು. ಭೀಷ್ಮರು ಪೂರ್ವದಲ್ಲೇ ಮಾರ್ಕಂಡೇಯರನ್ನು ಕುರಿತು, ಮತ್ತೂ ಹಿಂದೆ ಮಾರ್ಕಂಡೇಯರು ಸನತ್ಕುಮಾರರನ್ನು ಕುರಿತು ಈ ಪ್ರಶ್ನೆ ಪರಂಪರೆಯಿಂದ ಬಂದಿದೆ. ಭೀಷ್ಮರು ಯುಧಿಷ್ಠಿರನಿಗೆ ಹೇಳಿದ್ದು ನಾನು ನಿನಗೆ ಹೇಳುತ್ತೇನೆ. ಯುಧಿಷ್ಠಿರನೇ! ಪಿತೃಗಳ ಶ್ರಾದ್ಧ, ಇಷ್ಟಾರ್ಥ ಫಲಕೊಡುವ ಒಂದು ಅನುಷ್ಠಾನ. ಪಿತೃಯಜ್ಞವಿದೆ. ಕೇಳು ನಾನು ನನ್ನ ಪಿತನಾದ ಶಂತನು ಚಕ್ರವರ್ತಿಯ ಪ್ರೀತಿಗೋಸುಗ ಸೂತ್ರ ಗ್ರಂಥಗಳಲ್ಲಿ ಹೇಳಿದ ವಿಧಿ ಪ್ರಕಾರವಾಗಿ ಭೂಮಿಯ ಮೇಲೆ ದರ್ಭೆ ಹಾಸಲು ಭೂಮಿಯು ಏಕಾಏಕಿ ಅಲ್ಲಾಡಿತು. ಜೀವಿತಪೂರ್ವದಿಂದ ಅಲಂಕೃತನಾದ ನನ್ನ ತಂದೆ ರಕ್ತವರ್ಣ ವಿಶಿಷ್ಟವಾದ ತನ್ನ ಅಂಗೈ ಚಾಚಿ ನನ್ನ ಕೈಯ್ಯಲ್ಲಿ ಪಿಂಡದಾನ ಮಾಡೆಂಬ ಶಬ್ದವನ್ನು ನಾನು ಕೇಳಿ ಆಶ್ಚರ್ಯಚಕಿತನಾದೆ; ಬೋಧಾಯನ ಸೂತ್ರದಲ್ಲಿ ಪ್ರತ್ಯಕ್ಷ ಪಿತೃಗಳ ಕೈಬರುತ್ತದೆಂದು ಹೇಳಿಲ್ಲವೆಂದು ನಾನು ಹೇಳಿದೆ. ನನ್ನ ಮಾತು ಕೇಳಿ, ನಾನು ನನ್ನ ತಂದೆಯು ಕೈಲಿಕೊಟ್ಟ ಪಿಂಡದಿಂದ ತೃಪ್ತನಾಗಿ, ಒಳ್ಳೇ ಪ್ರೀತಿಯುಕ್ತ ಸವಿಮಾತಿನಿಂದ ಪ್ರಸನ್ನನಾಗಿ ವರಕೊಟ್ಟನೇನಂದರೆ, ನೀನು ಭಕ್ತಿಯಿಂದ ಪಿತ್ರಂತರ್ಗತ ಪರಮಾತ್ಮನನ್ನು ಪ್ರೀತಿಪಡಿಸಿರುವಿ. ತ್ರೈಲೋಕ್ಯದಲ್ಲಿ ಅನ್ಯತ್ರ ಎಂದೂ ಯಾರಿಗೂ ದೊರಕದಿದ್ದ ವರವಿದು. ನೀನು ಇಚ್ಛಾಮರಣಿಯಾಗು. ಯಾವತ್ಕಾಲ ಪರಿಯಂತ ಜೀವಿತಾಶಾ ನಿನಗಿದೆಯೋ ಅವರೆಗೆ ಮೃತ್ಯು ನಿನ್ನ ಸಮೀಪ ಬರಲಾರದು. ಮತ್ತೂ ಏನಾದರೂ ವರ ಬೇಕಾದರೆ ಬೇಡು. ಎಂದು ಶಂತನು ಭೂಮಿಯ ಮರೆಯಾಗಿ ಹೇಳಲು ನಾನು ಈ ಪಿತೃಗಣ ವಿಷಯವೇ ಪ್ರಶ್ನೆಮಾಡಿದೆ. ಆಗ ತಂದೆಯು "ಎಲೋ ಭೀಷ್ಮನೆ! ಇಂದು ನಿನ್ನಿಂದ ಆಮಂತ್ರಣ ಸ್ವೀಕರಿಸಿ ಸಾಕ್ಷಾತ್ ಆಗಿ ಬಂದು ಕುಳಿತ ಮಾರ್ಕಂಡೇಯ ಋಷಿಗಳು ವಿಸ್ತಾರವಾಗಿ ಹೇಳುತ್ತಾರೆ.

## ಪಿತೃಗಣ ವಿಚಾರ

ಆದರೆ ಸಂಕ್ಷಿಪ್ತದಿಂದ ಇಷ್ಟೇ ಹೇಳುತ್ತೇನೆ ಕೇಳು ಈ ಭೂಲೋಕದಲ್ಲಿ ಮರಣಹೊಂದಿ ಪರಲೋಕದಲ್ಲಿ ಮಾನ್ಯರಾದವರು ಪಿತೃಗಳೆಂತ ಹೆಸರು ಮಾತ್ರ

ಮೂಲ ಪಿತೃಗಳಲ್ಲ. ಮೂಲಪಿತೃಗಣ ಬೇರೆ ಉಂಟು. **ಈ ಮೂಲಪಿತೃಗಳು** ಆದಿದೇವನಾದ **ಬ್ರಹ್ಮದೇವರ ಮಕ್ಕಳಿರುವರು.** ಈ ಉದ್ದೇಶ್ಯದಿಂದಲೇ ಇವರ ಸ್ವತಂತ್ರ ಸೃಷ್ಟಿಯಾಗಿ ಸ್ವರ್ಗಲೋಕದಲ್ಲಿ ಪೂಜ್ಯರಾಗಿ ಸಾಂಶದೇವತೆಗಳಿಗೆ ಸಮಾನರು. ದೇವ-ಅಸುರ-ಮನುಷ್ಯ-ಯಕ್ಷ-ನಾಗ-ಕಿನ್ನರಾದಿ ಸರ್ವರಿಂದ ಪೂಜ್ಯರು. ಶ್ರಾದ್ಧಕಾಲದಲ್ಲಿ ಅನ್ನಾದಿದಾನದಿಂದ ಈ ಪಿತೃಗಳ ತೃಪ್ತಿಯಾದರೆ, ತುಷ್ಟರಾದ ಈ ಪಿತೃಗಳು ಜಗತ್ತನ್ನೇ ತೃಪ್ತಿಪಡಿಸುತ್ತಾರೆ. ಹೀಗೆ ಬ್ರಹ್ಮದೇವರ ವಾಕ್ಯವಿದೆ. ಕಾರಣ ಉತ್ತಮ ರೀತಿ ವಿಧಾನದಿಂದ ಶ್ರಾದ್ಧ ಮಾಡಿದವರಿಗೆ ಕಲ್ಯಾಣ ಮಾಡುತ್ತ ವಂಶಾಭಿವೃದ್ಧಿ ಮಾಡುವರೆಂದು ಪಿತೃಭಕ್ತನಾದ ನನಗೆ ಉಪದೇಶಿಸಿ ಅಂತರ್ಧಾನವೈದಿದನು.

ಪುನಃ ನಾನು ಮಾರ್ಕಂಡೇಯರಿಗೆ ನಮಿಸಿ ಸವಿಸ್ತರ ಪ್ರಶ್ನೆಮಾಡಿದೆನ್ನು ಮಾರ್ಕಂಡೇಯರು "ಭೀಷ್ಮನೆ ಕೇಳು, ನಾನು ಪಿತೃಭಕ್ತಿಯಿಂದಲೇ ಮಹಾ ದೀರ್ಘಾಯುವಾಗಿದ್ದೇನೆ. ನನ್ನಂತೆ ದೀರ್ಘಕಾಲ ಜೀವಿಸಿದವರು ವಿರಳ. ನನಗೆ ಪಿತೃಭಕ್ತಿಯು ಪರಿಶುದ್ಧ ಜ್ಞಾನ ಹೇಗೆ ಆಯಿತೆಂಬುದನ್ನು ಕೇಳು. ಭೀಷ್ಮನೆ ಸಹಸ್ರಾವಧಿವರ್ಷಪರಿಯಂತ ಮೇರು ಪರ್ವತದ ಮೇಲಿದ್ದು ಉತ್ಕೃಷ್ಟ ತಪಸು ಮಾಡಲು, ಒಂದು ಅತಿ ಪ್ರಕಾಶಮಾನವಾದ ವಿಮಾನ ಇಳಿಯಿತು. ಅದರಲ್ಲಿ ಸಾವಿರಾರು ಸೂರ್ಯಪ್ರಕಾಶವುಳ್ಳ ಒಬ್ಬ ಅಂಗುಷ್ಠಪ್ರಮಾಣಪುರುಷ ಮಲಗಿದ್ದ. ಅವನನ್ನು ಕುರಿತು ನಮಿಸಿದೆನು. ಆ ಪುರುಷ ಎದ್ದು ಅಗ್ನಿಯಸದೃಶದೇಹವುಳ್ಳ ವನಾಗಿ ನನ್ನ ಕೂಡ ಮಾತನಾಡಿದನು. ನೀನು ಯಾರನ್ನು ಕುರಿತು ತಪಸ್ಸು ಮಾಡಿದೆಯೋ ಆತನೇ **ಸನತ್ಕುಮಾರನೆಂಬ ನಾನು**. ನಾನು ಬಹು ಪುರಾತನನು. ಬ್ರಹ್ಮದೇವರ ಮಾನಸಪುತ್ರ. ನನ್ನ ತರುವಾಯ ಉಳಿದ ೭ಜನ. ಮಹರ್ಷಿಪುತ್ರರು ನನ್ನ ತಮ್ಮಂದಿರಾಗಿದ್ದಾರೆ. ೧ ಕ್ರತು, ೨ ವಸಿಷ್ಠ, ೩ ಪುಲಹ, ೪ ಪುಲಸ್ತ್ಯ, ೫ ಅತ್ರಿ, ೬ ಅಂಗಿರಾ, ೭ ಮರೀಚಿ. ಇವರೆಲ್ಲರೂ ತಮ್ಮ ತಪಸ್ಸಿನ ಬಲದಿಂದ ತ್ರೈಲೋಕ್ಯ ರಕ್ಷಿಸುತ್ತಾರೆ. ಇವರು ಪ್ರಜೋ ತ್ಪಾದಕರು. ನಾನು ಮಾತ್ರ ಪಿತೃಭಕ್ತಿಯಿಂದ ಯತಿಧರ್ಮ ಸ್ವೀಕರಿಸಿ ಅಂತ ರ್ಗತನಾದ ಹರಿಯನ್ನು ಭಜಿಸುವೆನು. ಎಷ್ಟೋ ಯುಗಗಳು ತಿರುಗಿದವು. ಸನತ್=ನಿರಂತರ ನಿತ್ಯ, ಕುಮಾರ ಬಾಲರೂಪನು. ಸನತ್ಕುಮಾರನೆಂದು ಲೋಕದಲ್ಲಿ ಪ್ರಸಿದ್ಧಿಯಾಗಿದೆ ಎಂದನು,

ಆಗ್ಗೆ ಮಾರ್ಕಂಡೇಯರು ಆ ಸನತ್ಕುಮಾರರಿಗೆ ನಮಿಸಿ ಮೇಲೆ ವಿವರಿಸಿದಂತೆ ಪಿತೃಗಳು ಯಾರು? ಅವರ ಗುಣವೆಷ್ಟು? ಅವರು ಎಲ್ಲಿರುವರು ? ಇತ್ಯಾದಿ ಪ್ರಶ್ನೆ ಮಾಡಿದರು. ಆಗ್ಗೆ ಸನತ್ಕುಮಾರರು ತುಷ್ಟರಾಗಿ, ಸ್ವರ್ಗದಲ್ಲಿ ಪಿತೃಗಣವಿದೆ. ೭ ಜನ ಪಿತೃಗಳು. ಇವರಲ್ಲಿ ನಾಲ್ಕು ಜನರಿಗೆ ಮೂರ್ತಿಮಂತವಾದ ತೇಜಃಪುಂಜ ಶರೀರವಿದೆ. **೧ ಸುಕಾಲ, ೨ ಅಂಗಿರಸ, ೩ ಸುಸ್ವಧಾ. ೪ ಸೋಮಪ.** ಸುಕರ್ಮದಿಂದ ತೇಜಃಪುಂಜದೇಹ ಧರಿಸಿದರು. **೧ ವೈರಾಜ, ೨ ಅಗ್ನಿಷ್ವಾತ್, ೩ ಬರ್ಹಿಷದ ಈ ಮೂರು ಗಣ ಅಮೂರ್ತರಾಗಿದ್ದಾರೆ.** ಇವರೆಲ್ಲ ಆದಿಯಲ್ಲಿ ಬ್ರಹ್ಮದೇವರ ೭ ಜನ ಮಕ್ಕಳು **೧ ಈ ವೈರಾಜಗಣ-ವಿರಾಜನಾಮಕ** ಬ್ರಹ್ಮಪುತ್ರರು. ಯಾರು ಶ್ರದ್ಧೆಯಿಂದ ಈ ಪಿತೃಗಣ ಉದ್ದಿಶ್ಯವಾಗಿ ಶ್ರಾದ್ಧಮಾಡುತ್ತಾರೋ ಅದರಿಂದ ಇವರು ತುಷ್ಟರಾಗಿರುತ್ತಾರೆ. ಸೋಮಗೆ ಪುಷ್ಟಿ ಮಾಡಿದರೆ **ಸೋಮನು** ತುಷ್ಟನಾಗಿ ಔಷಧಿ ಅನ್ನಾದಿಗಳಿಂದ ಲೋಕರನ್ನು ಪ್ರೀತಿಕರಿಸುವ. ಈ ಮೊದಲನೇ ಪೀಳಿ (ವಂಶ) ಪಿತೃಗಣ. ೨ ಮರೀಚಿ-ಬ್ರಹ್ಮನ ಮಗ, ಅಗ್ನಿಷ್ವಾತ್ ನಾಮಪಿತೃಗಣ ಸೋಮಪದನಾಮದಿಂದ ಪ್ರಸಿದ್ಧರಾಗಿದ್ದಾರೆ. ೩ ಬರ್ಹಿಷದ ನಾಮಗಣ, ಸ್ವರ್ಗದ ಪ್ರಸಿದ್ಧ ಪ್ರದೇಶದಲ್ಲಿರುವವರು. ಪುಲಸ್ತ್ಯನಾಮಕ ಪ್ರಜಾಪತಿಮಕ್ಕಳು. ಹೀಗೆ ೭ ಜನ ಪಿತೃಗಳೆಂದು ಹರಿವಂಶದಲ್ಲಿ ವರ್ಣಿಸಿದಂತೆ, ತಾರತಮ್ಯ ಕರ್ಮಜ ದೇವತೆಗಳ ಕಕ್ಷದಲ್ಲಿ "ಪಿತೃಗಳೇಶ್ವರು" ಎಂದು ದಾಸರ ವಚನ.

## ಶ್ರಾದ್ಧ ವಿಧಾನ

ಶ್ರಾದ್ಧಾದಿಯಲ್ಲಿ ದೇವತೆಗಳ ಸ್ಥಾನಗಳಲ್ಲಿ ೧೦ಜನ ವಿಶ್ವೇದೇವತೆಗಳೆಂದು ಸುಪ್ರಸಿದ್ಧರು.

೧. ಪುರೂರವ ೨ ಆರ್ದ್ರವ = ಇಬ್ಬರು ಪಾರ್ವಣಶ್ರಾದ್ಧ ದೇವತೆಗಳು.
೩. ಧುರಿ ೪ ಲೋಚನ = ಇಬ್ಬರು ಸಂಕಲ್ಪ ,, ,,
೫. ಕ್ರತು ೬ ದಕ್ಷ = ಇಬ್ಬರು ಮಾಸಿಕ ,, ,,
೭. ಸತ್ಯ ೮ ವಸು = ಇಬ್ಬರು ನಾಂದೀ ,, ,,
೯. ಕಾಮ ೧೦ ಕಾಲ = ಇಬ್ಬರು ಪ್ರೇತ ,, ,,

ಹೀಗೆ ಆಯಾ ಶ್ರಾದ್ಧಗಳಲ್ಲಿ ದೇವಸ್ಥಾನಕ್ಕೆ ನಿಯೋಜಿತರಾದ ಇಬ್ಬರು ಬ್ರಾಹ್ಮಣರಲ್ಲಿ ಆಯಾ ಕಾಲ ಶ್ರಾದ್ಧವನನುಸರಿಸಿ ಮೇಲೆ ಹೇಳಿದಂತೆ ಇಬ್ಬರ ವಿಶ್ವೇದೇವತೆಗಳನ್ನು ಆಹ್ವಾನಿಸಿ ಸ್ವರ್ಣಪಾತ್ರೆಯಲ್ಲಿ ಅನ್ನಕೊಡುವೆನೆಂದು ಚಿಂತಿಸಿ ವಿಶ್ವೇದೇವಾಂತರ್ಯಾಮಿ ಪ್ರಾಣೇಶಗೆ ಅರ್ಪಿಸಬೇಕು. ಇದು ದೇವಸ್ಥಾನ ಸ್ವಾಹಾ ಅನ್ನಕೊಡುವವಿಧಿ. **ಸನತ್ಕುಮಾರರು** ಎಲೋ ಮಾರ್ಕಂಡೇಯರೇ ಪಿತೃಶ್ರಾದ್ಧವಿಧಿ ಕೇಳಿರಿ. ಶ್ರಾದ್ಧಕಾಲ ರಜತಪಾತ್ರೆಯಲ್ಲಿ ಪಿತೃಗಳಿಗೆ ಅನ್ನವನ್ನು ಕೊಟ್ಟರ ಸುಪ್ರೀತರಾಗುತ್ತಾರೆ. ರಜತವು ಪಿತೃಗಳಿಗೆ ಪ್ರೀತಿವಸ್ತು. ರಜತ ಪಾತ್ರೆಯಲ್ಲಿ ಬಡಿಸಿದ ಶ್ರಾದ್ಧಾನ್ನ ಸ್ವಧಾ ಶಬ್ದ ಪೂರ್ವಕ ಅರ್ಪಣೆ ಮಾಡಿದರೆ ಪಿತೃಗಳು ಸಂತುಷ್ಟರಾಗುತ್ತಾರೆ. ಶ್ರಾದ್ಧ ಕಾಲದಲ್ಲಿ ಮೊದಲಿಗೇವೇ ೧ ಸೋಮ, ೨ ಅಗ್ನಿ, ೩ ಯಮ, ಈ ಮೂರುಜನ ಪಿತೃಸ್ವರೂಪರಿಗೆ ಅಗ್ನಿಯಲ್ಲಿ ಆಹುತಿಕೊಡಬೇಕು. ಇದರಿಂದ ಪಿತೃಗಳು ಸಂತುಷ್ಟರಾಗಿ, ಯಾವ ಯಾವ ಲೋಕದಲ್ಲಿದ್ದರೂ ಈ ಯಜಮಾನನ ಪಿತೃಗಳನ್ನು ತೃಪ್ತಿಪಡಿಸುತ್ತಾರೆ. ಪಿತೃಗಳು ಅಕ್ರೋಧರು ಶಾಂತರು. ದೇವತೆಗಳಿಗಿಂತಲೂ ಬಹುಸುಲಭಪ್ರಾಪ್ಯರು. ಇತ್ಯಾದಿ ಸವಿಸ್ತರ ಹೇಳಿದ್ದಾರೆ, ೮ ಅಧ್ಯಾಯವಿದೆ. ೭ಹುವಿಷಯಗಳಿವೆ. ಹರಿವಂಶ ನೋಡುವುದು. ಶ್ರಾದ್ಧಮಹಿಮಾ ಮುಂದೆ ವಿವರಿಸಿದೆ.

ಇಲ್ಲಿ ಪದ್ಯದಲ್ಲಿ ೧ ಯಮ, ೨ ಸೋಮ, ೩ ಕವ್ಯವಾಹನರೆಂಬ, ೩ ಜನ ಪಿತೃಗಳು. ಇವರು ೧೮ನೇ ಕಕ್ಷದಲ್ಲಿ ಸೇರಿದವರು. ಮೇಲೆ ವಿವರಿಸಿದ ೭ಜನ ಪಿತೃಗಳು. ೧೯ನೇ ಕರ್ಮಜ ದೇವತೆಗಳ ಕಕ್ಷದಲ್ಲಿ ಒಬ್ಬೊಬ್ಬರ ಗಣಸಮೂಹವಿರುವುದು. ಈ ೧೦ ಜನ ಮುಖ್ಯ ಪಿತೃಗಳಲ್ಲದೆ ೧೦೦ಜನ ಪಿತೃಗಣ ಬೇರೆ. ಇವರು ೨೮ನೇ ಕಕ್ಷದಲ್ಲಿಪ್ಪ ಚಿರಪಿತೃಗಳು. ಋಷಿಗಳಿಂದ ೧೦೦ ಗುಣ ಕಡಿಮೆ ಇವರೆಲ್ಲರೂ ಸಾಂಶರು, ಇವರ ದ್ವಾರವೇ ಶ್ರಾದ್ಧಾದಿ ಅನ್ನಕೊಡಬೇಕು. ವ್ಯಾಸದಾಸಸಿದ್ಧಾಂತ ಕೌಮುದಿಕಾರರು, ಪ್ರಸಿದ್ಧ ವಸು, ರುದ್ರ, ಆದಿತ್ಯ ಗಣದಿಂದ ಬೇರೆ ಪಿತೃಗಣವಿದೆ. ಎಂದು ೬ನೇ ಪದ್ಯ ಟೀಕಾದಲ್ಲಿ ಉದಾಹರಿಸಿದ್ದು ಬಹು ಸಮಂಜಸವೂ ತಾರತಮ್ಯ ದ್ಯೋತಕವೂ ಆಗಿದೆ. ಅದು ಮುಖ್ಯವಾದದು. ಹೇಗಂದರೆ, ಸರ್ವಚಿರಪಿತೃನಿಯಾಮಕ, ಸಪ್ತಪಿತ್ರಂತರ್ಗತ ಯಮ ಸೋಮ ಕವ್ಯವಾಹನರಲ್ಲಿ ವಿರಾಜಿಪ, ವಸು, ರುದ್ರ, ಆದಿತ್ಯ ಗಣಕ್ಕೆ ನಿಯಾಮಕ ತತ್ವೇಶರು. ಅನಿಲಾಂತರ್ಗತ, ಪ್ರಾಣಾಂತಸ್ಥ, ಜನಾರ್ದನರೂಪಿ ಹರಿಯು

ತೃಪ್ತಿಗೋಸುಗ ಶ್ರಾದ್ಧವಿಧಾನಪೂರ್ವಕ ಮಾಡಿ ಅರ್ಪಿಸಿದರೆ, ಈ ಎಲ್ಲ ಸಾಂಶ ದೇವತೆಗಳು, ಇವರ ಅಂಶಿ-ಅಂಶ ಅವತಾರರೂಪಗಳನ್ನು, ಚಿಂತಿಸಲು, "ಧರೆಯ ಮೇಲಿದ್ದ ದಿವ್ಯ ಶುಭರಸಗಳು ಬಂದು ಭರಿತವಾಗಿವೆ ನೋಡಿ ಇಂದಿನ ದಿನದಲ್ಲಿಬಿಡದೆ!" ಧರೆ ಭುವರ್ಲೋಕ, ನಾಕ ಭವನದಲ್ಲಿದ್ದ ಸರ್ವಪಿತೃಗಣದವರು ತೃಪ್ತಿಯಾಗುವರು.

**೧ ಮರುತ, ೨ ಆದಿತ್ಯ, ೩ ಸಾಧ್ಯ, ೪ ವಸು, ೫ ರುದ್ರ, ೬ ಅಶ್ವಿನಿ, ೭ ಋಷಿ ಎರಡೈದು (೨+೫=೭) ಗಣದವರು ಪಿತೃರೆನಿಸುವರು.** ತರತಮ ಇದರೊಳು ಸಿದ್ಧವಾಗಿದೆ ಇಂತು" ಎಂದು ಶ್ರೀ ವಿಜಯದಾಸರ ವಚನ. ಮೇಲೆ ವಿವರಿಸಿದಂತೆ ಪಿತೃದ್ವಾರಾ ಶ್ರದ್ಧೆಯಿಂದ ಅನ್ನಕೊಡಲು, ಸಾಂಶರಾದ ಪ್ರಯುಕ್ತ ತರತಮದಿಂದ ಒಬ್ಬರಿಂದೊಬ್ಬರು ಶ್ರೀಹರಿಗೆ ಮುಟ್ಟಿಸುತ್ತಾರೆ. ಶ್ರೀಹರಿ ಸರ್ವರಬಿಂಬನಾದುದರಿಂದ ಹರಿತೃಪ್ತನಾಗೆ ಸರ್ವಜಗತ್ತೃಪ್ತಿ. ಮೂರು ಜನ ಬ್ರಾಹ್ಮಣರಲ್ಲಿ (ಯಮ, ಸೋಮ, ಕವ್ಯವಾಹನ) ಎಂದು ಮೂರು ಜನ ಪಿತೃಗಳನ್ನು ಆಹ್ವಾನಿಸಿ ರಜತ ಪಾತ್ರೆಯಲ್ಲಿ ಇವರಿಗೆ ಅನ್ನದಾನ, ಇವರ ದ್ವಾರವೇ ವಸು, ರುದ್ರ, ಆದಿತ್ಯರ ತೃಪ್ತಿ. ಈ ಮೂರು ಜನ ಪಿತೃಗಣವಲ್ಲದೇ ೧೯ನೇ ಕಕ್ಷದಲ್ಲಿ ಹೇಳಿದ ೭ ಜನ ಪಿತೃಗಳ ವಿಚಾರಿಸಿದಂತೆ ಆಹ್ವಾನಿಸಬೇಕು. ಮತ್ತೂ ಆಜಾನುಜ ದೇವತೆಗಳು ದೇವ ಭೃತ್ಯರಿಗೆ ಸಮರಾದವರು. ೨೬ನೇ ಕಕ್ಷದಲ್ಲಿ "ಪಿತರೋ ಅಸುರಾ" ಎಂದು ಹೇಳಿದಂತೆ "ಪಿತೄಣಾಂ ಶತಮೇವಾತ್ರ ಸಿದ್ಧ ಸಾಧ್ಯಗಣಾಂಸ್ತಥಾ" ಇಲ್ಲಿ ೧೦೦ ಜನ ಪಿತೃಗಳು ಇರುವರು. ಅಲ್ಲದೇ ೨೮ನೇ ಕಕ್ಷದಲ್ಲಿ ಸರ್ವಚಿರಪಿತೃಗಳು. ಇವರ ಸಂಖ್ಯಾಹೇಳಿದ್ದು ಗೊತ್ತಾಗಿಯೂ ಇಲ್ಲ. ಇಂತು ಪಿತೃಗಳದ್ವಾರಾ ಶ್ರದ್ಧೆಯಿಂದ ಜನಾರ್ದನನಿಗೆ ಅರ್ಪಿಸಲು ಶ್ರಾದ್ಧಫಲ. ಶ್ರೀಪುರಂದರದಾಸರು ಒಂದು ಪದದಲ್ಲಿ ಹೇಳಿದ್ದಾರೆ.




ಪದ ರಾಗ ಭೈರವಿ, ತಾಳ ರೂಪಕ

ಯಾವ ಕರ್ಮವೋ ಇದು ಏನು ಕರ್ಮವೋ ||ಪಲ್ಲವಿ||

ಸತ್ತವನು ಎತ್ತಪೋದ ಸತ್ತವನು ತನ್ನ ಜನ್ಮಕ್ಕೋದ |
ಸತ್ತವನು ಉಣುವನೆಂದು ನಿತ್ಯ ಪಿಂಡವಿಕ್ಕುತಾರೆ ||೧||
ಎಳ್ಳು ದರ್ಭೆ ಕೈಲಿ ಪಿಡಿದು ಪಿತೃತೃಪ್ತಿ ಎಂದು ಬಿಡಲು |
ಎಳ್ಳು ಮೀನು ನುಂಗಿ ಹೋದರೆ ದರ್ಭೆ ನೀರೊಳು ಹರಿದು ಹೋಯಿತು||೨||

ಎಡಗೈಯೆಂದು ಬಲಗೈಯೆಂದು ಎಡಬಲಗೈಯ್ಯ ತೋರಿಸಿ ||
ಸಡಗರೆಂಬ ವರವ ಕಠಿಣ ವರಹವನ್ನು ಕಳೆಯುತಾರೆ ||೩||

ಮಂತ್ರಾಕ್ಷತೆ ಕೈಲಿಕೊಟ್ಟು ಸ್ವರ್ಗ ಹೊಂದುವರೆಂದು |
ಮಂತ್ರವೆಲ್ಲ್ಯೋ ಅಕ್ಷತೆಯಲ್ಲ್ಯೋ ಅವರೆಲ್ಲ್ಯೋ ಇವರೆಲ್ಲ್ಯೋ ||೪||

ಹೇಳುವನು ಅಜ್ಞಾನಿ ಕೇಳುವವನು ಅವಿವೇಕಿ |
ಹೇಳುವ ಕೇಳುವರಿಬ್ಬರ ಸೊಲ್ಲ ಪುರಂದರವಿಠಲ ತಾನೇ ಬಲ್ಲ ||೫||

ತಿಳಿಯದೇ ಅನುಸಂಧಾನರಹಿತ ಶ್ರಾದ್ಧಮಾಡಿದರೇ ಏನೂ ಫಲವಿಲ್ಲವೆಂದು ದಾಸರನ್ನು ನಂಬಿರಿ. ಜ್ಞಾನಪೂರ್ವಕ ಮಾಡಿದ್ದರೆ ಫಲ.

## ಪಿತೃಯಜ್ಞದ ವಿಶೇಷ ವಿಧಾನ ವಿಚಾರ

"ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತಪಃ ತಿಲಾಃ ||
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಾ ||
ಭೋಕ್ತಾರಃ ಪರಿವೇಷ್ಟಾರಃ ಶ್ರಾವಿತಾರಃ ಪವಿತ್ರಕಾಃ ||೧||

ದಿವಸಸ್ಯಾಷ್ಟಮೇ ಭಾಗೇ ಮಂದೀಭವತಿ ಭಾಸ್ಕರೇ |
ಸ ಕಾಲಃ ಕುತಪೋ ನಾಮ ಪಿತೄಣಾಂ ದತ್ತಮಕ್ಷಯಮ್ ||೨||
ತಿಲಾಃ ಪಿಶಾಚಾತ್ ರಕ್ಷಂತಿ ದರ್ಭಾ ರಕ್ಷಂತಿ ರಾಕ್ಷಸಾತ್ ||
ರಕ್ಷಂತಿ ಶ್ರೋತ್ರಿಯಾಃ ಪಙ್ತಿಂ ಯತಿಭಿಃ ಭುಕ್ತಮಕ್ಷಯಮ್ ||೩||

ಎಂದು ಆದಿಪರ್ವ ಭಾರತ ವಚನ.

ಶ್ರಾದ್ಧದಲ್ಲಿ ಮುಖ್ಯ (೧) ಕುತಪ = ಅಪರಾಹ್ಣ ಕಾಲ ಮಧ್ಯಾಹ್ನ ಕಾಲ ನಡುವಾದದ್ದು ಕುತಪಕಾಲ, ದೌಹಿತ್ರ = ಮೊಮ್ಮಗ (ಹೆಣ್ಣು ಮಗಳ ಮಗ) ತಿಲ = ಎಳ್ಳು. ಈ ಮೂರು ಮುಖ್ಯ, ಮತ್ತು ಶೌಚ = ಪರಿಶುದ್ಧತೆ, ಅಕ್ರೋಧ = ಕೋಪರಹಿತರಾಗದೇ ಶಾಂತರಾಗಿರುವಿಕೆ, ಅತ್ವರಾ = ಅವಸರಮಾಡದೇ ಸಾವಕಾಶವಾಗಿ ಶ್ರಾದ್ಧಮಾಡಬೇಕು. ದಿವಸದ ಅಷ್ಟಮ ಭಾಗದಲ್ಲಿ ಎಂದರೆ ಯಾವಾಗ ಸೂರ್ಯನು ಪಶ್ಚಿಮ ದಿಶೆಗೆ ಇಳಿಯುತ್ತಾ ಹೋಗುತ್ತಾನೋ ಅದು ಕುತಪ ಕಾಲವೆಂದು ಕರೆಯಲ್ಪಟ್ಟಿದೆ. ಈ ಕುತಪ ಕಾಲದಲ್ಲಿ ಪಿತೃಗಳಿಗೆ ಅನ್ನಕೊಟ್ಟದ್ದು ಅಕ್ಷಯವಾಗುತ್ತದೆ. ತಿಲ = ಕರೇ ಎಳ್ಳು ಪಿತೃಪಿಶಾಚಗಳ ಬಾಧೆಯಿಂದ ರಕ್ಷಿಸುತ್ತದೆ. ದರ್ಭೆಯು ರಾಕ್ಷಸರ

ಬಾಧೆಯಿಂದ ರಕ್ಷಿಸುತ್ತದೆ, ಶ್ರೋತ್ರಿಯರಾದ ಬ್ರಾಹ್ಮಣವರ್ಗವು ಪಙ್ತಿಯನ್ನು ರಕ್ಷಿಸುತ್ತದೆ. ಶ್ರಾದ್ಧದಲ್ಲಿ ಯತಿಗಳ ಭೋಜನ ಮಾಡಿಸಿದರೆ ಅಕ್ಷಯಫಲ ಬರುತ್ತದೆ. ಈ ವಿಧಾನವನ್ನೂ ತಿಳಿದರೆ ಪೂರ್ಣಫಲ ಬರುತ್ತದೆ. ಭೋಕ್ತಾರಃ = ಉಣಿಸತಕ್ಕ ಯಜಮಾನನೂ, ಭೋಜನಮಾಡುವ ಬ್ರಾಹ್ಮಣರೂ, ಅಡಿಗೆ ಮಾಡಿ ಊಟಕ್ಕೆ ಬಡಿಸುವವರೂ ಈ ಮೂರು ಜನರೂ, ಮತ್ತು ಮಂತ್ರವನ್ನು ಹೇಳುವವರೂ, ಕೇಳಿಸುವವರೂ ಶುಚಿಯಾಗಿ ಕ್ರೋಧರಹಿತರಾಗಿ, ಸ್ಥಿರಮನಸ್ಕರಾಗಿರಬೇಕು. ಊಟದ ಪದಾರ್ಥಗಳು ಶುಚಿಯಾಗಿರಬೇಕೆಂಬುದು ಇದೇ ಶ್ರೀವಿಜಯದಾಸರ ಸುಳಾದಿಯ ಅರ್ಥ.

೧ ಶ್ರಾದ್ಧಕರ್ಮ ಕರ್ತೃವು, ದಕ್ಷಿಣಕ್ಕೆ ಮುಖವಾಗಿ ಕುಳ್ಳಿರಬೇಕು.

೨ ದೇವಸ್ಥಾನದ ವಿಶ್ವೇದೇವತೆಗಳಾದ ಬ್ರಾಹ್ಮಣರು ಯಜಮಾನನ ಸವ್ಯ ಬಲಕ್ಕೆ ಪೂರ್ವಾಭಿಮುಖವಾಗಿ ಕುಳ್ಳಿರಬೇಕು.

೩ ಪಿತೃದೇವತೆಗಳು ವಸು, ರುದ್ರ, ಆದಿತ್ಯರು ಮೂರು ಜನ ಬ್ರಾಹ್ಮಣಾಂತರ್ಯಾಮಿಯಾಗಿ ದಕ್ಷಿಣದಿಸೆಯಲ್ಲಿ ಪಿತೃಲೋಕವಾಸವಿರುವದರಿಂದ, ಕರ್ತೃ ಶ್ರಾದ್ಧಕರ್ಮ ಮಾಡುವನು ದಕ್ಷಿಣಾಭಿಮುಖನಾಗಿ ಪಿತೃಗಳಿಗೆ ಸಮ್ಮುಖನಾಗಿ ಕುಳ್ಳಿರಬೇಕು.

೪ ವಿಶ್ವೇದೇವತೆಗಳೆಲ್ಲರೂ, ದೇಹದ ಮತ್ತು ಉತ್ತರದಿಶೆಯಲ್ಲಿ ಸವ್ಯದಲ್ಲಿ ಇರುವ ಕಾರಣ ಸವ್ಯ ಬಲಭಾಗ ತೋರುವದು. ದಕ್ಷಿಣ ಲೋಕಗಳಲ್ಲಿ ಉತ್ತರಾಭಿಮುಖವಾಗಿದ್ದ ಪಿತೃಗಳಿಗೆ ಎಡಭಾಗ ಸವ್ಯಬಲದ ವಿರುದ್ಧ ಅಪಸವ್ಯ ಪಿತೃಗಳ ಉದ್ದಿಶ್ಯ ಸೂಚನೆ ಇದೆ. ಈ ವಿಧಾನದಿಂದ ಪಿತೃತಾರತಮ್ಯ ತಿಳಿದು ಪಿತನಲ್ಲಿ ವಸು ಪ್ರದ್ಯುಮ್ನ, ಪಿತಾಮಹನಲ್ಲಿ ರುದ್ರಸಂಕರ್ಷಣ, ಪ್ರಪಿತಾಮಹನಲ್ಲಿ ಆದಿತ್ಯ ವಾಸುದೇವ, ಇನ್ನು ಭೋಜ್ಯಭೋಕ್ತೃ ಕರ್ತೃ ಕರ್ಮ ಕ್ರಿಯೆಯಲ್ಲಿ ೯೬ ರೂಪಗಳನ್ನು ಚಿಂತಿಸಬೇಕೆಂದು ದಾಸರು ವಿಸ್ತಾರವಾಗಿ ಹೇಳಿದ್ದಾರೆ. ಲೋಕದಲ್ಲಿ ಸಾವಿರಾರು ಮೈಲುಗಳ ಮೇಲಿದ್ದ ಊರುಗಳಿಗೆ ಟಪಾಲ ದ್ವಾರಾ ಮನಿಆರ್ಡರ ಪತ್ರಾದಿಗಳು ಮುಟ್ಟಿಸಲಿಕ್ಕೆ ಹೇಗೆ ವ್ಯವಸ್ಥೆ ಇದೆಯೋ, ಹಾಗೆಯೇ ಆ ಮಹಾರಾಜಾಧಿರಾಜನೂ ಸಕಲ ಏರ್ಪಾಟು ಮಾಡಿರುವನು. ಇದೇ ಬ್ರಹ್ಮದೇವರ ದ್ವಾರಾ ದಂಡನೀತಿ (ಕಾಯದೆ) ಯಂತೆ ಸರ್ವರೂ ಹರಿಯ ಅಧೀನರಾಗಿ ತಮ್ಮ ತಮ್ಮ ಕಾರ್ಯ ಪ್ರವರ್ತಿಸುವರು. ಇದರಂತೆ

ಶ್ರಾದ್ಧದೀಪಿಕಾ ಎಂಬುವ ಗ್ರಂಥದಲ್ಲಿ ಹೇಳಿದ ಶ್ರಾದ್ಧವಿಧಾನಗಳು ಒಂದೊಂದು ವಿಧಾನದಿಂದ ಆಯಾ ಲೋಕದಲ್ಲಿದ್ದ ಮಾತಾಪಿತೃಗಳನ್ನು (ಚಿರಪಿತ್ರಾದಿಗಳು ಸ್ವೀಕರಿಸಿ) ತೃಪ್ತಿಪಡಿಸುತ್ತಾರೆ.

"ಅಗ್ನೌಕರಣೇ ಚ ದೇವಸ್ಥಾಃ ಸ್ವರ್ಗಸ್ಥಾಃ ದ್ವಿಜಭೋಜನೇ |
ಗರ್ಭಸ್ಥಾಃ ಪಿಂಡದಾನೇನ ವಿಕಿರೇ ನಿರಯಂ ಗತಾಃ ||
ಶ್ರೀಮಂತೋ ದಕ್ಷಿಣಾದಾನೇ (ದಕ್ಷಿಣೋ ಮುನಿಯೋನಿಃ
ಸ್ಯಾತ್) ಅಸುರಾಃ ಭೂರಿಭೋಜನೇ ||
ಏವಂವಿಧಿ ಯಥಾಶ್ರಾದ್ಧಂ ಷಡ್ವಿಧಾ ಸದ್ಗತಿಸ್ತಥಾ ||

ಮತ್ತು ಶ್ರೀಕೃಷ್ಣಾಚಾರ್ಯರ **ಸ್ಮೃತಿಮುಕ್ತಾವಳಿಯಲ್ಲಿಯೂ,**

"ಅಗ್ನೌಕರಣೇನ ದೇವಸ್ಥಾಃ ಸ್ವರ್ಗಸ್ಥಾ ವಿಪ್ರಭೋಜನೇ ||
ಯಮೇ ತು ಪಿಂಡದಾನೇನ ನರಕೇ ವಿಕಿರೈಸ್ತಥಾ |
ದಕ್ಷಿಣಾಭಿರ್ಮನುಷ್ಯಾಣಾಂ ಅಸುರಾ ಭೂರಿಭೋಜನಾತ್ ||
ಏವಂವಿಧಾ ಮನುಷ್ಯಾಣಾಂ ತೃಪ್ತಯಃ ಪರಿಕೀರ್ತಿತಾಃ ||
ಪಶುಸ್ಥಾಃ ಪ್ರಿಯವಾಕ್ಯೇನ ಪಕ್ಷೀ ಪಾದಾಭಿವಂದನಾತ್ ||
ಶ್ರೀಮಂತೋ ದಕ್ಷಿಣಾದಾನೇ ಶ್ರಾದ್ಧಃ ಸಪ್ತವಿಧಿಃ ಸ್ಮೃತಃ ||

೧ ಅಗ್ನೌಕರಣಂ ಎಂಬ ಸ್ವಧಾಕಾರ ಹೋಮದಿಂದ "ಸೋಮಾಯ-ಪಿತೃ" ಎಂಬ ಮಂತ್ರಸ್ವಧಾಕಾರದಿಂದ ದೇವಲೋಕದಲ್ಲಿದ್ದ ಪಿತೃಗಳ ತೃಪ್ತಿ.

೨ ದ್ವಿಜರ ಭೋಜನದಿಂದ ಸ್ವರ್ಗಲೋಕದಲ್ಲಿರುವ ಪಿತೃಗಳ ತೃಪ್ತಿ.

೩ ಪಿಂಡದಾನದಿಂದ ಯಮಲೋಕ ಮತ್ತು ಗರ್ಭದಲ್ಲಿದ್ದ ಪಿತೃಗಳ ತೃಪ್ತಿ.

೪ ವಿಕಿರವನ್ನು ಕೊಡುವದರಿಂದ ನರಕದಲ್ಲಿದ್ದ ಪಿತೃಮುಕ್ತಿ.

೫ ದಕ್ಷಿಣವನ್ನು ಕೊಡುವದರಿಂದ ಶ್ರೀಮಂತ ಮತ್ತು ಮಾನುಷಯೋನಿಯಲ್ಲಿದ್ದ ಪಿತೃತೃಪ್ತಿ.

೬ ಭೂರಿಭೋಜನದಿಂದ ಅಸುರಯೋನಿಯಲ್ಲಿದ್ದ ಪಿತೃಮುಕ್ತಿ.

೭ ಪ್ರಿಯವಚನದಿಂದ ಪಶುಯೋನಿಯಲ್ಲಿದ್ದ ಪಿತೃತೃಪ್ತಿ.

೮ ಪಾದಾಭಿವಂದನಾತ್=ಬ್ರಾಹ್ಮಣರ ಪಾದಗಳಿಗೆ ನಮಸ್ಕರಿಸುವದರಿಂದ ಪಕ್ಷಿಯೋನಿಯಲ್ಲಿದ್ದ ಪಿತೃಗಳ ತೃಪ್ತಿ. ಹೀಗೆ ಸಪ್ತಶ್ರಾದ್ಧವಿವರವೆಂದು ಹೇಳಿದ್ದಾರೆ. ೮ ಆಗುತ್ತವೆ ವಿಚಾರಾಂಶವಾಗಿದೆ.

ಪಿತೃಶ್ರಾದ್ಧ ಮಂತ್ರದಲ್ಲಿಯೂ, "ವಿಷ್ಣೋಶ್ಚ ಧಾತೃಶಿವಶಕ್ರಗುಹೇಂದ್ರ ಸೂರ್ಯವಹ್ನಿತ್ರಯಪ್ರಮುಖಕ್ರೌಂಚಘಟೋದ್ಭವಾನಾಮ್ ‖ ಯತ್ ಕಾಶ್ಯಪಸ್ಯ ಹೃದಯಸ್ಥಗದಾಧರಸ್ಯ **ಪಾದಾನ್ನಮಾಮಿ ಸತತಂ** ಪಿತೃಮುಕ್ತಿ ಹೇತೂನ್ ‖ ಎಂದು ಹೇಳಿದ್ದಾರೆ.

ಇದೇ ಭಾವವೇ. ಮರುತ, ಆದಿತ್ಯ, ಸಾಧ್ಯ, ವಸು, ರುದ್ರ, ಅಶ್ವಿನಿ, ಋಷಿ. ಈ ಏಳು ಗಣದವರು. ಒಂದು ವಿಧಾನ ಶ್ರಾದ್ಧ ೭ ವಿಧದಲ್ಲಿದ್ದು, ೭ ಲೋಕದಲ್ಲಿದ್ದ ಪಿತೃಗಳನ್ನು ಉದ್ಧರಿಸುತ್ತಾರೆಂಬುದು ಸೂಚಿತವಾಗುತ್ತದೆ. ಇದೇ ತತ್ವವನ್ನೇ ಸೂಕ್ಷ್ಮವಾಗಿ ತಿಳಿಸಲು, ಶ್ರೀದಾಸಾರ್ಯರು ೮ನೇ ಪದ್ಯದಲ್ಲಿ ೧ ಜಯಾಕಾಂತ ಸಂಕರ್ಷಣ, ೨ ಕಪಿಲ, ೩ ಮಹಿದಾಸ, ೪ ದತ್ತಾತ್ರೇಯ, ೫ ಹಯವದನ, ೬ ಹರಿ, ೭ ಹಂಸ, ಈ ಏಳು ಜ್ಞಾನಪ್ರದಾಯಕ ರೂಪಗಳನ್ನು ಚಿಂತಿಸಿ ಅನುಸಂಧಾನಪೂರ್ವಕ ಮಾಡಬೇಕೆಂದು ಸೂಚಿಸಿದ್ದಾರೆ. ಜ್ಞಾನಿಗಳೇ ತಿಳಿದಾಚರಿಸಲು ಸಮರ್ಥರು; ನಮ್ಮಂಥ ಅಜ್ಞರಿಂದ ಸುಲಭವಲ್ಲ. ಇದೇ ಜ್ಞಾನಯಜ್ಞವೆಂಬುದು. ಹರಿಸ್ತೋತ್ರರೂಪವಾಗಿ ೧೬ ಪದ್ಯದಿಂದ ೨೨ ಪದ್ಯದವರೆಗೆ ಭಗವಂತನ ಮಹಿಮೆ ಕೊಂಡಾಡಿದ್ದಾರೆ.

ಜೀವರುಗಳಿಗೆ ಜೀವನೋಪಾಯವಾದ ಸ್ವಾಹಾ ಸ್ವಧಾದಿ **ಸಪ್ತಾನ್ನ ವಿವರಣವು** ಬೃಹದಾರಣ್ಯಕ ಉ.ಭಾಷ್ಯ ಸಪ್ತಾನ್ನ ಪ್ರಕರಣ ವಿಚಾರವನ್ನು ಪದ್ಯಗಳಡಿ ವಿಸ್ತರಿಸಿದೆ. ಇಂತಹ ಅತ್ಯುತ್ತಮವಾದ ಜ್ಞಾನದಿಂದ, ಭಗವದರ್ಪಿತ ಬುದ್ಧಿಯಿಂದ ಪಿತ್ರಂತರ್ಗತ ಹರಿಯು ಪ್ರೀತನಾಗಲೆಂದು ಪಿತೃಪೂಜೆ ಮಾಡಲು ಪಿತೃಋಣದಿಂದ ಮೋಚನವಾಗುವುದಲ್ಲದೆ ಪಿತೃಗಳಿಗೆ ಸಹ ಮುಕ್ತಿಯಾಗುತ್ತದೆ. ಇದೇ ಕಾರಣ ಜೀವಜೀವರಿಗೆ ನಿತ್ಯಭೇದ ಸಿದ್ಧ. ಸತ್ಯವೆಂಬ ಜ್ಞಾನ ಪುಟ್ಟುತ್ತದೆ. ಅದು ಹೇಗೆಂದರೆ, ಪದ್ಯ ೨೧ರಲ್ಲಿ,

ಜೀವರಂತರ್ಯಾಮಿ ಅಂಶ ಕ | ಳೇವರಗಳೊಳಗಿಂದ್ರಿಯಗಳಲಿ | ತಾ ವಿಹಾರವಗೈವುತನುದಿನ ಅಂಶನಾಮದಲಿ ‖ ಈ ವಿಷಯಗಳನುಂಡು ಸುಖ

ಮಯು। ಈವ ಸುಖಸಂಸಾರ ದುಃಖವ। ದೇವಮಾನವದಾನವರಿಗವಿರತ ಸುದಾಮಸಖ ॥೨೧॥

ಇಂತು ತ್ರಿವಿಧರಿಗೆ ತ್ರಿವಿಧಗತಿ ಇಪ್ಪನು. ಇದನ್ನರಿಯದೇ ದೇಶ ದೇಶ ಸುತ್ತಿ, ತೀರ್ಥಕ್ಷೇತ್ರಾದಿಗಳಲ್ಲಿ ಮಿಂದೆನೆಂಬ ಹೌಸಿನಿಂದ ಕಾಮ್ಯಕರ್ಮದುರಾಶಿ ಗೊಳಗಾಗಬೇಡವೆಂದು ಉಪದೇಶಿಸಿದ್ದಾರೆ.

## ಪಿತೃಯಜ್ಞ-ಶ್ರಾದ್ಧಮಾಹಾತ್ಮ್ಯೆ

ಈ ಪ್ರಕಾರವಾಗಿ ಪಿತೃಗಣವಿಚಾರ-ಪಿತೃಭಕ್ತಿಯಿಂದ ಶ್ರಾದ್ಧಮಾಡಿದ್ದಕ್ಕೆ ಶ್ರೀ ಭೀಷ್ಮಾಚಾರ್ಯರ ಪಿತೃಶಂತನು ಚಕ್ರವರ್ತಿ, ಸಾಕ್ಷಾತ್ ಕೈಚಾಚಿ ಪಿಂಡ ಸ್ವೀಕರಿಸಿದ ಶ್ರಾದ್ಧ ಮಾಹಾತ್ಮ್ಯ ಫಲವು ಹೇಳಿದ್ದಾಯಿತು.

ಇನ್ನು ಈ ಪಿತೃಯಜ್ಞ, ಭಕ್ತಿಯಿಂದ ಮಾಡಿದುದರ ಫಲ, ಪಿತೃಕಲ್ಪ, ಶ್ರಾದ್ಧ (ಪಿತೃಸಮಾರಾಧನೆ) ಮಾಹಾತ್ಮ್ಯೆ ಅತ್ಯಾವಶ್ಯವಾಗಿ ಇಲ್ಲಿ ವಿಚಾರ ಮಾಡುವದಾಗಿದೆ. ಅನೇಕ ಜನರು-ಪಿತೃಭಕ್ತಿಯಿಂದ ಶ್ರಾದ್ಧಮಾಡಿದರೂ ಅದರ ಮಾಹಾತ್ಮ್ಯೆಯನ್ನರಿಯರು ಎಂದು ಹರಿವಂಶದಲ್ಲಿ ಮಾರ್ಕಂಡೇಯರು ಭೀಷ್ಮ ರಿಗೆ ಪೇಳಿದ್ದು ೬।೭ ಅಧ್ಯಾಯ ವಿವರಚರಿತ್ರೆ ಸಂಕ್ಷಿಪ್ತವಾಗಿ ಇಲ್ಲಿ ವಿವೇಚಿಸುವ "ಸಪ್ತ ವ್ಯಾಧಾ ದಶಾರ್ಣೇಷು" ಎಂದು ಶ್ರಾದ್ಧಮಂತ್ರ ವಿಚಾರ ಕಥೆಯನ್ನೇ ಶ್ರೀ ಮಾರ್ಕಂಡೇಯರು ಭೀಷ್ಮರಿಗೆ ಹೇಳುತ್ತಾರೆ. ನನಗೆ ಸನತ್ಕುಮಾರರು ಹೇಳಿದ್ದನ್ನೇ ವಿವರಿಸುತ್ತೇನೆ. (೧) ಪೂರ್ವಯುಗದಲ್ಲಿ ಭಾರದ್ವಾಜವಂಶದಲ್ಲಿ ಕೆಲವು ಬ್ರಾಹ್ಮಣರು ಯೋಗಾಭ್ಯಾಸ ಮಾಡುವ ಕಾಲದಲ್ಲೇ, ದೈವವಶಾತ್ ದುರಾಚರಣಪರರಾದರು. ಇದರಿಂದ ಮಾನಸಸರೋವರದಲ್ಲಿ ಹುಚ್ಚರಾಗಿ ಬಿದ್ದರು, (೨) ಮರಣಾನಂತರ ಹಿಂದಿನ ಯೋಗನಿಷ್ಠ ಪುಣ್ಯಫಲದಿಂದ ಕೆಲವು ಕಾಲ ಸ್ವರ್ಗದಲ್ಲಿದ್ದರು. (೩) "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬುವ ನಿಯಮಪ್ರಕಾರ, ಪುನಃ **ಕುರುಕ್ಷೇತ್ರದಲ್ಲಿ ಕೌಶಿಕ (ವಿಶ್ವಾಮಿತ್ರ) ನಲ್ಲಿ** ಜನಿಸಿದರು. ಏಕೆಂದರೆ ಇವರು ಪೂರ್ವಜನ್ಮದಲ್ಲಿ ಯೋಗಭ್ರಷ್ಟರಾಗಿ ಗೋಹತ್ಯಮಾಡಿ ಮಾಳಿಗಿಯ ಮೇಲೆ ಕುಳಿತು ಶ್ರಾದ್ಧ ಮಾಡಿದರು. ಅವಿಧಿ ಯಿಂದ ಶ್ರಾದ್ಧಮಾಡಿದರೂ, ಮುಂದೆ ಅವರಿಗೆ ಅತ್ಯುತ್ತಮ ಫಲ ದೊರಕಿತು. **ಇಂತು ಈ** ಬ್ರಾಹ್ಮಣರು ಕೌಶಿಕ ಕುಲದಲ್ಲಿ ಉತ್ಪನ್ನರಾಗಿ ಕುರುಕ್ಷೇತ್ರದಲ್ಲಿ

ಕೌಶಿಕರ ಶಿಕ್ಷಣದಿಂದ ಕೆಲವು ದಿವಸ ಇದ್ದು ಹಿಂದೆ ಕ್ರೂರಕರ್ಮವಾದ ಯೋಗ ಭ್ರಷ್ಟತೆ ಗೋಹತ್ಯಾ ಪಾಪದಿಂದ, ಪಿತೃಗಳಾದ ಕೌಶಿಕರ ವಿರುದ್ಧ ಧರ್ಮಾ ಚರಿಸಲು ಕೌಶಿಕರು ಆಶ್ರಮದಿಂದ ಹೊರಗೆ ಹಾಕಿದರು. ಆಗ್ಗೆ ಆ ಏಳು ಜನರೂ ಗಾರ್ಗ್ಯ ಋಷಿಗಳಲ್ಲಿ ಬಂದು ಶರಣು ಹೊಕ್ಕು ಶಿಷ್ಯರಾದರು. ಹಿಂದಿನ ದುಷ್ಟಕರ್ಮದಂತೆ ಇವರು ೭ ಜನರ ಹೆಸರು–ವಾದ್ದುಷ್ಟ, ಕ್ರೋಧನ, ಹಿಂಸ್ರ, ಪಿಸುನ, ಕವಿ, ಖಸ್ರಮ, ಪಿತೃವೃತ್ತಿ (ಈತನೆ ೭ ನೇ ಜನ್ಮದಲ್ಲಿ ಬ್ರಹ್ಮದತ್ತನು) ಇವರು ತಮ್ಮ ಹೆಸರಿಗೆ ತಕ್ಕಂತೆ ಕರ್ಮಾಸಕ್ತರಾಗಿದ್ದರು.

ಗಾರ್ಗ್ಯ ಋಷಿಗಳಲ್ಲಿ ಒಂದೇ ಬಣ್ಣದ ಕಪಿಲಾ ಗೋವು ವತ್ಸಸಹಿತ ವಾಗಿತ್ತು. ಗುರುವಾಜ್ಞೆಯಿಂದ ಮೇಯಿಸಲು ಅಡವಿಗೆ ತೆಗೆದುಕೊಂಡು ಹೋದರು. ಅಲ್ಲಿ ಅವರ ಬುದ್ಧಿವಿಕಾರವಾಗಿ ಗೋಮಾಂಸ ಭಕ್ಷಣ ಮಾಡಲು ಗೋಹತ್ಯಾ ಮಾಡಲಿಕ್ಕೆ ಸಿದ್ಧರಾದರು. ಪಿತೃವೃತ್ತಿನಾಮವುಳ್ಳವನು ಮಾತ್ರ ಮನಸಿನಲ್ಲಿ ಹಿಂಜರಿದು ಹೇಗಾದರೂ ಗೋಹತ್ಯಾ ಮಾಡೇಮಾಡುವಿರಿ; ಆದರೆ ಪಿತೃಗಳಿಗೆ ಶ್ರಾದ್ಧಮಾಡಿ ಅರ್ಪಿಸಿ ಗೋಮಾಂಸ ತಿನ್ನಿರಿ. ಎಂದು ಹೇಳಿದನು. ಅವಿಧಿಯಿಂದ ಗೋಹತ್ಯಾಮಾಡಿ ಆ ಮಾಂಸದಿಂದ ಪಿತೃಗಳಿಗೆ ಶ್ರಾದ್ಧಮಾಡಿ ಭಕ್ಷಿಸಿದರು. ಬ್ರಹ್ಮದತ್ತನೂ ಭಕ್ಷಿಸಿದ. ಹಿಂದಿನ ಯುಗದಲ್ಲಿ ಶ್ರಾದ್ಧಕ್ಕೆ ಗೋಮಾಂಸ ಉಪಯೋಗಿಸುತ್ತಿದ್ದರು. ಈ ಕಲಿಯುಗದಿ ನಿಷಿದ್ಧವಾಗಿದೆ.

ರಾತ್ರಿ ಆಶ್ರಮಕ್ಕೆ ಆಕಳುಕರುವನ್ನು ಒಂದೇ ತಂದರು. ಗಾರ್ಗ್ಯಋಷಿ ಗಳು ಗೋವು ಎಲ್ಲೆಂದು ಕೇಳಲು, ಅಡವಿಯಲ್ಲಿ ಆಕಳನ್ನು ಹುಲಿಯು ತಿಂದಿ ತೆಂದು ಸುಳ್ಳುಹೇಳಿದರು. ಹಿಂದಿನ ಜನ್ಮ ಈ ಜನ್ಮದಲ್ಲಿ ಗೋಹತ್ಯಾ ಮಾಡಿದ ಪಾಪ, ಗುರುಗಳನ್ನು ಠಕ್ಕಿಸಿ ಸುಳ್ಳುಹೇಳಿದ್ದು ಎರಡು ಕ್ರೂರಕರ್ಮಮಾಡಿದರು. ಆಯುಷ್ಯ ಮುಗಿದ ಮೇಲೆ ದೇಹಬಿಟ್ಟು, **೩ನೇ ಜನ್ಮ ದಶಾರ್ಣವದೇಶದಲ್ಲಿ ವ್ಯಾಧ ಜನ್ಮದಲ್ಲಿ** ಏಳೂ ಜನರೂ ಪುಟ್ಟಿದರು. ಎಂಥ ಋಷಿಗಳಿಗಾದರೂ ಕ್ರೂರಕರ್ಮಭವಣೆ ಬಿಡದು, ವ್ಯಾಧ ಜನ್ಮದಲ್ಲೂ ಸ್ವಾಭಾವಿಕವಾಗಿಯೇ ಕ್ರೂರ ಕರ್ಮರಾದರು. ಆದರೆ ಹಿಂದಿನ ಜನ್ಮದಲ್ಲಿ ಪಿತೃಶ್ರಾದ್ಧಮಾಡಿದ ಕಾರಣ ಹಿಂದಿನ ಜನ್ಮದ ಸ್ಮೃತಿ ಇತ್ತು, ಮತ್ತು ವ್ಯಾಧಜನ್ಮ ಬಂದಾಗ್ಯೂ ಪ್ರಾಣರಕ್ಷಣೆಗೆಮಾತ್ರ ಹಿಂಸಾ ಮಾಡುತ್ತಿದ್ದರು. ಆತ್ಮಾನುಸಂಧಾನ-ಭಗವದನುಸಂಧಾನ ಇರುತ್ತಿತ್ತು. ಈವ್ಯಾಧಜನ್ಮದಲ್ಲಿ ಜನಿಸಿದಾಗ್ಯೂ ಅವರ ಕರ್ಮಾಚರಣೆಗೆತಕ್ಕ ಹೆಸರುಗಳಿದ್ದವು.

೧ ನಿರ್ವೈರ, ೨ ನಿರ್ವೃತ್ತ, ೩ ಶಾಂತ, ೪ ನಿರ್ಮನ್ಯು, ೫ ಕೃತಿ, ೬ ವೈಧಸ, ೭ ಮಾತೃವೃತ್ತಿ ಈ ನಾಮದಿಂದ ಪರಮಧಾರ್ಮಿಕರಾಗಿ ಮಾತಾಪಿತೃಸೇವೆ ಮಾಡುತ್ತಿದ್ದರು. ಈ ೭ಜನ ತಮ್ಮ ಮರಣಸಮಯದಲ್ಲಿ ಈ ವ್ಯಾಧಜನ್ಮದಲ್ಲಿದ್ದ ಅವರು ಕೈಯಲ್ಲಿಪ್ಪ ಮೃಗಬೇಟೆಯ ಶಸ್ತ್ರವನ್ನು ವನದಲ್ಲಿಟ್ಟು ದೇಹ ತ್ಯಾಗ ಮಾಡಿದರು. ಶ್ವಾಪದಗಳಿಗೆ ಭಯಹುಟ್ಟಿಸಿ ಹಿಂಸೆ ಮಾಡಿದುದರಿಂದ ಮುಂದೆ ೭ ಜನಕ್ಕೂ ಮೃಗಯೋನಿ ಬಂದಿತು.

**೪ನೇ ಜನ್ಮ ಕಾಲಂಜರಗಿರಿಯಲ್ಲಿ ಮೃಗಯೋನಿಯಲ್ಲಿ** ಏಳುಜನರು ಮೃಗಗಳಾಗಿ ಜನಿಸಿದರು. ಈ ಮೃಗಯೋನಿ ಬಂದಾಗ್ಯೂ ಹಿಂದಿನ ಜನ್ಮ ಮಾತಾಪಿತ್ರಾದಿ ಆರಾಧನೆ ಸೇವೆ ಪೂಜಾಮಾಡಿದ ಕಾರಣ ಹಿಂದಿನ ಜನ್ಮದ ಸ್ಮೃತಿ ಇತ್ತು. ಮತ್ತು ಆ ಏಳು ಮೃಗಗಳೂ ನಿರ್ವೈರರು ಕ್ಷಮಾಶೀಲ ರಾಗಿರುತ್ತಿದ್ದರು. (ವು) ಆ ಮೃಗಯೋನಿ ಹೆಸರು-ಉನ್ಮುಖ, ನಿತ್ಯವಿಸ್ರಸ್ತ, ಸ್ತಬ್ಧಕರ್ಣ, ವಿಲೋಚನ, ಪಂಡಿತ, ಘಸ್ಮರ, ನಾದಿ (ಇವರಿಗೆ ಹೆಸರು ಮೃಗ ಜನ್ಮದಲ್ಲಿ ಯಾರು ಇಟ್ಟರೆಂಬ ವಿಚಾರ ಅಜ್ಞರಿಗೆ ಮಾತ್ರ ಶ್ರೀಹರಿಯೇ ಎಲ್ಲ ಜೀವಿಗಳ ಗುಣ-ಕರ್ಮ-ನಾಮ-ರೂಪ-ಅನ್ನನಾಗಿರುವನೆಂಬುದು ಶ್ರೀ ವಿಜಯರ ವಾಕ್ಯ ಮರೆಯಕೂಡದು). ಎಂತ ಪೆಸರುಳ್ಳವರಾಗಿ ಇತರ ಮೃಗಾಚರಣೆ ಕ್ರೂರ ಕರ್ಮರತರಾಗದೇ ಯೋಗ್ಯ ಆಹಾರದಿಂದ ಉದರಪೂರ್ತಿ ಮಾಡುತ್ತ ಯೋಗ ನಿಷ್ಠಕರ್ಮರತರಾಗಿ, ನೀರು ಸಹ ಕುಡಿಯದೇ ಅಧ್ಯಾತ್ಮಪರರಾಗಿರುವಾಗ್ಗೆ, ಕಾಲ ಒದಗಲು, ಈ ಏಳೂ ಮೃಗಗಳು ಕಾಲಂಜರಗಿರಿಯಲ್ಲಿ ಕಾಲುಜಾರಿಬಿದ್ದು ಪ್ರಾಣತ್ಯಾಗ ಮಾಡಿದವು. ಅದ್ಯಾಪಿ ಆಗಿರಿಯಲ್ಲಿ ಜ್ಞಾನಿದೃಷ್ಟಿಗೆ ಗೋಚರ ವೆಂದು ಹರಿವಂಶದಲ್ಲಿದೆ.

ಈ ಪ್ರಕಾರ ಶುಭಕರ್ಮಮಾಡುವುದರಿಂದ ಅಧಿಕತರವಾದ ಶುಭಯೋನಿ ಬರುವ ಯೋಗ ಭಗವಂತನು ಒದಗಿಸುವನು. ಮುಂದೆ ಈ ೭ ಜನರೂ,

**೫ನೇ ಜನ್ಮದಲ್ಲಿ ಶರದ್ವೀಪನಾಮಕ ಶುಭದೇಶದಲ್ಲಿ** ಜಲಚರದಲ್ಲಿ ರುವ **ಚಕ್ರವಾಕ** ಪಕ್ಷಿಗಳಾಗಿ ಜನಿಸಿ, ಸಾಧನ ಮಾಡುತ್ತ ಪ್ರಾಣರಕ್ಷಣೆಗೆ ಮಾತ್ರ ಯೋಗ್ಯ ಆಹಾರ ಸ್ವೀಕಾರ ಮಾಡುತ್ತ ಧರ್ಮಿಷ್ಠರಾಗಿ, ಮೈಥುನ ಮಾರ್ಗಬಿಟ್ಟು, ಋಷಿಗಳಂತೆ ಬ್ರಹ್ಮಚರ್ಯವ್ರತಾದಿ ಆಚರಣದಲ್ಲಿದ್ದರು. ಆ ಜನ್ಮದ ಕರ್ಮಾಚರಣೆಯಂತೆ ಇವರ ನಾಮಗಳಾದರೂ, ೧ ನಿಸ್ಪೃಹ,

೨ ನಿರ್ಮಮ, ೩ ಕ್ಷಾಂತ, ೪ ನಿರ್ದ್ವಂದ್ವ, ೫ ನಿಷ್ಪರಿಗ್ರಹ, ೬ ನಿರ್ವೃತ, ೭ ನಿಭೃತ ಎಂತ ಶುಭ ಲಕ್ಷಣವುಳ್ಳವರು. ಪಕ್ಷಿಗಳಾದರೂ ಧರ್ಮವೃತ್ತಿಯಲ್ಲಿದ್ದು ಆಹಾರ ವರ್ಜಮಾಡಿ ತಪಸ್ಸು ಮಾಡುತ್ತ ನದೀ ತೀರದಲ್ಲಿ ದೇಹತ್ಯಾಗ ಮಾಡಿದರು. ಇವರಿಗೂ ಹಿಂದಿನ ಜನ್ಮದ ಸ್ಮೃತಿ ಇತ್ತು ಮುಂದೆ,

**೬ನೇ ಜನ್ಮದಲ್ಲಿ ಮಾನಸ ಸರೋವರದಲ್ಲಿ** ಈ ಏಳು ಜನರೂ, ಹಂಸಪಕ್ಷಿಗಳಾಗಿ ಪುಟ್ಟಿದರೂ, ಪೂರ್ವಜನ್ಮಗಳ ಸಂಸ್ಕಾರವಿದ್ದೇ ಇತ್ತು. ಧರ್ಮನಿಷ್ಠ, ಬ್ರಹ್ಮಚಾರಿಗಳಾಗಿದ್ದರೂ, ಗೋಹತ್ಯಾಮಾಡಿ ಗುರುಗಳನ್ನು ಮೋಸಮಾಡಿದ್ದಕ್ಕೆ ಪರಂಪರಾ ನೀಚ ಯೋನಿ. ಪಿತೃಶ್ರಾದ್ಧ ಭಕ್ತಿಯಿಂದ ಮಾಡಿದ ಕಾರಣ, ಪರಂಪರಾ ಉತ್ತಮ ಯೋನಿಯಲ್ಲಿ ಹಂಸ ಪಕ್ಷಿಗಳಾದರು. ಹಂಸಯೋನಿಯಲ್ಲಿ ಹೆಸರು, ೧ ಸುಮನಾ, ೨ ಶುಚಿವಾಕ್, ೩ ಶುದ್ಧ, ೪ ಪಂಚಮ, ೫ **ಛಿದ್ರದರ್ಶನ, ೬ ಸುನೇತ್ರ, ೭ ಸ್ವತಂತ್ರನೆಂಬ** ನಾಮವಿದ್ದವು. ಅಂತರಂಗದಿ ಬ್ರಹ್ಮವೇತ್ತರಾಗಿ ಬ್ರಹ್ಮಚರ್ಯದಿಂದ ಇರುತ್ತಿದ್ದರು. ಸರ್ವಪಕ್ಷಿಗಳು ವನದಲ್ಲಿ ವಿಹಾರ ಮಾಡುತ್ತಿದ್ದವು.

**ಮುಂದಿನ ಏಳನೇ ಜನ್ಮಕ್ಕೆ ಬರುವ ಕೆಲವು ಕಾರಣಗಳು**

ಒಂದಾನೊಂದು ಸಮಯ ಆ ವನವಿಹಾರಕ್ಕೆ ಪುರುಕುಲೋತ್ಪನ್ನ **ವಿಭ್ರಾಜ** ನಾಮಕ ರಾಜನು ತನ್ನ ಸ್ತ್ರೀ ಸಹ ಆ ವನಕ್ಕೆ ಬಂದನು. ಶರೀರದಿಂದ ಶೋಭಿಸುವವನೂ, ಪರಾಕ್ರಮಿಯೂ, ಶ್ರೀಮಂತನೂ ಆದ ಅವನು ರಾಜವೈಭವದಿಂದ ಬಂದದ್ದು ನೋಡಿ, ಏಳು ಜನ ಸಂಚರಿಸುವ ಹಂಸ ಪಕ್ಷಿಗಳಲ್ಲಿ **ಸ್ವತಂತ್ರನೆಂಬ** ಏಳನೇ ಹಂಸಪಕ್ಷಿಗೆ ತಾನು ರಾಜನಂತೆ ಸ್ತ್ರೀಸಹಿತ ವೈಭೋಗಯುಕ್ತನಾಗಬೇಕೆಂಬ ಆಶಾ ಉತ್ಪನ್ನವಾಗಿ, ನಾನು ಈವರೆಗೆ ಪುಣ್ಯಾಚರಣೆ, ತಪಸ್ಸು, ಉಪವಾಸ ನಿಯಮದಿಂದ ಇರುವ ಪುಣ್ಯ ಫಲವಿದ್ದರೆ ರಾಜನಂತೆ ಆಗಿ ಸುಖಿಯಾಗುವೆನೆಂದು ಇಚ್ಛಾ ಮಾಡಿತು.

ಆಗ್ಗೆ ಆ ಸ್ವತಂತ್ರ ಪಕ್ಷಿಯ ಜೊತೆಯಲ್ಲಿದ್ದ, **ಛಿದ್ರದರ್ಶನ, ಸುನೇತ್ರ,** ಇವೆರಡು ಹಂಸಗಳು ನೀನು ಮುಂದೆ ರಾಜನಾಗಿ ಹುಟ್ಟಿದರೆ ನಾವು ನಿನ್ನ ಮಂತ್ರಿಗಳಾಗುವೆವೆಂದು ಮೂವರೂ ತಮ್ಮ ಸಾಂಕೇತ ವಿಷಯದಲ್ಲಿ ದೃಢ ಮನಸ್ಕರಾಗಿ ಯೋಗಪರರಾದರು. ಆಗ್ಗೆ **ಶುಚಿವಾಕ್** ಎಂಬುವ ಎರಡನೇ

ಹಂಸಪಕ್ಷಿ, **ಸ್ವತಂತ್ರ** ನಾಮಕ ಹಂಸಗೆ ಹೇಳಿದ್ದೇನೆಂದರೆ, ನೀನು ಯಾವ ಕಾರಣ ವಿಷಯಾಸಕ್ತನಾಗಿ, ಯೋಗಾಭ್ಯಾಸ ಬಿಟ್ಟು ಕಾಮವಾಸನೆಯಿಂದ ರಾಜನಾಗಲು ಇಚ್ಛಿಸುವಿಯೋ; ಆ ಕಾರಣದಿಂದ ನೀನು ಕಾಂಪಿಲ್ಲ್ಯ ನಗರದ ರಾಜನಾಗುವಿ. ಉಳಿದಿಬ್ಬರು ನಿನ್ನ ಮಂತ್ರಿಗಳಾಗುವರು ನಿಜ. ಆದರೆ ರಾಜ್ಯ ಲೋಭ, ಕಾಮಸುಖಾಪೇಕ್ಷೆಯಿಂದ ಯೋಗಭ್ರಷ್ಟರಾದ ನಿಮ್ಮ ಮೂವರಿಗೆ ನಮ್ಮ ನಾಲ್ಕು ಜನದ ಶಾಪವೇನೆಂದರೆ, ನಿಮ್ಮ ಸಹವಾಸ, ನಿಮ್ಮ ಸಂಗಡ ಭಾಷಣವನ್ನು ಬಿಟ್ಟಿರುವೆವು. ಎಂದು ಹೀಗೆ ಶಾಪ ಪ್ರದಾನ ಮಾಡಿದರು.

ನಾಲ್ಕು ಜನ ಬಂಧುಗಳು ಮೂವರಿಗೆ ಶಾಪಪ್ರದಾನ ಮಾಡಿದಕೂಡಲೇ, ಯೋಗಭ್ರಷ್ಟರಾಗಿ, ಬಹು ಅಶಾಂತರಾಗಿ, ವಿನಯದಿಂದ ತಮ್ಮ ನಾಲ್ಕು ಜನ ಬಂಧುಗಳಿಗೆ ಮೊರೆ ಇಡಲು ಪುನಃ ಅವರು ಸಂತುಷ್ಟರಾಗಿ, ನಿಮ್ಮ ಇಚ್ಛಾದಂತೆ ನೀವು ರಾಜ ಸಚಿವರಾಗಿ ಮಾನವ ಜನ್ಮದಿ ಜ್ಞಾನಿಗಳಾಗಿ ಪುಟ್ಟಿ ಒಬ್ಬ ಸಜ್ಜನನಿಂದ ಪ್ರೇರಿತರಾಗಿ ಸುಖಪ್ರಾಪ್ತಿ ಹೊಂದಲು ಯೋಗಾಚಾರರಾಗಿ ಪರಮಪದವಿಯನ್ನು ಹೊಂದುವಿರಿ. ಸ್ವತಂತ್ರನು ರಾಜನಾದಾಗ್ಯೂ ಸಕಲ ಪ್ರಾಣಿಗಳ ಭಾಷೆಯ ಜ್ಞಾನವಿರುವುದು. ಪ್ರಥಮದಲ್ಲಿ ಪಿತೃವೃತ್ತಿನಾಮನಾದ ನೀನು, ನಾವು ಗೋವಧ ಮಾಡಿದರೂ, ಪಿತೃಶ್ರಾದ್ಧ ವಿಷಯ ಪ್ರೇರಿಸಿ ಮಾಡಿಸಿರುವಿ. ನಿಮ್ಮ ಮೂವರಿಗೆ, ಪೂರ್ವಜನ್ಮದ ಜ್ಞಾನ, ವಿಷಯವಾಸನೆಯಿಂದ ಇರುವದಿಲ್ಲ. ನಮ್ಮ ನಾಲ್ವರಿಗೆ ಪೂರ್ವಸ್ಮರಣೆ ಇರುವುದು, "ಸಪ್ತವ್ಯಾಧ ಇತ್ಯಾದಿ ಮಂತ್ರ ನಿಮ್ಮ ಕಿವಿಗೆ ಬಿದ್ದರೆ ಪೂರ್ವದಂತೆ ಯೋಗ ಸಿದ್ಧಿಸಿ ಯೋಗಿಗಳಾಗುವಿರೆಂದು ವಿಶಾಪ ನೀಡಿದರು. ಅತ್ತ ಮಾನಸಸರೋವರಕ್ಕೆ ಸ್ತ್ರೀ ಸಹ ಬಂದ ವಿಭ್ರಾಜನಿಗೆ, ಈ ವನದಲ್ಲಿದ್ದ ಯೋಗಾಚರಣೆಗೈವ ೭ ಹಂಸಪಕ್ಷಿಗಳನ್ನು ನೋಡಿ ತಾನು ಯೋಗಾಭ್ಯಾಸ ಮಾಡುವದೆಂದು ಮನದಲ್ಲಿ ಇಚ್ಛಾ ಪುಟ್ಟಿತು. ರಥದಲ್ಲಿ ಸ್ತ್ರೀ ಪರಿವಾರ ಸಹಿತ ಮನೆಗೆ ಬಂದರೂ, ಯೋಗಾಭ್ಯಾಸದ ಕಡೆಗೇ ಮನವೆರಗಿತು.

ಆ ವಿಭ್ರಾಜ ರಾಜನಿಗೆ **ಅಣುಹ**ನೆಂಬ ಸತ್ಪುತ್ರನಾದ. ಆ ಅಣುಹನ ಹೆಂಡತಿಯು ಧಾರ್ಮಿಕಳು, ಯೋಗನಿಷ್ಠರಾದ ಶುಕಾಚಾರ್ಯರ ಕನ್ಯಾ ಕೃತ್ವಿ ಎಂಬ ಪತ್ನಿ ಆಗಿದ್ದಳು. ಈಕೆಯು ಪೂರ್ವದಲ್ಲಿ **ಬರ್ಹಿಷದ ಪಿತೃಗಳ ಮಗಳು.** ಜಿತೇಂದ್ರಿಯಳೂ, ಸತ್ಯಪರಾಯಣಳೂ, ನಿನ್ನ ಹೆಂಡತಿ ಆಗುವಳೆಂದು ಸನತ್ಕುಮಾರರು (ಪಿತೃಕಲ್ಪದ ಸಂಗತಿಯು) ಅಣುಹಗೆ ಹೇಳಿದ್ದರು.

ಇಂತಹ ಧಾರ್ಮಿಕ ಪತ್ನಿ, ಪತಿ ಅಣುಹನಿಗೆ ವಿರಾಗಿ ಯೋಗಚಾರನಾದ ವಿಭ್ರಾಜನು ರಾಜ್ಯಾಭಿಷೇಕಮಾಡಿ ಹಂಸಗಳಿದ್ದ ವನಕ್ಕೆ ಯೋಗತಪ ಆಚರಣೆಗೆ ನಡೆದನು. ವಿಭ್ರಾಜನು ಅನ್ನ ನೀರು ಬಿಟ್ಟು ವಾಯು ಭಕ್ಷಣದಿಂದ ತಪ ಯೋಗಾಭ್ಯಾಸಮಾಡಿದನು. ಮತ್ತು ಯಾವ ಹಂಸಗಳ ದ್ವಾರಾ, ಯೋಗ ಮಾರ್ಗ ದೊರಕಿತೋ; ಅವರ ಉದರದಲ್ಲೇ ಜನ್ಮವೆತ್ತುವ ಇಚ್ಛೆಯಾಯಿತು. ಈ ವಿಭ್ರಾಜನ ಯೋಗಾಭ್ಯಾಸದಿಂದ ಆ ಸರೋವರ ವನಕ್ಕೆ ವೈಭ್ರಾಜವೆಂದು ಹೆಸರಾಯಿತು. ಇದು ಸುಪ್ರಸಿದ್ಧ.

**ಏಳು ಜನ ಹಂಸಪಕ್ಷಿಗಳ ೭ನೇ ಜನ್ಮ** ವೃತ್ತಾಂತ ಹೇಳುತ್ತಾರೆ. ಏಳು ಜನ ಹಂಸ ಪಕ್ಷಿಗಳಲ್ಲಿ ನಾಲ್ಕು ಜನ ಅಖಂಡ ಯೋಗನಿಷ್ಠರಾಗಿರುತಿದ್ದ ಆ ನಾಲ್ಕು ಜನರು. ಮೊದಲಿಗೆ ಹೇಳಿದಂತೆ ಯೋಗಭ್ರಷ್ಟರಾದ ಮೂರು ಜನರು. ಹೀಗೆ ೭ ಹಂಸ ಪಕ್ಷಿಗಳು ತಪಸ್ಸಿನಿಂದ ನಿಷ್ಪಾಪರಾಗಿ ಕಾಂಪಿಲ್ಯ ನಾಮನಗರದಲ್ಲಿ ಜನ್ಮವೆತ್ತಿದರು. ಪೂರ್ವ ಸಂಕಲ್ಪದಂತೆ (೧) ಸ್ವತಂತ್ರನಾಮ ಹಂಸವು **ಅಣುಹರಾಜನ ಹೆಂಡತಿ ಕೃತ್ವಿಯಲ್ಲಿ** ಪುಟ್ಟಿತು. ಇದರ ಹೆಸರು **ಬ್ರಹ್ಮದತ್ತರಾಜ**. ಅವನು ಬಹು ಧುರೀಣನಾಗಿ ಈ ಜನ್ಮದಲ್ಲಿಯೂ ಜ್ಞಾನ ಧ್ಯಾನತಪ ಮೊದಲಾದವುಗಳಿಂದ ಪವಿತ್ರನಾಗಿ, ದೇಹಕಾಂತಿಯುತ ಮಹಾ ಯಶಸ್ವಿಯಾಗಿದ್ದನು. ವೇದವೇದಾಂಗ ನಿಪುಣನಾಗಿದ್ದನು. ಎಲ್ಲ ಪ್ರಾಣಿಗಳ ಭಾಷಾ ಅರಿತವನಾಗಿದ್ದನು.

ಉಳಿದ ಇಬ್ಬರು ಛಿದ್ರದರ್ಶಿ, ಸುನೇತ್ರ, ವತ್ಸ ಮತ್ತು ಬಾಭ್ರವ್ಯಕುಲ ದಲ್ಲಿ ಜನಿಸಿದರು. ಈ ಜನ್ಮದಲ್ಲಿ ಪಾಂಚಾಲ, ಕಂಡರೀಕರೆಂಬ ನಾಮವಿತ್ತು. ಹಿಂದಿನ ಜನ್ಮದಲ್ಲಿ ಮೂವರು ಒಂದಾಗಿದ್ದ ಕಾರಣ ಈ ಜನ್ಮದಲ್ಲಿಯೂ, ಇವರಿಬ್ಬರು ಬ್ರಹ್ಮದತ್ತರಾಜನಲ್ಲಿ ಬಂದು ಸೇರಿದರು. ಇದರಲ್ಲಿ ಪಾಂಚಾಲನು ಋಗ್ವೇದದಲ್ಲಿ ಪ್ರವೀಣನಾಗಿದ್ದನು. ಆಚಾರ್ಯತ್ವ ಸ್ವೀಕರಿಸಿದನು. ಕಂಡರೀ ಕನು ಸಾಮವೇದ ಯಜುರ್ವೇದದಲ್ಲಿ ನಿಷ್ಣಾತ ಇದ್ದಕಾರಣ ಛಂದೋಗ್ಯತ್ವ ಅಧ್ವರ್ಯತ್ವವನ್ನು ಸ್ವೀ ಕ ರಿ ಸಿ ದ ನು. ಪಾಂಚಾಲಕರಿಬ್ಬರಿಗೆ ಬ್ರಹ್ಮದತ್ತನಿಗೂ ಬಹು ಮಿತ್ರತ್ವ ಕೂಡಿತು. ಪೂರ್ವಜನ್ಮ ವಾಸನಾದಂತೆ ಮೂವರು ಕಾಮುಲೋಲುಪರಾಗಿ ಮೈಥುನಾದಿ ಕೃತ್ಯಗಳಲ್ಲಿ ತೊಡಗಿದರು. ಆದರೂ, ಪೂರ್ವಸಂಸ್ಕಾರ ಇದ್ದಕಾರಣ ಧರ್ಮ ಅರ್ಥ ಕಾಮಾದಿ ಶಾಸ್ತ್ರಗಳ

ಪೂರ್ಣ ಮಾಹಿತಿ ಇತ್ತು. ಪೂರ್ವಸಂಸ್ಕಾರ ಕಾಮವಾಸನೆಯಿಂದ ಈಜನ್ಮದಿ ಇರಲಿಲ್ಲ.

ಅಣುಹರಾಜನು ತನ್ನ ಮಗನಾದ ಬ್ರಹ್ಮದತ್ತನಿಗೆ ರಾಜ್ಯ ಒಪ್ಪಿಸಿ ವನಕ್ಕೆ ಹೋದ. ಉಳಿದ ನಾಲ್ಕು ಹಂಸಪಕ್ಷಿಗಳು ಅದೇ ಕಾಂಪಿಲ್ಲ್ಯನಗರದಲ್ಲೇ ವೇದವೇತ್ತನಾದ ದರಿದ್ರ ಬ್ರಾಹ್ಮಣದಲ್ಲಿ ಜನ್ಮವೆತ್ತಿದ್ದವು. ಅವರ ಹೆಸರು, ಧೃತಿಮಾನ್, ಸುಮನಾ, ವಿದ್ವಾನ್, ಸತ್ಯದರ್ಶಿ ಎಂತ ಇತ್ತು. ನಾಲ್ವರೂ ವೇದಾಧ್ಯಯನರತರು. ಯೋಗಿಗಳು ಮುಕ್ತಿಮಾರ್ಗಗಾಮಿಗಳಾಗಿ, ಅದೇ ಲಕ್ಷ್ಯ ಪೂರ್ವಜನ್ಮಸಂಸ್ಕಾರ ಉಳಿದಿತ್ತು. ವೃಧ್ಧ ತಂದೆಯನ್ನು ಬಿಟ್ಟು ವನಕ್ಕೆ ಹೊರಟರು. ತಂದೆಯು ಮುಂದೆ ನನ್ನ ಪಿಂಡದಾನಕ್ಕೆ ಗತಿ ಏನು? ನನ್ನ ಉಪಜೀವನ ಹೇಗೆನ್ನಲು, ನಾಲ್ಕೂ ಜನರು ಅಪ್ಪಾ ನಿನ್ನ ಉದರದಲ್ಲಿ ನಾವು ಬ್ರಹ್ಮವೇತ್ತರಾಗಿ ಜನಿಸಿದುದರಿಂದ ಗಯಾಪಿಂಡದಾನಕಾರಣವಿಲ್ಲಯ್ಯಾ. ನಮ್ಮ ಉಭಯರಿಗೂ ಮುಕ್ತಿದನಾದ ಶ್ರೀಹರಿಯು ನಿನ್ನನ್ನು ಉದ್ಧಾರ ಮಾಡುತ್ತಾನೆ.

ಇನ್ನು ನಿನ್ನ ಉಪಜೀವನ ಸಲುವಾಗಿ ನೀನು ಬ್ರಹ್ಮದತ್ತನಾದ ಈ ಊರ ರಾಜನಲ್ಲಿ ಹೋಗಿ **"ಸಪ್ತ ವ್ಯಾಧಾ ದಶಾರ್ಣೇಷು"** ಈ ಮಂತ್ರ ಹೇಳಿರಿ ಸಂತೋಷ ಆಗಿ ಗ್ರಾಮ ಭೂಮಿ ಇನಾಮು ಕೊಡುವನು. ಎಂದು ಹೇಳಿ ನಾಲ್ಕೂ ಜನರು ವನಕ್ಕೆ ಪೋಗಿ ಯೋಗಾಭ್ಯಾಸದಿಂದ ಉತ್ತಮವಾದ ಪದವಿ ಹೊಂದಿದರು.

ಇತ್ತ ಬ್ರಹ್ಮದತ್ತನಿಗೆ ವಿವಾಹಿತಳಾದ ದೇವಲಋಷಿ ಮಗಳು ಸನ್ನತಿ ಯಲ್ಲಿ ಹಿಂದೆ ತಪಸ್ಸು ಮಾಡಿದ ವಿಭ್ರಾಜರಾಜನು, ವಿಷ್ವಕ್‌ಸೇನನೆಂದು ಪುತ್ರ ನಾಗಿ ಜನಿಸಿದ. (ಸ್ವತಂತ್ರ ಹಂಸನ ಮಗ)

ಒಂದು ದಿನ ಬ್ರಹ್ಮದತ್ತನು ಸನ್ನತಿಯಾದ ಪತ್ನಿಯೊಡನೆ ವನವಿಹಾರ ಮಾಡುವ ಕಾಲ ಒಂದು ಗಂಡು ಇರುವೆ ಹೆಣ್ಣು ಇರುವೆಯನ್ನು ಕುರಿತು ಕಾಮವಶವಾಗಿ ನನ್ನ ಇಚ್ಛೆ ಪೂರೈಸೆಂದು ಬೇಡಿಕೊಳ್ಳುತ್ತಿತ್ತು. ಆ ಹೆಣ್ಣು ಇರುವೆ ಸಂತಾಪಗೊಂಡು ಸಿಟ್ಟುಮಾಡಹತ್ತಿದ್ದನ್ನು ಕಂಡು ಬ್ರಹ್ಮದತ್ತ (ಇರುವೆ ಭಾಷಾಬಲ್ಲ ಕಾರಣ) ಖವಖವ ನಗಹತ್ತಿದನು. ಪತ್ನಿ ಸನ್ನಿತಿ ನಕ್ಕಕಾರಣವೇನೆಂದು ಕೇಳಲು ಹೇಳಲಿಲ್ಲ. ಅನ್ನ ನೀರು ಬಿಟ್ಟು ನೀವು

ಖರೇ ಹೇಳಿರಿ. ಇಲ್ಲವೇ ಪ್ರಾಣತ್ಯಾಗ ಮಾಡುವೆನೆಂದು ಹೇಳಿದಳು. ಆಗ್ಗೆ ಬ್ರಹ್ಮದತ್ತನು ವಿಚಾರಮಾಡುತ್ತ ಸಂಕಟ ನಿವಾರಣಕ್ಕೆ ಶ್ರೀ ಪರಮಾತ್ಮನನ್ನು ಮೊರೆ ಹೊಕ್ಕನು. ಅನನ್ಯ ಚಿತ್ತದಿಂದ ಮೊರೆಹೊಕ್ಕ ಬ್ರಹ್ಮದತ್ತನಿಗೆ ಶ್ರೀ ನಾರಾಯಣ ಪ್ರತ್ಯಕ್ಷದರ್ಶನ ಕೊಟ್ಟು "ಎಲೈ, ನೀನು ನಾಳೆ ಉದಯಕ್ಕೆ ಸುಖಿಯಾಗುವೆ" ಎಂದು ಹೇಳಿ ಅಂತರ್ಧಾನನಾದನು. ಹೀಗೆ ನಾರಾಯಣ ನಿಂದ ವರಪಡೆದು ಹರ್ಷಿತನಾದ ಬ್ರಹ್ಮದತ್ತನು ಸರೋವರದಲ್ಲಿ ಸ್ನಾನಮಾಡಿ ಬಹು ಆನಂದದಿಂದ ಬಂಗಾರಮಯ ರಥವೇರಿ ಕಾಂಪಿಲ್ಯ ನಗರದ ಕಡೆಗೆ ಹೊರಟನು. ಆ ವ್ಯಾಳ್ಯ, ಬ್ರಹ್ಮದತ್ತನ ಪ್ರಿಯಮಿತ್ರನು ಕರಂಡಕನು ರಥದ ಕುದುರೆಯ ಲಗಾಮು ಹಿಡಿದಿದ್ದನು. ಪಾಂಚಾಲನು ಚಾಮರ ಹಾಕುತ್ತಿದ್ದನು.

ಇದೇ ಸುಸಮಯವನ್ನು ನೋಡಿ, ವೇದವೇತ್ತನಾದ ವೃದ್ಧ ಬ್ರಾಹ್ಮಣನು ತನ್ನ ನಾಲ್ಕು ಜನರು ಮಕ್ಕಳಿಂದ ಕಲೆತು ರಥ ಸಮೀಪಕ್ಕೆ ಹೋಗಿ ನಿಂತು ಎರಡೂ ಶ್ಲೋಕಗಳನ್ನು ಮೂವರೂ ಕೇಳುವಂತೆ ಹೇಳಿದನು. ಆ ಶ್ಲೋಕಗಳನ್ನು ಇಂದಿಗೂ ಶ್ರಾದ್ಧ ಕಾಲದಲ್ಲಿ ಹೇಳುತ್ತಾರೆ. ಆ ಶ್ಲೋಕಗಳು.

"ಸಪ್ತ ವ್ಯಾಧಾ ದಶಾರ್ಣೇಷು ಮೃಗಾ ಕಾಲಂಜರೇ ಗಿರೌ ।
ಚಕ್ರವಾಕಾ ಶರದ್ವೀಪೇ ಹಂಸಾಃ ಸರಸಿ ಮಾನಸೇ ॥೧॥
ತೇಪಿ ಜಾತಾ ಕುರುಕ್ಷೇತ್ರೇ ಬ್ರಾಹ್ಮಣಾಃ ವೇದಪಾರಗಾಃ ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ತೇಭ್ಯೋವಸೀದಥ ॥೨॥

ಇದರ ಅರ್ಥವೇನೆಂದರೆ, ದಶಾರ್ಣದೇಶದಲ್ಲಿ ಏಳು ಜನ ವ್ಯಾಧರಿದ್ದರು. ಮುಂದೆ ಕಾಲಂಜರಗಿರಿಯಲ್ಲಿ ಅವರು ಮೃಗಗಳಾದರು. ನಂತರದಲ್ಲಿ ಶರದ್ವೀಪ ದಲ್ಲಿ ಚಕ್ರವಾಕ ಪಕ್ಷಿಗಳಾದರು. ಅನಂತರ ಪುನಃ ಮಾನಸ ಸರೋವರದಲ್ಲಿ ಹಂಸ ಪಕ್ಷಿಗಳಾದರು. ಆ ಏಳು ಜನರ ಪೈಕಿ ನಾವು ನಾಲ್ವರು ಮಾತ್ರ, ಯೋಗವರ್ತಿಗಳಾಗಿ ಕುರುಕ್ಷೇತ್ರದಲ್ಲಿ ವೇದಪರಾಯಣರಾದ ಪೂರ್ವದ ಬ್ರಾಹ್ಮಣರಾಗಿ ಮೋಕ್ಷಮಾರ್ಗವನ್ನು ಹೊಂದಿದೆವು. ಆದರೆ ನೀವು ಮೂವರು ಮಾತ್ರ ಯಾಕೆ ಶಿಕ್ಕುಬಿದ್ದಿರಿ? ಎಂಬ ಶ್ಲೋಕಾರ್ಥವನ್ನು ಕೇಳಲು ಬ್ರಹ್ಮದತ್ತನು ಮೂರ್ಛಾಗತನಾದನು. ಕರಂಡಕನ ಕೈಚಾಬುಕು ಲಗಾಮು, ಪಾಂಚಾಲನ ಕೈಚಾಮರ ವ್ಯಜನ ಕೆಳಗೆ ಬಿದ್ದು ಮೂರ್ಛಿತರಾದರು. ಜನರು ಹಾಹಾಕಾರ

ಮಾಡುವವರಾದರು. ಕೆಲಹೊತ್ತಿನ ಮೇಲೆ ಮೂರ್ಛೆಯಿಂದ ಎದ್ದು ನಗರಕ್ಕೆ ಹೊರಟರು. ಬ್ರಹ್ಮದತ್ತನಿಗೆ ಪೂರ್ವಜನ್ಮದ ಸಂಸ್ಕಾರಗಳೆಲ್ಲ ಎದುರಿಗೆ ನಿಂತವು. ಬ್ರಾಹ್ಮಣರಿಗೆ ವಿಪುಲದ್ರವ್ಯದಾನ ಮಾಡಿದನು. ವೀರನಾದ ವಿಷ್ವಕ್ ಸೇನ (ವಿಭ್ರಾಜ) ಪುತ್ರನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ತಾನು ಯೋಗಾಚಾರನಾಗಿ ಸ್ತ್ರೀಸಹ ವನಕ್ಕೆ ಹೊರಟು ತಪಶ್ಚರ್ಯೆಮಾಡಿ ದುರ್ಲಭ ವಾದ ಉತ್ತಮಗತಿಗೆ ಹೋದನು.

ಕರಂಡಕನು, ಯೋಗಾಭ್ಯಾಸರತನಾಗಿ ಸಾಂಖ್ಯಯೋಗ ಸಾಧನದಿಂದ ಪಾಪರಹಿತನಾಗಿ ಸಿದ್ಧಸ್ಥಿತಿಯನ್ನು ಹೊಂದಿದನು. ಪಂಚಾಲನು ಉಭಯರ ಕಿಂತಲೂ ಹೆಚ್ಚಿನವನಾದನು. ಬಹು ಉಗ್ರತರ ತಪಶ್ಚರ್ಯೆಮಾಡಿ ಸಿದ್ಧಿ ಪೊಂದಿದನಲ್ಲದೇ, ವೇದಗಳ ಕ್ರಮವನ್ನು ಹಚ್ಚುತ್ತ "ಶಿಕ್ಷಾ" ನಾಮಕಗ್ರಂಥ ನಿರ್ಮಾಣಮಾಡಿ ಉತ್ತಮ ಪದವಿ ಹೊಂದಿದನು. ಹೇ ಗಂಗಾ ಪುತ್ರನಾದ ಭೀಷ್ಮನೇ ಇವೆಲ್ಲವೂ ನನ್ನ ದಿವ್ಯದೃಷ್ಟಿಗೆ ಕಾಣಹತ್ತಿದವು.

ಇವೆಲ್ಲ ಕಾರಣದಿಂದ ವಿಧಿಪೂರ್ವಕವಾಗಿ, ಪಿತ್ರಂತರ್ಗತ ಪರಮಾತ್ಮ ಪ್ರೀತನಾಗಲೆಂದು ಶ್ರಾದ್ಧ ಮಹಿಮೆಯು ಎಷ್ಟೆಂದು ವರ್ಣಿಸಲಿ! ನೀನು ಈ ಶ್ರಾದ್ಧ ಮಹಿಮೆಯನ್ನು ಲಕ್ಷ್ಯದಲ್ಲಿಟ್ಟು ಒಳ್ಳೆ ಮಾರ್ಗಗಾಮಿಯಾಗು. ನಿನ್ನ ಹೊರತಾಗಿ ಸಪ್ತ ಬಂಧುಗಳ ಉತ್ತಮ ಚರಿತ್ರೆಯನ್ನು ಪಠಿಸಿ, ಶ್ರಾದ್ಧಮಾಡು ವರಿಗೆ ಅವರ ಪಿತೃಗಳಿಗೆ ನೀಚಯೋನಿ ಎಂದೂ ಪ್ರಾಪ್ತವಾಗಲಾರದು. ಇದ ರಲ್ಲಿ ಬಹು ಅರ್ಥಗರ್ಭಿತವಾಗಿರುವುದು. ಇದರಿಂದ ಉತ್ತಮವಾದ ಯೋಗ ಮಾರ್ಗಪ್ರಾಪ್ತವಾಗಿ ಉತ್ತಮಗತಿಗೆ ಹೋಗುವರೆಂದು, ಮಾರ್ಕಂಡೇಯರು ಭೀಷ್ಮರಿಗೆ ಹೇಳಿದ್ದನ್ನೇ ನಿನಗೆ ಹೇಳಿದ್ದೇನೆಂದು ವೈಶಂಪಾಯನರು ಧರ್ಮ ರಾಜನಿಗೆ ಹೇಳಿದರು. ಹೇಧರ್ಮನೇ! ಶ್ರಾದ್ಧಮಾಹಾತ್ಮ್ಯ ಶ್ರಾದ್ಧಫಲಸಂಬಂಧ ಪೂರ್ವಇತಿಹಾಸ ಹೇಳಿದ ಉದ್ದಿಶ್ಯವೇನೆಂದರೆ ಪಿತೃಗಳದ್ವಾರಾ ಸೋಮನು (ಚಂದ್ರನು) ತೃಪ್ತನಾದರೇ ಸೋಮನು ಔಷಧಿಗಳದ್ವಾರಾ ಭೂಮಿಯಲ್ಲಿ ಸಂತರ್ಪಣ ಮಾಡಲು, ಸೋಮನಿಂದ ಸರ್ವಪಿತೃಗಳು, ಸರ್ವಲೋಕವೂ ತೃಪ್ತಿಯಾಗುತ್ತದೆ. ಸೋಮನ ಮಾಹಾತ್ಮ್ಯ ಬಹುಮಹತ್ವವಾಗಿದೆಯೆಂದು ಹೇಳಿದ್ದಾರೆ.

ಈ ಪಿತೃಕಲ್ಪ ಶ್ರಾದ್ಧಮಹಿಮೆಯಿಂದ ಮುಖ್ಯ ತಿಳಿಯುವುದೇನೆಂದರೆ, ವ್ಯಾಧ, ಮೃಗ, ಪಕ್ಷಿ ಹಂಸಾದಿ ಯೋನಿಗಳಲ್ಲಿಯೂ ಶ್ರೀಹರಿಯು ತಾನು ನಿಂತು ಯೋಗ್ಯ ಜೀವರಿಗೆ ಸದ್ಬುದ್ಧಿ ಕೊಟ್ಟು, ತಪಶ್ಚರ್ಯ, ಇಂದ್ರಿಯನಿಗ್ರಹ, ಸದ್ಧರ್ಮಾದಿಗಳನ್ನು ಮಾಡಿಸುತ್ತಾನೆ. ವೇದಪಾರಂಗತರಾದ ಏಳು ಜನ ಬಂಧುಗಳು, ಬ್ರಾಹ್ಮಣರಾಗಿ ಕುಕರ್ಮಾಚರಣೆಯಿಂದ ವ್ಯಾಧಾದಿ ಜನ್ಮಗಳಲ್ಲಿ ಜನಿಸಿದರೂ, ಪಿತೃಗಳ ತೃಪ್ತಿಪಡಿಸಿದ ಕಾರಣ, ಒಳ್ಳೇ ನಡತೆ ಒಂದಕ್ಕೊಂದು ಅಧಿಕವಾದ ಯೋನಿಗಳಲ್ಲಿ ಬಂದು, ಸಾಧನ ಮಾಡುತ್ತ ಕೊನೆಗೆ ಮಾನವ ಜನ್ಮದಿಂದ ತಮ್ಮ ಬಂಧುತ್ವ ಸ್ನೇಹ ವಾಸನೆಯನ್ನು ಕಳೆದುಕೊಂಡು ಮುಕ್ತರಾದರು. ಶ್ರೀಹರಿಯೇ ಇವರೇಳು ಜನಕ್ಕೆ ಆಯಾ ಜನ್ಮದಲ್ಲಿ, ಪಿತೃ ಭ್ರಾತೃ ರೂಪದ ಮಮತೆ ತಪ್ಪಿಸಿದ ಅಕ್ಷರ ಪುರುಷನು.

## ಕ್ಷರಾಕ್ಷರ ಚೇತನರ ವಿಚಾರ

ಜೀವರು ನಿತ್ಯರೂ ಸನಾತನರಾದರೂ, ಎರಡುವಿಧವಿರುವರು. ಕ್ಷರ–ನಾಶವುಳ್ಳವರು, ಅಕ್ಷರ-ನಾಶರಹಿತರೆಂದು ದ್ವಿವಿಧ. ಅನಾದಿ ಲಿಂಗದೇಹ ನಾಶವಾದ ಮೇಲೆ, ಮುಕ್ತರುಗಳ ಜೀವಸ್ವರೂಪಕ್ಕೆ ನಾಶವಿಲ್ಲ ಕಾರಣ, ಮುಕ್ತಜೀವರೆಲ್ಲ ವಿಲಿಂಗರು. ನಾಶರಹಿತರು. ಕ್ಷರರು. ದೇಹಲಿಂಗಾದಿ ಸ್ಥೂಲದೇಹ ಪರಿಯಂತರ ನಾಶವುಳ್ಳವರು. ಕ್ಷರಜೀವರು. ಇವರು ಸೃಜ್ಯಾ, ಅಸೃಜ್ಯ, ಸೃಜ್ಯರು. ಈ ಬ್ರಹ್ಮಕಲ್ಪದಲ್ಲಿ ಸೃಷ್ಟರಾಗಿ ಲಿಂಗದೇಹ ನಾಶವಾಗುವ ಪರಿಯಂತ ಸೃಜ್ಯಜೀವರೆಲ್ಲ ಕ್ಷರರೇ ಮತ್ತು ಅಸೃಜ್ಯರು = ಅನಾದಿ ಅನಿತ್ಯ ಲಿಂಗದೇಹಯುಕ್ತರಾಗಿ ಸಾಧನರಹಿತರಾಗಿರುವರು. ಸೃಷ್ಟಿಗೆ ಬಂದು ಲಿಂಗನಾಶಪರಿಯಂತವಾಗಿ ದೇಹ ನಾಶವುಳ್ಳವರು ಕ್ಷರರೆಂದು ಜೀವರ ವಿಚಾರ ಹೇಳಿ, ಮುಂದೆ ೨೫ನೇ ಪದ್ಯದಲ್ಲಿ ಶ್ರೀರಮೆಯು ಅಸ್ವತಂತ್ರ ಚೇತನಳು, ಶ್ರೀಹರಿಗೆ ದೇಶಕಾಲದಿಂದ ಸಮಳು, ಗುಣದಿಂದ ಅಸಮಳು. ಕೆಲವರು ಲಕ್ಷ್ಮಿಗೆ ಹರಿಯ ರೂಪದಿಂದಲೂ ಅಸಮಳೆಂದು ವಿವರಿಸಿದ್ದಾರೆ. ಇದು ಒಂದು ಪ್ರಕಾರ ರಮೆಗೆ ಶೋಭೆ. ಏಕೆಂದರೆ ಶ್ರೀಹರಿಯು ಯಾವ ಯಾವ ಕಾಲ ಯಾವ ಯಾವ ರೂಪಗಳನ್ನು ಸ್ವೇಚ್ಛೆಯಿಂದ ತೆಗೆದುಕೊಳ್ಳುವನೋ, ಶ್ರೀಹರಿಇಚ್ಛೆಯಂತೆ ಶ್ರೀಹರಿಯ ಆಧೀನಳಾಗಿ ಅಂತಹ ರೂಪವನ್ನು ತೆಗೆದುಕೊಂಡರೂ, ಆ ರೂಪ ಹರಿಯ ಇಚ್ಛೆಗೆ ಆಧೀನವಾದುದು. ಜೀವರುಗಳಂತೆ ರಮೆಗೆ ಲಿಂಗದೇಹವಿಲ್ಲ ನಾಶವಿಲ್ಲ. ನಿತ್ಯ

ಮುಕ್ತಳು ನಿರ್ವಿಕಾರಳು, ಎಂಬುದಕ್ಕೆ ದಾಸಾರ್ಯರು, ಆದಿಯೊಳು, ಅಕ್ಷರ ಪುರುಷರಲ್ಲಿ ರಮಾನುಧುಸೂದನರು ಎಂದು ವಿವರಿಸಿ ಶ್ರೀಲಕ್ಷ್ಮೀಪರಮಾತ್ಮರು ಅಕ್ಷರಪುರುಷರಾದರೂ, ನದಿ ಸಮುದ್ರ ದೃಷ್ಟಾಂತದಿಂದ, ರಮಾರೂಪಗಳು ಸಂತತ ಹರಿಯಧೀನವಾಗಿ ಬೇರೆ ಬೇರೆ ಇಪ್ಪವು ಎಂದು ಶ್ರೀರಮಾ ನಾರಾಯಣರಿಗೆ ನಿತ್ಯಭೇದ ವಿವರಿಸಿ ಪರಮೋಪಕಾರ ಮಾಡಿದ್ದಾರೆ.

ಮೇಲೆ ವಿವರಿಸಿದಂತೆ ಜೀವರು ಪಿತೃಋಣಾನುಬಂಧನದಿಂದ ಮುಕ್ತರಾದಮೇಲೆ ಶ್ರೀಹರಿ ಈ ವ್ಯಾಮೋಹವನ್ನು ಬಿಡಿಸುವನು.

## ಪಂಚಭೇದ ವಿಚಾರ

ಸಕಲಜೀವರು ಒಬ್ಬರಿಗೊಬ್ಬರು ಸಂಬಂಧಿಗಳಲ್ಲ. ಪರಸ್ಪರಭೇದ ಉಂಟು. ಜಡಗಳಲ್ಲಿ ನಿತ್ಯಾನಿತ್ಯ ಜಡಗಳಾವವು? ನಿತ್ಯ ಜಡಗಳ ಅನಿತ್ಯ ಜಡಗಳ ವಿವರ ತಿಳಿಯಬೇಕು. ಈ ಜಡ ಜಡಗಳಲ್ಲಿ ಭೇದ, ಜ್ಞಾನಾನಂದ ಅನುಭವವಿದ್ದ ಜೀವರಿಗೂ, ಅನುಭವವಿಲ್ಲದ ಜಡಕ್ಕೂ ಭೇದ, ಜೀವ ಜಡಗಳಿಗೆ ಬಿಂಬವಿಲಕ್ಷಣನಾದ ಪರಮಾತ್ಮನಿಗೂ ಭೇದ. ಹೀಗೆ ಪಂಚ ಭೇದ ತಿಳಿವುದೆಂದು ಸಾಮಾನ್ಯವಾಗಿ ಇಷ್ಟು ತಿಳಿದರೆ ಸಾಕು. ಇದರೊಳು ಬಹ್ವರ್ಥಗರ್ಭಿತವಾಗಿರುವುದು. ಜೀವನಸ್ವರೂಪವೇನು ? ಗುಣವೇನು ಜ್ಞಾನೇಚ್ಛಾ, ಕ್ರಿಯೆ ಏನು? ಪರಾಧೀನತೆ ಹೇಗೆ? ಅಲ್ಪಜ್ಞ ಅಲ್ಪಶಕ್ತಿ ಹೇಗೆ? ಸದಾ ಹರಿಯ ಅಧೀನತೆ ಹೇಗೆ ? ಜೀವರ ಸ್ವಭಾವನನುಸರಿಸಿ ಜೀವನ ತ್ರೈವಿಧ್ಯ ಸ್ವರೂಪ ಹೇಗೆ? ಮತ್ತು ಜಡಗಳ ಅಸ್ತಿತ್ವ, ಜಡತತ್ವಗಳ ಉಪಚಯತ್ವ, ಜಡಗಳಿಗೆ ನಿತ್ಯತ್ವ, ಅನಿತ್ಯತ್ವ, ನಿತ್ಯಾನಿತ್ಯತ್ವ, ಜಡದಲ್ಲಿ ಕ್ರಿಯಾಶಕ್ತಿ, ಪಾಂಚಭೌತಿಕ ಜಡಗಳ ವೈಭವ, ಇವೆಲ್ಲ ಶಾಸ್ತ್ರ ಮರ್ಯಾದೆಯಂತೆ ವಿಚಾರಿಸುವುದು ಅತ್ಯಾವಶ್ಯವಾದರೂ ಇದೊಂದು ದೊಡ್ಡಗ್ರಂಥವೇ ಆಗುತ್ತದೆ. ಬುದ್ಧಿವಾನ್ ಸಜ್ಜನರು ಗುರುದ್ವಾರಾ ಶ್ರೀ ಸರ್ವಜ್ಞರ ದಶಪ್ರಕರಣ ಗ್ರಂಥಗಳು, ಅದರಲ್ಲಿ ವಿಷ್ಣುತತ್ವ ನಿರ್ಣಯ ಗ್ರಂಥದ ಮೂರು ಭಾಗ ವಿವೇಚನ, ಅನುವ್ಯಾಖ್ಯಾನ ಸುಧಾ, ಪರಿಮಳಾದಿ ಗ್ರಂಥಗಳನ್ನು ಪೂರ್ವಜ ಪರಿಶುದ್ಧ ಜ್ಞಾನಿಗಳಿಂದ ವಿಚಾರಿಸಿ ತಿಳಿಯಬೇಕು. ಇದೇ ಸಂಕ್ಷಿಪ್ತದಿಂದ ವಿನಂತಿ,

ಶ್ರೀ ಪ್ರಾಣೇಶದಾಸಾರ್ಯರು ಪಂಚಭೇದ ವಿವರವನ್ನು ಒಂದು ಪದದಲ್ಲಿ ವಿವರಿಸಿದ್ದಾರೆ. ಸಂಕ್ಷಿಪ್ತವಾಗಿ ಎಲ್ಲ ವಿಚಾರ ಬಂದಿವೆ. ಜ್ಞಾನಿಗಳ ಅವಲೋಕನಾರ್ಥವಾಗಿ ಇಲ್ಲಿ ಕೊಟ್ಟಿದೆ. ತಾರತಮ್ಯಸುಳಾದಿ ಪುಟ ೧೭೬.

ಪದ ರಾಗ ಕಾಂಬೋದಿ, ಝಂಪಿತಾಳ

ಪಂಚಭೇದವ ತಿಳಿದು ಪ್ರತಿದಿನದಲಿ ।
ಮುಂಚಿನಜ ಮಧ್ವಮುನಿ ಮತವನುಸರಿಸಿ ॥ಪಲ್ಲ॥

**ಪಂಚಭೇದ ವಿವರ**

ಜೀವೇಶರಿಗೆ ಭೇದ ಜೀವ ಜೀವಕೆ ಭೇದ ।
ದೇವರಿಗೆ ಜಡಕೂ ಜಡಕೆ ಭೇದ ॥
ಆವಾಗ ಜೀವರಿಗೆ ಜಡಗಳಿಗೆ ಭೇದುಂಟು ।
ಈ ವಿವರ ಪೇಳ್ವೆಯೆನ್ನಾಪನಿತು ಕೇಳುವದು ॥೧॥

**ಈಶನ ಸ್ವರೂಪಲಕ್ಷಣ**

ಈಶ ನಿತ್ಯ ಅನಾದಿಸ್ವರತ ಸರ್ವಗ ಸ್ವಪ್ರ ।
ಕಾಶ ಸರ್ವಜ್ಞ ವಿಶ್ವವಿಲಕ್ಷಣ ॥
ಮೇಶ ಅಪರಿಚ್ಛಿನ್ನಮೂರ್ತಿ ಪ್ರಾಣಿಗಳಿಂದ ।
ತಾ ಸಾಕ್ಷಿಯಾಗಿ ಬಹುಕರ್ಮಗಳ ಮಾಡಿಸುವ ॥೨॥
ಶ್ರೀಮುಖ ಜಗತ್ಯಕುತ್ಪತ್ಯಾದಿಕಾರಣ ಮ ॥
ಹಾಮಹಿಮ ಸರ್ವತಂತ್ರ ಸ್ವತಂತ್ರ ॥
ಆಮಯವಿದೂರ ಜ್ಞಾನಾನಂದ ಬಲಪೂರ್ಣ ।
ಸೀಮೆ ಇಲ್ಲದ ಸುಗುಣ ಕ್ರಿಯಾತ್ಮಕ ಸ್ವರೂಪ ॥೩॥

**ಜೀವರುಗಳ ಸ್ವರೂಪ**

ಸುಖದುಃಖಿ ಭೋಗಿ ಜೀವನು ಅಸ್ವತಂತ್ರ ಬಹು ।
ಕಕುಲಾತಿವುಳ್ಳವನು ದುರ್ವಿಷಯದಿ ॥
ಲಕುಮಿಾಶನಲ್ಲಿ ಭಕ್ತಿವಿವರ್ಜಿತನು ಪ್ರತಿಕ್ಷ ।
ಣಕೆ ಅನಂತ ಅಪರಾಧಿ ಜನ್ಮಮೃತಿವುಳ್ಳವನು ॥೪॥

ಆಧಿವ್ಯಾಧಿಗಳಿಂದ ಪೀಡಿತನು ಅಜ್ಞಾನಿ ।
ಮಾಧವನ ಬಂಧಕಶಕುತಿಯೊಳಗಿಹ್ಯ ॥
ಈ ಧರಿಸಿಹನು ಪ್ರಾಕೃತಾ ಪ್ರಾಕೃತಾವರಣ ।
ಬೇಧವೇ ಸಿದ್ಧ ಇಂಥ ಜೀವರಿಗು ಹರಿಗೂ ॥೫॥
ಜೀವರು ತ್ರಿವಿಧರು ಜೀವರಲಕ್ಷಣ ತರತಮ ॥
ಒಂದಲ್ಲ ಸರ್ವಜೀವರು ಸತ್ವರಜತಮರು ।
ಯೆಂದು ಭೇದಗಳುಂಟವರ ತರತಮ ॥
ಮುಂದಿನ ಪದದಿ ಪೇಳ್ವೆ ಸಜ್ಜನರು ಕೇಳಿ ಯಾ ।
ನಂದಬಡಲೆಂದು ವಿನಯದಲಿ ಬಿನ್ನೈಸುವೆನು ॥೬॥
ಭಿನ್ನ ಭಕ್ತರುಯೆನಿಪ ಎಲ್ಲ ದೇವತೆಗಳ ।
ಚ್ಛಿನ್ನಭಕ್ತರು ವಿಧೀರರ್ಥೆಂಡರು, (ವಿಧಿ ಈರ ಅವರ ಹೆಂಡರು) ॥
ಚೆನ್ನಾಗಿ ಮುದದಿ ಈ ನಿರ್ಜರರ ತಾರತಮ್ಯ ।
ವನ್ನು ಕೇಳಿಕೊಬೇಕು ಜ್ಞಾನಿಗಳ ಮುಖದಿಂದ ॥೭॥
ವಿಧಿಮೊದಲು ತೃಣಜೀವಪರಿಯಂತ ಸಾತ್ವಿಕರು ।
ಇದರೊಳಗೆ ದೇವಋಷಿಪಿತೃಪನರರು ॥
ಸುಧಿಗೆ ಯೋಗ್ಯರಜಾದಿಗೀರ್ವಾಣಗಂಧರ್ವ ॥
ತುದಿಯಾಗಿ ಸಾಂಶರು ನಿರಂಶರುಳಿದವರೆಲ್ಲ ॥೮॥

## ರಾಜಸರಾದ ನಿತ್ಯಸಂಸಾರಿ ಜೀವರಲಕ್ಷಣ

ಇವರಿಂದ ಭಿನ್ನರಾಜಸರು ಗೋಭೂನರಕ ॥
ತ್ರಿವಿಧಗತಿವುಳ್ಳವರು ಪಂಚಭೇದ ॥
ವಿವಿರತರತಮ ದೇವರ ಮಾಹಾತ್ಮ್ಯೆಯನು ಅರಿಯು ।
ದವರು ಲಿಂಗ ೧ ಕಳೆಯರು ಧಾಮತ್ರಯಪೊಗದವರು ॥೯॥

## ತಾಮಸ ಜೀವರುಗಳ ಸ್ವರೂಪ ಲಕ್ಷಣ

ಸಂಸಾರಿಗಳಿಗೆ ಭಿನ್ನರು ತಮೋಗುಣದವರು ।
ಕಂಸಾರಿಯಲಿ ದ್ವೇಷವವರ ಸ್ವಭಾವ ॥

---

೧—ತ್ರಿವಿಧ ಗುಣಸ್ವಭಾವ ಎಂದಿಗೂ ಹೋಗುವುದಿಲ್ಲ.

ಆಸುರಾರಿಗಳು ನಾಲ್ಕು ಪ್ರಕಾರ ದೈತ್ಯ ರಾ- ।
ಕ್ಷಸರು ಪಿಶಾಚರವರನುಗರು ನರಾಧಮರು ॥೧೦॥
ಈ ನಾಲ್ಕು ಬಗೆಯ ಸುರರಿಗೆ ಕಲಿಯುವನ ।
ಹೀನತನವೆಷ್ಟುಸುರಲಿ ಮಿಥ್ಯಾ ॥
ಜ್ಞಾನಿ ಭೇದವನರಿಯ ಪಂಚಮಹಪಾತಕಿ ಪು- ।
ರಾಣ ವೇದಗಳಿಗೆ ವಿರುದ್ಧಾರ್ಥ ಕಲ್ಪಿಸುವ ॥೧೧॥
ಸುಜನರಾಚರಣೆ ನಡೆಯುಗೊಡ ದುಃಖಬಡಿಸುವ ।
ಕುಜನರಿಗನೇಕಬಗೆ ಸಹಯುವಹನೂ ॥
ಪ್ರಜೆಗಳನ ರೋಗನಾವೃಷ್ಟಿಯಿಂ ದಹಿಸುವನು ।
ವೃಜಿನವನವಪು ತಾಯಿ ತಂಗಿಯೆಂಬರ ನರಿಯ ॥೧೨॥
ಬವರ ಬಂಗಾರ ದ್ಯೂತಾಪೇಯ ಅನೃತ ನಟ ।
ಯುವತಿ ಯಿಾಯಾರು ಸ್ಥಳ ನಿಲಯುವನಿಗೆ ॥
ನವವಿಧದ್ವೇಷಿಗಳಿಗಾಕಾರನೆನಿಸುವನು ।
ಅವನ ಸಮ ಪಾಪಿಗಳು ಮೂರು ಲೋಕದಲಿಲ್ಲ ॥೧೩॥
ಆ ನೀಚನ ಮಲಮೂತ್ರವಿಸರ್ಜನದಿ ಘೋರ ।
ಕಾನನದಿ ಕತ್ತಲೆಯೊಳಗೆ ಸ್ಮರಿಪುದು ॥
ಕ್ಷೋಣಿಯೊಳವನ ನಿಂದ್ಯೆ ನಿತ್ಯದಲಿ ಮಾಡುವುದೆ ।
ಶ್ರೀನಾಥನರ್ಚನೆ ಮಹಯಜ್ಞವೆನಿಸುವದು ॥೧೪॥

## ಅನಾದಿಯಿಂ ಜೀವರ ತ್ರೈವಿಧ್ಯ ತ್ರಿವಿಧಫಲ

ಈ ವಿಧದಿ ಮೂರುಗುಣದಿಂದ ಪರಸ್ಪರ ಜೀವ ।
ಜೀವರಿಗೆ ಭೇದ ಯೋಗ್ಯತೆ ಪ್ರಕಾರ ॥
ಮೂವರಿಗೆ ಪಾಪಮಿಶ್ರಿತ ಕರ್ಮಪುಣ್ಯ ಬಹು ।
ನೋವು ಸ್ವರ್ಗ ನರಕ ಸುಮೋಕ್ಷಾದಿ ಗತಿಯುಂಟು ॥೧೫॥

## ನಿತ್ಯಾನಿತ್ಯ ಜಡಗಳ ವಿವರ ಮತ್ತು ಭೇದ

ಈ ಜೀವರಿಗೆ ವುಳ್ಳನುಭವ ಜಡಗಳಿಗಿಲ್ಲ ।
ನೈಜವಾದಿತು ಭೇದ ಜೀವ ಜಡಕೆ ॥

ಆ ಜಡ ತ್ರಿನಿತ್ಯ ಅನಿತ್ಯ ನಿತ್ಯಾನಿತ್ಯ |
ವಾಜದವು ಅವ್ಯಾಕೃತ ನಭ ಶ್ರುತಿ ವರಣಗಳು ||೧೬||
ಪ್ರಾಕೃತ ವಿಕೃತ ವೈಕೃತ ತ್ರಯು ಅಸ್ಥಿರ ಜಡವು |
ಪ್ರಾಕೃತ ವಜಾಂಡಘೊರ ಆವರಣವು ||
ಸ್ವೀಕೃತ್ವೈವತ್ತು ಕೋಟ್ಯೋಜನ ಸುವರ್ಣಾತ್ಮ |
ಕಾಕ್ರಮಸಿಹದಜಾಂಡಕಿದು ವಿಕೃತ ಜಡವೆಂದು ||೧೭||

ಸರಸಿಜಭವಾಂಡದೊಳಗಿಹ ನೆಲಜಲಧಿ ಗಿರಿಗಳು |
ಎರಡೇಳು ಭುವನ ವೈಕೃತ ಜಡವಿದು ||
ಸ್ಥಿರ ಅಸ್ಥಿರ ಪುರಾಣಗಳ ಅರ್ಥ |
ಇರುತಿಹವು ಅಚಲಾಗಿ ಶಬ್ದಗಳ ನಿತ್ಯಾ ||೧೮||

ಮೂಲಪ್ರಕೃತಿಗತ ತ್ರಿವಿಧಾನಂತ ಪರಮಾಣು |
ಜಾಲಕಾರಣ ಸುಸ್ಥಿರವೆನಿಪವೂ ||
ವ್ಯಾಲೆ ಅದರಿಂದಾದ ತತ್ವಗಳ ನಿತ್ಯಮಹ |
ಕಾಲವೆಂದಿಗು ನಿತ್ಯ ಅಣುಕಾಲಗಳು ನಿತ್ಯ ||೧೯||

ಹೀಗೆ ಮೂರುವಿಧ ಜಡವೊಂದೊಂದೆ ಮೂರು ಮೂ- |
ರಾಗಿಹವು ಜಡಜಡಕೆ ಭೇದ ಸಿದ್ಧ ||
ಭಾಗಾರವಮಾಡಿ ಗುಣರೂಪಕ್ರೀಯದಿ ನೋಡೆ |
ನಾಗಾರಿವಹಗೆ ಜಡಗಳಿಗೆ ಭೇದವೆ ಸತ್ಯ ||೨೦||

**ಶ್ರೀಹರಿಯ ಧಾಮತ್ರಯ ನಿತ್ಯ ಮತ್ತು ನರಕಗಳೈದು ನಿತ್ಯ**

ಈ ಕಮಲಜಾಂಡವು ಅನಿತ್ಯವಿದರೊಳಗೆ ಯೆಂ- |
ದೂ ಕೆಡದೆ ಸುಖಕಾಂತಿಯುಕ್ತವಾದ ||
ಶ್ರೀಕಳತ್ರನ ತ್ರಿಧಾಮಗಳು ಕುಕಲಿಗೆ ತಕ್ಕ |
ಶೋಕಪೂರಿತವಾದ ನಿತ್ಯನರ್ಕಗಳಿಹವು ||೨೧||

## ಫಲಸ್ತುತಿ

ಈ ಪಂಚಭೇದ ಜ್ಞಾನಿಲ್ಲದವ ಶ್ರೀಮುದ್ರಿ |
ಗೋಪಿಚಂದನವನು ಧರಿಸಿದರು ಫಲವೇನು ||

ಈ ಪೊಡವಿಯೊಳು ವೇಷಧಾರಿಗಳು ಜೀವಿಸರೆ ।
ಆ ಪರಿಯಾಭಾಸ ವೈಷ್ಣವನೆಂದರಿಯಬೇಕು ॥೨೨॥
ಹರಿಗುರುಗಳದಯ ಪಡೆದವರಿಗೆ ರುಚಿ ತೋರ್ವದಿತ- ।
ರರಿಗೆ ಈ ಕೃತಿ ಕರ್ಣಕಠೋರವು ॥
ತರಣಿ ಬರೆ ಸರ್ವರಿಗೆ ಘೂಕಕಾದಂತೆ ಇದು ।
ಬರಿಯ ಮಾತಲ್ಲ ಶಾಸ್ತ್ರಕೆ ಸಮ್ಮತ ॥೨೩॥
ಹೀನರೊಳು ಬೆರೆಯದಲೆ ಪಂಚಭೇದವ ತಿಳಿದು ।
ಸಾನುರಾಗದಲಿ ಹರಿಸರ್ವೋತ್ತಮಾ ॥
ಪ್ರಾಣದೇವರೆ ಗುರುಗಳೆಂದರಿದು ಭಜಿಸುವರು ।
ಕಾಣರು ಕುಸಂಸಾರ ಧಾಮತ್ರಯವೈದುವರು ॥೨೪॥
ಇಪ್ಪತ್ತೈದು ಪದಗಳಿಂದ ಸಂಗತಿಯಾಗಿ ।
ಒಪ್ಪುತಿಹ ಈ ಪಂಚಭೇದವನ್ನೂ ॥
ತಪ್ಪದಲೆ ನಿತ್ಯಪಠಿಸುವರ ಪೊರೆವನು ಬೊಮ್ಮ ।
ನಪ್ಪ ಶ್ರೀಪ್ರಾಣೇಶವಿಠಲನಿಹಪರದಲ್ಲಿ ॥೨೫॥




ಶ್ರೀಜಗನ್ನಾಥದಾಸಾರ್ಯರ, ಕೃತಿಗಳಿಗೆಲ್ಲ ಟೀಕಾರೂಪವಾಗಿರುವ ಶ್ರೀಪ್ರಾಣೇಶದಾಸಾರ್ಯರ ಈ ಪಂಚಭೇದವನ್ನು ಆದರೂ ಚೆನ್ನಾಗಿ ಅರಿತು ಮನನ ಮಾಡಿದರೆ, ಮುಂದೆ ವಿಶೇಷ ಶಾಸ್ತ್ರಾರ್ಥ ಮರ್ಯಾದಾ ತಿಳಿಯಲು ಯೋಗ್ಯತೆ ಕೊಡುವರು. ಪಂಚಭೇದ ತಾರತಮ್ಯವೇ ಮಧ್ವಶಾಸ್ತ್ರಕ್ಕೆ ನಿತ್ಯ ಮೂಲಾಧಾರವಾಗಿರುವದು. ಇದನ್ನು ಮರೆಯ ಬೇಡಿರಿ.

**ಇನ್ನು ಸ್ವದೇಹದಲ್ಲಿಯೂ ಪಂಚಭೇದವಿರುವುದು.**

ಹೇಗೆಂದರೆ, ೧ ಲಿಂಗ, ೨ ಅವ್ಯಕ್ತ, ೩ ಅನಿರುದ್ಧ, ೪ ಪ್ರಾಕೃತ, ೫ ಸ್ಥೂಲ ಈ ದೇಹಜಡಗಳಾದರೂ, ಪ್ರಕೃತಿಪರಮಾಣುಗಳ ಬೇರೆ ಬೇರೆ ವಿಧಸಂಯೋಗ ಕಾರ್ಯವಿವಕ್ಷಾದಂತೆ ೧ ಒಂದಕ್ಕೊಂದು ದೇಹಗಳಿಗೆ ಪರಸ್ಪರಭೇದ ೨ ಈ ಜಡ ಗಳಾದ ದೇಹಕ್ಕೂ ಜೀವನಿಗೂ ಭಿನ್ನವಾದುದರಿಂದ ಜಡ ಜೀವ ಭೇದ ೩ ಈ ಜೀವನಿಗೂ ತತ್ವಾಭಿಮಾನಿಗಳಾದ ಜೀವರಿಗೂ ಪರಸ್ಪರ ಭೇದ ೪ ಜೀವರಿಂದ ವಿಲಕ್ಷಣನಾದ ಪರಮಾತ್ಮಗೂ ಜೀವರಿಗೂ ಭೇದ, ೫ ಜಡದಿಂದ ಬಹುವಿಲಕ್ಷಣ ನಾದ ಪರಮಾತ್ಮನಿಗೂ ಜಡಕ್ಕೆ ಅಂದರೆ ಜಡಶರೀರಗಳಿಗೂ ಪರಮಾತ್ಮನಿಗೂ

ಭೇದ ಹೀಗೆ ಪಂಚ ಭೇದ ತಿಳಿಯಬೇಕು. ನಾನೇ ನನ್ನ ದೇಹ, ನಮ್ಮಪ್ಪ ನಮ್ಮವ್ವ ಎಂಬ ಅಜ್ಞಾನ ಕಳೆ. ತಿಳಿದುನೋಡು ಇದೇ ಸಾಧನವೆಂದು ದಾಸ ರಾಯರು ಉಪದೇಶಿಸಿರುತ್ತಾರೆ.

## ಅಂಕಿ ಅಂಶ, ಬಿಂಬ ಪ್ರತಿಬಿಂಬ ವಿಚಾರ

ಈ ಕಲಿಯುಗದಿ ಕಲಿಪ್ರವೃತ್ತಕ ಅಧರ್ಮ ನಿಮಿತ್ತವಾಗಿ ಜೀವಬ್ರಹ್ಮೈಕ್ಯವಾದಿಗಳೇ ಹೆಚ್ಚು. ಬ್ರಹ್ಮನು ನಾನೇ ಒಂದೆಂಬ ಅನೇಕ ಮತಗಳು ಪ್ರಚುರ ವಾಗಿರುತ್ತವೆ. ಜೀವಬ್ರಹ್ಮೈಕ್ಯವನ್ನು ಸರ್ವಥಾ ತಿಳಿಯಕೂಡದು. ಇದು ಮಹಾ ಅನರ್ಥಕ್ಕೆ ಕಾರಣ. ಜೀವನು ಬೇರೆ. ಬ್ರಹ್ಮನು ಬೇರೆ. ಜೀವ ದಾಸ. ಈಶನಾದ ಬ್ರಹ್ಮನ ಅಧೀನನಾಗಿರುವನೆಂದು ತಿಳಿಸಲು ಜೀವರು ಪರಮಾತ್ಮಗೆ ಪ್ರತಿಬಿಂಬರು ಕಿಂಚಿತ್ ಸದೃಶರು, ತದಧೀನರು ಎಂಬ ನಿಶ್ಚಿತ ಶಾಸ್ತ್ರಾರ್ಥ ವನ್ನು ತಿಳಿಸಲು "ನಳಿನಮಿತ್ರಗೆ ಇಂದ್ರಧನು ಪ್ರತಿಫಲಿಸುವಂತೆ ಜಗತ್ರಯ ವೃಕಂ। ಗೊಳಿಪುದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ॥ ಎಂದು ಪೇಳಿದ್ದು ಪರಮತಗಳ ನಿರಾಕರಣಪೂರ್ವಕ, ಜೀವೇಶ್ವರರಿಗೆ ನಿತ್ಯ ಭೇದ ಸೂಚಕವಾಗಿದೆ. ಪದ್ಯದಡಿಯಲ್ಲಿ ಈ ವಿಚಾರಮಾಡಿದಾಗ್ಯೂ ಇಲ್ಲಿ ಎಲ್ಲ ಶಾಸ್ತ್ರಾರ್ಥಸಾಮೂಹಿಕದೊಂದಿಗೆ ಶ್ರೀವರದೇಂದ್ರರು ಬೆನ್ನಾತು ಪ್ರೇರಿಸಿ ಶ್ರೀ ಜಗನ್ನಾಥದಾಸರಿಗುಪದೇಶಿಸಿದಂತೆ ಎನ್ನ ಬೆನ್ನ ಆತು ನಿಂತು ಬರೆಸುವೆ ನೆಂಬ ಸೂಚನೆ ಇತ್ತದು ಅವರ ಪರಮಾನುಗ್ರಹದಿಂದ. ಅವರು ಪ್ರೇರಿಸಿದಷ್ಟು ಬರೆಸಿದಷ್ಟು ಬರೆಯುವೆ. ಒಣಾಹರಟೆ ಇದಲ್ಲವೆಂದು ಜ್ಞಾನಿಗಳ ಪದಕೆರಗಿ ಬೇಡುವೆ. ಲೋಕಹರಟೆ ಇದಲ್ಲವೆಂದು ಬೇಸರದೆ ಭಕ್ತಿಯಿಂದ ಮನಮುಟ್ಟ ತಿಳಿದು ಓದಿ ಮನನಮಾಡಬೇಕಾಗಿ ಪ್ರಾರ್ಥನೆ.

## ಬಿಂಬ ಪ್ರತಿಬಿಂಬ ಭಾವಲಕ್ಷಣ

ಶ್ರೀಹರಿಯು ಸರ್ವಜೀವರಿಗೆ ಬಿಂಬನು. ಸರ್ವಜೀವರು ಪ್ರತಿಬಿಂಬರು. (ಛಾಯಾ ನೆರಳು) ತತ್ಸಸದೃಶರು, ತದಧೀನರೂ, ತದ್ಭಿನ್ನರೂ ಎಂದು ಶಾಸ್ತ್ರ ಮತ್ತು ಅನುಭವಸಿದ್ಧ. "ಅಂಶಾ ಏವ ಹಿ ಮೇ ಜೀವಾ ಅಂಶೀ ಹಿ ಪರಮೇಶ್ವರಃ" ಮತ್ತು ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ" ಎಂಬುವ ಗೀತಾ ವಾಕ್ಯದಂತೆ ಹರಿಗೆ ಸ್ವರೂಪಾಂಶಾ ಭಿನ್ನಾಂಶಾ ಎಂದು ಎರಡು ಪ್ರಕಾರ.

೧. "ದೀಪದಿಂ ದೀಪಗಳು ಪೊರಮಟ್ಟು" ಎಂಬುವ ಪದ್ಯದಿಂದ, ಶ್ರೀ ಹರಿಯು ಅನಂತಾನಂತ, ಮತ್ಸ್ಯಾದಿ ಸ್ವರೂಪಾಂಶಗಳು ರೂಪಂರೂಪಂ= ಒಂದು ರೂಪದಿಂದ ಅನಂತ ರೂಪಗಳೆಂದು ಹೇಳುವಲ್ಲಿ ಸೂರ್ಯನು ಸೂರ್ಯನ ಕಿರಣಗಳಿಗೆ ಅತ್ಯಂತ ಭೇದ ಹೇಗೆ ಇಲ್ಲವೋ ಅದರಂತೆ ಶ್ರೀಹರಿಯ ಅನಂತಾನಂತ ವ್ಯೂಹರೂಪಗಳಿಗೂ, ಶ್ರೀಹರಿಗೆ ಭೇದವಿಲ್ಲ. ಅನಂತ ಕಾಲದಿಂದ ಅನಂತ ಹರಿಯ ರೂಪಗಳು ನಿತ್ಯವಾಗಿ ಸಂಶ್ಲೇಷ ಐಕ್ಯದಿಂದ ಇದ್ದೇಇರುತ್ತವೆ. ಪ್ರತಿರೂಪೋ ಬಭೂವ=ಎರಡನೇ. ಭಿನ್ನಾಂಶ ವಿವಕ್ಷಾದಲ್ಲಿ-ಪ್ರತಿರೂಪ-ಶ್ರೀಹರಿಗೆ ಭಿನ್ನಾಂಶರು ಅಲ್ಪಜ್ಞರು. ಅಲ್ಪಶಕ್ತಿಯುಳ್ಳ ಜೀವಸಂಘವು, ಹರಿಗೆ ಕಿಂಚಿತ್ ಸದೃಶರಾಗಿ, ಚಿನ್ಮಯರಾಗಿ, ಬಿಂಬ ಶ್ರೀಹರಿಗೆ ಸದಾ ಆಧೀನರಾಗಿ ಶ್ರೀಹರಿಯ ಛಾಯೆಯಂತೆ, (ನೆಳಲಿನಂತೆ) ಎಂದರೆ ಹೇಗೆ ಮನುಷ್ಯನ ನೆಳಲು ಛಾಯಾ ಮನುಜಾಕಾರದಂತೆ, ಆಮನುಜನ ಆಕೃತಿಯಂತೆ ಮನುಜನು ಹೋದಂತೆ ಪ್ರಕಾಶಕ್ಕೆ ಎದುರಾಗಿ ನೆಳಲು ಬೀಳುತ್ತದೆಯೋ; ಅದರಂತೆ ಜೀವನಿರುತ್ತಾನೆಂದು ಶ್ರುತ್ಯಾದಿಗಳಲ್ಲಿ ಹೇಳಿದೆ. ಶ್ರೀಹರಿಗೆ ಜೀವನು ಪ್ರತಿಬಿಂಬ ಹೇಗೆಂಬುದನ್ನು ಬ್ರಹ್ಮಸೂತ್ರಭಾಷ್ಯ-ದ್ವಿತೀಯಾಧ್ಯಾಯ ತೃತೀಯ ಪಾದ ಅಧಿಕರಣ ೧೮ ಸೂತ್ರ ೫೦ರಲ್ಲಿ **"ಓಂ ಆಭಾಸ ಏವ ಚ ಓಂ"** ಎಂದು ಶ್ರೀ ವ್ಯಾಸರು ಅಪ್ಪಣೆ ಕೊಡಿಸಿದ್ದಾರೆ. ಆಭಾಸವೆಂದರೆ, ನೆಳಲು-ರೂಪ, ತೋರಲಿಕ್ಕೆ ಮಾತ್ರ. ಅಪಹಾಸಕ್ಕೆ ತಕ್ಕದ್ದು ಇತ್ಯಾದಿ ಅಂದರೆ ಪ್ರತಿಬಿಂಬವೆಂದು ಹೇಳುತ್ತಾರೆ. ಈ ಸೂತ್ರಕ್ಕೆ ವಿಶಿಷ್ಟಾದ್ವೈತ ಅದ್ವೈತ ಅನೇಕ ಭಾಷ್ಯಕಾರರು ತಮ್ಮ ಮನಬಂದಂತೆ ಭಾಷ್ಯ ರಚಿಸಿದ್ದಾರೆ. ಆ ಶಾಸ್ತ್ರಾರ್ಥ ವಿಚಾರಕೆ ಇಲ್ಲಿ ಪ್ರಸಂಗವಿಲ್ಲ. ಇಲ್ಲಿ ಮು ಖ್ಯಾಂ ಶ ಗ ಳು ತಿಳಿಯಬೇಕಾದುವುಗಳು ಯಾವ್ಯಾವೆಂದರೆ :

೧. ಶ್ರೀಹರಿಯೂ ನಿತ್ಯಸಚ್ಚಿನ್ಮಯ. ಜೀವನೂ ನಿತ್ಯ. ಶ್ರೀಹರಿಯು ಬಿಂಬ ಹೇಗೆ? ಹರಿಗೆ ಜೀವನು ಪ್ರತಿಬಿಂಬ ಹೇಗೆ? ಮೂಲಪ್ರತಿಬಿಂಬ ಸ್ವರೂಪವೇನು ?

೨. ಜೀವರು ಚಿತ್ರವಿಚಿತ್ರವಾದ ತ್ರೈವಿಧ್ಯರು. ಈ ತ್ರಿವಿಧ ಜೀವರಿಗೆಲ್ಲ ಶ್ರೀಹರಿಯು ಬಿಂಬನಾಗಿರುವುದು ಹೇಗೆ ?

೩. ಇದಕ್ಕೆ ದೃಷ್ಟಾಂತ ಸೂರ್ಯನಾದ (ಬಿಂಬನಿಗೆ) ಇಂದ್ರಚಾಪ ಪ್ರತಿಯಾಗಿ ಮೂಡುವಂತೆ, ಸರ್ವಜೀವರು ಶ್ರೀಹರಿಗೆ ಅನುಪಾಧಿ ಪ್ರತಿಬಿಂಬರೆಂದು ಹೇಳಿದ್ದಾರೆ. ಇದರ ವಿವರ ಹೇಗೆ ?

೪. ಉಪಾಧಿಗಳೆಷ್ಟು ವಿಧ? ಅದರ ವಿವರವೇನು? ದೃಷ್ಟಾಂತ-ದಾರ್ಷ್ಟಾಂತಗಳಲ್ಲಿ ಏನು ವ್ಯತ್ಯಾಸ ?

೫. ಇಂದ್ರಚಾಪಕ್ಕೆ ಉಪಾಧಿ ಏನು ? ಇದು ಸೂರ್ಯನ ಬಿಂಬ ನೀರು ತುಂಬಿದ ಮೋಡದಲ್ಲಿ ಬೀಳಲು, ಕಾಮನಬಿಲ್ಲು ಮೂಡುವದು. ಇದಕ್ಕೆ ಕಾರಣವಾದ ನೀರು ತುಂಬಿದ ಮೋಡವೇ ಉಪಾಧಿ (ಕನ್ನಡಿ ಎಂದು) ಸೋಪಾಧಿಯೆಂದು ಹೇಳುತ್ತಾರೆ. ಇದು ಸರಿಯೆ ಹೇಗೆ? ಇತ್ಯಾದಿ ಅನೇಕ ಪ್ರಮೇಯವು ಶಾಸ್ತ್ರಾರ್ಥಗರ್ಭಿತವಾಗಿದೆ.

ಮೊದಲಿಗೆ ಸೂತ್ರಾರ್ಥ, ಸರ್ವಜ್ಞರ ಭಾಷ್ಯ, ಅನುವ್ಯಾಖ್ಯಾನ ಟೀಕಾ ಟಿಪ್ಪಣಿಕಾರರು ಈ ವಿಷಯಗಳನ್ನು ಹೇಗೆ ವಿಚಾರಿಸಿರುವರೆಂಬುದನ್ನು ಪ್ರಮಾಣಗಳನ್ನು ಕೊಟ್ಟಿದೆ. ಅವುಗಳ ನಿರ್ಣೀತಾರ್ಥ ಗುರುದ್ವಾರಾ ವಿಚಾರಾಂಶವಾಗಿವೆ.

**"ಓಂ ಆಭಾಸ ಏವ ಚ ಓಂ"** ಈ ಸೂತ್ರಕ್ಕೆ ಸರ್ವಜ್ಞರ **ಭಾಷ್ಯ** ರೂಪಂ ರೂಪಂ ಪ್ರತಿರೂಪೋ ಬಭೂವ (ಋ. ೬-೪೭) ಇತಿ ಪ್ರತಿಬಿಂಬತ್ವಾಚ್ಚ ನ ಸಾಮ್ಯಮ್ ||

ರೂಫಂ ರೂಪಂ ಪ್ರತಿರೂಪೋ ಬಭೂವ। ತದಸ್ಯ ರೂಪಂ ಪ್ರತಿಚಕ್ಷಣಾಯ (ತ್ರಿವಿಧಜೀವಸಮುದಾಯ) ಶ್ರೀಹರಿಯ ಬಿಂಬರೂಪಕ್ಕೆ ಪ್ರತಿಬಿಂಬವಾಗಿರುತ್ತದೆ. (ಆ ಬಿಂಬರೂಪವು ಪ್ರತಿಬಿಂಬನೆಂದು ಹೇಳಲ್ಪಟ್ಟ ಯೋಗ್ಯ ಜೀವನಿಗೆ ಸಾಕ್ಷಾತ್ಕಾರ ವಿಷಯವಾಗುತ್ತದೆ.) ಶ್ರೀಹರಿಯು ತನ್ನ ಸಾಮರ್ಥ್ಯಗಳಿಂದ ಅನಂತ ಜೀವರಿಗೆ ಬಿಂಬರೂಪನಾಗಿದ್ದಾನೆ. ಶ್ರೀಹರಿಗೆ ಹರಿಯನಾಮುಗಳಾಗಿ ಅನಂತಾನಂತ ರೂಪಗಳು ವ್ಯೂಹಸಮೂಹಗಳಾಗಿವೆ. ಈ ಶ್ರುತಿಯಿಂದ ಜೀವರಿಗೆ ಪ್ರತಿಬಿಂಬಾಂಶತ್ವವಿದ್ದಾಗ್ಯೂ ಮತ್ಸ್ಯಾದಿ ಶ್ರೀಹರಿಯ ರೂಪಗಳಿಗೆ ಪ್ರತಿಬಿಂಬಾಂಶವಿಲ್ಲದಿರುವದರಿಂದ ಜೀವರು ಮತ್ಸ್ಯಾದಿಗಳ ಅಂಶಗಳಿಗೆ ಸಾಮ್ಯವಲ್ಲವೆಂದು, ತತ್ವಪ್ರಕಾಶಾದಿ ಗ್ರಂಥಗಳಲ್ಲಿ ವಿವರಿಸುತ್ತಾರೆ.

ಸೂತ್ರಾರ್ಥ ಅನುಗುಣವಾದ ಸ್ಮೃತಿ ಪುರಾಣ ವಚನವನ್ನು ಸರ್ವಜ್ಞರು ಹೇಳುತ್ತಾರೆ.

**ಭಾಷ್ಯ**-ದ್ವಿರೂಪಾಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ। ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ ॥ ಪ್ರತಿಬಿಂಬಾಂಶಕಾ ಜೀವಾಃ ಪ್ರಾದುರ್ಭಾವಾ ಪರೇ ಸ್ಮೃತಾಃ । ಪ್ರತಿಬಿಂಬೇಷ್ವಲ್ಪಸಾಮ್ಯಂ ಸ್ವರೂಪಾಣೀತರಾಣಿ ತು ॥ ಇತಿ.

ಸರ್ವೋತ್ತಮನಾದ ಷಡ್ಗುಣೈಶ್ವರ್ಯಸಂಪನ್ನನಾದ ವಿಭು-ಸಮರ್ಥನಾದ ಶ್ರೀಹರಿಗೆ ಪ್ರತಿಬಿಂಬಾಂಶ, ಸ್ವರೂಪಾಂಶಗಳೆಂದು ಎರಡು ಅಂಶಗಳು. ಜೀವರೆಲ್ಲರೂ ಪ್ರತಿಬಿಂಬಾಂಶಕರು, ಸ್ವರೂಪಾಂಶಗಳು, ಮತ್ಸ್ಯಾದಿ ಶ್ರೀಹರಿಯ ಪ್ರಾದುರ್ಭಾವ ಅಂಶಗಳು ಪರೇ ಉತ್ತಮನಾದ ಹರಿಗೆ ಸ್ವರೂಪಾಂಶಗಳು. ಪ್ರತಿಬಿಂಬಗಳಾದ ಜೀವರಲ್ಲಿ ಅಲ್ಪಸಾಮ್ಯವು ಚಿನ್ಮಯರೂಪ, ಅಸ್ವಾತಂತ್ರ್ಯಾದಿ ಇತರ ಧರ್ಮಗಳು ಉಕ್ತವಾಗಿವೆ. ಜೀವರು ಹರಿಗೆ ಅಲ್ಪ-ಕಿಂಚಿತ್ ಸದೃಶರು. ಚಿನ್ಮಯ ದೇಹರು. **ತತ್ವ ಪ್ರಾಕಾಶಿಕಾ.** ನ ಜೀವಸ್ಯ ಪರಮಾತ್ಮಾಂಶಂ ಯುಕ್ತಂ, ತದತಿರಿಕ್ತೋಪಾಧ್ಯಾಭಾವಾದಿತ್ಯತ ಆಹ॥ ಜೀವರಿಗೆ ಪರಮಾತ್ಮನ ಪ್ರತಿಬಿಂಬಾಂಶವು ಯುಕ್ತವಲ್ಲ. ಏಕೆಂದರೆ ಜೀವಸ್ವರೂಪಾತಿರಿಕ್ತ ಉಪಾಧಿಯೇ ಇಲ್ಲವೆಂತ ಶಂಕಾ ಬಂದರೆ, **ಭಾಷ್ಯಕಾರರು** ಪರಿಹರಿಸುತ್ತಾರೆ. "**ಸೋಪಾಧಿರನುಪಾಧಿಶ್ಚ** ಪ್ರತಿಬಿಂಬೋ ದ್ವಿಧೇಯುತೇ । ಜೀವ ಈಶಸ್ಯಾನುಪಾಧಿರಿಂದ್ರಚಾಪೋ ಯಥಾ ರವೇಃ ॥ ಇತಿ ಪೈಂಗೀ ಶ್ರುತಿಃ.

ಪ್ರತಿಬಿಂಬವು ಸೋಪಾಧಿ=ಸ ಉಪಾಧಿ=ಉಪಾಧಿಯಿಂದ ಕೂಡಿದದು, ಅನುಪಾಧಿ=ಉಪಾಧಿ ಇಲ್ಲದಿರುವುದು ಎರಡು ವಿಧವೆಂದು ಹೇಳುತ್ತದೆ. ಹೇಗೆ ಸೂರ್ಯನಿಗೆ, ಇಂದ್ರಚಾಪವು (ಕಾಮನ ಬಿಲ್ಲು) ಅನುಪಾಧಿಕವಾಗಿರುವದೋ ಹಾಗೆಯೇ ಜೀವನು ಈಶನಿಗೆ ಅನುಪಾಧಿಯಾಗಿದ್ದಾನೆ. (ಇದು ಸ್ವರೂಪಸತ್ತಾ ಚಿನ್ಮಯವಿಷಯಪ್ರಕಾಶರೂಪವೆಂಬುವದು ಪೈಂಗಿಶ್ರುತಿಯಲ್ಲಿ ಹೇಳಿದ್ದಾರೆ.) ಇನ್ನು ಜೀವನು ಪರಮಾತ್ಮನಿಗೆ ಸದಾ ಅಧೀನನಾಗಿರುವನೆಂದು, ಛಾಯಾ ದೃಷ್ಟಾಂತದಿಂದ ಹೇಳುತ್ತಾರೆ. ಇದು ನಿರುಪಾಧಿಕ ಪ್ರತಿಬಿಂಬ.

**ಭಾಷ್ಯ :** ಯಥೈಷಾ ಪುರುಷೇ ಛಾಯಾ, ಏತಸ್ಮಿನ್ನೇತದಾತತಂ (ಪ. ಪ್ರ. ಉ, 3-3) ಇತಿ ಚ ಶ್ರುತಿಃ || ಭಾಷ್ಯದಲ್ಲಿ ಉದಾಹರಿಸಿದ್ದಾರೆ. ಇದಕ್ಕೆ ಶ್ರೀಮಂತ್ರಾಲಯಪ್ರಭುಗಳು ಖಂಡಾರ್ಥದಲ್ಲಿ "ಯಥೈಷಾ ಛಾಯಾ ಪುರುಷೇ ಶರೀರೇ ಅತ್ಯಂತಶರೀರಾಧೀನಾ ವರ್ತತೇ। ಏವಮೇವೈತಸ್ಮಿನ್ ಆತ್ಮನಿ ಸರ್ವಪ್ರಾಣಾದಿಕಮಾತತಂ ಅಧೀನಂ ಇತ್ಯಾದಿ||

ಹೇಗೆ ದೇಹದ ನೆರಳು ದೇಹದಲ್ಲಿ ವ್ಯಾಪ್ತವಾಗಿದೆಯೋ; ದೇಹಾಧೀನವಾಗಿ ದೇಹದಪ್ರತಿರೂಪವಾಗಿದೆಯೋ; ಹಾಗೆಯೇ ಪ್ರತಿಬಿಂಬರಾದ ಜೀವರ ಸಮುದಾಯವು ಪುರುಷೋತ್ತಮನಾದ ವಿಷ್ಣುವಿನ ಅಧೀನವಾಗಿದೆ. ಇದಾದರೂ ಅನುಪಾಧಿ ಪ್ರತಿಬಿಂಬಕ್ಕೇನೇ ಉದಾಹರಣವು. ಇಲ್ಲಿಯೂ ಛಾಯಾತಿರಿಕ್ತ ಉಪಾಧಿಯಿಲ್ಲ. ಇಂದ್ರಚಾಪ (ವಾಯ್ವಾದಿಗಳು ಪರಮಾತ್ಮನ ಛಾಯಾ ಸದೃಶರು) ವಾಯ್ವಾದಿಗಳಂತೆ ಪ್ರತಿಬಿಂಬಾಂಶತ್ವವು ಯುಕ್ತ.

"ಇದಮಪ್ಯನುಪಾಧಿಪ್ರತಿಬಿಂಬಸ್ಯೈವೋದಾಹರಣಂ
ತಥಾ ಚ ಅತಿರಿಕ್ತೋಪಾಧ್ಯಭಾವೇಪಿ ಇಂದ್ರಚಾಪ
ಛಾಯಾದಿವಜ್ಜೀವಸ್ಯ ಪ್ರತಿಬಿಂಬಾಂಶತ್ವಂ ಸಂಭವತೀತಿ ಭಾವಃ ||

(ರಾ. ಗು. ಸಾ. ಭಾವಪ್ರದೀಪ)

ಇಂತು ಎರಡೂ ವಿಧದಿಂದ ಸ್ವರೂಪಸತ್ತಾ, ಪ್ರಮಿತಿಸತ್ತಾ, ಪ್ರವೃತ್ತಿ ಸತ್ತಾ, ಜೀವರು ಈಶಾಧೀನರಾಗಿರುವರು. ಅನುಪಾಧಿಕಪ್ರತಿಬಿಂಬರಾದ ಮೇಲೆ **ಸೋಪಾಧಿಕ** ನಿರುಪಾಧಿಕ, ಎರಡೂ ಉದಾಹರಿಸಿದ್ದಾರೆ. ಸೋಪಾಧಿಕವೆಂದರೇನು ?

"ಜೀವೋಪಾಧಿರ್ದ್ವಿಧಾ ಪ್ರೋಕ್ತಾ ಸ್ವರೂಪಂ ಬಾಹ್ಯ ಏವ ಚ ।
ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ ||
ಸರ್ವೋಪಾಧಿವಿನಾಶೇ ತು ಪ್ರತಿಬಿಂಬಂ ಕಥಂ ಭವೇತ್ || ಇತ್ಯಾದಿ.

ಸೋಪಾಧಿಕಪ್ರತಿಬಿಂಬವೂ ಜೀವನಿಗೆ ಹೇಳಿದೆ. ಜೀವನಿಗೆ ಪ್ರತಿಬಿಂಬತ್ವ ಸ್ವರೂಪೋಪಾಧಿ ಜೀವನಸ್ವರೂಪವೇ. ನಾಶವಿಲ್ಲದಿದ್ದರೂ, ಬಾಹ್ಯೋಪಾಧಿ-ಲಿಂಗಾದಿ ದೇಹಗಳು ನಾಶವಿರುವಕಾರಣ, ಬಾಹ್ಯೋಪಾಧಿ ಪ್ರತಿ

ಬಿಂಬತ್ವಕ್ಕೆ ಕಾರಣವಿಲ್ಲ. ಮುಕ್ತಿಯಲ್ಲಿಯೂ ಸ್ವರೂಪೋಪಾಧಿ ನಿತ್ಯವಾಗಿ ಇದ್ದೇ ಇರುತ್ತದೆ.

**"ಜೀವಸ್ಯ ಯಾವತ್ಪರಮಾತ್ಮಸತ್ವಾತ್ ನಿತ್ಯತ್ವೇನ ಸೋಽನಾದಿರ್ನೇತಿಶ್ರುತ್ಯಪ್ರಮಾಣ್ಯದೋಷೋ ನಾಸ್ತಿ. ಸ ನಿತ್ಯ ಇತಿ ಶ್ರುತ್ಯಾ ನಿತ್ಯತ್ವಸ್ಯ ದರ್ಶನಾತ್॥ "ಗೀತಾವಿವೃತಿ"**

ಕನ್ನಡಿಯಲ್ಲಿ ಕಾಣುವ ಪ್ರತಿಮುಖವು ಅಪಸವ್ಯವಾಗಿ ತೋರುವದು. ದರ್ಪಣದೋಪಾದಿಲಿರುವ ಅನಿತ್ಯವಾದ ಸ್ಥೂಲದೇಹ ಬಾಹ್ಯೋಪಾಧಿಗೆ ನಾಶವುಂಟು. ಹೊರತಾಗಿ ಜೀವನಸ್ವರೂಪಕ್ಕೆ ನಾಶವಿಲ್ಲ. ನಿತ್ಯನಾದ ಹರಿಯು ಜೀವನಲ್ಲಿ ಇದ್ದೇ ಇದ್ದಾನೆ.

ಇನ್ನು ಕೆಲವರು ಇಂದ್ರಚಾಪವು ಸೋಪಾಧಿಕಪ್ರತಿಬಿಂಬಕ್ಕೆ ಉದಾಹರಣವಾಗಿದೆ. ಇದಕ್ಕೆ ಮೇಘಮಂಡಲ ಅಥವಾ ಸೂರ್ಯ ತೇಜಸ್ಸು ಉಪಾಧಿಯು. ಅದೇವೆ ಉಪಾದಾನಕಾರಣವು. ಜೀವನು ನಿರುಪಾಧಿಕಪ್ರತಿಬಿಂಬಕ್ಕೆ ಉದಾಹರಣನು. ಹೀಗೆ ಯಥಾ ಶಬ್ದವನ್ನು ಆವೃತ್ತಿಮಾಡಿಕೊಂಡು ಎರಡೂ ವಾಕ್ಯಗಳು ದೃಷ್ಟಾಂತಪರವಾದುದಾಗಿ ಹೇಳುತ್ತಾರೆ. ಇಲ್ಲಿ ಸ್ವಲ್ಪ ವಿಚಾರಾಂಶವಿದೆ. "ನ ಹಿ ದೃಷ್ಟಾಂತೇ ಸರ್ವಸಾಮ್ಯಂ" ಎಂದು.

ಇಂದ್ರಚಾಪ ಉದಾಹರಣವು ಜೀವನಿಗೆ ಅನುಪಾಧಿಕ ಪ್ರತಿಬಿಂಬದಲ್ಲಿ ಪ್ರತಿಫಲಿಸುವ ಇಂದ್ರಚಾಪ ರವಿರಶ್ಮಿಗೆ ಹೋಲಿಕೆ. ಸಾದೃಶ್ಯ ಉದಾಹರಣವು ಛಾಯಾ-ನೆಳಲು. ಪ್ರಕಾಶ ಕಿಂಚಿತ್ ತದಧೀನ-ತತ್‌ಸತ್ತಾ-ಅಧೀನ ವಿಷಯ ಉದಾಹರಣವು ಸಮಂಜಸವಾಗಿವೆ, ಹೊರತಾಗಿ ಬೇರೆ ಇವುಗಳ ವ್ಯತಿರಿಕ್ತ ಉಪಾಧಿ ಇಲ್ಲವೆಂದು ಎಲ್ಲ ಜ್ಞಾನಿಗಳ ಸಮ್ಮತ.

ಇಂದ್ರಚಾಪ ಪ್ರತಿಫಲಿಸಲು, ಸೂರ್ಯನ ಸಪ್ತವರ್ಣ ಕಿರಣಗಳ ಪ್ರಕಾಶವೇ ಕಾರಣ. ಅಲ್ಲಿ ಮೇಘಮಂಡಲ ಉಪಾಧಿಯಲ್ಲ. ಇಲ್ಲಿ ಬಹು ವಿಚಾರಾಂಶವಿದೆ.

೧. ಸೂರ್ಯನಲ್ಲಿ ಸಪ್ತವರ್ಣ ನಿತ್ಯವಾಗಿವೆ. ಅವುಗಳು ಕಿರಣದ್ವಾರಾ ಪೃಥಕ್ಕರಣವಾಗಿ, ನೀರು ತುಂಬಿದ ಮೋಡದಲ್ಲಿ ಆ ಕಿರಣಗಳು ಪಾತ ಆದರೆ

(ಪ್ರಸರಿಸಿದರೆ) ಏಳೂ ವರ್ಣಗಳಿಂದ ಯುಕ್ತವಾದ ಸೂರ್ಯನಂತೆ ದುಂಡಾದ ಪ್ರಕಾಶ ಬೀಳುತ್ತದೆ. ಇದು ಕನ್ನಡಿಯಂತೆ. ನೀರು ಉಪಾಧಿಯಿಲ್ಲ. ಹೇಗೆಂದರೆ:-

೨. ಒಂದು ಪ್ರಕಾಶಮಾನವಾದ ಗ್ಯಾಸ್ ಅಥವಾ ಎಲೆಕ್ಟ್ರಿಕ್ ಲೈಟಿನ ಪ್ರಕಾಶ ದೂರದಿಂದ ನೋಡಿದರೆ ಸುತ್ತಲೂ ರಶ್ಮಿಗಳು ವರ್ಣವರ್ಣಗಳಿಂದ ಕೂಡಿದವಾಗಿ ಕಾಣುವವಲ್ಲದೇ ಸುತ್ತಲೂ ಇಂದ್ರಚಾಪದಂತೆ ದುಂಡಾಗಿ ಕಾಣುವುದು. ಮತ್ತೂ

೩. ಮಧ್ಯಾಹ್ನ ಕಾಲ ಸೂರ್ಯಕಿರಣಗಳು ಗಿಡದ ನೆಳಲುಯುಕ್ತವಾದ ಭಾವಿಯಲ್ಲಿ ಬಿದ್ದಾಗ ಅಲ್ಲಿಯೂ ಸಪ್ತವರ್ಣಗಳು ತೋರುವವು. ಅಲ್ಲದೆ, ಸೂರ್ಯರಶ್ಮಿ ಪ್ರಖರವಿದ್ದಾಗ್ಗೆ ಒಟ್ಟಿ ಒಗೆಯಲು ಮೇಲೆ ಒಟ್ಟಿ ಎತ್ತಿ ಒಗಿಯು ವಾಗ್ಗೆ ನೀರಿನ ತುಂತುರುಗಳಲ್ಲಿ ಆ ಸೂರ್ಯನ ಪಂಚಸಪ್ತವರ್ಣಗಳು ನೀರಿನ ಹನಿಯಲ್ಲಿ ಪೃಥಕ್ಕರಣವಾಗಿ ತೋರುವುವು. ಇವೆಲ್ಲಕ್ಕೆ ಉಪಾಧಿ ಯಾವದು ?

೪. ಪಾರದರ್ಶಕ ಗಾಜು, ಬಳೆಚೂರು ಸೂರ್ಯನ ಎದುರಿಗೆ ಹಿಡಿದರೆ ಅಲ್ಲಿ ಸೂರ್ಯ ಕಿರಣಗಳು ಬಣ್ಣಬಣ್ಣವಾಗಿ ತೋರುವವು. ಪ್ರಕಾಶಕ್ಕೆ ಪ್ರಥಕ್ಕರಣವೇ ಹೊರ್ತಾಗಿ ಉಪಾಧಿ ಇಲ್ಲ.

೫. ಸೂರ್ಯನಂತೆಯೇ ಚಂದ್ರನಲ್ಲಿಯೂ ಈ ವರ್ಣಗಳು ನಿತ್ಯವಾಗಿವೆ. ರಾಕಾ ಚಂದ್ರಮನು ಇದ್ದಾನೆ. ಸ್ವಚ್ಛವಾದ ಮುಗಿಲು ಇದೆ. ಆಗ್ಗೆ ಮೋಡಗಳು ಅವು ಇರುವುದಿಲ್ಲ. ಚಂದ್ರನ ಸುತ್ತಲೂ ಚಂದ್ರನ ಸಮೀಪದಲ್ಲಿ ಪಂಚಸಪ್ತವರ್ಣಗಳಿಂದ ಕೂಡಿದ ದುಂಡಾಗಿ (ಕಾಮನ ಬಿಲ್ಲಿನಂತೆ) ಗುಡಿ ಕಟ್ಟುತ್ತದೆ. ಮತ್ತೂ ಕೆಲವು ವೇಳೆ ಚಂದ್ರಮನಿಗೆ ದೂರವಾಗಿ ಪಂಚವರ್ಣದಿಂದ ದುಂಡಾಗಿ ಕೆರೆ ಎಂತ ಕಟ್ಟುತ್ತದೆ. ಇದು ಪ್ರತ್ಯಕ್ಷ ನೋಡುತ್ತೇವೆ. ಇಲ್ಲಿ ಯಾವ ಉಪಾಧಿ ಇಲ್ಲ. ಚಂದ್ರಪ್ರಕಾಶ ಪೃಥಕ್ಕರಣವೇ ಕಾರಣ. ಇದಕ್ಕೆ ಸರಿಯಾದ ಪ್ರಮಾಣಗಳನ್ನು ಕೊಟ್ಟಿದೆ. ವಿಚಾರಗೈವುದು. ಮುಂದೆ ಬಿಂಬ ಪ್ರತಿಬಿಂಬಭಾವ ಪ್ರಮೇಯ ವಿಚಾರ ಮಾಡುವ.

**ಬ್ರಹ್ಮಸೂತ್ರ, ಭಾಷ್ಯ, ಟೀಕಾ, ಟಿಪ್ಪಣಿ ಪ್ರಮಾಣಗಳು**

**ಸೂತ್ರದೀಪಿಕಾ** ॥ ಓಂ ಆಭಾಸ ಏವ ಚ ॥ ಚಃ ಸಮುಚ್ಚಯೇ ।

ಯತೋ ಜೀವಪರಸ್ಯ ಆಭಾಸ ಏವ ಪ್ರತಿಬಿಂಬ ಏವ ಮತ್ಸ್ಯಾದಿಸ್ತು ನ ತಥಾ ಅತೋ ಅಪ್ಯುಕ್ತಸ್ಯ ನ ವ್ಯತ್ಯಾಸ ಇತ್ಯರ್ಥಃ.

**ತತ್ವಪ್ರದೀಪ** (ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯವಿರಚಿತ) "ಓಂ ಆಭಾಸ ಏವ ಚ ಓಂ" "ರೂಪಂ ರೂಪಂ ಪ್ರತಿರೂಪೋ ಬಭೂವ" ಪ್ರತಿಬಿಂಬೋ ಬಭೂವೇತ್ಯರ್ಥಃ. ತದಸ್ಯ ವಿಷ್ಣೋಃ ರೂಪಂ ಜೀವಸ್ಯ ದರ್ಶನಾಯ। ಯಥಾ ಪುರುಷೇ ಛಾಯಾಽತತಾ ತದ್ವದೇತಸ್ಮಿನ್ ವಿಷ್ಣಾವೇವ ವಿಶ್ವಮಾತತಮ್ ॥

"ತಮೇವಾದ್ಯಂ ಪ್ರಪದ್ಯೇ ನ ಯದಂಶಾಭಾಸಕೋ ಹ್ಯಯಮ್। ಜೀವರಾಶಿಸ್ಸಮಸ್ತೋಽಪಿ ಬ್ರಹ್ಮರುದ್ರೇಂದ್ರಪೂರ್ವಕಃ॥ **ಕಿಂಚಿತ್ಸಾದೃಶ್ಯ** ಮಾತ್ರೇಣ ಭಿನ್ನೋಽಪ್ಯಂಶ ಇವೋಚ್ಯತೇ॥ ಇತಿ ನಾರಾಯಣ ಶ್ರುತಿಃ॥

**ತತ್ವಪ್ರಕಾಶಿಕಾ** (ಭಾಷ್ಯಟೀಕಾ ಶ್ರೀಜಯತೀರ್ಥವಿರಚಿತ) ಆಭಾಸ ಏವೇತಿ॥ ಅಂಶತ್ವಾವಿಶೇಷೇಽಪಿ ಜೀವಾನಾಂ ಪ್ರತಿಬಿಂಬಾಂಶತ್ವಮಸ್ತಿ। ರೂಪಂ ರೂಪಮಿತಿ ಶ್ರುತೇಃ॥ ನ ಚ ತನ್ಮತ್ಸ್ಯಾದೀನಾಮತೋ ನೈಕವಿಧೇತಿ ಭಾವಃ। ಜೀವಸಮುದಾಯಪರಮೇಶ್ವರಸ್ಯ ರೂಪಂ ರೂಪಂ ಪ್ರತಿರೂಪೋ ಭೂತ್ವಾ ವರ್ತತೇ ತದ್ಬಿಂಬರೂಪಸ್ಯ ಮುಕ್ತ್ಯರ್ಥಂ ಸಾಕ್ಷಾತ್ಕಾರವಿಷಯೋ ಭವತಿ। ಸ ಚ ಪರಮೇಶ್ವರಃ **ಸ್ವಸಾಮರ್ಥ್ಯೇನಾನಂತಾನಂತಜೀವಬಿಂಬರೂಪೋ ಜಾಯತೇ**। ಅಸ್ಯ ಅನಂತಾನಿ ಹರಿನಾಮಕಾನಿ ರೂಪಾಣಿ **ವ್ಯೂಹಶಃ ಸಂತೀತಿ** ಪ್ರಸಿದ್ಧಮಿತ್ಯರ್ಥಃ। ಸೂತ್ರಾರ್ಥೇ ಸ್ಮೃತಿಂ ಚಾಹ ವಾರಾಹೇ ಚ॥ ಪರೇ ಸ್ವರೂಪಾಂಶಾಃ। ನ ಜೀವಸ್ಯ ಪರಮಾತ್ಮಾಂಶಂ ಯುಕ್ತಂ **ತದತಿರಿಕ್ತೋಪಾಧ್ಯಭಾವಾ** ದಿತ್ಯತ ಆಹ। ಸೋಪಾಧಿರಿತಿ। ಏವಮಂಶತ್ವೇನ ಶ್ರುತ್ಯಾದಿಸಿದ್ಧಸ್ಯ ಜೀವಸ್ಯ ಮತ್ಸ್ಯವದಂಶತ್ವಂ ನಾಸ್ತಿ। ಅತ ಏವಾನಂತಸ್ಮೃತಿರುತ್ಪನ್ನೇತ್ಯುಕ್ತಂ ಭವತಿ। ಇತ್ಯಾದಿ **ಶರ್ಕರಾ** ಶ್ರೀನಿವಾಸತೀರ್ಥೀಯಾ, 'ಓಂ ಆಭಾಸ ಏವ ಚ' ಜೀವ ಈಶಸ್ಯಾಭಾಸ ಏವ ಪ್ರತಿಬಿಂಬ ಏವ. ಮತ್ಸ್ಯಾದಿಸ್ತು ನ ತಥಾ ಅತೋಽಪಿ ನೋಕ್ತವ್ಯತ್ಯಾಸ ಇತ್ಯರ್ಥಃ। "ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ। ಇಂದ್ರೋ ಮಾಯಾಭಿಃ ಪುರು

ರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶೇತಿ" ಋಚಂ ವ್ಯಾಚಷ್ಟೇ। **ಜೀವಸಮುದಾಯ ಇತಿ**॥ ಶೃಷ್ವೇ ವೀರಮಿತ್ಯಾದಿ ತ್ರಿವಿಧ ಜೀವಸಂಘಸ್ಯ ಪ್ರಸ್ತುತತ್ವಾದೇವಮುಕ್ತಂ। ಮಾಯಾಭಿರಿತ್ಯಸ್ಯಾರ್ಥಃ ಸಾಮರ್ಥ್ಯೇನೇತಿ॥ **ಪುರುರೂಪ ಇತ್ಯಸ್ಯಾನಂತ ಬಿಂಬರೂಪ ಇತಿ**॥ ಯುಕ್ತಾ ಇತ್ಯಸ್ಯ ವ್ಯೂಹಶ ಇತಿ। ತದತಿರಿಕ್ತೇತಿ **ಸ್ವರೂಪಾತಿರಿಕ್ತೇತ್ಯರ್ಥಃ**। ಭಾಷ್ಯೇ ಛಾಯಾ ಪುರುಷಾಧೀನಾ ತಥೈತಜ್ಜೀವಜಾತಮೇತಸ್ಮಿನ್ನೀಶೇ, ಆತತಮಧೀನಮಿತ್ಯರ್ಥಃ॥

## ಭಾಷ್ಯಾರ್ಥಸಹಿತಸೂತ್ರಾರ್ಥ ಮಣಿಮಂಜರೀ

ಪ್ರತಿಬಿಂಬತ್ವೇ ಶ್ರುತಿಮುಪನ್ಯಸ್ಯ ಸೂತ್ರಂ ವ್ಯಾಚಕ್ಷತೇ। "**ರೂಪಂ ರೂಪಮಿತಿ**" ಇತೀತಿ ಶ್ರುತಿಸಿದ್ಧಪ್ರತಿಬಿಂಬತ್ವಾಚ್ಚೇತ್ಯರ್ಥಃ। ಜೀವಸ್ಯೇತಿ ವರ್ತತೇ। **ಸಾಮ್ಯಂ** ಮತ್ಸ್ಯಾದಿಸಾಮ್ಯಂ। **ಪ್ರತಿಬಿಂಬತ್ವೇ ಪೂರ್ಣಸಾಮ್ಯಂ ನೇತ್ಯತ್ರ ಸ್ಮೃತಿಮಾಹುಃ**। **ವಾರಾಹೇ ಚ** ದ್ವಿರೂಪಾವಿತಿ॥ ತತ್ರೇತ್ಯುಕ್ತೇಶ್ಚೇತ್ಯರ್ಥಃ। ಜೀವಸ್ಯ ಪ್ರತಿಬಿಂಬತ್ವಂ ನ ಯುಕ್ತಮುಪಾಧ್ಯಭಾವಾದಿತ್ಯತ ಆಹುಃ **ಸೋಪಾಧಿರಿತಿ**॥ **ಶ್ರುತಿರಿತ್ಯುಭಯತ್ರಾಪಿ ನಿರುಪಾಧಿಕಪ್ರತಿಬಿಂಬಮಾಹೇತಿ ಶೇಷಃ**। ಇದಮುಕ್ತಂ ಭವತಿ। ತತ್ಪ್ರತಿಬಿಂಬತ್ವಂ ಚ **ತದಧೀನ**ಸ್ವರೂಪಸತ್ತಾ ಕ್ರಿಯಾದಿಮತ್ವೇ ಸತಿ ತತ್ಸದೃಶತ್ವೇ ಸತಿ ಭಿನ್ನತ್ವಂ, ಸಾದೃಶ್ಯಂ **ಚ ತದೀಯಾವಯವಸಂಸ್ಥಾನವಿಶೇಷಸದೃಶಾವಯವಸಂಸ್ಥಾನವಿಶೇಷವತ್ವಂ**। ಇತ್ಯಾದಿ. ತತ್ಕಥಂ ಸಂಗತಿಃ ಸ್ಯಾದವಯವಸಾಮ್ಯಾಭಾವಾದಿತಿ ಚೇನ್ನ ಯಾವದವಯವಸಂಸ್ಥಾನಸಾಮ್ಯಾಭಾವೇಪಿ ಕರಚರಣಾದಿಸಾಮ್ಯಮಾದಾಯ ಪ್ರತಿಬಿಂಬತ್ವೋತ್ಪತ್ತೇಃ। ಯಾವದವಯವಸಂಸ್ಥಾನಸಾಮ್ಯಸ್ಯಾವಿವಕ್ಷಿತತ್ವಾದಿತಿ।

## ಮಧ್ವಸಿದ್ಧಾಂತಸಾರೇ

**ಅತ್ರ ದ್ವಿವಿಧ**ರೂಪಂ ರೂಪಂ ಪ್ರತಿರೂಪೋ ಬಭೂವ ಇತ್ಯತ್ರ, ಸ್ವರೂಪಾಂಶಾ, ಮತ್ಸ್ಯಾದಿಭಗವದನಂತರೂಪಾಃ **ಭಿನ್ನಾಂಶಾ ಅನೇಕ ಜೀವಸಂಘಃ ರೂಪಂ** ರೂಪಂ **ಪ್ರತಿರೂಪೋ ಬಭೂವ** ತದಸ್ಯ ರೂಪಂ ಪ್ರತಿಚಕ್ಷಣಾಯ। ಇಂದ್ರೋ ಮಾಯಾಭಿಃ ಪುರುರೂಪ ಈಯತೇ **ಯುಕ್ತಾ**

ಹ್ಯಸ್ಯ ಹರಯಃ ಶತಾದಶೇತಿ ಮಂತ್ರಃ. **ಶೃಣ್ವೇವೀರಮಿತ್ಯಾದಿನಾ** ಪ್ರಕೃತಃ ತ್ರಿವಿಧಜೀವಸಂಘಃ ಅಸ್ಯ ಪರಮಾತ್ಮನಃ ರೂಪಂ ರೂಪಂ ಪ್ರತಿರೂಪಃ ಪ್ರತಿ ಬಿಂಬೋ ಬಭೂವ ಭೂತ್ವಾ ವರ್ತತೇ, ತತ್ ಬಿಂಬರೂಪಂ ಅಸ್ಯ ಪ್ರತಿರೂಪತ್ವೇ ನೋಕ್ತಸ್ಯ **ಯೋಗ್ಯಜೀವಸ್ಯ, ಪರಿಚಕ್ಷಣಾಯ ಸಾಕ್ಷಾತ್ಕಾರಾಯ ಭವತಿ, ತದ್ವಿಷಯೋ ಭವತಿ.** ಸ ಚೇಂದ್ರಃ ಪರಮೇಶ್ವರಃ ಮಾಯಾಭಿಃ ಸ್ವಸಾಮರ್ಥ್ಯೈರಿಚ್ಛಾಭಿರ್ವಾ, ಪುರುರೂಪಃ ಅನಂತಜೀವಬಿಂಬರೂಪಃ ಈಯತೇ ಜ್ಞಾಯತೇ, ಅಸ್ಯ ಈಶ್ವರಸ್ಯ ಶತಾ ಅಜಿತಾದ್ಯನಂತ ರೂಪಾಣಿ, ದಶ ಶತಾನಿ, ವಿಶ್ವಾದಿಸಹಸ್ರರೂಪಾಣಿ, ಶತಾನಿ ನಾರಾಯಣಾದೀನಿ, ದಶ ಮತ್ಸ್ಯಾ ದೀನಿ, ದಶ ಬಹೂನಿ ಪರಾದೀನಿ, ಹರಯಃ ಹರಿನಾಮಕಾನಿ ರೂಪಾಣಿ, ಯುಕ್ತಾಃ ವ್ಯೂಹಶಃ ಸಂತಿ, ಹಿ ಪ್ರಸಿದ್ಧಮಿತ್ಯರ್ಥಃ। **ದ್ವಿರೂಪಾಣೀತಿ**। ಅಂಶ ಕಾವಿತಿ ಸ್ವಾರ್ಥೇ ಕಪ್ರತ್ಯಯಃ। ಪ್ರಾದುರ್ಭಾವಾಃ ಮತ್ಸ್ಯಾದ್ಯವತಾರಾಃ ಸ್ವರೂಪಾಣಿ ಸ್ವರೂಪಾಂಶಾಃ ಇತರಾಣಿ ಅಲ್ಪಸಾಮ್ಯವದ್ಭ್ಯೋ ಭಿನ್ನಾ ನೀತ್ಯರ್ಥಃ। **ಸೋಪಾಧಿರಿತಿ**॥ ಅಯಮರ್ಥಃ ಜೀವ ಈಶಸ್ಯಾನುಪಾಧಿಪ್ರತಿ ಬಿಂಬಃ ದೃಷ್ಟಾಂತಮಾಹ। **ಇಂದ್ರಚಾಪ ಇತಿ**॥ ದೃಷ್ಟಾಂತೇ ಬಿಂಬ ಅತಿರಿಕ್ತೋ ಪಾಧ್ಯಭಾವಃ। ದಾರ್ಷ್ಟಾಂತಿಕೇ ಪ್ರತಿಬಿಂಬಾಽತಿರಿಕ್ತೋಪಾಧ್ಯಭಾವ ಇತಿ ಭೇದ ಇತಿ ಜ್ಞೇಯಮ್॥ **ಯಥೈಷೇತಿ** (ಷ.ಪ್ರ. 3-3). ಯಥಾ ಪುರುಷಸ್ಯ ದೇಹಸ್ಯ ಛಾಯಾ, ಪುರುಷೇ ದೇಹೇ ಆತತಾ ತದಧೀನಾ ತತ್ಪ್ರತಿರೂಪಾ ತದ್ವತ್, ಏತಸ್ಮಿನ್ವಿಷ್ಣೌ ಏತತ್ ಪ್ರತಿಬಿಂಬರೂಪಂ ವಿಶ್ವಂ ಜೀವಜಾತಂ ವಾ ಆತತಂ ತದಧೀನಮ್ ವರ್ತತ ಇತ್ಯರ್ಥಃ॥

## ಭಾಷ್ಯದೀಪಿಕಾ ಪ್ರಮಾಣ

ಜೀವಸ್ವರೂಪಾತಿರಿಕ್ತಪ್ರತಿಬಿಂಬೋಪಾಧ್ಯಭಾವಾದಿತಿ॥ ಸೋಪಾಧಿ ರಿತಿಶಬ್ದೋಽಧ್ಯಾಹಾರ್ಯಃ। ಈಯತೇ ಜ್ಞಾಯತೇ. ಇಂದ್ರಚಾಪಃ ತತ್ಸಂ ಜ್ಞಿಕಾ ವೃಷ್ಟಿಸೂಚಕಧನುರಾಕೃತಿಃ ರವೇಃ ಸೂರ್ಯಸ್ಯ, ತತ್ತೇಜಸೋ ಯಥಾ ನಿರುಪಾಧಿಪ್ರತಿಬಿಂಬಃ ಬಿಂಬಾತಿರಿಕ್ತೋಪಾದಾನೋಪಾಧ್ಯಭಾವಾತ್। ಅತ ಏವ ನ ತಸ್ಯ ಸೂರ್ಯಸ್ಯಾತ್ಯಂತಸಾದೃಶ್ಯಮ್। ತಥಾ ಜೀವಾಃ ಪರಸ್ಯ ಹರೇಃ **ಅನುಪಾಧಿಃ** ಸ್ವರೂಪಾತಿರಿಕ್ತೋಪಾಧಿರಹಿತಪ್ರತಿಬಿಂಬ ಇತ್ಯರ್ಥಃ **ಅತ್ರ ದೃಷ್ಟಾಂತೇ ತು ಬಿಂಬಾತಿರಿಕ್ತೋಪಾಧ್ಯಭಾವಃ**। ದಾರ್ಷ್ಟಾಂತಿಕೇ

ತು **ಪ್ರತಿಬಿಂಬಾತಿರಿಕ್ತೋಽಪಾಧ್ಯಭಾವಃ** । ಅತಿರಿಕ್ತೋಽಪಾಧ್ಯಭಾವಸ್ತು ಉಭಯತ್ರ ಸಮ ಇತಿ ದ್ರಷ್ಟವ್ಯಮ್ ॥

ಸೋಪಾಧಿಪ್ರತಿಬಿಂಬಸ್ಯ ದರ್ಪಣಾದಿಪ್ರತಿಬಿಂಬತ್ವಂ ಪ್ರಸಿದ್ಧಮೇವೇತಿ ನೋದಾಹೃತಮ್ ॥

ಕೇಚಿತ್ತು ಸೋಪಾಧಿಪ್ರತಿಬಿಂಬಸ್ಯ ಇಂದ್ರಚಾಪಃ ಉದಾಹರಣಂ। ತಸ್ಯ ಚ ಮೇಘಮಂಡಲಂ ವಾ ಸೂರ್ಯತೇಜೋ ವಾ ಉಪಾಧಿಃ ಉಪಾದಾನಂ ಚ ತದೇವ ॥

ನಿರುಪಾಧಿಪ್ರತಿಬಿಂಬಸ್ಯ ತು ಜೀವ ಉದಾಹರಣಮಿತಿ ಯಥಾಶಬ್ದಂ ಅನ್ವೃತ್ಯ ವಾಕ್ಯದ್ವಯಮಪಿ ದೃಷ್ಟಾಂತಪರತಯಾ ಯೋಜಯಂತಿ ॥

ಬ್ರಹ್ಮಸೂತ್ರ, ಭಾಷ್ಯ, ಟೀಕಾ, ಟಿಪ್ಪಣಿಗಳಿಂದ ಸೂರ್ಯನಿಗೆ ಇಂದ್ರ ಚಾಪವು ಅನುಪಾಧಿಪ್ರತಿಬಿಂಬವು. ಇಲ್ಲಿ ಸೂರ್ಯಬಿಂಬ (ಪ್ರಕಾಶ) ವಿನಾ ಮತ್ತೊಂದು ಉಪಾಧಿ ಇಲ್ಲವೆಂದು ದೃಷ್ಟಾಂತ ಹೇಳಿದ್ದಾರೆ. ಇದರಂತೆಯೇ ದಾರ್ಷ್ಟಾಂತಿಕದಲ್ಲಿ (ಜೀವನೇ) ಪ್ರತಿಬಿಂಬಾತಿರಿಕ್ತ ಉಪಾಧಿ ಇಲ್ಲ. ಉಭಯತ್ರ ಸಮವೆಂದು ತೋರಿಸಲು ಅನುಪಾಧಿ ಎಂದು ಪೇಳಿದ್ದಾರೆ. ಪ್ರತಿಬಿಂಬನಾದ ಜೀವನು ಭಿನ್ನಾಂಶನು. ಬಿಂಬನಿಗೆ ಕಿಂಚಿತ್ (ಪ್ರಕಾಶಮಾನದಲ್ಲಿ) ಸದೃಶನು. ಪುರುಷಛಾಯಾವತ್ ಶ್ರೀಹರಿಯ ಅಧೀನನಾಗಿರುವನು.

ಜ್ಞಾನಿಗಳ ಅವಲೋಕನಾರ್ಥ ಸರ್ವಪ್ರಮಾಣಗಳನ್ನು ಒಂದೆಡೆ ಸಂಗ್ರಹಿಸಿದೆ. ಮತ್ತು ಸರ್ವಜ್ಞರ ಅನುವ್ಯಾಖ್ಯಾನ ಸುಧಾ ಪರಿಮಳಾದಿ ಗ್ರಂಥಗಳ ಪ್ರಮಾಣ ಉದಾಹರಿಸಲಾಗುವುದು.

## ಅನುವ್ಯಾಖ್ಯಾನ ಪ್ರಮಾಣಗಳು

ಶ್ರೀ ಸರ್ವಜ್ಞರು. ದ್ವಿತೀಯಾಧ್ಯಾಯ ತೃತೀಯಪಾದ **ಅನುವ್ಯಾಖ್ಯಾನ**= ಓಂ ಆಭಾಸ ಏವ ಚ ಓಂ. ಅಂಶಾಭಾಸಶ್ಚ ಸರ್ವೇಽಪಿ ಪರಸ್ಯಾಂಶಾ ನ ಮುಖ್ಯತಃ। **ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಮ್॥ ನ ತು ಪುಂಪಾದವತ್ಪಾದಾ ಜೀವಾ ಏತೇ ಪರಾತ್ಮನಃ** । ಪೂರ್ಣಾಸ್ತಸ್ಯ ಗುಣಾ ಏವ ಪ್ರಾದುರ್ಭಾವೇ ಯಥಾ ಸ್ಥಿತಾಃ॥ ಏವಂ ಜಗಾದ ಪರಮಾ ಶ್ರುತಿ

ನ್ನಾರಾಯಣಂ ಪರಮ್ । ಅಕ್ಷಯೋ ಭಗವಾನ್ ವಿಷ್ಣುಃ ಲಕ್ಷ್ಮ್ಯಾವಾಸೋ ಲಯೇ ಸ್ಥಿತಃ॥ ಮುಕ್ತೈಸ್ಸದಾ ಚಿಂತ್ಯಮಾನೋ ಬ್ರಹ್ಮಾದ್ಯೈಸ್ತಾರತಮ್ಯಗೈಃ। ಪ್ರಕೃತಿಃ ಪುರುಷಃ ಕಾಲೋ ವೇದಾಶ್ಚೇತಿ ಚತುಷ್ಟಯಮ್॥ ನಿತ್ಯಂ ಸ್ವರೂಪತೋ ವಿಷ್ಣೋರ್ವಿಶೇಷಾವಾಪ್ತಿಮಾತ್ರತಃ। ಉತ್ಪತ್ತಿಮದಿತಿ ಪ್ರೋಕ್ತಂ ಲಕ್ಷ್ಮೀಸ್ತದಭಿಮಾನಿನೀ ॥ ತತೋ ಜಾತಃ ಪುಮಾನ್ನಾಮ ಬ್ರಹ್ಮಾಸ್ಯಾಂ ವಾಸುದೇವತಃ। ಸೂತ್ರಾತ್ಮಾ ಪ್ರಾಣನಾಮಾ ಚ ದೇವ್ಯಾ ಪ್ರಕೃತಿಮಾನಿನೀ॥ ತತೋ ರೂಪಂ ಮಹನ್ನಾಮ ಬ್ರಹ್ಮಣೋಹಂಕೃತಿಃ ಶಿವಃ। ಬ್ರಹ್ಮಣೋ ಬುದ್ಧಿನಾಮ್ನೀ ಮಾ ತತ ಇಂದ್ರೋ ಮನೋಭಿಧಃ॥ ಸ್ಕಂದಶ್ಚ ತತ ಏವಾನ್ಯೇ ಸರ್ವೇ ದೇವಾಃ ಪ್ರಜಜ್ಞಿರೇ। ತತ್ರ ಪೂರ್ವತನಃ ಶ್ರೇಯಾನ್ ಗುಣೈಸ್ಸರ್ವೈ ಸಮಸ್ತಶಃ॥ ತೇಭ್ಯಶ್ಚ ಭಗವಾನ್ವಿಷ್ಣುಸ್ತದಧೀನಾ ಇಮೇ ಸದಾ। ಜನ್ಮಸ್ಥಿತಿಲಯಾಜ್ಞಾನನಿಯತಿಜ್ಞಾನಸಂಸೃತಿಃ॥ ಮೋಕ್ಷಸ್ಯ ತದಧೀನತ್ವಮೇತೇಷಾಂ ನೈವ ಹೀಯತೇ। ಮುಕ್ತಾವಪಿ ಸ ಏವೈಕಃ ಸ್ವತಂತ್ರಃ ಪೂರ್ಣಸದ್ಗುಣಃ॥ ಇತಿ

**ಶ್ರೀ ಪದ್ಮನಾಭತೀರ್ಥವಿರಚಿತಸನ್ನ್ಯಾಯರತ್ನಾವಳಿ**

(ಪುಟ ೩೨) **ಏವಮಿದಮಿತಿ। ಅತ್ರ ಚ ಯಥಾ ಸೂರ್ಯಾದೀನಾಂ ಸ್ವಸ್ವಾಂಶೈರತ್ಯಂತಾಭೇದಃ ಏವಂ ಮತ್ಸ್ಯಾದ್ಯವತಾರೈಃ ವಿಷ್ಣೋರತ್ಯಂತಾಭೇದಃ**। ಅತಸ್ತೈರತ್ಯಂತಾಭೇದೋ ವಿಷ್ಣೋರ್ನ ಜೀವೈಃ। ಸೂರ್ಯಾದಿಭಿನ್ನೈರನುಗ್ರಾಹ್ಯತ್ವಾತ್ತೇಭ್ಯೋ ಭಿನ್ನಾ ಏವ॥ ತಥಾ ಜೀವಾ ವಿಷ್ಣೋರ್ಭಿನ್ನಾಃ। ಏತದೇವೋಕ್ತಂ॥ **ಪ್ರಕಾಶಾದಿವನ್ನೈವಂ ಪರಃ**। ಅನುಜ್ಞಾಪರಿಹಾರೌ। ದೇಹಸಂಬಂಧಾಜ್ಜ್ಯೋತಿರಾದಿವದಿತಿ ಸೂತ್ರದ್ವಯೇನ। ಅತೋ ಮತ್ಸ್ಯಾದ್ಯವತಾರತುಲ್ಯತ್ವಾಭಾವಾಜ್ಜೀವಾನಾಂ ನ ತೇ ಮುಖ್ಯಾಂಶಾಃ **ಭಗವತಃ**। **ಕಿಂ ತ್ವಂಶಾಭಾಸಾ ಇತ್ಯಾಹ** ಅಂಶೇತಿ। ಅತ್ರ ಚ ಯಥೈಷೇತಿ ಶ್ರುತಿಃ ಪ್ರಮಾಣಮ್। **ಯಥೈಷಾ ಪುರುಷಸ್ಯ ಛಾಯೈವಮೇವ** ಜೀವಜಾತಮೇತಸ್ಯ ಪರಮಾತ್ಮನಃ ಛಾಯಾಭೂತಮಿತ್ಯರ್ಥಃ।

**ನಯಚಂದ್ರಿಕಾ ತ್ರೈವಿಕ್ರಮಾರ್ಯಕೃತಾ** । (ನಾರಾಯಣ ಪಂಡಿತಾಚಾರ್ಯರು). (ಪುಟ೩೬) "**ಆಭಾಸ ಏವ ಚೇತಿ**॥ ಸೂತ್ರಂ ವ್ಯಾಖ್ಯಾತಿ **ಅಂಶೇತಿ**। ತತ್ರ ಪ್ರಮಾಣಮಾಹ **ಯಥೇತಿ**। ಯಥೈಷಾ **ಪುರುಷಸ್ಯ**

ಛಾಯೊ ತಥೈವ ತಸ್ಮಿನ್ ಪರಮಾತ್ಮನ್ಯಾತತಮೇತತಜ್ಜೀವಜಾತಮ್ । ಪರಮಾತ್ಮನಃ **ಛಾಯೊಪ್ರತಿಬಿಂಬಭೂತಮಿತ್ಯರ್ಥಃ** ॥ ಏತೇ ಜೀವಾಃ ಪರಮಾತ್ಮನಃ ಪಾದಾ ಅಪಿ ಪುರುಷಪಾದವದಭಿನ್ನಾಃ ನ । ಕಿಂ ತ್ವತ್ಯಂತ ಭಿನ್ನಾಃ, ಏಕದೇಶಪರಿಮಿತಾಶ್ಚ । ವ್ಯಾಸನರಸಿಂಹಪ್ರಾದುರ್ಭಾವತಯಾ ಸ್ಥಿತಾಸ್ತು ತಸ್ಯ ಪರಮಾತ್ಮನೋ ಜ್ಞಾನವೀರ್ಯಾದಿಗುಣಾ ಏವ । ತಥಾಽಪಿ ಪ್ರತ್ಯೇಕಂ ಸರ್ವಗುಣಪೂರ್ಣಾಶ್ಚ । ತೇಷಾಂ ಬ್ರಹ್ಮಾದೀನಾಂ ಜನ್ಮಾದಯೋ ಧರ್ಮಾಃ **ಸದಾ ತದಧೀನಾಃ । ಏತೇಷಾಂ ಮೋಕ್ಷಾನಂತರಂ ಚ ತದಧೀನತ್ವಂ ನ ಹೀಯತೇ** ॥೧೮॥

ಅನುವ್ಯಾಖ್ಯಾನದಲ್ಲಿ ಶ್ರೀ ಸರ್ವಜ್ಞರು, ಬಿಂಬಬಿಂಬರೊಳಗೆ ಕೇವಲ ಬಿಂಬ ಶ್ರೀಹರಿಗೆ ಮುಖ್ಯ ಬಿಂಬನೆಂದು "ಶ್ರೀಬ್ರಹ್ಮವಾಯುಗಳು ಹರಿಗೆ ಪ್ರತಿ ಬಿಂಬರು". ಪುಷ್ಕರಾರಂಭಿಸಿ ಬ್ರಹ್ಮದೇವರಪರಿಯಂತವಾಗಿ ಉತ್ತಮರಾದ ಸಾಂಶದೇವತೆಗಳು ಒಬ್ಬರಿಗೊಬ್ಬರು ಬಿಂಬರು. (ಅವರ ದೇವತೆಗಳು ಉತ್ತಮರ ಅಧೀನರೆಂದು) ಇವರಿಗೆ ಕೇವಲ ಬಿಂಬ ಹರಿ ಎಂದು ತಿಳಿಸಿ, ನಿತ್ಯವಾದ ವಸ್ತು ಪ್ರಕೃತಿಃ ಪುರುಷಃ ಕಾಲಃ ವೇದಾಶ್ಚೇತಿ ಚತುಷ್ಟಯಂ ಎಂದು ಹೇಳಿದ್ದಾರೆ. ಇಲ್ಲಿ ಕಾಲದಲ್ಲಿ ದೇಶವು ಬಂದಿತು. ಪುರುಷ ಜೀವ ಇವರ ಅನಾದಿ ಕರ್ಮವು ಬಂದಿತು. ಹೀಗೆ ಒಟ್ಟಿಗೆ ೬ ನಿತ್ಯ ವಸ್ತುಗಳೆಂದು ಸರ್ವಜ್ಞರು ಎರಡನೇ ಪ್ರಮಾಣಗಳಲ್ಲಿ ಹೇಳಿದ್ದಾರೆ. ನಿತ್ಯವಾದ ಎಲ್ಲ ವಸ್ತುಗಳು ನಿತ್ಯದಲ್ಲಿಯೂ ಪರಮಾತ್ಮನ ಅಧೀನವಾಗಿರುತ್ತವೆಂದು ಸಾರಾಂಶ. ಪ್ರಕಾಶಾದಿ ಚಿನ್ಮಯ, ತತ್ ಸದೃಶತ್ವ ಛಾಯಾ ದೃಷ್ಟಾಂತ ತತ್ ಅಧೀನ ತದ್ಭಿನ್ನನೆಂದು ಎಲ್ಲ ಜ್ಞಾನಿಗಳ ವಚನಗಳು ಶಾಸ್ತ್ರಕ್ಕೆ ಅನುಕೂಲವಾದ ಪ್ರಮಾಣದಿಂದ ಕೂಡಿವೆ.

### ಶ್ರೀಮನ್ನ್ಯಾಯಸುಧಾ ಪುಟ ೪೫೨ (ಕುಂಭಕೋಣಪ್ರತಿ)

ಕಿಂ ನಾಮ ಭಿನ್ನಾಭಿನ್ನತ್ವಂ। ಅತ್ರಭೇದ ಔಪಾಧಿಕೋಽಭೇದಸ್ತು ಸ್ವಾಭಾವಿಕಃ। ಉಪಾಧಿಶ್ಚಾದ್ಯ ನಿರ್ವಾಚ್ಯಾ। ಇತ್ಯೇಕೇ। ಅನ್ಯೇ ತು ಸತ್ಯಮೇವಾಂತಃ। ಕುತ ಏತತ್। ದ್ವಾಸುಪರ್ಣಾ।

ಜೀವಸ್ಯೌಪಾಧಿಕ ಏವ ಪರಮಾತ್ಮನೋಽಭೇದಃ. ಭೇದಸ್ತು ಸ್ವಾಭಾವಿಕ ಇತಿ ವದತಾ ಚೇತನತ್ವಾದಿ। ಸಾದೃಶ್ಯಮಿತ್ಯುಪಲಕ್ಷಣಂ ತತ್ಪ್ರಧಾನಕತ್ವಾದ್ಯಪೀತಿ ದ್ರಷ್ಟವ್ಯಮ್ ॥

ಪ್ರಕಾರಾಂತರೇಣಾಂಶತ್ವಸ್ಯ ನಿರ್ವಕ್ತುಮಶಕ್ಯತ್ವಾತ್ 'ಸಾದೃಶ್ಯಂ ಚೇತಿ' ಅಸ್ಯ ಜೀವಸ್ಯ ಪರಮೇಶ್ವರಾಂಶತ್ವಾತ್ತು ತತ್ಸಾದೃಶ್ಯಂ ಚ ಶಬ್ದತದಧೀನಸತ್ತಾದಿಮತ್ವಂ ಚೇತ್ಯರ್ಥಃ ॥ ಅನೇನ ಪ್ರಕಾಶಾದಿವನ್ನೈವಂ ಪರ ಇತ್ಯಸ್ಯ ತಾತ್ಪರ್ಯಮುಕ್ತಂ ಭವತಿ ॥

**ಸೂರ್ಯೇತಿ** ॥ ಸೂರ್ಯಮಂಡಲಾಭಿಮಾನೀ ಅಂಶೀ ಸೂರ್ಯಸ್ತತ್ಪ್ರಕಾಶಾಭಿಮಾನಂ ವಾಂತಶ್ಚೈಕ ಏವ। ಯಥೇತಿ ಸರ್ವತ್ರಾನ್ವೀಯತೇ। ಅಥ ಶಬ್ದಃ ಸಮುಚ್ಚಯೇ ॥

ದಾರ್ಷ್ಟಾಂತಿಕಂ ದರ್ಶಯತಿ। ಏವಮೇವೇತಿ ಭಗವಾನ್ ವಿಷ್ಣುರಂಶೀ-ನಾನಾವತಾರರೂಪೇಣ ಸ್ಥಿತೋಂಶಶ್ಚೈಕ ಏವೇತಿ ಯೋಜನಾ। ಅಪ್ಯಯಃ ಸದಾಪೂರ್ಣಗುಣ ಇತ್ಯಾಗಾಮಿಸೂತ್ರಾನುಸಾರೇಣ ಭೇದೋಪಪಾದನಮ್ ॥

ವಿಭಿನ್ನಾಂಶದೃಷ್ಟಾಂತವಿವರಣಪೂರ್ವಕಂ ದಾರ್ಷ್ಟಾಂತಿಕಂ ವಿವೃಣೋತಿ॥

ಮುಖ್ಯಾಂಶತ್ವಂ ಚೇದ್ಧೇತುಸ್ತದಾಸಿದ್ಧಿರಿತಿ ಪ್ರತಿಪಾದಯ**ದಾಭಾಸ ಏವೇತಿ ಸೂತ್ರಂ** ವ್ಯಾಚಷ್ಟೇ। ಅಂಶೇತಿ। ಸರ್ವೇಽಪಿ ಜೀವಾಃ ಜೀವಾನಾಮಂಶಾಭಾಸತ್ವಂ ಶ್ರುತ್ಯಂತರೇಣ ದ್ರಢಯತಿ। ಯಥೇತಿ ॥

## ಶ್ರೀ ರಾಘವೇಂದ್ರ ಗುರುಸಾರ್ವಭೌಮ ಕೃತಪರಿಮಳ

ಪುಟ ೧೬೨ರಿಂದ ಅಲ್ಲಲ್ಲೇ ಉಪಯುಕ್ತ ಪ್ರಮಾಣಗಳು

**ಯಥೋಕ್ತಮಿತಿ** ಭಾಷ್ಯೇ ತದಧೀನಸತ್ತಾದಿಕಂ। ಸತ್ತಾಪ್ರತೀತಿಪ್ರವೃತ್ತಿಮಿತ್ಯರ್ಥಃ। **ಏತೇನೇತಿ**। ತದಧೀನಸತ್ತಾದಿಕತ್ವಸಂಗ್ರಾಹಕಚಶಬ್ದಪ್ರಯೋಗೇಣೇತ್ಯರ್ಥಃ॥ ತತ್ರಹಿ ಜೀವೋ ನ ಜ್ಞಾನಸುಖಾದಿರೂಪೋಧುನಾನುಪಲಂಭಾದಿತಿ ಪ್ರಾಪ್ತೇ ಅಪತ್ಯೋತ್ಪಾದಕತ್ವರೂಪಂ ಪುಂಸ್ತ್ವಂ ಸ್ತ್ರೀತ್ವಂ ಸದಪಿ ಬಾಲ್ಯೇಽನುಪಲಭ್ಯಮಾನಂ ಯೌವನೇ ಅಭಿವ್ಯಜ್ಯತೇ

ತದ್ವತ್ ಸಂಸಾರದಶಾಯಾಂ ಸತೋಪಿ ಜ್ಞಾನಾದ್ಯಾತ್ಮಕತ್ವಭಗವತ್ ಸಾದೃಶ್ಯಸ್ಯ ಮುಕ್ತಾವಭಿವ್ಯಕ್ತಿಸಂಭವಾಜ್ಜ್ಞಾನಾನಂದಾತ್ಮಕತ್ವರೂಪಭಗವತ್ ಸಾದೃಶ್ಯವಾನಿತಿ ಪ್ರತಿಪಾದನಾದ್ಗತಾರ್ಥಮಿತಿ ಶಂಕಾ ನಿರಸ್ತಾ ||

**ತದಧೀನಸತ್ತಾ**ದಿಕತ್ವೇ ಸತಿ ತತ್‌ಸದೃಶತ್ವಂ ಅಂಶತ್ವಮಿತ್ಯಸ್ಯಾನ್ಯತ್ರ ಸಿದ್ಧೇರಿತಿ ಭಾವಃ ||

ಪುರೋವದುಭಯಥೇತಿ || ಜ್ಞಾನಾನಂದಾತ್ಮಕತ್ವರೂಪಕಿಂಚಿತ್‌ಭಗವತ್ ಸಾದೃಶ್ಯಯುಗಿತಿ ವಾ ಮತ್ಸ್ಯಾದಿರೂಪಮುಖ್ಯಾಂಶೋ ಯಥಾ ಸತ್ತಾವಾನ್ ತಥಾ ಜೀವೋಪಿ ಸತ್ತಯಾ ಮುಖ್ಯಾಂಶಸಾದೃಶ್ಯಯುಗಿತಿ ವೇತಿ ವ್ಯಾಖ್ಯೇಯ ಮಿತ್ಯರ್ಥಃ ||

**ಏವಂ ಜೀವಾ ಯಥೇತಿ** || ಕಿಂಚಿತ್‌ಸಾದೃಶ್ಯವಾಕ್ಯಾನಂತರಂ ಜೀವಾ ಯಥೇತಿ ದೃಷ್ಟವ್ಯಮಿತ್ಯರ್ಥಃ ||

**ಉಭಯತ್ರೇತಿ** || ಸ್ವರೂಪಾಂಶತ್ವಭಿನ್ನಾಂಶತ್ವಮತಯೋಃ ಸೌರ ಪ್ರಕಾಶಾಕ್ಷ್ಣೋಃ ಉಭಯತ್ರ ಯಥಾ ಅಮೃತಸಮುದ್ರಮೂತ್ರಯೋರ್ದ್ವಯೋಃ ಜಡತ್ವೇನಾಂಶವಿಕಾರತಯಾಂಶಿನಾ ಭೇದಾಭೇದತ್ವಮಿತಿ ಭಾವಃ ||

**ತಥೇತಿ**|| ಏತಸ್ಮಿನ್ ಇತ್ಯನುವಾದಃ | ಪುರುಷೋತ್ತಮ ಇತಿ ವ್ಯಾಖ್ಯಾ | ಆತತಮಿತ್ಯಸ್ಯ ತದಧೀನತಯಾ ವರ್ತಮಾನಮೇವೇತ್ಯರ್ಥಃ ||

**ತತ್ರಾಪೀತಿ** | ಮುಕ್ತಾವಪೀತ್ಯರ್ಥಃ | ಪರಾಧೀನವಿಶೇಷಾವಾಪ್ತಿ ರೂಪೋತ್ಪತ್ತಿಮಿತ್ಯರ್ಥಃ | ಪ್ರಾಣನಾಮಾ ಕದಾ ಕಸ್ಮಾಜ್ಜಾತ ಇತ್ಯತಃ || ತತ್ ಇತಿ ಪದಮಾವೃತ್ಯ ದ್ವೇಧಾರ್ಥಮಾಹ |

ಇಂತು ಪರಿಮಳದಲ್ಲಿ ವಿಸ್ತರಿಸಿ ವಿಶೇಷವಾಗಿ ಬಿಂಬಪ್ರತಿಬಿಂಬಭಾವ ನ್ಯಾಯಮುಕ್ತಾವಳಿಯಲ್ಲಿ ಹೇಳಿರುವೆವೆಂದು ಅಪ್ಪಣೆ ಕೊಟ್ಟಿದ್ದಾರೆ. ಪದ್ಯದಡಿ ಯಲ್ಲಿ ಆ ಪ್ರಮಾಣ ಉದಾಹರಿಸಿದೆ.

**ಬಿಂಬಪ್ರತಿಬಿಂಬಶಾಸ್ತ್ರಾರ್ಥಸಾರಪ್ರಮೇಯವಿಚಾರಾಂಶ**

**ಜೀವನಸ್ವರೂಪದೇಹದ ಅವಯವಗಳಲ್ಲಿ ಶ್ರೀಹರಿಯು ಚಿನ್ಮ** ಯಾವಯವಗಳೇ ಜೀವನಸ್ವರೂಪ ಅಸ್ತಿತ್ವಕ್ಕೆ ನಿತ್ಯವಾಗಿದೆ,

೧. "ತದಧೀನಸ್ವರೂಪಸತ್ತಾಕ್ರಿಯಾದಿಸತ್ವೇ ಸತಿ ತತ್ಸದೃಶತ್ವೇ ಸತಿ ಭಿನ್ನತ್ವಂ. ಸಾದೃಶ್ಯಂಚ ತದೀಯಸಾವಯವಸಂಸ್ಥಾನವಿಶೇಷಸದೃಶಾವಯವ ಸಂಸ್ಥಾನವಿಶೇಷವತ್ವಂ" ಎಂದು ಹಿಂದೆ ಭಾಷ್ಯ ಟಿಪ್ಪಣಿಗಳಲ್ಲಿ ಉದಾಹರಿಸಿದಂತೆ ಅಪರೋಕ್ಷಜ್ಞಾನಿಗಳೂ, ದೇವಾಂಶರೂ ಆದ **ಶ್ರೀವಿಷ್ಣುತೀರ್ಥರು.**

೨. **ಅಡಿವಿಸ್ವಾಮಿಗಳವರು. ಷೋಡಶೀಗ್ರಂಥ.** ಬಿಂಬಪ್ರತಿಬಿಂಬ 3ನೇ ಪ್ರಕರಣದಲ್ಲಿ "ತಸ್ಮಿನ್ ಜೀವೇ ವಿಷ್ಣುಃ ಹರಿನಾಮಕೇನ ಬಿಂಬರೂಪೇಣ ಮುಖೇ ಮುಖಮಿತ್ಯನೇನ ಕ್ರಮೇಣ ವರ್ತತೇ। ತಸ್ಯೋಪಾಧಿಃ ಪ್ರತಿಬಿಂಬಶ್ಚ ಜೀವ ಏವ। ಸ ಚ ಪ್ರತಿಬಿಂಬಸ್ವಾಭಾವ್ಯಾತ್ **ಸ್ವಾತ್ಮಾನಂ ಬಿಂಬಾಭಿಮುಖೇನೈವ ಪಶ್ಯತಿ॥ ಪ್ರಶ್ಯನ್ನಪಿ ಸ್ವಸ್ಯೈವ ಉಪಾಧಿತಯಾ ಸ್ವಸ್ಮಿನ್ನೈವ ಪಶ್ಯತಿ।** ಬಿಂಬೋಪ್ಯಯಂ, ನ ತು ಸಾಕ್ಷಾತ್ ಕಿಂ ತು ಪುಷ್ಕರೋನಾಮ ಸರ್ವದೇವಾವರೋ ದೇವಮಾರಭ್ಯ ತಾರತಮ್ಯೇನ ಬ್ರಹ್ಮಪರ್ಯಂತಂ ಸ್ವಾತಂತ್ರ್ಯಮ್ಯುತ್ತರೋತ್ತರಮಧಿಕಂ ದತ್ವಾ ವಿಜಯತೇ. ಎಂದು ಹೇಳಿದ್ದಾರೆ. ಜೀವನ ಮುಖದಲ್ಲಿ ಶ್ರೀಹರಿಯ ಬಿಂಬನ ಮುಖ ಕಣ್ಣಿನೊಳಗೆ ಕಣ್ಣು ಇತ್ಯಾದಿ ಕ್ರಮದಿಂದ ಇರುವದೆಂದು ಶ್ರೀ ಗೋಪಾಲದಾಸರಾಯರು, ಸುಳಾದಿ-೧೨ ಪುಟ ೪೭ ರಲ್ಲಿ.

೩. "ಎನ್ನಯ್ಯಾ ಎನ್ನಯ್ಯಾ ಏ ದೇವನೆ। ಕಣ್ಣಿನೊಳಗೆ ಕಣ್ಣು, ಕರ್ಣದೊಳಗೆ ಕರ್ಣ। ಬೆನ್ನಿನೊಳಗೆ ಬೆನ್ನು ಇನ್ನು ಕಾಲೊಳು ಕಾಲು ಎನ್ನ ಆಕಾರದೊಳೆಲ್ಲ ವ್ಯಾಪಿಸಿ ಇಪ್ಪ। ಚಿನ್ನುಮಯ ಜ್ಞಾನಾನಂದ ನಿರ್ದೋಷ ಪೂರ್ಣ। ಭಿನ್ನಕಾಮರಹಿತಾ ಗೋಪಾಲವಿಠ್ಠಲ। ನಿನ್ನವರವನಯ್ಯಾ ಬಿನ್ನಪ ಚಿತ್ತೈಸು॥ ಎಂದು ಶ್ರೀಹರಿಯು ಬಿಂಬನಾಗಿ ನಿತ್ಯಜೀವನದಲ್ಲಿ ತಾನಿರುವ ಕ್ರಮನ್ನು ಶ್ರುತಿಗೆ ವ್ಯತ್ಯಾಸಬಾರದಂತೆ ತಿಳಿಸಿರುತ್ತಾರೆ.

೪. ಶ್ರೀ ಗುರು ವಿಜಯವಿಠ್ಠಲರು "ಆಲಿಸಿ ಕೇಳುವುದು" ಎಂಬ ೧ನೇ ಸುಳಾದಿ ತ್ರಿವಿಡಿ ತಾಳ ಪುಟ ೯ರಲ್ಲಿ "ತನುವಿನೊಳಗೆ ಹೊರಗೆ ವಿಭಕ್ತಅವಿಭಕ್ತ ಅಣುಮಹದ್ರೂಪಹರಿ ವಾಸವಕ್ಕು। ಮುನಿಗಳ ಮತವಿದು ಸಂದೇಹಬಡಸಲ್ಲ। ಮನದಿ ಚಿಂತಿಸು ಈ ಶೂನ್ಯಾಭಿದನ **ವ। ದನದ ಮೇಲೆ ವದನ** ಶ್ರೋತ್ರದ ಮೇಲೆ ಶ್ರೋತ್ರ ನ। ಯನದ ಮೇಲೆ ನಯನ ಈ ಕ್ರಮದಿಂದಲಿ। ತನುಸಮಸ್ತ

ದಲ್ಲಿ ಹರಿತನ್ನ ಅಂಗದಿಂದ । ಅನುಸಾರವಾಗಿ ಆಶ್ರಯವಾಗಿಪ್ಪ । ಕ್ಷೋಣಿಯೊಳಗೆ ಈ ರೂಪ ಅನಪೇಕ್ಷದಿಂದ । ತನುವು ನಿಲ್ಲದೈಯ್ಯ ವಿಧಿಗಾದರೂ । ಅನುಮಾನ ಇದಕಿಲ್ಲ ಶ್ರುತ್ಯುಕ್ತವೋ ॥ ಎಂದು ಶ್ರುತಿಗಳ ಅರ್ಥವನ್ನೇ ಬಿಂಬ ಪ್ರತಿಬಿಂಬಭಾವದಲ್ಲಿ ತೋರಿಸಿದ್ದಾರೆ. ಶ್ರೀ ಬ್ರಹ್ಮಸೂತ್ರಭಾಷ್ಯ ೪ನೇ ಅಧ್ಯಾಯದಲ್ಲಿ "ಹರಿಪಾದಾಭ್ಯಾಂ ಗಚ್ಛಾಮಿ" ಇತ್ಯಾದಿ ಮುಕ್ತಜೀವರ ಸ್ವರೂಪದಲ್ಲಿಯೂ ಇದೇ ರೀತಿಯಿಂದ ಸಂತತವಾಗಿರುವನು. ಇದನ್ನನುಸರಿಸಿಯೇ "ಹರಿಯಿಂದ ನುಡಿವರು, ಹರಿಯಿಂದ ಕೇಳ್ವರು, ಹರಿಯಿಂದ ನಡೆವರು" ಎಂದು ದಾಸರಾಯರು ಹೇಳಿದ್ದಾರೆ. ಜೀವನಸ್ವರೂಪೇಂದ್ರಿಯದಲ್ಲಿ ತಾನು ತನ್ನ ಚಿನ್ಮಯ ಅವಯವಗಳನ್ನಿಟ್ಟು ಪ್ರೇರಿಸಿ, ಬಾಹ್ಯೇಂದ್ರಿಗಳಿಂದ ಸೃಷ್ಟಿಯಲ್ಲಿಯೂ, ಸ್ವರೂಪೇಂದ್ರಿಯಗಳಿಂದ ಮುಕ್ತಿಯಲ್ಲಿಯೂ ಜೀವನಿಂದ ಕ್ರಿಯಾ ಮಾಡಿಸುತ್ತಾನೆ.

೫. ಇದನ್ನೇ ಶ್ರೀ ವ್ಯಾಸತತ್ವಜ್ಞರು ಮಾನಸಸ್ಮೃತಿಯಲ್ಲಿ ಜೀವನ ಯಾವಾವ ಅವಯವಗಳಲ್ಲಿ ಯಾವಾವ ರೂಪಗಳಿಂದ ಇದ್ದು ಪ್ರೇರಿಸುವನೆಂದು ವಿಸ್ತರಿಸಿ ಹೇಳಿದಂತೆಯೇ ಶ್ರೀ ಅಪರೋಕ್ಷಜ್ಞಾನಿಗಳಾದ ಶ್ರೀ ಪ್ರಾಣೇಶ ದಾಸರು (ಹೃದಯಮಂದಿರಪದ) "ಜೀವಕೇಶ ಸಹಸ್ರ ಭಾಗದೊಳು ವಂದಂಶ । ದೀ ಪೊಪ್ಪುವನು ಸರ್ವ ಅವಯವಗಳಿಂದ ॥ ವಾಸುದೇವನೆ ಹರಿಗೆ ಶಿರವೆನಿಪ ನಾಶಿರವು । ಈ ಶರೀರಿಗೆ ಶಿರವು ನಾರಾಯಣಾ । ಭಾಸಿಸುವಮಧ್ಯಮಧ್ಯ ದೇಹದೊಳಿಹದು, ಪ್ರದ್ಯುಮ್ನ । ಶ್ರೀಶನಾ ಬಲಭಾಗ ಬಲದೊಳಿಹದು ॥೧೨॥ ವಾಮಹರಿಗನಿರುದ್ಧ ಜೀವನೆಡದಲ್ಲಿ । ಸ್ವಾಮಿಪದ ಸಂಕರುಷಣಿದದೊಳಹದು (ಪಾದದಲ್ಲಿ) ರಾಮವಾಗೇಂದ್ರಿದೇವಗೆ ವಾದ್ದೊಳಿಹ, ನೃಹರಿ । ಶ್ರೀರಮಾ ಮನೋರಮಗೆ ಘ್ರಾಣ ಜೀವಘ್ರಾಣ ॥೧೩॥ ಹರಿನೇತ್ರ ಕಪಿಲ ಜೀವನ ಕಣ್ಣಿನಲ್ಲಿಹ ವಿ । ವರ ತಿಳಿವದೀ ಜೀವನ ಅಂಗಧನಣೀ ॥ ವರರಮ್ಯವಾದ ಜೀವನ ಹೃತ್ಕಮಲಶ್ವೇತ । ವರಣಷ್ಟಪತ್ರ ಉಳ್ಳದು ತಿಳಿವುದು ॥೧೪॥ ಅಲ್ಲಿದ್ದ ಹರಿಗಾತ್ಮಜೀವಹೃದಯವೆಂಬುವರು ॥ ಈ ಪ್ರಕಾರ ಜೀವನಸ್ವರೂಪಾಯವದಲ್ಲಿ ಭಗವಂತನ ಸ್ವರೂಪಾವಯವರೂಪ ಉಂಟೆಂದು ಇನ್ನು ಅನೇಕ ಪ್ರಮಾಣಗಳಿವೆ. ಇದಲ್ಲದೆ ಶ್ರೀ ವಿಷ್ಣುತೀರ್ಥರು ಹೇಳಿದಂತೆ (ಮೇಲೆ ವಿವರಿಸಿದೆ) "ತಸ್ಯೋಪಾಧಿಪ್ರತಿಬಿಂಬಶ್ಚ ಜೀವ ಏವ । ಸ ಚ ಪ್ರತಿಬಿಂಬಸ್ವಾಭಾವ್ಯಾತ್ ಸ್ವಾತ್ಮಾನಂ ಬಿಂಬಾಭಿಮುಖೇನೈವ ಪಶ್ಯತಿ। ಪಶ್ಯನ್ನಪಿ ಸ್ವಸ್ಯೈವ

**ಉಪಾಧಿತಯಾ ಸ್ವಸ್ಮಿನ್ನೇವ ಪಶ್ಯತಿ॥** ಎಂದು ಬಹುರಹಸ್ಯವಾದುದನ್ನು ವಿವರಿಸಿದ್ದಾರೆ. ಇದೆ ಬಿಂಬ ಪ್ರತಿಬಿಂಬದ ಗುಟ್ಟು ರಹಸ್ಯ ಇದೇ ಸಿದ್ಧ ಪ್ರಮೇಯ.

"ಜೀವಾಃ ನಿತ್ಯಾಃ ನಿತ್ಯಬಿಂಬೋಪಾಧಿಸನ್ನಧಿಕತ್ವಾತ್" ಬಿಂಬೋಪಾಧಿ ತತ್ ಸನ್ನಿಧಿಃನಾಂ ನಾಶಾಭಾವೇನ ಇತ್ಯಾದಿ "ಗೀತಾವಿವೃತಿ". ನಿತ್ಯಬಿಂಬನ ಸನ್ನಿಧಿ ಜೀವನ ಸ್ವರೂಪಾಪೋಧಿಯಲ್ಲಿರುವುದರಿಂದ ಜೀವನು ನಿತ್ಯನೆಂದು ಅಪ್ಪಣೆ ಕೊಡಿಸಿದ್ದಾರೆ.

ಬಿಂಬರೂಪಿ ಹರಿಯ ಸನ್ನಿಧಿ ನಿತ್ಯವು ಜೀವನಸ್ವರೂಪಾವಯವದಲ್ಲಿ ತನ್ನ ಅವಯುವಗಳನ್ನು ಇಟ್ಟು, ಹರಿಯು ನೋಡಿದಾಗ್ಯೂ "**ಸ್ವಸ್ಯೈವ ಉಪಾಧಿತಯಾ ಸ್ವಸಿನ್ನೇವ ಪಶ್ಯತಿ॥** ತನ್ನಬಿಂಬನ ಉಪಾಧಿಯಿಂದಲೇ ತನ್ನನ್ನೇ ನೋಡುತ್ತಾನೆ.

ಹೇಗೆಂದರೆ, ಜೀವಾಂತರ್ಯಾಮಿ ಬಿಂಬರೂಪಿ (ಅಂತರಾತ್ಮ) (ಹರಿ ಶಬ್ದವಾಚ್ಯನೆಂದು ಶ್ರೀ ಟೀಕಾರಾಜರ ವಚನ) ಹರಿಯು, ತಾನು ಅಂತರ್ಗತನಾಗಿದ್ದರೂ, ಜೀವನಸ್ವರೂಪೇಂದ್ರಿಯ ಅಸ್ತಿತ್ವಸನ್ನಿಧಿಗೆ ತಾನೇ ಉಪಾಧಿಯಾಗಿಪ್ಪ ಆತ್ಮನಾಮನನ್ನು ನೋಡುತ್ತಾನೆ. ಶ್ರೀಹರಿಯು ತನಗೆ ತಾನೆ ನಿತ್ಯ ಉಪಾಧಿಯೇ? ಹೌದು. ಜೀವರುಗಳು ಸಕಲ ಕಾಲಗಳಲ್ಲಿ ನಿತ್ಯರಾಗಿರುವದಕ್ಕೆ ಇದೇ ಕಾರಣ. ಜೀವರು ಚಿನ್ಮಯರು ನಿತ್ಯರು. ಬಿಂಬರೂಪಿ ಹರಿ ಸಚ್ಚಿನ್ಮಯ ಸರ್ವದೇಶಕಾಲಗುಣಪೂರ್ಣನ ಆಧೀನರಾಗಿದ್ದಾರೆ. ಮೂಲ ಜೀವರ ಸ್ವಭಾವ ಧರ್ಮವನ್ನನುಸರಿಸಿ ಸಾತ್ವಿಕರು, ರಾಜಸರು, ತಾಮಸರೆಂದು ಅನಾದಿನಿತ್ಯರಾಗಿದ್ದಾರೆ. ಮೂರು ಸ್ವಭಾವವುಳ್ಳ "ಜೀವಸ್ವರೂಪ ದೇಹಕ್ಕೆ, ಉಪಾಧಿಗೆ (೧) ಸಾತ್ವಿಕರಿಗೆ ಶ್ರೀದ್ವಾರಾ ವಿಶ್ವನಾಮಕ ಹರಿಯು ತಾನೇ ಆತ್ಮನಾಮದಿಂದ ಜೀವನಸ್ವರೂಪ ವ್ಯಾಪಿಸಿದ್ದಾನೆ. (೨) ಮಿಶ್ರಸುಖ ಮಿಶ್ರದುಃಖ ಸ್ವಭಾವವುಳ್ಳ ರಜೋಧರ್ಮವುಳ್ಳ ಜೀವರಿಗೆ ಭೂದ್ವಾರಾ ತೈಜಸನು ರಕ್ತವರ್ಣವಿಶಿಷ್ಟನಾಗಿ ಉಪಾಧಿಯಾಗಿದ್ದಾನೆ. (೩) ತಮಃಸ್ವಭಾವವುಳ್ಳ ಜೀವರ ಸ್ವರೂಪಕ್ಕೆ, ದುರ್ಗಾದ್ವಾರಾ ಪ್ರಾಜ್ಞ ಕಪ್ಪು (ನೀಲ) ವರ್ಣದಿಂದ ಉಪಾಧಿಯಾಗಿ ನಿತ್ಯಸನ್ನಿಧಿಯಿಂದ. ಆತ್ಮನಾಮದಿಂದ ಜೀವರ ಸ್ವರೂ

ಪಕ್ಕೆ ನಿತ್ಯತ್ವ ಬಂದಿವೆ. ಏಕೆಂದರೆ ಶ್ರೀಹರಿಯು ಸದಾನಿತ್ಯನಾದುದರಿಂದ ತತ್ ಸನ್ನಿಧಾನದಿಂದ ಪರಾಧೀನನಾದ ಜೀವನು ನಿತ್ಯ. ಏಕಂದರೆ ಹರಿಯು ಅನಂತ ಕೋಟಿ ಸೂರ್ಯಪ್ರಕಾಶನಾದಾಗ್ಯೂ ಶುಕ್ಲ, ಲೋಹಿತ, ಕೃಷ್ಣ, ಪೀತಾದಿ ಸ್ವರೂಪ ವರ್ಣಗಳಿಂದ ಯುಕ್ತನಾಗಿದ್ದಾನೆಂದು ಶ್ರುತಿ ಶಾಸ್ತ್ರಗಳು ಹೊಗಳುತ್ತವೆ. (ಉದಾಹರಣೆ ಏಕದೇಶೀಯು) ಲೋಕದಲ್ಲಿ ಒಂದು ಪ್ರಕಾಶಮಾನವಾದ ದೀಪ ಶುಭ್ರವಾಗಿರುತ್ತದೆ. ಅದಕ್ಕೆ ಪೂರ್ವಕಾಲದ ಸಂಪ್ರದಾಯದಂತೆ ಒಂದು ಕಂದೀಲು ಅಷ್ಟ ಫೈಲು. ಅದಕ್ಕೆ ಶುಕ್ಲ, ಹಳದಿ, ಹಸುರು, ಕೆಂಪು, ನೀಲಿ ಮುಂತಾದ ಗಾಜುಗಳನ್ನು ಜೋಡಿಸಿಡುತ್ತಿದ್ದರು. ಆ ಗಾಜುಗಳಲ್ಲಿ ಒಳಗಿನ ಪ್ರಕಾಶಮಾನವಾದ ದೀಪ, ಹೊರಗೆ ಬಿಳುಪು, ನೀಲಿ, ಹಸರು, ಹಳದಿ ವರ್ಣಗಳಂತೆ ದೀಪವೂ ನಾನಾಬಣ್ಣಗಳಲ್ಲಿ ಕಾಣುತ್ತದೆ. ಹೀಗೆ ಪರಮಾತ್ಮನ ಸುಪ್ರಕಾಶವು ಒಂದೇ ಇದ್ದರೂ ವಾಸುದೇವ ಶುಕ್ಲ, ನಾರಾಯಣಲೋಹಿತ, ಪ್ರದ್ಯುಮ್ನಪೀತ, ಸಂಕರ್ಷಣ ಪಿಂಗಲ, ಅನಿರುದ್ಧ ಈ ರೂಪಗಳೇ ಅನಂತಬಗೆ, ಅನಂತರೂಪ, ವಿಶ್ವತೈಜಸ, ಪ್ರಾಜ್ಞನಾಮದಿಂದ ನಿತ್ಯನಾಶರಹಿತವಾಗಿವೆ. ಜೀವನಸ್ವರೂಪ ಚಿತ್ರವೈಚಿತ್ರದಂತೆ ವೈಚಿತ್ರವಾಗಿ ಜೀವನಸ್ವರೂಪಕ್ಕೆ ಸನ್ನಿಧಿಯಾಗಿ ಜೀವಾಧಾರವಾದ ಆತ್ಮರೂಪಗಳು. ಅಂತರಾತ್ಮನಾದ ಹರಿಗೆ ಆತ್ಮರೂಪಗಳು ಪ್ರತಿಬಿಂಬರೂಪಗಳು ನಿತ್ಯವಾದವು. ಕಾರಣ ಜೀವನೂ ಸದಾ ತತ್ ಸದೃಶನಾಗಿ, ತದಧೀನನಾಗಿ ನಿತ್ಯನಾಗಿರುವನು. ಇದೇ ಬಿಂಬಪ್ರತಿಬಿಂಬ ಸ್ವರೂಪಲಕ್ಷಣ. ಇದಕ್ಕೂ ಹೆಚ್ಚಿನ ವಿಷಯಗಳರಿತವರು ತಿದ್ದಿ ಸೂಚಿಸಬೇಕಾಗಿ ಪ್ರಾರ್ಥನೆ. ಎಲ್ಲ ಜ್ಞಾನಿಗಳು ತಮ್ಮ ಟೀಕೆ ಟಿಪ್ಪಣಿಗಳಲ್ಲಿ ಸೂಕ್ಷ್ಮವಾಗಿ ಅರುಹಿದ್ದಾರೆ. ಶ್ರೀಹರಿಯ ಅಂತರಾತ್ಮರೂಪ ಸೇವ್ಯರೂಪ, ಆತ್ಮರೂಪ, ಸೇವಕರೂಪ, ತದಧೀನ ತನಗೆ ತಾನೇ ಸೇವ್ಯಸೇವಕ.

**ಇನ್ನು ಶ್ರೀಹರಿಯು ತ್ರಿವಿಧರಿಗೆ** ಬಿಂಬನಾಗಿರುವದು ಹೇಗೆಂಬ ಪ್ರಶ್ನೆಯು ಬಂದೇ ಬರುತ್ತದೆ. ಅದಕ್ಕೆ ಅಪರೋಕ್ಷಜ್ಞಾನಿಗಳೂ ದೇವಾಂ-ಶರೂ ಆದ ಶ್ರೀಗೋಪಾಲದಾಸಾರ್ಯರು.

ಸುಳಾದಿ ೬, ಪುಟ ೨೫ **ರೂಪಕತಾಳದಲ್ಲಿ.**

ನಿತ್ಯತ್ವ ನಿರ್ದೋಷ ನಿರ್ಗುಣ ಶ್ರೇಯಸ್ಸು। ಚಿತ್ತಭೃತ್ಯಭಾವನೆ ಆನಂದ ಬಲ। **ಸತ್ವಜೀವರಲ್ಲಿ ಬಿಂಬಸದೃಶ ಉಂಟು। ನಿತ್ಯಸಂಸಾರಿಗೆ ನಿತ್ಯತ್ವದಲಿ ಮಾತ್ರ**। ಮತ್ತಾವ **ತಾಮಸ ಜೀವರ್ಗೆ ೧ ಸಾದೃಶ್ಯ, ೨ ನಿತ್ಯತ್ವ ನಿರ್ಗುಣ, ಎರಡುವಿಧ** ಉಂಟು। ಸತ್ಯಜ್ಞಾನಿಗೆ ಸುಖ ಮಿಥ್ಯ ಜ್ಞಾನಿಗೆ ದುಃಖ। ವ್ಯಕ್ತಿ ಆಹುದು ಕೇವಲ ನಿರ್ಗುಣದಾಗಾ। ಸತ್ಯಸಂಕಲ್ಪ ಗೋಪಾಲ ವಿಠ್ಠಲನ್ನ। ಭಕ್ತರಿಗೆ ಭಯವಿಲ್ಲ ಬಲು ಆನಂದ ॥

ಇಂತು ಸತ್ವರಿಗೆ ಬಿಂಬಸದೃಶತ್ವ ಕಿಂಚಿತು ಉಂಟು. ನಿತ್ಯಸಂಸಾರಿ ಜೀವರಿಗೆ ನಿತ್ಯತ್ವದಲಿ ಮಾತ್ರ ಸದೃಶತ್ವವಿಲ್ಲ. ತಾಮಸ ಜೀವರಿಗೆ ಸದೃಶತ್ವ ನಿತ್ಯತ್ವ ನಿರ್ಗುಣ ಎರಡು ವಿಧ ಉಂಟೆಂದು ಹೇಳಿದ್ದಾರೆ. ಮುಂದೆ ೬೫ನೇ ಸುಳಾದಿ, ಅಟ್ಟ ಆದಿತಾಳ, ಪುಟ ೨೪೮-೨೪೯ರಲ್ಲಿಯೂ ಇದರ ವಿಸ್ತಾರ ಮಾಡಿದ್ದಾರೆ. ದಾಸರಾಯರ ಉಪಕಾರ ಎಂದೂ ಮರೆಯುವಂತಿಲ್ಲ.

## ಅಟ್ಟತಾಳ

ಮುಕ್ತಾ ಅಮುಕ್ತ ಚೇತನದೊಳಗೆಲ್ಲ। ನಿತ್ಯಾನಿತ್ಯ ಜಡಗಳವೊಳಗೆಲ್ಲ। ತತ್ತ್ರದಾಧಾರಾ ಸತ್ರವೃತ್ತಿಯೊ। ನಿತ್ಯಮುಕ್ತಾ ನಿರ್ಲಿಪ್ತ ನಿರಾಶ್ರಯಾ। ಸತ್ವಾದಿರಹಿತ ನಿತ್ಯಾನಂದಮೂರ್ತಿ। ಚಿತ್ರಚಾರಿತ್ರ ವಿಮಲಜ್ಞಾನಪೂರ್ಣ ಭಕ್ತವತ್ಸಲ ಬಂಧಮೋಚಕ ದೇವಾ। **ರಕ್ತ ಶುಕ್ಲ ಶ್ಯಾಮಲದಳವರ್ನಾ।** ತತ್ತ್ರಳಿಸುವ **ಹರಿಮೂರ್ತಿಯೊ** ಮತ್ತೆ ಪೇಳಿದಂತೆ ಭಗವಂತ ತದ್ರೂಪಾ ಅತ್ಯಂತ ಅಭೇದ ಚಿಂತಿಸಿ ತುತಿಸಿ। ಪ್ರತ್ಯೇಕ ಪ್ರತ್ಯೇಕ ಅಧಿಷ್ಠಾನಗಳಲಿ।.... ಸತ್ಯಸಂಕಲ್ಪ ಗೋಪಾಲವಿಠ್ಠಲರೇಯ। ತುತ್ತ ಮಾಡಿಪ್ಪಂತೆ ಸಾಧನಮಾಡಿಪ॥ ಹೀಗೆ ತ್ರಿವಿಧ ಜೀವಿಗಳ ಬಿಂಬನಾದ ಶ್ರೀಹರಿಯು ತ್ರಿವಿಧರ ಸ್ವರೂಪದಂತೆ ತಾನು ಆ ಜೀವನಸ್ವರೂಪನಾಗಿಪ್ಪನು ಎಂದು ಹೇಳಿ ಮುಂದೆ **ಆದಿತಾಳದಲ್ಲಿ** ಬಿಂಬಸ್ವರೂಪಜೀವನ ಚಿದ್ರೂಪ ಹೇಳುತ್ತಾರೆ.

"ಎಂತೆಂತು ಬಿಂಬನ ಚಿಂತನೆಮಾಡಲು। ಅಂತಂತೆ ಬರುವನು ಪ್ರತಿಬಿಂಬಕ್ಕೆ (ಸ್ವರೂಪಕ್ಕೆ) ಸ್ವಾತಂತ್ರ್ಯಮಾತ್ರ ಹೊರತಾಗಿ। ಚಿಂತಿಸಿ ನೋಡಲು ಜೀವಚಿದ್ರೂಪನು। ಸಂತೋಷಾದಿಗಳೆಲ್ಲ ಹರಿಯಾಧೀನ। **ನಿರಂತರ ಪರಾ**

**ಧೀನ ಜೀವ** ಸ್ವಾಮಿ | ಭೃತ್ಯನ್ಯಾಯವೆಂದು ಉಪಾಸನೆ ಎದುರಿಲಿ | **ಚಿಂತಿಸಿ** ಕರವುಗಿದು ಚಿಂತನೆಮಾಡಲು | ಸಂತೋಷದಿಂದಲಿ ಪ್ರಾಣದ್ವಾರಾ | **ಚಿಂತಾ** ಯಕ ತಂತ್ರಮೂರ್ತಿ ತೋರಿ ಭವ | ಗ್ರಂಥಿಯ ಹರಿಸುವ ತಡವಿಲ್ಲದೇ | **ಶಾಂತ** ಮೂರುತಿ ನಮ್ಮ ಗೋಪಾಲವಿಠ್ಠಲ್ಲ | ನಿಂತಲ್ಲೇ ನಿಧಾನವಾಗಿ ಉಣಿಸುವ||೭||

ಇಲ್ಲಿ ಇನ್ನೊಂದು ವಿಚಾರಬರುತ್ತದೆ. ಮೂಲರೂಪಿಹರಿಯು ಸಚ್ಚಿದಾ ನಂದ ಚಿದ್ರೂಪಿ ಚತುರ್ಭುಜ ಶಂಖಚಕ್ರಗದಾಪದ್ಮಪೀತಾಂಬರಧರ ಶ್ರೀವತ್ಸ ಚಿಹ್ನವುಳ್ಳವನು "ಸಹಸ್ರಶೀರ್ಷಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ || ಎಂದು ಶ್ರುತಿಗಳು ಹೇಳುತ್ತವೆ. ಜೀವರು ಅನಂತ ದೇವ ಋಷಿ ಪಿತೃಪನರ–ಸ್ವರ್ಗ ಭೂಪ್ರಚುರ ದೈತ್ಯದಾನವಾದಿಗಳು, ಇರುಬಿ ಎಂಭತ್ತುನಾಲ್ಕು ಲಕ್ಷ ಜೀವರ ಸ್ವರೂಪ ಬೇರೆಬೇರೆ, ಇರಲು ಅನಂತ ಶಕ್ತಿಯಿಂದ ಶ್ರೀಹರಿಯು ತಾನು ಬಿಂಬ ನಾಗಿ ಚತುರ್ಭುಜಾದಿಗಳಿಂದ ವೊಪ್ಪುತ್ತಿದ್ದರೂ, ಜೀವರಸ್ವರೂಪದಂತೆ ತದಾ ಕಾರನಾಗಿ ಜೀವಸ್ಥಿತಸ್ವರೂಪನಾಗಿರುವನೆಂದು, ಇದೇ ರೂಪ ಶ್ರೀಹರಿಗೆ ತನ್ನ ರೂಪವೇ ಪ್ರತಿಬಿಂಬವೆಂದು ಕರೆಸುತ್ತಾನೆಂದು.

## ಸರ್ಗಸಾರ

ಶ್ರೀ **ಗೋಪಾಲವಿಠ್ಠಲರು** ಮುಕ್ತಪ್ರಕರಣ ಸುಳಾದಿ (೩) ಆದಿತಾಳ ಪುಟ ೧೫ರಲ್ಲಿ.

ಬಿಂಬನಾಗಿ **ಪ್ರತಿಬಿಂಬಗಳಂತೆ ರೂಪ | ಎಂಭತ್ತುನಾಲ್ಕು ಲಕ್ಷ ಯೋನಿ** ಜೀವರಾಶಿಗಳಿಗೆ | ಬಿಂಬನಾಗಿ ಹರಿ ಇಂದಾಗಿ **ತದಾಕಾರ |** ಬಿಂಬ ನಾಗಿ ವೊಳಗೆ ಇದ್ದು ಅವರು ಏನು | ಹಂಬಲಿಪರಾನಂದ ಸಂಭ್ರಮುದೊದಗಿಪ್ಪ| ....(ಇತ್ಯಾದಿ) ಸಂಭ್ರಮಪದ ಮೂರ್ತಿಗೋಪಾಲವಿಠ್ಠಲ | ಅಂಬುಜನಾಭನ ಪಾದಕ್ಕೆ ನಮೋ ನಮೋ ||೭||

ಇಂತು ಬಿಂಬ ಪ್ರತಿಬಿಂಬ ವಿಚಾರವು ಸವಿಸ್ತರಿಸಿ ಬರೆಸಿದುದು ಬರೆದೆ. ತಪ್ಪೋ ಒಪ್ಪೋ ಅಪ್ಪನಪ್ಪನೇ ಬಲ್ಲ. ಅಪ್ಪ ತಿಮ್ಮಪ್ಪನ ಭಕ್ತರು ತಪ್ಪು ಇದ್ದರೆ ಒಪ್ಪುವಂತೆ ತಿಳಿಸುವದಾಗಿ ಪ್ರಾರ್ಥನೆ. ಬಿಂಬನಾಧೀನನಾಗಿ ಜೀವ ಸದಾ ಚಿದ್ರೂಪಿ ಕಿಂಚಿತ್ ಸದೃಶನಾಗಿರುವ, ಸದಾ "ಆಧೀನ ಚಿಂತಿಪುದಕ್ಕಿಂತ ಅಧಿಕ

ಸಾಧನವಿಲ್ಲ"ವೆಂಬ ದಾಸರ ವಚನದಂತೆ, ದಾಸ್ಯಭಾವದಿಂದ ಬಿಂಬನಾದ ಹರಿಯನ್ನರ್ಚಿಸಲು ಬಿಂಬ ಹೊಳೆವನು.

ಹೀಗೆ ಪರಮಾತ್ಮನ ಭಕ್ತಿರಸದಿ ತೊಯ್ದ ಭಗವದ್ಭಕ್ತರನ್ನು ಸಂಸಾರವೆಂಬ ಅಗ್ನಿ ಸುಡದು.

ಸಮುದ್ರದೊಳಗೆ ನದಿಗಳು ಹೇಗೆ ಬೇರೆ ಬೇರೆ ಇರುತ್ತವೋ; ಹಾಗೆಯೇ ಪರಮಾತ್ಮನೆಂಬ ಮಹಾಸಮುದ್ರದೊಳಗೆ ರಮಾ ರೂ ಪ ವಾ ದ ನದಿಗಳು ಶ್ರೀಲಕ್ಷ್ಮೀ ಅನಂತರೂಪಗಳು ಸದಾ ದೇಶಕಾಲ ಸಮಳು ಗುಣದಿಂದ ಅಸಮೀ, ಅಸ್ವತಂತ್ರಳು ಹರಿಯ ಅಧೀನವಾಗಿ ಇರುವವು.

## ಉಪಸಂಹಾರ

ಸೂರ್ಯನುದಿತವು ಗೂಗಿಗೆ ಹೇಗೆ ಅಸಹ್ಯವೋ ಅಜ್ಞಾನಿಗಳಿಗೆ ಹಾಗೆ ಈ ಹರಿಕಥಾಮೃತಸಾರ ಮಹಿಮೆ ಜ್ಞಾನವೇ ಆಗುವುದಿಲ್ಲ. ಇದರ ರುಚಿಯೇ ತೋರುವುದಿಲ್ಲ. ಅದಕ್ಕಾಗಿ ಇದರಲ್ಲಿ ಏನಿದೆ ಎಂದು ಗೂಗೆಯಂತಹ ದುಷ್ಟ ಜನರು ನಿಂದಿಸಲು, ಸೂರ್ಯನಿಗೆ ಕಳಂಕ ಬರುವದೆ? ಎಂದಿಗೂ ಇಲ್ಲ. ಈ ಕೃತಿಯ ಪ್ರತಿಪಾದ್ಯ ಜಗನ್ನಾಥಸ್ವಾಮಿ ಇರಲು ಅವಿವೇಕಿಗಳು ತಿಳಿಯದೇ ನಿಂದಿಸಿದರೇನಾಗುವುದು? ಸಜ್ಜನರಾದ ಭಕ್ತರು ಕೇಳಿ ಆನಂದ ಬಟ್ಟೇಬಡುವರು.

ಇಂತು ಗುರು ಮಧ್ವಾಖ್ಯ ಮಾತರಿಶ್ವಗತ ಜಗನ್ನಾಥವಿಠಲನು ಚೇತನಾ ಚೇತನರಲಿ ವ್ಯಾಪಿಸಿ ತಾನು ತನ್ನ ಪೂರ್ಣತೆಯನ್ನು ತಿಳಿಸಿಗೊಡದೇ ಭಕ್ತರಿಗೆ ಅವರ ಯೋಗ್ಯತೆಯಂತೆ ತಿಳಿಸಿ, ದೈತ್ಯರಿಗೆ ವಿಷಯಾದಿಗಳಲ್ಲಿ ಮೋಹ ಹುಟ್ಟಿಸಿ ತನ್ನ ಮಹಿಮೆ ಕಿಂಚಿತ್ತಾದರೂ ತಿಳಿಯಗೊಡನು. ಶ್ರೀಹರಿಯು ನಿರ್ಭೀತನು. ನಿತ್ಯಾನಂದಮಯನು. ನಿರ್ದೋಷನೂ. ನಿರವದ್ಯನಾದ ಹರಿಯೇ ಸಕಲಜೀವರು ಸದಾಭಿನ್ನರು, ಭಗವಂತನ ಅಧೀನದಲ್ಲಿಪ್ಪರೆಂಬ ಸುಜ್ಞಾನವಕೊಡಲೆಂದು ಆ ಸದ್ಗುರುಗತ ಶ್ರೀ ವರದೇಂದ್ರ ಶ್ರೀ ರಾಘವೇಂದ್ರರಂತರ್ಗತಭಾರತೀರಮಣ ಮುಖ್ಯಪ್ರಾಣಾಂತಸ್ಥಮಧ್ವೇಶನ ಅಡಿಗಳಿಗೆ ಜೀವನಪ್ರಕ್ರಿಯಾ ಸಂಧಿಯಸಾರವು ಶ್ರೀ ಕೃಷ್ಣಾರ್ಪಿತವು. ಮಧ್ವೇಶನು ಪ್ರೀತನಾಗಿ ಜನ್ಮಕೊಡದಿರಲಿ. ಇದೇ ಪ್ರಾರ್ಥನೆ.

# ೧೪ ಜೀವನಪ್ರಕ್ರಿಯಾ ಸಂಧಿ

## (ಪಿತೃಗಣ ವಿಚಾರ ಸಂಧಿ)

ಶ್ರೀ ರಾಘವೇಂದ್ರಗುರು. ಶ್ರೀ ವರದೇಂದ್ರಗುರು

ಹರಿಕಥಾಮೃತ ಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ಪಲ್ಲ॥

**ಕೃತಿರಮಣ ಪ್ರದ್ಯುಮ್ನ ವಸುದೇ ।**
**ವತೆಗಳಾಹಂಕಾರ ತ್ರಯದೊಳು ।**
**ಚತುರ ವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು ॥**
**ಹುತವಹಾಕ್ಷಾಂತರ್ಗತ ಜಯಾ ।**
**ಪತಿಯು ತಾನೇ ಮೂರಧಿಕ ತ್ರಿಂ ।**
**ಶತಿಸುರೂಪದಿ ಭೋಕ್ತೃಎನಿಸುವ ಭೋಕ್ತೃಗಳೊಳಿದ್ದು ॥**
**॥೧॥**

**ಅವತರಣಿಕಾ** "ಸ್ವರ್ಣನಾಭೀ ಪ್ರಮುಖ ಜೀವನಪ್ರಕ್ರಿಯಾಸಂಧಿ" ಎಂದು ಶ್ರೀ ಭೀಮೇಶವಿಠಲರು ಸಂಧಿಮಾಲಾ ಸಂಧಿಯಲ್ಲಿ ವಿವರಿಸಿದಂತೆ ನಿತ್ಯರಾದ ಜೀವ ಜೀವರುಗಳಿಗೆ ಭೇದವಿದ್ದರೂ, ಜೀವರನ್ನು ಒಬ್ಬರಿಗೊಬ್ಬರು ಒಂದೊಂದು ಜನ್ಮದಲ್ಲಿ ಬೇರೆಬೇರೆ ವಿಧವಾಗಿ ಅನುಬಂಧಿಗಳನ್ನಾಗಿ ಶ್ರೀಹರಿಯು ಪುಟ್ಟಿಸುವನು. ಪಿತೃ ಮಾತೃ ಸಹೋದರ ಪುತ್ರ ಪುತ್ರಿ ಮುಂತಾದ ಅನೇಕ ಬಾಂಧವ್ಯದ ವ್ಯಾಮೋಹದಿಂದ ಇವರೆಲ್ಲರೂ ನನ್ನವರೆಂಬ ಮೂಢಭಾವನೆ. ಇಂತಹ ಮೂಢಭಾವನೆ ನಿರಸನಗೈಯ್ಯಲು ಶ್ರೀಹರಿಯು "ಜೀವಾಂತರ್ಗತ ಜೀವನಿಯಾಮಕನು. ಸಕಲ ಜೀವರಿಗೆ ಋಣಾನುಬಂಧವನ್ನು ಹಚ್ಚಿ ಅನೇಕ ಜನುಮಜನುಮಾದಿಗಳಲ್ಲಿ, ಪಿತೃಮಾತೃ ಭ್ರಾತೃ ಇತ್ಯಾದಿ ಮೋಹ ಬಿಡುಗಡೆಗೆ ಪಿತ್ರಾದಿದಿನ ಭಕ್ತಿ ವಿಶ್ವಾಸದಿಂದ ಕೊಟ್ಟ ಅನ್ನವನ್ನು ಪಿತ್ರಾದಿದಿನ ಭಕ್ತಿ ವಿಶ್ವಾಸದಿಂದ ಪಿತೃಗಣದ್ವಾರಾ ಯಾವ ಯೋನಿಗಳಲ್ಲಿದ್ದರೂ ಶ್ರೀಹರಿಯು ತೃಪ್ತಿಬಡಿಸುತ್ತಾ ಋಣವಿಮೋಚನಮಾಡಿ ಮುಕ್ತರನ್ನು ಮಾಡುವನು. ಎಂದು ತಿಳುಹಲು ಜೀವನನಾಮಕ ಅನಿರುದ್ಧನೇ ಅನ್ನರೂಪನಾಗಿ ಪಿತೃಗಳಿಗೆ ತೃಪ್ತಿ ಕೊಡುವನು. ಸದಾಜೀವಜೀವರಿಗೆ ಭೇದ ಸಕಲರೂ ಹರಿಯಾಧೀನರೆಂದು

ತಿಳಿಸಲು, ಅಪರೋಕ್ಷ ಜ್ಞಾನಿಗಳಾದ ದಾಸಾರ್ಯರು ಜೀವನಪ್ರಕ್ರಿಯಾಸಂಧಿ (ಪಿತೃಗಣವಿಚಾರ) ಯನ್ನು ಪ್ರಾರಂಭಿಸುತ್ತಾರೆ. ಇದು ಜ್ಞಾನಿಗಳಿಂದ ಸಮ್ಮತವಾದುದು.

**ಪದ್ಯಾರ್ಥ** :—ಕೃತಿ ರಮಣ= ಕೃತಿದೇವಿಗೆ ಪತಿಯಾದ ಪ್ರದ್ಯುಮ್ನ ದೇವನು, ವಸುದೇವತೆಗಳ ಅಹಂಕಾರ ತ್ರಯದೊಳು=ಪಿತೃಗಣದಲ್ಲಿ ಸೇರಿದ ವಸುಗಣವೆಂಬ ಗಣ ಉಂಟು. ಈ ವಸುಗಣದಲ್ಲಿ ೮ ಜನರು, ಇವರಲ್ಲಿ ವೈಕಾರಿಕ, ತೈಜಸ, ತಾಮಸ ಭೇದದಿಂದ ಮೂರುಪ್ರಕಾರ ಅಹಂಕಾರದಲ್ಲಿ ತ್ರಿಭೇದದಂತೆ ಚತುರವಿಂಶತಿ ರೂಪದಿಂದಲಿ = ೮ × ೩ = ೨೪ ಇಪ್ಪತ್ತುನಾಲ್ಕು ರೂಪಗಳಿಂದ ಪ್ರದ್ಯುಮ್ನನು. ಭೋಜ್ಯನೆನಿಸುವನು = ಭೋಜನ ಮಾಡತಕ್ಕ ಪದಾರ್ಥಗಳಲ್ಲಿದ್ದು ಜೀವನಿಗೆ ಜೀವನತ್ವವನ್ನು ಒದಗಿಸುವನು. ಮತ್ತು ಹುತವಹಾಕ್ಷಾಂತರ್ಗತಗ, ಪಿತೃ ರುದ್ರಗಣದಲ್ಲಿ ಸೇರಿದ, ಅಗ್ನಿಯೇನೇತ್ರನಾಗಿ ಉಳ್ಳ ರುದ್ರಗಣವು ೧೧ ಜನ. ಇವರಲ್ಲಿ ಇದ್ದು ಅದೇ ಅಹಂಕಾರ ತ್ರಯಭೇದ ದಿಂದ, ಮೂರಧಿಕ ತ್ರಿಂಶತಿ ಸುರೂಪದಿ = ೧೧ × ೩=೩೩ ಮೂವತ್ತುಮೂರು ರೂಪದಿಂದ ಜಯಾಪತಿ ಶ್ರೀ ಲಕ್ಷ್ಮೀರೂಪಳಾದ ಜಯಾದೇವಿಗೆ ಪತಿಯಾದ ಶ್ರೀ ಸಂಕರ್ಷಣರೂಪಿಹರಿಯು, ಅನ್ನವನ್ನು ಭೋಜನಮಾಡುವ ಭೋಕ್ತೃ ಗಳಲ್ಲಿದ್ದು, ಭೋಕ್ತೃ ಎನಿಸುವನು=ಭೋಜನ ಮಾಡುವನೆಂದು ಕರೆಸುತ್ತಾನೆ. ಭೋಜ್ಯವಾದ ಅನ್ನದಲ್ಲಿ ಪ್ರದ್ಯುಮ್ನ ೨೪ ರೂಪ, ಅನ್ನ ಊಟ ಮಾಡುವವರಲ್ಲಿ ತಾನೇ ೩೩ ರೂಪದಿಂದ, ಸಂಕರ್ಷಣನು ಭೋಕ್ತೃನೆನಿಸುವನೆಂದು ಫಲಿತಾಭಿಪ್ರಾಯ.

**ದ್ರೌಪದೀಶಪತಿವಿಠಲರು**:—ಕೃತಿರಮಣಪ್ರದ್ಯುಮ್ನ ಭೋಜ್ಯಯೆಂದರೆ ಅನ್ನ ಇದಕ್ಕೆ ವಸುಗಳು ಎಂಟು ಮಂದಿ, ಇವರಂತರ್ಗತ ಪ್ರದ್ಯುಮ್ನ ೨೪ ರೂಪದಿಂದ, ಕೇಶವಾದಿ ಸತ್ವ(ತತ್ವ)ಗತ ಅಧಿಭೂತ। ೩೩ ಭೋಕ್ತೃ ಅತಿಥಿ ಇವರೊಳಗೆ ರುದ್ರರು ೧೧ ಮಂದಿ ಇವರಂತರ್ಗತ ಸಂಕರ್ಷಣ-ಸಂಕರ್ಷಣ ಕೇಶವಾದಿ ೨೪ ಅಧಿದೈವಗತರೂಪ ಮೂವತ್ತುಮೂರುರೂಪಕ್ಕೆ ವಿವರ, ವಿಶ್ವಾದಿ ೯-ಆತ್ಮಾದಿ ೪-ಜೀವಾಂತರ್ಗತ ತದಾಕಾರಮೂರ್ತಿ ೧ ಸಂಕರ್ಷಣ ಕೇಶವ ನಾರಾಯಣಾದಿ ೨೪ ಅಂತು ಮೂವತ್ತುಮೂರು ೩೩ ರೂಪಗಳು.

**ಗುರುಶ್ರೀಶವಿಠಲರ ಶಿಷ್ಯರು** (೧೩ ಪದ್ಯದವರೆಗೆ ದೊರಕಿದೆ) ಕೃತಿರಮಣ ಪ್ರದ್ಯುಮ್ನ ವಸುದೇವತೆಗಳಹಂಕಾರತ್ರಯದೊಳು। ಕೃತಿಪತಿ ಶ್ರೀಪ್ರದ್ಯುಮ್ನ ಅಷ್ಟವಸುಗಳ ಅಹಂಕಾರತ್ರಯ, ವೈಕಾರಿಕ, ತೈಜಸ, ತಾಮಸ ಈ ಮೂರರೊಳಗೆ ಎಂಟು ಮೂರತಿ=೨೪ ಚತುರ ವಿಂಶತಿ ರೂಪದಿಂದ ಭೋಜ್ಯ ನೆನಿಸುವನು. ಹುತವಹಾಕ್ಷ=ಅಗ್ನಿನೇತ್ರ ಉಳ್ಳಮಹರುದ್ರರು ಏಕಾದಶ ರುದ್ರರು. ವೈಕಾರಿಕ, ತೈಜಸ, ತಾಮಸ ಭೇದದಿಂದ ೧೧ × ೩ = ೩೩ ಇವರ ಅಂತರ್ಗತ ಜಯಾಪತಿ ಸಂಕರ್ಷಣನು, ಮೂರಧಿಕ ತ್ರಿಂಶತಿ=ಸಮಿಾಚೀನವಾದ ೩೩ ರೂಪಗಳಿಂದ ಭೋಕ್ತೃ ಎನಿಸುವ ಭೋಕ್ತೃಗಳೊಳಗಿದ್ದು.

**ಭಾವಸೂಚನ** (ಜಂಬುಖಂಡಿವಾದಿರಾಜಾಚಾರ್ಯರು) **ಅವತರಣಿಕಾ** ಅಸ್ಮಿನ್‌ಸಂಧೌ ಮಂದೇನ ವಿಫಲತ್ವೇನ ಅವಗತಾನಾಂ ಸಂಧ್ಯಾ ಪಿತ್ರಾದಿನಿಮಿತ್ತೌರ್ಧ್ವದೈಹಿಕಕ್ರಿಯಾಸಾಂವತ್ಸರಿಕ ದರ್ಶಾಷ್ಟಕಮಾಸಿಕಾದಿಷಡಧಿಕನವತಿ ಶ್ರಾದ್ಧಾದೀನಾಂ, **ಓಂ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡಲೋಮಿಃ ಓಂ**॥ ಇತಿ ಸೂತ್ರಕೃದುಕ್ತಿಂ ಅತ, **ಅ** ಏವ ಆನಂದಹ್ರಾಸವೃದ್ಧೀ ವಕ್ಷ್ಯೇತ ಇತಿ, **ಸೌಧರಾಗ್** ವ್ಯಾಖ್ಯಾವಸರೋದಿತ ಕೃತೇ ಚ ಕರ್ಮಣಿ ತೇನ ತುಷ್ಟೋ ಭಗವಾನ್ ಇಚ್ಛಾಶಕ್ತಿಮುಪಸಾರಯತ್ಯಾನಂದಂ ಚಾನುಭಾವಯತೀತಿ, **ಶ್ರೀ ಯಾದವಾರ್ಯೋಕ್ತಿಂ** ಚಾಂತರ್ನಿಧಾಯ, ಭಗವಾನ್ ದಾಸಕುಲೋತ್ಕೃಷ್ಟದೀಧಿತಿಃ । ಸಾಫಲ್ಯಂ ಕರ್ಮಣಾಂ ನಿಷ್ಕಾಮುಕಾನಾಂ ಸಂಧ್ಯಾಭಾಷ್ಯ ಗಾಯತ್ರ್ಯಧಿಕರಣಾನುಸಂಧಾನಪೂರ್ವಕಮನುಷ್ಠಿತಾನಾಂ **ವಕ್ತುಂ** ಪಿತೃಗಣ ಸಂಧಿಮುತ್ಥಾಪ್ಯ ಮಾನಸಾಪರಾಧವತಃ ಸೂಚಯತಿ ॥ ಹರೀತಿ ॥ ಕೃತೀತಿ ॥ ಅಹಂಕಾರೇತಿ ॥ ವೈಕಾರಿಕಃ ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧೇತ್ಯುಕ್ತೇಃ । ಶ್ರಾದ್ಧಪದ್ಧತೌ ಪಿತ್ರಾದ್ಯಂತರ್ಗತ **ಶ್ರೀಪತ್ಯಮಲರೂಪನಿಕರಜ್ಞಾನಮೇವ** ಕರ್ಮಣಿ ಷಾಡ್ಗುಣ್ಯಾಸ್ಯಾಪಾದಕಂ ಚ ಭವೇದಿತ್ಯಾಹ ॥

**ಕನ್ನಡಾರ್ಥ**=ಇದರ ಸಾರಾಂಶವೇನೆಂದರೆ, ಈ ಸಂಧಿಯಲ್ಲಿ ಪೇಳಿದ ವಿವರವು, ಸಂಧ್ಯಾವಂದನ ಮಾಡಿದರೆ ಫಲವಿಲ್ಲ, ಬಿಟ್ಟರೆ ದೋಷವಿಲ್ಲವೆಂತಲೂ ಇವರಂತೆ ಮತ್ತು ಪಿತೃಗಳಿಗೋಸುಗ, ಔರ್ಧ್ವದೈಹಿಕಕ್ರಿಯಾ ಸಾಂವತ್ಸರಿಕ ದರ್ಶ=ಅಮಾವಾಸ್ಯಾ ಅಷ್ಟಕ ಶ್ರಾದ್ಧ, ಮಾಸಿಕ ಶ್ರಾದ್ಧಾದಿಗಳು ೯೬ ಷಣ್ಣವತಿ ಶ್ರಾದ್ಧಾದಿಗಳು ಮಾಡಿದರೆ ಫಲವಿಲ್ಲ. ಬಿಟ್ಟರೆ ದೋಷವಿಲ್ಲವೆಂಬ ಮಂದಾಧಿಕಾರಿ

ಗಳು (ಅಜ್ಞರು) ತಿಳಿಯುತ್ತಾರೆ. ಇದನ್ನು ಪರಿಹರಿಸಲೋಸುಗ "ಪಿತ್ರ್ಯಹನಿ ಪರಿತ್ಯಜ್ಯ ಚಾಂಡಾಲೋ ಕೋಟಿಜನ್ಮಸು" ಪಿತೃದಿನ ಶ್ರಾದ್ಧಾದಿಗಳು ಬಿಟ್ಟವನು ಕೋಟಿ ಜನ್ಮಗಳಲ್ಲಿ ಚಾಂಡಾಲನಾಗಿ ಪುಟ್ಟುತ್ತಾನೆ. ಶ್ರಾದ್ಧಾದಿಗಳನ್ನು ಬಿಟ್ಟವಗೆ ದೋಷವೆಂದು ತಿಳಿಸಲು.—

ಶ್ರೀ ಬ್ರಹ್ಮಸೂತ್ರ ಭಾಷ್ಯ ಪ್ರಥಮಾಧ್ಯಾಯ ೪ನೇ ಪಾದ ೨೦ನೇ ಸೂತ್ರದಲ್ಲಿ ಶ್ರೀ ಬಾದರಾಯಣ ದೇವರು ಆಜ್ಞೆ ಕೊಡಿಸಿದಂತೆ, "**ಓಂ ಉತ್ಕ್ರಮಿಷ್ಯತ್ ಏವಂಭಾವಾದಿತ್ಯೌಡಲೋಮಿಃ ಓಂ** ||" ಜ್ಞಾನದಿಂದ ಬಂಧಮೋಕ್ಷವನ್ನು ಇಚ್ಛಿಸುವವನಿಗೆ ಏವಂ = ಈ ಜ್ಞಾನದಂತೆಯೇ, ಕರ್ಮಾದಿಗಳಿಗೂ, ಅಂತಃಕರಣಶುದ್ಧಿ ದ್ವಾರಾ ಮೋಕ್ಷಸಾಧನವಾದ ಭಗವಂತನ ಜ್ಞಾನಕ್ಕೆ ಪರಂಪರಾ ಸಾಧನತ್ವನಿಮಿತ್ತದಿಂದ, ಸಂಪಾದ್ಯತ್ವ, ವೇದಗಳಲ್ಲಿ ಕರ್ಮಾದಿ ಸಾಚ್ಯತ್ವ ಹೀಗೆ ಮೋಕ್ಷಸಾಧನವಾದ ಜ್ಞಾನಕ್ಕೆ ಕರ್ಮಾದಿಗಳು ಸಾಧನವಾದುದರಿಂದ ಕರ್ಮಾದಿಗಳು ಪರಮಾತ್ಮನ ಜ್ಞಾನಕ್ಕೆ ಉಪಯುಕ್ತವು ಎಂದು ಔಡುಲೋಮಿ ಆಚಾರ್ಯರು ತಿಳಿಯುತ್ತಾರೆ. ಶ್ರೀಮದಾಚಾರ್ಯರು ಭಾಷ್ಯದಲ್ಲಿ ಇದನ್ನೇ ವಿವರಿಸುತ್ತಾರೆ. "**ಉತ್ಕ್ರಮಿಷ್ಯತೋಮುಮುಕ್ಷೋಃ ಕರ್ಮಾದಿನಾ ಭಾವ್ಯಂ ಸಾಧನ ಸಾಧನತ್ವೇನ| ಅತಸ್ತದ್ವ್ಯಾಪ್ತಿಃ| ಇತ್ಯೌಡಲೋಮಿರ್ಮನ್ಯತೇ** ||೨||" ಮೋಕ್ಷಾರ್ಥಿಯು ಜ್ಞಾನಕ್ಕೆ ಸಾಧನವಾದ ನಿಷ್ಕಾಮಕರ್ಮವನ್ನು ಅತ್ಯವಶ್ಯಮಾಡುವದೆಂದು ಸೂಚಿತವಾಗಿದೆ.

ಈ ಪ್ರಕಾರ ಸೂತ್ರಕಾರರ ಉಕ್ತಿಯಂತೆ "ಮೋಕ್ಷದಲ್ಲಿಯೂ, ಸಹ ಕರ್ಮ ಮಾಡುವುದು (ಭಗವದುಪಾಸನಾರೂಪ) ಅತ್ಯಾವಶ್ಯವೆಂದು, ಅತಃ ಈ ಕಾರಣದಿಂದ ಅ ಏವ ಅಕಾರವಾಚ್ಯ ಪರಮಾತ್ಮನಿಂದ ಮೋಕ್ಷದಲ್ಲಿ ಕರ್ಮ ಮಾಡದಿದ್ದರೆ ಆನಂದಹ್ರಾಸ, ಕರ್ಮಮಾಡಿದರೆ ಆನಂದಕ್ಕೆ ವೃದ್ಧಿ ಆಗುವೆನೆಂದು ಹೇಳಿದಂತೆ, ಸುಧಾವ್ಯಾಖ್ಯಾನ ಅವಸರದಲ್ಲಿ ಶ್ರೀಯಾದವಾರ್ಯರು ಮುಕ್ತಾವಸ್ಥಾದಲ್ಲಿಯೂ ಭಗವದುಪಾಸನೆ ಎಂಬ ಕರ್ಮವನ್ನು (ನಿಷ್ಕಾಮುಕ ಭಕ್ತಿಯೂ ಅಲ್ಲಿ ಮುಖ್ಯವಾಗಿರುವುದು) ಮಾಡುವದರಿಂದ ಭಗವಂತನು ಸಂತುಷ್ಟನಾಗಿ, ಜೀವನ ಸ್ವರೂಪದ ಮೇಲೆ ಸಂತತವಾಗಿರುವ ಶ್ರೀಹರಿಯು ತನ್ನ ಇಚ್ಛಾ ಆವರಣವನ್ನು ಕೆಲವು ಕಾಲದವರೆಗೆ ಅಪಸರಣಮಾಡಿ, ಜೀವನಿಗೆ ಸ್ವರೂಪಾನಂದ ಅನುಭವವನ್ನು ತಂದುಕೊಡುತ್ತಾನೆಂಬ ಶ್ರೀ ಯಾದವಾರ್ಯರ

ಉಕ್ತಿ ಮನಸ್ಸಿನಲ್ಲಿಟ್ಟು, ಷಡ್ಗುಣ ಐಶ್ವರ್ಯಸಂಪನ್ನನಾದ ಹರಿಯ ದಾಸಕುಲ ಉತ್ಕೃಷ್ಟಮತಿಯುಳ್ಳ ಶ್ರೀ ಜಗನ್ನಾಥದಾಸಾರ್ಯರು, ನಿಷ್ಕಾಮ ಕರ್ಮಕ್ಕೆ ಸಾಫಲ್ಯವಿದೆಂದು, ಸಂಧ್ಯಾವಂದನದಂತೆ ಬ್ರಹ್ಮಸೂತ್ರಭಾಷ್ಯ ಗಾಯತ್ರಿ ಅಧಿಕರಣ ವಿಚಾರ ಮನಸ್ಸಿನಲ್ಲಿಟ್ಟು, ಅನುಸಂಧಾನಪೂರ್ವಕ ಪಿತೃಗಣ ಸಂಧಿಯನ್ನು ಎತ್ತಿ ಹೇಳಲು ಮೇಲೆ ಹೇಳಿದಂತೆ ಮುಂದರ ಮಾನಸಿಕ ಅಪರಾಧ ನಿವಾರಿಸಲು ಸೂಚಿಸುತ್ತಾರೆ. ಅಹಂಕಾರ ತತ್ವದಲ್ಲಿ, ವೈಕಾರಿಕ, ತೈಜಸ, ತಾಮಸ ಮೂರು ಪ್ರಕಾರವಿರುವುದು. ಶ್ರಾದ್ಧಪದ್ಧತಿಯಲ್ಲಿ ಪಿತ್ರಾದಿಗಳಲ್ಲಿಷ್ಟ ಶ್ರೀಪತಿಯ ಮೂಲರೂಪ ಸಮೂಹ (ಅನಿರುದ್ಧಾದಿ ಪಂಚರೂಪ) ಜ್ಞಾನದಿಂದಲೇ, ಶ್ರಾದ್ಧ ಸಂಧ್ಯಾದಿ ಕರ್ಮಗಳಿಗೆ ಸಾಫಲ್ಯವೆಂದು ನಿರೂಪಿಸುತ್ತಾರೆ. ಅಂದರೆ ಸಂಧ್ಯಾದಂತೆ ಪಿತೃ ಶ್ರಾದ್ಧಾದಿಕರ್ಮಗಳು ನಿಷ್ಕಾಮನದಿಂದ ಭಗವದರ್ಪಿತ ಬುದ್ಧಿಯಿಂದ ಮಾಡುವದೆಂದು ಫಲಿತಾರ್ಥ.

ಮುಂದೆ **ಭಾವಸೂಚನೆಕಾರರು**

ಶ್ರೀ ಕಮಲಾಪತಿ ದಾಸೈರಪ್ಯೇವಮೇವ ವ್ಯವಸ್ಥಾಪಿತಮ್ ॥

**ಭಾಮಿನಿ** ॥ ಕೃತಿಪ್ರತಿಯ ಆವೃದಲಿ ವಹತ್ತನ ।
ಪಿತೃದಿನದಿ ಸ್ಥಿರಚಿತ್ತನಾಗುತ ।
ಪಿತೃರರಂತರ್ಗತನ ತಿಳಿಯಲು, ಗತಿಯ ಪೊಂದುವನು ॥
ಮತಿವಿಹೀನರು ಅರಿಯದಲೆ ಬಹು ।
ಹಿತದಿ ಧನಗಳ ವೆಚ್ಚಿಸಲು ಸ ।
ದ್ಗತಿಯನ್ನೊಂದುವರಲ್ಲವೆನುತಲಿ ಪೇಳಿದರು ಮುದದಿ ॥೧೪॥
ಹುತವಹಾಕ್ಷ=ಶಂಕರ ॥೧॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ
## ಜೀವನಪ್ರಕ್ರಿಯಾ (ಕಲ್ಪಕ) ಸಂಧಿ

ಶ್ರೀ॥ "ಜೀವಾಂತರ್ಗತ ಜೀವನಿಯಾಮಕ ಜೀವವಿಲಕ್ಷಣ ಜೀವನದ ಇತಿ ಸ್ವೋಕ್ತಿಂ ವಿವರಿತುಂ "ಸ ಜೀವನಾಮಾ ಭಗವಾನ್" ಇತಿ, "ಜೀವ ಇ ಭಗವತಃ ಅನಿರುದ್ಧಸ್ಯ ಆಖ್ಯಾ" ಇತಿ ಶ್ರುತೇಶ್ಚ ಜೀವಜೀವನಂ ಜೀವಾತ ಕಥಮ್ ? ಇತಿ ಶಂಕಾಶಂಕುಂ ಉನ್ಮೂಲಯಿತುಂ ಏತತ್ಸಂಧ್ಯಾರಂಭಃ

"ಕೃತಿ" ಇತಿ॥ ಅಹಂಕಾರ ತ್ರಯಶಬ್ದೇನ ಇಂದ್ರಾದ್ಯಾಃ॥ ತೃತೀಯ ತಾತ್ಪರ್ಯೇ ಚ "ಅವಿಕಾರೌ ಬ್ರಹ್ಮರುದ್ರೌ ದೇಹಭೇದಾದಿಸಂಭವೇ॥ ವಿಕಾರವಂತ ಇಂದ್ರಾದ್ಯಾಃ ತಸ್ಮಾತ್ ವೈಕಾರಿಕಾ ಮತಾಃ॥ ತ ಏವ ಇಂದ್ರಿಯರೂಪೇಣ ಯತಃ ತ್ವತಿವಿಕಾರಿಣಃ॥ ಜ್ಞಾನಮಾತ್ರಗುಣೋದ್ರಿಕ್ತಾಃ ತಸ್ಮಾತ್ ತೈಜಸನಾಮಕಾಃ॥ "ತಾಮಸಾನಿ ಹಿ ಭೂತಾನಿ ಕಿಂಚಿತ್ ವ್ಯವಹಿತತ್ವತಃ॥" "ಭೋಜ್ಯಗೇಶಃ ಚತುರ್ವಿಂಶಃ ಪಸ್ವಿಂದ್ರಾಂತರ್ನಿಯಾಮಕಃ॥ ತ್ರಯಸ್ತ್ರಿಂಶದ್ ಭೋಕ್ತೃನಾಮಾ ಜಯಾಗ್ರ್ಯೋ ಹರಗೋ ಹರಿಃ"॥೧॥

## ಕನ್ನಡಾರ್ಥ

"ಜೀವಾಂತರ್ಗತ" ಎಂಬುದಾಗಿ "ದಾಸೋಽಹಂ ತವ" ಎಂಬ ತಮ್ಮ ಪದವನ್ನು ವಿವರಿಸಲು "ಆ ಪರಮಾತ್ಮನಿಗೆ ಜೀವ ಎಂದು ನಾಮವಿದೆ", "ಭಗವಾನ್ ಅನಿರುದ್ಧನಿಗೆ ಜೀವನೆಂಬ ನಾಮವಿರುತ್ತದೆ" ಎಂದು ಮುಂತಾಗಿ ಶ್ರುತಿಗಳಿರುವದರಿಂದ "ಜೀವ ಜೀವನವು ಜೀವನಿಂದ ಹೇಗೆ?" ಎಂಬುದಾಗಿ ಹುಟ್ಟುವ ಸಂದೇಹವನ್ನು ನಿಃಶೇಷವಾಗಿ ಕಳೆಯಲು ಈ ಸಂಧಿಯನ್ನು ಶ್ರೀ ದಾಸರಾಯರು ಪ್ರಾರಂಭಿಸುತ್ತಾರೆ.

"ಅಹಂಕಾರತ್ರಯ" ಎಂದು ಮೂಲ ಪದ್ಯದಲ್ಲಿ ಇದೆ. "ಮೂರು ಅಹಂಕಾರಗಳು" ಎಂದು ಹೇಳುವ ಈ ಶಬ್ದವು ಇಂದ್ರ ಮುಂತಾದವರನ್ನು ಹೇಳುವದು. ಆದುದರಿಂದ ಇಂದ್ರಾದಿಗಳನ್ನೂ ಇಲ್ಲಿ ಪರಿಗಣಿಸಬೇಕು. ತೃತೀಯಸ್ಕಂಧ ೧೧ನೆಯ ಅಧ್ಯಾಯದ ಭಾಗವತ ತಾತ್ಪರ್ಯದಲ್ಲಿ—"ದೇಹ ಬರುವದು, ಹೋಗುವದು" ಇವುಗಳಿಂದ ಬ್ರಹ್ಮರುದ್ರರಿಗೆ ವಿಕಾರವಾಗುವುದಿಲ್ಲ. ಆದುದರಿಂದ ಅವರಿಗೆ "ಮಹಾನ್" "ಅಹಂ" ಎಂಬುವದು ಕ್ರಮವಾಗಿ ಸಲ್ಲುತ್ತದೆ. ದೇಹಭೇದ ನಿಮಿತ್ತವಾದ ವಿಕಾರವು ಅವರಿಗೆ ಇರುವುದಿಲ್ಲ. ಇಂದ್ರಿಯಾಭಿಮಾನಿ ದೇವತೆಗಳ ದೇಹವು ಬರಲು ಇಂದ್ರ ಮುಂತಾದ ದೇವತೆಗಳಿಗೆ ವಿಕಾರವಾಗುತ್ತದೆ. ಮೊದಲು ವಿಕಾರರಹಿತರಾಗಿರುವ ಇಂದ್ರಾದಿಗಳಿಗೆ ದೇಹಭೇದವಾಗಲು (ಬೇರೆ ದೇಹ ಬರಲು) ಅವರು ವೈಕಾರಿಕರೆನಿಸಿದರು. ಆ ವೈಕಾರಿಕರೇ ಮತ್ತೆ ಇಂದ್ರಿಯ ಸಮೂಹದಲ್ಲಿ ಹುಟ್ಟಿದರು. ಆಗ ಅವರು "ತೈಜಸ"ರಾದರು. ಅತಿ ವಿಕಾರವು ಅವರಲ್ಲಿ ಆಗಿರುವದರಿಂದ ತೈಜಸರು ಅತಿ

ವಿಕಾರಿಗಳೇ ಹೊರತು ವೈಕಾರಿಕರಾಗುವುದಿಲ್ಲ. ಮೊದಲು ವಿಕಾರವಿಲ್ಲದವರಿಗೆ ವಿಕಾರವು ಬಂದರೆ ಅವರು ವೈಕಾರಿಕರು. ತೈಜಸರಿಗೆ ಈ ತರಹದ ವಿಕಾರ ವಿರದ್ದರಿಂದ ಅವರು ವೈಕಾರಿಕರೆನಿಸಿಕೊಳ್ಳುವುದಿಲ್ಲ. ವೈಕಾರಿಕರೇ ಇಂದ್ರಿಯ ವ್ಯೂಹದಲ್ಲಿ ಹುಟ್ಟುವಾಗ ಜ್ಞಾನವೆಂಬ ಗುಣವೇ ಹೆಚ್ಚಾಗಿ ಉದ್ರೇಕ ಹೊಂದಿ ರುವುದರಿಂದ "ತೈಜಸರು" ಎಂದು ಹೆಸರನ್ನು ಹೊಂದಿರುತ್ತಾರೆ. ಭೂತಾಭಿ ಮಾನಿಗಳಾದ ದೇವತೆಗಳಿಗೆ ವ್ಯವಧಾನವಿರುವುದರಿಂದ ಜ್ಞಾನದ ಉದ್ರೇಕವಿರು ವದಿಲ್ಲ. ಆದುದರಿಂದ ಅವರಿಗೆ "ತೈಜಸ"ವೆಂಬ ಹೆಸರು ಬರದೆ "ತಾಮಸ" ಎಂದು ಹೆಸರು ಬಂದಿರುತ್ತದೆ. ಇಂದ್ರಿಯಾಭಿಮಾನಿ ದೇವತೆಗಳಿಗೆ ಜ್ಞಾನೋದ್ರೋಕವಿದ್ದುದರಿಂದ "ತೈಜಸ"ವೆಂಬ ಹೆಸರು ಬಂದಿತು. ಅದೇ ಭೂತಾಭಿಮಾನಿ ದೇವತೆಗಳಿಗೆ ಜ್ಞಾನಕ್ಕೆ ಸ್ವಲ್ಪ ವ್ಯವಧಾನವಿರುವದರಿಂದ "ತಾಮಸ"ವೆಂಬ ಹೆಸರು ಬಂದಿತು. ವೈಕಾರಿಕರಿಗೆ ಪೂರ್ವದಲ್ಲಿ ವಿಕಾರವಿರದೆ ದೇಹಭೇದವಾದನಂತರ (ಬೇರೆ ದೇಹ ಬರುವುದರಿಂದ) ವಿಕಾರವಾಗಿರುವುದ ರಿಂದ "ವೈಕಾರಿಕ" ಎಂಬ ಹೆಸರು ಬಂದಿತು. ಎಂದು ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ.

"ವಸು-ಇಂದ್ರಾಂತರ್ಗತನಾಗಿ ನಿಯಾಮಕನಾದ ಕೃತಿಪತಿಪ್ರದ್ಯುಮ್ನನು ಭೋಜ್ಯವಸ್ತುಗಳಲ್ಲಿ ೨೪ ರೂಪಗಳಿಂದ ಇರುತ್ತಾನೆ. ರುದ್ರಾಂತರ್ಗತನಾದ ಜಯಾಪತಿ ಸಂಕರ್ಷಣನು ಭೋಕ್ತೃವ್ಯಕ್ತಿಗಳಲ್ಲಿ (ಊಟಮಾಡುವವರಲ್ಲಿ) ೩೩ ರೂಪಗಳಿಂದ ಇರುತ್ತಾನೆ." ಎಂದು ಮೂಲದಲ್ಲಿ ಹೇಳಿದುದಕ್ಕೆ ಪ್ರಮಾಣವಿರುತ್ತದೆ.

**ಅವತರಣಿಕಾ:** ಆದಿತ್ಯನಲ್ಲಿರುವ ೩೬ ರೂಪಗಳನ್ನು ಹೇಳುತ್ತಾ, ಪಿತಾ, ಪಿತಾಮಹ, ಪ್ರಪಿತಾಮಹರಲ್ಲಿ, ವಸುರುದ್ರ ಆದಿತ್ಯರೂಪಗಳನ್ನು ಹೇಳಿ, ಕರ್ತೃ-ಕರ್ಮ-ಕ್ರಿಯೆಗಳಲ್ಲಿ ಅನಿರುದ್ಧನಾಮಕನ ರೂಪವನ್ನು ನಿರೂಪಿಸು ತ್ತಾರೆ.

**ಆರಧಿಕ ಮೂವತ್ತು ರೂಪದಿ ।**
**ವಾರಿಜಾಪ್ತನೊಳಿರುತಿಹನು ಮಾ ।**
**ಧೋರಮಣ ಶ್ರೀ ವಾಸುದೇವನು ಕಾಲನಾಮದಲಿ ॥**

**ಮೂರು ವಿಧ ಪಿತೃಗಳೊಳು ವಸುತ್ರಿಪು।**
**ರಾರಿ ಆದಿತ್ಯಗನಿರುದ್ಧನು।**
**ತೋರಿಕೊಳ್ಳದೆ ಕರ್ತೃ ಕರ್ಮ ಕ್ರಿಯನೆನಿಸಿಕೊಂಬ ॥ ೨ ॥**

**ಪದ್ಯಾರ್ಥ:**—ಆರಧಿಕ ಮೂವತ್ತು=೩೦+೬=೩೬ ರೂಪಗಳಿಂದ ವಾರಿ ಜಾಪ್ತ=ವಾರಿಜ=ಕಮಲಬಂಧು ಆದಿತ್ಯನು. ಈ ಆದಿತ್ಯರು ೧೨ ಜನ, ಹನ್ನೆರಡ ಮೂರಲೆ ೩೬ (ವೈಕಾರಿಕ, ತೈಜಸ ತಾಮಸ ಭೇದದಂತೆ) ರೂಪದಿಂದ, ಮಾಯಾರಮಣ=ಶ್ರೀ ರಮಾರೂಪಳಾದ ಮಾಯಾದೇವಿ ಒಡೆಯ ಪತಿಯಾದ, ಶ್ರೀ ವಾಸುದೇವನು,=ಸಮಸ್ತ ಜಗತ್ತಿನಲ್ಲಿ ವಾಸವಾಗಿ ವ್ಯಾಪ್ತನಾಗಿಪ್ಪನೇ ಕಾಲನಾಮಕನಾಗಿ ವಾಸುದೇವನಾಮದಿಂದ ಇರುವನು. ಮೂರು ವಿಧ ಪಿತೃಗಳೊಳು=ತಂದೆ, ಮುತ್ಯ, ಅಜ್ಜ, ಈ ಮೂರು ಬಗೆಯ ಪಿತೃಗಳಲ್ಲಿ, ತಂದೆ ಯಲ್ಲಿ. ವಸು ಅಂತರ್ಗತ ಪ್ರದ್ಯುಮ್ನ, ಮುತ್ತ್ಯಾನಲ್ಲಿ ತ್ರಿಪುರಾರಿ=ಮೂರು ಊರನ್ನು ಸುಟ್ಟು ತ್ರಿಪುರನಾಮಕ ದೈತ್ಯನಿಗೆ ಶತ್ರು ಎನಿಸಿದ ರುದ್ರನಲ್ಲಿ ಸಂಕ ರ್ಷಣರೂಪಿ ಹರಿಯು, ಆದಿತ್ಯಗ-ಅಜ್ಜನಲ್ಲಿರುವ, ಸೂರ್ಯಾಂತರ್ಯಾಮಿ. ವಾಸುದೇವನು, ಇರುವನಲ್ಲದೇ ಅನಿರುದ್ಧನಾಮಕ ಹರಿಯು, ತೋರಿಕೊಳ್ಳದೆ= ಮಂದಜನರಿಗೆ ತಾನು ಸಕಲ ಕರ್ಮ ಕ್ರಿಯಾ ಕರ್ತೃನಲ್ಲಿ ನಿಂತು ಮಾಡಿಸುವ ನೆಂಬುದು ತಿಳಿಸದಲೆ, ಕರ್ತೃ=ಪಿತೃ ಶ್ರಾದ್ಧಾದಿಗಳನ್ನು ಮಾಡುವವರಲ್ಲಿ, ಕರ್ಮ=ಶ್ರಾದ್ಧ ಕರ್ಮದಲ್ಲಿ, ಕ್ರಿಯಾ=ಸಂಕಲ್ಪ, ಅರ್ಚಿಪಾತ್ರಿ ಇಡುವಿಕೆ, ಬ್ರಾಹ್ಮಣರ ಆಹ್ವಾನ, ಪಾದಪ್ರಕ್ಷಾಲನ, ಭೋಜನಾದಿ ಕ್ರಿಯೆಗಳಲ್ಲಿ ಅನಿರುದ್ಧ ನಾಮಕ ಹರಿಯು, ಕರ್ತೃ, ಕರ್ಮ, ಕ್ರಿಯಾ ಈ ಮೂರು ರೂಪದಿಂದ ಕರೆಸು ವನು ತನ್ನಿಯಾಮಕನಾಗಿ ಇರುವನೆಂದು ಅಭಿಪ್ರಾಯ.

**ದ್ರೌಪದೀಶಪತಿವಿಠಲರು:** ಆರಧಿಕ ಮೂವತ್ತು ರೂಪವ— ಸೂರ್ಯಾಂತರ್ಗತ ೩೬ ವಾಸುದೇವ, ಕಾಲನಾಮದಿ ಅಂದರೆ, ೧. ಪ್ರಾತಃ, ೨. ಸಂಗವ, ೩. ಮಧ್ಯಾಹ್ನ, ೪. ಅಪರಾಹ್ಣ, ೫. ಸಾಯಾಹ್ನ ಒಂದೊಂದು ಕಾಲಕ್ಕೆ ೬ ಆರು ಘಳಿಗಿ ಪ್ರಕಾರ ೩೦ ಘಳಿಗಿಗೆ ೧. ಉದ್ಗೀಥ, ೨. ಪ್ರಸ್ಥಾವ, ೩. ಹಿಂಕಾರ, ೪. ಪ್ರತಿಹಾರ, ೫. ನಿಧನ, ಉದಯಕಾಲ ಆರಂಭಮಾಡಿ ಸಾಯಂಕಾಲ ಪರಿಯಂತರ ಪಂಚಸಾಮ. ಇನ್ನೊಂದು ಪ್ರಕಾರ, ಉಪದ್ರವ ಆದಿಸಪ್ತ ಸಾಮ ಮಾಡಿದರೆ ಒಂದೊಂದು ಕಾಲಕ್ಕೆ ೪। ಘಳಿಗಿ ಘಳ ೨÷

ಕಳಾ ೧, ಕಾಷ್ಠ, ಮುಹೂರ್ತ ೩-೪ ಯಾಮ, ದಿವಸ ೫ ಇದು ಒಂದು ಪ್ರಕಾರ ಒಂದೊಂದು ಕಾಲಕ್ಕೆ ಐದೈದು ಮೂರ್ತಿ ಪ್ರಕಾರ ೩೦ ಸಾವು ಮೂರ್ತಿ. ಕಳಾ ಕಾಷ್ಠಾದಿ ಅನಿರುದ್ಧಾದಿ ೫ ಮೂರ್ತಿ ಅಂತು ೩೫, ಒಂದು ಮಹಾಪ್ರಳಯಕಾಲ ವಟಪತ್ರಶಾಯಿ ಮೂರ್ತಿ, ಒಟ್ಟು ೩೬ ಇದು **ಅಧಿದೈವ ಮೂರ್ತಿ.** ಇನ್ನು ೯೩ ಮೂರ್ತಿಗಳ ವಿವರ ೧ ಪಿತೃ ವಸು ೮×೩=೨೪ ಪ್ರದ್ಯುಮ್ನ ಪಿತಾಮಹ ರುದ್ರ ೧೧x೩=೩೩, ರುದ್ರ ಸಂಕರ್ಷಣ—ಆದಿತ್ಯ ೧೨x೩=೩೬ ಸೂರ್ಯರಲ್ಲಿ ವಾಸುದೇವ ಒಟ್ಟಿಗೆ ೯೩. ೧. ಕರ್ತೃ, ೨. ಕರ್ಮ ೩. ಕ್ರಿಯಾ. ಕರ್ತೃವಿನಲ್ಲಿ ಅನಿರುದ್ಧ ೧ ಜೀವನಾಮಕ ಅನಿರುದ್ಧ ಮೂರ್ತಿ ಯೆಂತ ಜೀವಾಖ್ಯ ಸುಳಾದಿ, ಕರ್ಮದಲ್ಲಿ ಸರ್ವೇಂದ್ರಿಯ ನಿಯಾಮಕ ಹೃಷೀ ಕೇಶಮೂರ್ತಿ. ಕ್ರಿಯಾ ಎಂದರೆ ಕರ್ಮಫಲ ತೆಗೆದುಕೊಂಡು ಸಂರಕ್ಷಿಸುವ ಶ್ರೀ ವಿಷ್ಣುಮೂರ್ತಿ. ಸ್ಥಿತಿಪಾಲನೆ ಇದೆ ಅಧ್ಯಾತ್ಮ ಹೀಗೆ ೯೬ ರೂಪ.

**ಗುರು ಶ್ರೀಶವಿಠಲರ ಶಿಷ್ಯರು :** ಆರಧಿಕ ಮೂವತ್ತು ರೂಪದಿ ವಾರಿ ಜಾಪ್ತನೊಳಿರುತಿಹನು ೩೬ ರೂಪಗಳಿಂದ ಕಮಲಾಪ್ತ ಸೂರ್ಯ, ದ್ವಾದಶಾ ದಿತ್ಯರಲ್ಲಿ ವೈಕಾರಿಕ, ತೈಜಸ, ತಾಮಸ ೩ ಪ್ರಕಾರ ಭೇದದಿಂದ ೧೨ ಮೂರಲೆ ೩೬ ರೂಪಗಳಿಂದ ದ್ವಾದಶಾಂತರ್ಗತನಾಗಿ ಮಾಯಾರಮಣ ವಾಸುದೇವನು, ಕಾಲನಾಮದಲಿ ಸಕಾಲನಾಮದಿಂದ ಕರೆಸಿಕೊಂಬುವನು. ಮತ್ತು ಪಿತಾ, ಪಿತಾ ಮಹಾ, ಪ್ರಪಿತಾಮಹ ೩ ವಿಧ ಪಿತೃಗಳಲ್ಲಿ, ಪಿತೃವಿನಲ್ಲಿ ವಸು, ಪಿತಾಮಹನಲ್ಲಿ ರುದ್ರ, ಪ್ರಪಿತಾಮಹನಲ್ಲಿ ಆದಿತ್ಯ, ಈ ಮೂರು ನಾಮದಿಂದ ಇರುವನು. ಅನಿರುದ್ಧನಾಮಕ ಪರಮಾತ್ಮ ಅಜ್ಞ ದೃಷ್ಟಿಗೆ ಗೋಚರನಾಗದೇ ಕರ್ತೃ, ಕರ್ಮ, ಕ್ರಿಯನೆನಸಿಕೊಂಬುವನು. ಕರ್ತೃವಿನಲ್ಲಿ, ಕರ್ಮದಲ್ಲಿ, ಕ್ರಿಯಾದಲ್ಲಿ ಈ ಮೂರು ನಾಮದಿಂದ ಶಾಂತಿಪತಿ ಅನಿರುದ್ಧನಾಮಕ ಪರಮಾತ್ಮ ಕರೆಸಿಕೊಂಬ.

೨೪=ವಸ್ವಂತರ್ಗತ ಪ್ರದ್ಯುಮ್ನ ರೂಪಗಳು ಪಿತಾನಲ್ಲಿ

೩೩=ರುದ್ರಾಂತರ್ಗತ ಸಂಕರ್ಷಣ ರೂಪಗಳು ಪಿತಾಮಹನಲ್ಲಿ.

೩೬=ಆದಿತ್ಯಾಂತರ್ಗತ ವಾಸುದೇವರೂಪಗಳು ಪ್ರಪಿತಾಮಹನಲ್ಲಿ

೯೩ ತ್ರಿನವತಿ ರೂಪಗಳು ೩=ಕರ್ತೃ, ಕರ್ಮ, ಕ್ರಿಯಾದಲ್ಲಿ ಅನಿರುದ್ಧ ನಾಮಕನು ಮೂರು ರೂಪಗಳಿಂದ ಇರುವನು. ೯೬ ಹೀಗೆ ಒಟ್ಟಿಗೆ ೯೬ ರೂಪ. ॥ ೨ ॥

**ಭಾವಸೂಚನ:** ಆರಧಿಕೇತಿ ॥ ತಥಾಚೋಕ್ತಂ ಪ್ರವೃತ್ತೇ ಚತುರ್ಮುಖೇನ ॥ "ಚತುರ್ವಿಂಶತಿರೂಪೈಸ್ತು ವಸುಗಸ್ತ್ವಪಿ ಭೋರುಹ ॥ ತ್ರಿಂಶದ್ಭಿಃ ತ್ರ್ಯಧಿಕೈರ್ಜ್ಞೇಯಃ ಶೌರಿಃ ಸಂಕರ್ಷಣಃ ಸ್ತಥೇತಿ ॥ ಷಡುಪೇತೈಸ್ತು ತ್ರಿಂಶದ್ಭಿಃ ವಾರಿಜಾಪ್ತೇ ವ್ಯವಸ್ಥಿತ ಇತಿ ॥ ಚಿರಾಚಿರಾರ್ಯಮಾಣಸ್ತ್ರಯಃ॥೨॥

**ಸೂಚನೆ:** ಈ ಪ್ರಮಾಣದಲ್ಲಿ ಕೊನೆಗೆ ಚಿರ ಪಿತೃಗಳು ಅಚಿರ ಪಿತೃಗಳು, ಅರ್ಯಮಾಣ ಪಿತೃಗಳೆಂದು ಮೂರು ವಿಧ ಪಿತೃಗಳೆಂದು ಹೇಳಿದ್ದಾರೆ. ತಾರತಮ್ಯಕ್ಕೆ ಅನುಕೂಲ.

## ಶ್ರೀ ವ್ಯಾಸದಾಸ ಸಿದ್ಧಾಂತಕೌಮುದೀ

"ಆರಧಿಕ" ಇತಿ ॥ "ಷಟ್ ತ್ರಿಂಶದ್ ರೂಪವಾನ್ ವಿಷ್ಣುಃ ಕಂಜಮಿತ್ರೇ ಜಗತ್ಪತಿಃ" ॥ "ಮೂರೇತಿ" ತದ್ವಿವರಣಂ "ವಸು" ಇತಿ ॥ ಇದಂ ಉಕ್ತಂ ಭವತಿ ॥ ಏತೇ **ವಸುರುದ್ರಾದಿತ್ಯಾಖ್ಯಾಃ ದೇವವಿಶೇಷಾಃ ಏವ ॥ ನ ತು ವಸುರುದ್ರಾದಿತ್ಯಾಖ್ಯ ಗಣದೇವತಾಃ ॥** ಪಿತೃ, ಪಿತಾಮಹ, ಪ್ರಪಿತಾಮಹ ತದನುವರ್ತಿಷು ಅಂಶಬಾಹುಲ್ಯಾತ್ ಸ್ಮರ್ತವ್ಯತ್ವೇನ ಉಕ್ತಾಃ ॥ "ವಸವಃ ಪಿತರಃ ಜ್ಞೇಯಾಃ ರುದ್ರಾಃ ತತ್ರ ಪಿತಾಮಹಾಃ ॥ ಪಿತುಃ ಪಿತಾಮಹಾಃ ಪ್ರೋಕ್ತಾಃ ಆದಿತ್ಯಾಃ ಬರ್ಹಿಷಿ ಸ್ಥಿತಾಃ ॥ ವಸು ರುದ್ರಾದಿತ್ಯ ಸಂಜ್ಞಾಃ ಪಿತರಃ ಶ್ರಾದ್ಧದೇವತಾಃ ॥ ಪ್ರೀಣಯಂತಿ ಮನುಷ್ಯಾಣಾಂ ಪಿತೄನ್ ಶ್ರಾದ್ಧೇನ ತರ್ಪಿತಾಃ" ॥ ಇತಿ ಸ್ಮೃತೇಃ ॥ ಅಧಿಕ ವಿಚಾರಸ್ತು ತಾರತಮ್ಯವಿವೃತೌ ಜ್ಞೇಯಃ ॥ **ಪಿತೃಪದೇನ ತದನುವರ್ತಿಗ್ರಹೇ** "ಯದ್ಯಪ್ಯೇತಸ್ಯ ಬಹ್ವ್ಯೋಪಿ ಸುತಾಃ ಸ್ಯುಃ ತದಪೀಹ ತು ॥ ಸಂಬಂಧಸಾಮ್ಯಾತ್ ಏಕೈವ ಗಣಿತೇತ್ಯವಧಾರ್ಯತಾಮ್" ॥ ಇತಿ. ಕರ್ಮಕೌಸ್ತುಭವಚನಂ ಮಾನಮ್ ॥ "ಲೀ" ತೃತೀಯಾ ॥ ೨ ॥

## ಕನ್ನಡಾರ್ಥ

ಕಾಲಾಂತರ್ಗತ ವಾಸುದೇವನ ರೂಪಸಂಖ್ಯೆಯನ್ನು ತಿಳಿಸುತ್ತಾರೆ. "ಆರಧಿಕ" ಎಂಬ ಪದ್ಯದಿಂದ ಕಮಲಸಖನಾದ ಸೂರ್ಯನಲ್ಲಿ ೩೬ ರೂಪಗಳಿಂದ ಜಗತ್ಪತಿಯಾದ ಶ್ರೀ ವಿಷ್ಣುವು ಇರುತ್ತಾನೆ. ಮೂರು ವಿಧರಾದಾ ಎಂಬುದನ್ನು ವಿವರಿಸಲು "**ವಸುರುದ್ರಾದಿತ್ಯ**" ಎಂಬ ವಚನವು ಹೊರಟಿದೆ.

ಪಿತೃ, ಪಿತಾಮಹ, ಪ್ರಪಿತಾಮಹರೆಂದು ಮೂರು ವಿಧ ಪಿತೃಗಳಿಗೆ ದೇವತೆಗಳಾದ ಈ ವಸು, ರುದ್ರ, ಆದಿತ್ಯರೆಂಬುವವರು **ಬೇರೆ ಪ್ರತ್ಯೇಕ ದೇವತೆಗಳೇ ಹೊರತು ವಸು-ರುದ್ರ ಆದಿತ್ಯ ಗಣದೇವತೆಗಳಲ್ಲ ;** "ಪಿತೃ, ಪಿತಾಮಹ, ಪ್ರಪಿತಾಮಹ [ (ತಂದೆ–ತಂದೆಯ ತಂದೆ–(ಅಜ್ಜ) ತಂದೆಯ ತಂದೆಯ ತಂದೆ–(ಮುತ್ತಜ್ಜ) ] ರುಗಳು. ಹಾಗೂ ಅವರ ಅನುವರ್ತಿಗಳಲ್ಲಿ ಸ್ಮರಿಸಲ್ಪಡಬೇಕಾದವರು. ವಸುಗಳನ್ನು ಪಿತೃಗಳಲ್ಲಿಯೂ, ರುದ್ರರನ್ನು ಪಿತಾಮಹರಲ್ಲಿಯೂ, ಆದಿತ್ಯರನ್ನು ಪ್ರಪಿತಾಮಹರಲ್ಲಿಯೂ ಸ್ಮರಿಸಬೇಕು. ವಸು ರುದ್ರಾದಿತ್ಯರುಗಳು, ಪಿತೃಗಳು, ಶ್ರಾದ್ಧದೇವತೆಗಳು. ಶ್ರಾದ್ಧದಿಂದ ತೃಪ್ತಿ ಪಡೆದು ಮನುಷ್ಯರ ಪಿತೃಗಳನ್ನು ತೃಪ್ತಿಬಡಿಸುತ್ತಾರೆ" ಎಂದು ಸ್ಮೃತಿಯಿರುತ್ತದೆ. ಹೆಚ್ಚಿನ ವಿಚಾರವನ್ನು ತಾರತಮ್ಯ ವಿವೃತಿಯಲ್ಲಿ ತಿಳಿದುಕೊಳ್ಳಬೇಕು. ಪಿತೃ ಶಬ್ದದಿಂದ ಅವರ ಅನುವರ್ತಿಗಳನ್ನೂ ಅರ್ಥದಿಂದ ಸಂಗ್ರಹಿಸಿ "ಪಿತೃ ತದನುವರ್ತಿಗಳು" ಎಂದು ಅರ್ಥ ತಿಳಿಯಲು "ಯದ್ಯಪ್ಯೇತಸ್ಯ" ಎಂದು ಪ್ರಕೃತ ಟೀಕಾಕಾರರು ಉದಾಹರಿಸಿರುವ ಕರ್ಮ ಕೌಸ್ತುಭ ವಚನವು ಪ್ರಮಾಣವಾಗಿದೆ.

"ಕಾಲನಾಮದಲೀ=ಕಾಲನಾಮದಿಂದ" ॥ ೨ ॥

**ಅವತರಣಿಕಾ :** ಹಿಂದೆ ೧-೨ನೇ ಪದ್ಯಗಳಲ್ಲಿ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಅನಿರುದ್ಧರ ಕಾರ್ಯವನ್ನು ಪೇಳಿ ಈ ಪದ್ಯದಿಂದ ನಾರಾಯಣ ರೂಪಿ ಭಗವಂತನ ಷಣ್ಣವತಿ ರೂಪ ಕಾರ್ಯ ಪೇಳುತ್ತಾರೆ.

**ಸ್ವವಶ ನಾರಾಯಣನು ತಾ ಷ।**
**ಣ್ಣವತಿ ನಾಮ ಕರೆಸುತಲಿ ವಸು।**
**ಶಿವದಿವಾಕರ ಕರ್ತೃ ಕರ್ಮ ಕ್ರಿಯೆಗಳೊಳಗಿದ್ದು ॥**
**ನೆವನವಿಲ್ಲದೆ ನಿತ್ಯದಲಿ ತ।**
**ನ್ನವರು ಮಾಡುವ ಸೇವೆ ಕೈಕೊಂ।**
**ಡವರ ಪಿತೃಗಳಿಗೀವನಂತಾನಂತ ಸುಖಗಳನು ॥ ೩ ॥**

**ಪದ್ಯಾರ್ಥ :** (ಸ್ವತಂತ್ರತ್ವಾತ್–ಸ್ವವಶ) ವಿದ್ಯಾಧಿರಾಜೀಯ ಸ್ವ= ಸ್ವತಂತ್ರನಾಮಕ ಹರಿಯು, ಬೇರೊಬ್ಬರ ವಶನಾಗದೇ ತನ್ನ ವಶದಲ್ಲೆ ತಾನು ಇರುವನು, ಸ್ವತಂತ್ರರೂಪಿ ನಾರಾಯಣನು=ಮುಕ್ತಾಶ್ರಯನೂ, ನಿರ್ದೋಷ

ಜ್ಞಾನಾನಂದ ಪರಿಪೂರ್ಣಾದಿ ಅನಂತನಾಮುಗಳಿಂದ ಕರೆಸುವ ಮೂಲರೂಪಿ ಹರಿಯು ನಾರಾಯಣನಾಮುದಿಂದ, ತಾ=ತಾನೇ, ಷಣ್ಣವತಿನಾಮದಲಿ ಕರೆಸುತ=ಈ ಅಕ್ಷರ ಶಬ್ದ ವಾಚ್ಯ ನಿಯಾಮಕ, ಷಟ್‌ನವತಿ=ಷಣ್ಣವತಿ ನಾಮಕನಾಗಿ ಕರೆಸುತ್ತಾ ವಸು ೮ × ೩=೨೪, ಶಿವ ೧೧ × ೩=೩೩, ದಿವಾಕರ=ಆದಿತ್ಯರು ೧೨ × ೩ = ೩೬ ಹೀಗೆ ೨೪+೩೩+೩೬=೯೩, ರೂಪಗಳಿಂದ ೨೪ ಪ್ರದ್ಯುಮ್ನ ೩೩ ಸಂಕರ್ಷಣ ೩೬ ವಾಸುದೇವರೂಪ, ಮತ್ತು ೧ ಕರ್ತೃ ೨ ಕರ್ಮ ೩ ಕ್ರಿಯಾ ಮೂರರಲ್ಲಿ ಅನಿರುದ್ಧನು ಒಟ್ಟಿಗೆ ೯೬ ರೂಪಗಳು. ಈ ಷಣ್ಣವತಿ ರೂಪಗಳಲ್ಲಿಯೂ ಮತ್ತು ಷಣ್ಣವತಿ (೯೬) ಶ್ರಾದ್ಧಗಳಲ್ಲಿಯೂ ನಿಯಾಮಕನಾಗಿ ಆಯಾ ರೂಪಗಳಿಂದ ನಿಯಾಮಕನಾಗಿ, ನಾರಾಯಣನು ನೆವನವಿಲ್ಲದೆ ನಿತ್ಯದಲಿ=ಕೇವಲ ತಮ್ಮ ಪಿತೃಗಳಿಗೋಸುಗ ಮಾತ್ರವಲ್ಲದೇ, ಪಿತ್ರಂತರ್ಗತ ಪಂಚರೂಪಿ ಹರಿಯು ತುಷ್ಟನಾಗಲೆಂದು, ನಿರ್ವ್ಯಾಜ ಭಕ್ತಿಯಿಂದ ಶ್ರೀಹರಿಯ ಪ್ರೀತಿಗೋಸುಗ ನಿತ್ಯದಲಿ, ಸದಾ ಪ್ರತಿನಿತ್ಯ ಬ್ರಹ್ಮಯಜ್ಞಾದಿ ಕರ್ಮ ಪಿತೃ ತರ್ಪಣವಲ್ಲಿಯೂ ಸಹ ಈ ಅನುಸಂಧಾನಪೂರ್ವಕ ಮತ್ತು ಶ್ರಾದ್ಧಾದಿ ಕರ್ಮದಲ್ಲಿಯೂ ಕೇವಲ ಹರಿಪ್ರೀತಿಗೋಸುಗ, ತನ್ನವರು ಮಾಡುವ ಸೇವೆ=ಶ್ರಾದ್ಧಾದಿ ಕರ್ಮ ಮಾಡುವರ ಅಂತರ್ಗತರಾದ ವಸುರುದ್ರ ಆದಿತ್ಯರೆ ಶ್ರಾದ್ಧ ಕ್ರಿಯಾದಲ್ಲಿದ್ದು ಪ್ರಾಣಾಂತರ್ಗತ ಶ್ರೀಹರಿಗೆ ಸಮರ್ಪಣ ಮಾಡುವರು. ಇವರೆ ಹರಿಗೆ ತನ್ನವರು. ಇವರು ಅರ್ಪಿಸಿದ ಸೇವೆ ಕೈಕೊಂಡು, ಅವರ ಪಿತೃಗಳಿಗೀವ=ಶ್ರಾದ್ಧಕರ್ಮವನ್ನು ಪಿತ್ರಂತರ್ಯಾಮಿ ಭಗವಂತನಿಗೆ ನಿರ್ವ್ಯಾಜದಿಂದ ಅರ್ಪಿಸುವವರ, ಮಾತಾ ಪಿತ ಭ್ರಾತೃ ಮುಂತಾದ ೧೦೧ ಕುಲ ವಂಶದಲ್ಲಿ ಜನಿಸಿದ ಎಲ್ಲ ಪಿತೃಗಳಿಗೆ ಯಾವ ಜನ್ಮದಲ್ಲಿದ್ದರೂ ಚಿರ ಪಿತೃಗಳ ದ್ವಾರಾ, ಅನಂತಾನಂತ ಸುಖಗಳನ್ನು ಕೊಡುವನು. ಹೀಗೆ ನಾರಾಯಣನು ಸಕಲರಲ್ಲಿ ನಿಯಾಮಕನಾಗಿ ಅನಂತ ಸುಖಗಳನ್ನು ಕೊಡುತ್ತಾನೆ.

**ದ್ರೌಪದೀಶಪತಿವಿಠಲರು:** ಸ್ವವಶನಾರಾಯಣನು—ಮೂಲರೂಪಿ ನಾರಾಯಣ ತೊಂಭತ್ತಾರು ರೂಪದಿಂದ ಷಣ್ಣವತಿಯೆನಿಸುತ್ತಾನೆ. ॥ ೩ ॥

**ಗುರುಶ್ರೀಶವಿಠಲರ ಶಿಷ್ಯರು:** ಸ್ವವಶನಾರಾಯಣನು = ರಮಾ ಬ್ರಹ್ಮಾದಿಗಳಿಗೆ ಪರವಶನಾದಂಥ ಪರಮಾತ್ಮ, ಸ್ವವಶ=ತನಗೆ ತಾನೇ ವಶನಾದ ರಮಾಕಾಂತ ಶ್ರೀ ಆದಿನಾರಾಯಣನು. ತಾ ಷಣ್ಣವತಿ ನಾಮದಲಿ ಕರೆಸುತಲಿ,

ಷಣ್ಣವತಿ ೯೬ ನಾಮಗಳಿಂದ ಕರೆಸಿಕೊಳ್ಳುತ್ತ, ವಸು, ಶಿವ, ದಿವಾಕರರೊಳಗೆ ವಸು ಅಷ್ಟವಸುಗಳಲಿ, ಶಿವ–ಏಕಾದಶ ರುದ್ರರಲ್ಲಿ, ದಿವಾಕರ–ದ್ವಾದಶಾದಿತ್ಯರಲ್ಲಿ ಅಂತರ್ಗತನಾಗಿ, ಕರ್ತೃಗಳಲ್ಲಿ, ಕರ್ಮಗಳಲ್ಲಿ, ಕ್ರಿಯಗಳಂತರ್ಗತನಾಗಿ ಶ್ರೀ ಪರಮಾತ್ಮ ನೆವನವಿಲ್ಲದಲೇ=ನಿಮಿತ್ತವಿಲ್ಲದಲೇ, ತನ್ನವರು ಮಾಡುವ ಸೇವೆ= ಭಗವದ್ಭಕ್ತರು ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣುಪ್ರೀತ್ಯರ್ಥ ಪಿತೃಗಳ ಉದ್ಧಾರಗೋಸುಗ ಮಾಡುವ ಸೇವಾವನ್ನು ಕೈಕೊಂಡು, ಅವರವರ ಪಿತೃಗಳಿಗೆ ನಿತ್ಯದಲ್ಲಿ ಪಿತೃ, ಪಿತಾಮಹಾ, ಪ್ರಪಿತಾಮಹಾದಿಗಳಿಗೆ, ಈವನಂತಾನಂತ ಸುಖಗಳನಾ ॥ ಶ್ರೀ ರಮಾಕಾಂತ ಶ್ರೀ ನಾರಾಯಣನು ಅನಂತಾನಂತ ಪ್ರಕಾರ ಮುಕ್ತಿ ಸುಖಗಳ ಕೊಟ್ಟು, ಆನಂದದಲ್ಲಿ ಇಹಪರದಲ್ಲಿ ಇಡುವನು (ಶ್ರೀಹರಿ) ॥ ೩ ॥

**ಭಾವಸೂಚನ :** ಸ್ವವಶೋ ವ್ಯಾಪ್ತೀತ್ಯುಕ್ತೇಃ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವವಶ" ಇತಿ ॥ "ಷಡಿತಿ" ವಿವೃತಮೇತತ್ ॥ "ಕರ್ತಾ" ಶ್ರಾದ್ಧಸ್ಯ "ಕರ್ಮ" ತಸ್ಯ ಕ್ರಿಯಾ ॥ ತದುತ್ಥಂ ಪುಣ್ಯಮ್ ॥ "ನೆವನ" ಹರಿಪ್ರೀತಿ ಮನುದ್ದಿಶ್ಯ ಪಿತೃಮಾತ್ರಪ್ರೀತಿಃ ॥ ೩ ॥

## ಕನ್ನಡಾರ್ಥ

ನಾರಾಯಣ ರೂಪದ ವ್ಯಾಪಾರವನ್ನು ತಿಳಿಸುತ್ತಾರೆ ಈ ಪದ್ಯದಿಂದ. ಷಣ್ಣವತಿ ಶ್ರಾದ್ಧಗಳ ವಿವರವನ್ನು ಹಿಂದೆ ವಿವರಿಸಲಾಗಿರುತ್ತದೆ.

"ಶ್ರಾದ್ಧಕರ್ತಾ ಶ್ರಾದ್ಧಕರ್ಮ ಇದನ್ನು ನಿರ್ವಹಿಸುವ ಕ್ರಿಯಾ ಅದರಿಂದಾಗುವ ಪುಣ್ಯ "ಇವುಗಳಲ್ಲಿ ಇದ್ದು" ಎಂದು ಅರ್ಥ ತಿಳಿಯಬೇಕು.

"ನೆವನ"ವಿಲ್ಲದೆ ಎಂದರೆ ಕೇವಲ ನಿಮಿತ್ತವಿಲ್ಲದೆ ನೆಪವಿಲ್ಲದೆ ಎಂದು ಅರ್ಥ. ಶ್ರಾದ್ಧ ಕರ್ಮಕ್ಕೆ ಕೆಲವರು ತಮ್ಮ ತಮ್ಮ ಪಿತೃಗಳ ಪ್ರೀತಿಯನ್ನೇ ಮುಖ್ಯ ನಿಮಿತ್ತಮಾಡಿಕೊಳ್ಳುತ್ತಾರೆ. ಶ್ರೀಹರಿಯ ಪ್ರೀತಿಯಲ್ಲಿ ಅವರಿಗೆ ಉದ್ದೇಶವಿರುವುದಿಲ್ಲ. ಇದಕ್ಕೆ ನೆವನವೆನ್ನುತ್ತಾರೆ. ॥೧೩॥

**ಅವತರಣಿಕಾ :**—ಅನಿರುದ್ಧಾದಿ ಪಂಚರೂಪಾತ್ಮಗಳಿಗೆ ಕಿಂಚಿತ್ ಭೇದವಿಲ್ಲವೆಂದು ತಂತುಪಟದ ದೃಷ್ಟಾಂತದಿಂದ ಪೇಳುತ್ತಾ, ಈ ಐದು ರೂಪ

ಗಳನ್ನು ವಸು ರುದ್ರ ಆದಿತ್ಯರಲ್ಲಿ ಚಿಂತನೆ ಮಾಡಿ ಪಿತೃಕಾರ್ಯಮಾಡುವ ಭಕ್ತರನ್ನು ಇಹಪರಂಗಳಲಿ ಸಂತೈಸಿ ಅಖಿಳಾರ್ಥಗಳ ಪಾಲಿಸುವನೆಂದು ಹೇಳುತ್ತಾರೆ.

**ತಂತುಪಟದಂದದಲಿ ಲಕ್ಷ್ಮೀ ।**
**ಕಾಂತ ಪಂಚಾತ್ಮಕನೆನಿಸಿ ವಸು ।**
**ಕಂತುಹರ ರವಿ ಕರ್ತೃಗಳೊಳಗಿದ್ದನವರತ ತನ್ನ ॥**
**ಚಿಂತಿಸುವ ಸಂತರನು ಗುರುಮ ।**
**ಧ್ವಾಂತರಾತ್ಮಕ ಸಂತಯಿಸುವನು ।**
**ಸಂತತಖಿಳಾರ್ಥಗಳ ಪಾಲಿಸಿ ಇಹಪರಂಗಳಲಿ ॥೪॥**

**ಪದ್ಯಾರ್ಥ:**—ತಂತುಪಟದಂದದಲಿ = ಎಳೆಗಳು ವಸ್ತ್ರಕ್ಕೆ ಓತಪ್ರೋತವಾಗಿ ಹೇಗೆ ಕಾರಣವಾಗುತ್ತವೆಯೋ ಹೇಗಂದರೆ, ೧. ಕಾರ್ಪಾಸದಿಂದ ೨. ತಂತು ಎಳೆ ೩. ಓತ ೪. ಪ್ರೋತ ೫. ಪಟ, ಹೀಗೆ ಅರಳೆಯಿಂದ ಎಳೆಗಳು, ಎಳೆಗಳು ಅಡ್ಡ ಉದ್ದಗೆ ನೇಯಿದರೆ ಪಟ ವಸ್ತ್ರವಾಗುತ್ತದೆ. ಎಳೆಗಳೆಲ್ಲ ಕೂಡಿ ಹೇಗೆ ವಸ್ತ್ರವಾಗುತ್ತದೆಯೋ, ಎಳೆಗಳಿಗೂ ವಸ್ತ್ರಕ್ಕೂ ಹೇಗೆ ಭೇದವಿಲ್ಲದೇ ವಸ್ತ್ರ ಒಂದೇ ಎಂದು ಕರೆಸುತ್ತದೆ. ಇದರಂತೆ ಲಕ್ಷ್ಮೀಕಾಂತ = ಶ್ರೀಲಕ್ಷ್ಮೀದೇವಿಯ ಪತಿ, ಪಂಚಾತ್ಮಕನೆನಿಸಿ = ಪ್ರದ್ಯುಮ್ನ, ಸಂಕರುಷಣ, ವಾಸುದೇವ, ಅನಿರುದ್ಧ, ನಾರಾಯಣ ಈ ಕ್ರಮವಾಗಿ, ವಸು=ಅಷ್ಟಜನ ವಸುದೇವತೆಗಳಲ್ಲಿ, ಕಂತುಹರ= ಕಾಮಹರ ರುದ್ರರಲ್ಲಿ ಸಂಕರ್ಷಣ, ರವಿ = ೧೨ ಜನ ಆದಿತ್ಯರಲ್ಲಿ ವಾಸುದೇವ, ಕರ್ತೃ ಕರ್ಮ ಕ್ರಿಯಾಗಳಲ್ಲಿ ಅನಿರುದ್ಧ ಈ ಎಲ್ಲರಲ್ಲಿ ವ್ಯಾಪಿಸಿ ನಿಯಾಮಕ ತೃಪ್ತಿಪ್ರದ ನಾರಾಯಣನು ಇರುವನೆಂದು, ಅನವರತ ತನ್ನ= ಪ್ರತಿನಿತ್ಯದಲ್ಲಿಯೂ ತನ್ನನ್ನು, ಚಿಂತಿಸುವ ಸಂತರನು = ಧ್ಯಾನಮಾಡತಕ್ಕ ಕೇವಲ ತನ್ನ ಭಕ್ತರನ್ನು, ಗುರುಮಧ್ವಾಂತರಾತ್ಮಕ = ಪ್ರಾಣಾಂತರ್ಯಾಮಿ ಪಂಚರೂಪಿ ಹರಿಯು, ಸಂತಯಿಸುವನು = ಕಾಪಾಡುವನು, ರಕ್ಷಿಸುವನು. ಹೇಗೆ ಕಾಪಾಡುವನೆಂದರೆ, ಇಹಪರಂಗಳಲಿ, ಈ ಲೋಕದಲ್ಲಿ ಪರ ಮುಕ್ತಿಯಲ್ಲಿ ಸಹ, ಅಖಿಳಾರ್ಥಗಳ ಪಾಲಿಸಿ = ಸಕಲಸಂಪದರೂಪವಾದ ಜ್ಞಾನಭಕ್ತಿ, ವಿರಕ್ತಿರೂಪವಾದ ಸ್ವಪ್ರಸಾದವಿತ್ತು ಕಾಪಾಡುವನು.

**ದ್ರೌಪದೀಶಪತಿ ವಿಠಲರು:—** ತಂತುಪಟದಂದದಲಿ = ೧ ಕಾರ್ಪಾಸ, ೨. ತಂತು, ೩. ವೋತ, ೪. ಪ್ರೋತ, ೫ ಪಟ. ||೪||

**ಗುರುಶ್ರೀಶವಿಠಲರ ಶಿಷ್ಯರು:—** ಮೂಲಾಧಾರ ಓತಪ್ರೋತವಾಗಿ ವ್ಯಾಲೆ ಒಳಗೆ ಒಂದರೊಳಗೊಂದು ವ್ಯಾಪ್ತವಾಗಿ ಅಂಬರ ಅರಿವೆಯಾಗಿ ತಂತು ಪಟವೆಂದು ಕರೆಸುತ್ತದೆ. ಆ ಪ್ರಕಾರ ಲಕ್ಷ್ಮೀಕಾಂತ ಪಂಚಾತ್ಮಕನೆನಿಸಿ, ಶ್ರೀ ರಮಾವಲ್ಲಭ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ, ಬಹಿರಂತರ ವ್ಯಾಪ್ತನಾಗಿ ತಂತುಪಟದೋಪಾದಿಯಲಿ ಈ ಪ್ರಕಾರ ಪಂಚಾತ್ಮಕನೆನಿಸಿಕೊಳ್ಳುತ್ತಾ (೮) ವಸುಗಳಲ್ಲಿ, ಕಂತುಹರ = ಕಾಮ ಹರ ಏಕಾದಶ ರುದ್ರರಲ್ಲಿ, ರವಿ ೧೨ ಜನ ದ್ವಾದಶಾದಿತ್ಯಾಂತರ್ಗತನಾಗಿದ್ದಂಥ ಓಂಕಾರ ಪ್ರತಿಪಾದ್ಯನಾದ ಶ್ರೀ ಆದಿನಾರಾಯಣನ, ಅನವರತ = ಪ್ರತಿದಿನದಲ್ಲಿ ಚಿಂತಿಸುವ ಸಂತರನ = ಜ್ಞಾನ ಭಕ್ತಿ ಪುರಸ್ಸರ ತದೇಕ ಧ್ಯಾನವುಳ್ಳವರಾಗಿ ಸ್ಮರಣೆಮಾಡುವಂಥ ಶ್ರೀಹರಿಯ ಭಕ್ತರನ್ನು, ಗುರು ಮಧ್ವಾಂತರಾತ್ಮಕ, ಶ್ರೀಮದ್ಗುರುವರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಂತರ್ಗತ, ಶ್ರೀ ಆದಿನಾರಾಯಣನು ಸಂತೈಸುವನು = ಅಜ್ಞಾನಾದಿಗಳು ಬಾರದ ಹಾಗೆ ಮಾಡಿ ಸಂರಕ್ಷಿಸುವ. ಸಂತತಖಿಳಾರ್ಥಗಳ ಪಾಲಿಸಿ ಇಹಪರಂಗಳಲಿ = ಸರ್ವದಾ ಧರ್ಮ, ಅರ್ಥ, ಕಾಮ, ಮೋಕ್ಷಾದಿ ಅನೇಕ ಇಷ್ಟಾರ್ಥಗಳ ಪೂರೈಸಿ, ಪರಮಾನುಗ್ರಹದಿಂದ ಇಹಪರ ಲೋಕದಲ್ಲಿ ಆನಂದಸಮುದ್ರದೊಳಗೆ ಶ್ರೀಹರಿ ವಾಯುಗಳು ಲೋಲ್ಯಾಡಿಸುವರು || ೪ ||

8224 **ಭಾವಸೂಚನ :—** ತಂತ್ವಿತಿ || ೪ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಂತು" ಇತಿ || "ಪಟದಂದದಲಿ" "ಪಟೇ ಯಥಾ" || "ಕಂತು" ಕಾಮ | "ಪಾಲಸಿ" ಕೊಟ್ಟು || ೪ ||

## ಕನ್ನಡಾರ್ಥ

"ತಂತುಗಳು" = ವಸ್ತ್ರ-ಅರಿವೆಗೆ ಕಾರಣವಾಗಿರುವ ಎಳೆಗಳು ಪಟವಾಗು ವಂತೆ || ತಂತುಪಟಗಳೆರಡೂ ಕಾರ್ಯ ಕಾರಣಗಳಾಗಿರುವದರಿಂದ ಹೇಗೆ

ಅಭೇದವೋ; ಹಾಗೆ ಪರಮಾತ್ಮನ ೫ ರೂಪಗಳಿಗೂ, ಪರಮಾತ್ಮನಿಗೂ ಅಭೇದ ವಿರುತ್ತದೆ. ಪಟವು ಅನೇಕ ತಂತುರೂಪವಾಗಿ ಇದ್ದರೂ ಒಂದೇ ಆಗಿರುವಂತೆ ಪಂಚರೂಪನಾಗಿದ್ದರೂ ಹರಿಯು ಏಕಾತ್ಮಕನೂ, ಸ್ವಗತಭೇದವಿವರ್ಜಿತನೂ ಆಗಿರುತ್ತಾನೆ" ಎಂದು ದೃಷ್ಟಾಂತ ತಿಳಿಯಬೇಕು.

"ಕಂತು" = ಕಾಮ. "ಪಾಲಿಸಿ" = ಕೊಟ್ಟು ॥ ೪ ॥

**ಅವತರಣಿಕಾ:—** ಮಾತಾ ಪಿತೃಗಳ ಆಜ್ಞಾ ಮೀರಬಾರದೆಂದು ಸಾಮಾನ್ಯ ಶಾಸ್ತ್ರನಿಯಮವಿದ್ದಾಗ್ಯೂ ಶಾಸ್ತ್ರವಿರುದ್ಧವಾದ ಕಾರ್ಯ ಮಾಡಲು ಆಜ್ಞಾಪಿಸಿದರೆ ಮಾಡಬಾರದೆಂದು ವಿಶೇಷ ಧರ್ಮವಿಹಿತವಾದ ಆಜ್ಞೆ ಪರಿ ಪಾಲಿಸಬೇಕೆಂದು ದೃಢವಾದ ದೃಷ್ಟಾಂತಪೂರ್ವಕದಿಂದ ಶ್ರಾದ್ಧಾದಿ ಕರ್ಮ ಗಳು ಶಾಸ್ತ್ರವಿಹಿತವಾಗಿಯೇ ಮಾಡಿದರೆ ಇಹಪರದಿ ಕೀರ್ತಿಯುತರಾಗಿ ಬಾಳುವರೆಂದು ಉಪದೇಶಿಸುತ್ತಾರೆ.

**ತಂದೆ ತಾಯ್ಗಳ ಪ್ರೀತಿಗೋಸುಗ।**
**ನಿಂದ್ಯ ಕರ್ಮವ ತೊರೆದು ವಿಹಿತಗ।**
**ಳೊಂದು ಮೀರದೆ ಸಾಂಗಕರ್ಮಗಳಾಚರಿಸುವವರು॥**
**ವಂದನಿಯರಾಗಿಳೆಯೊಳಗೆ ದೈ।**
**ನಂದಿನದಿ ದೈಶಿಕ ದಹಿಕ ಸುಖ।**
**ದಿಂದ ಬಾಳ್ವರು ಬಹುದಿವಸದಲಿ ಕೀರ್ತಿಯುತರಾಗಿ ॥ ೫ ॥**

**ಪದ್ಯಾರ್ಥ:—** ತಂದೆತಾಯ್ಗಳ ಪ್ರೀತಿಗೋಸುಗ=ಪಿತೃ ಮಾತಾ ಪ್ರೀತಿ ಬಡಸಲಿಕ್ಕೆ ಅವರು ನಿಂದ್ಯ ಕರ್ಮವ ತೊರೆದು = ಕೆಟ್ಟ-ಶಾಸ್ತ್ರವಿರುದ್ಧ ಕರ್ಮ ಮಾಡಲು ಹೇಳಿದಾಗ್ಯೂ ಆ ಕೆಟ್ಟ ಕೆಲಸ ಬಿಟ್ಟು, ವಿಹಿತಗಳೊಂದು ಮೀರದೆ ಸಾಂಗಕರ್ಮಗಳಾಚರಿಸುವವರು = ವಿಹಿತ ಶಾಸ್ತ್ರಸಮ್ಮತವಾದ ಕರ್ಮಗಳನ್ನು ಮಾಡಲು ಆಜ್ಞೆ ಮಾಡಿದರೆ, ತಂದೆತಾಯಿಗಳ ಪ್ರೀತಿ ಬಡಿಸಲು ಶಾಸ್ತ್ರಸಮ್ಮತ ವಾಗಿರುವ ಕರ್ಮಗಳನ್ನು ಒಂದೂ ಬಿಡದೇ ಪೂರ್ಣವಾಗಿ ವಿಹಿತ ಕರ್ಮಗಳನ್ನು ಆಚರಣೆ ಮಾಡತ್ಕವರು ಲೋಕದಲ್ಲಿ ವಂದನೀಯರಾಗಿ, ಇಳೆಯೊಳಗೆ=ಅವರ ರಿಂದ ಪೂಜ್ಯರಾಗಿ, ಉತ್ತಮರಿಂದ ಶ್ಲಾಘನೀಯರಾಗಿ ಬಾಳ್ವಂತೆ, ಮಾತಾ ಪಿತ್ರಾದಿ ಶ್ರಾದ್ಧ ದಿನಗಳಲ್ಲಿ = ವರ್ಷದ ದಿವಸಗಳಲ್ಲಿ, ಅವಿಹಿತವಾದ ದ್ವಿಭೋ

ಜನ, ಸ್ತ್ರೀಸಂಗ, ಸ್ಪರ್ಶಾಸ್ಪರ್ಶ ಇತ್ಯಾದಿ ಅವಿಹಿತ ಕರ್ಮಗಳನ್ನು ಬಿಟ್ಟು, ಶ್ರಾದ್ಧ ನಿಯಮ ಪ್ರಕಾರ, ಮಾತಾ ಪಿತೃಂತರ್ಯಾಮಿ ಮಧ್ವೇಶನ ಪ್ರೀತ್ಯರ್ಥ ವಾಗಿ, ಸಾಂಗವಾಗಿ = ವಿಹಿತವಾದ ಶ್ರಾದ್ಧಾದಿ ನಿಯಮಗಳಂತೆ ಶ್ರಾದ್ಧಕರ್ಮ ಆಚರಿಸುವವರು, ಇಳೆಯೊಳಗೆ = ಈ ಭೂಲೋಕದಲ್ಲಿ, ವಂದನೀಯರಾಗಿ= ಪೂಜ್ಯರಾಗಿ ಕೀರ್ತಿಸಂಪನ್ನರಾಗಿ, ದೈನಂದಿನದಿ = ಪ್ರತಿನಿತ್ಯದಲ್ಲಿ, ದೈಶಿಕ = ಯಾವ ದೇಶದಲ್ಲಿದ್ದರೂ ಆ ದೇಶದ ಸುಖ, ದಹಿಕ = ದೇಹನಿಮಿತ್ತವಾಗಿ ಆಗುವ ಸುಖ = ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ವಂಶೋದ್ಧಾರ ಸುಖದಿಂದ, ಬ ಹು ದಿ ವ ಸ ದ ಲಿ = ನೂರಾರುವರ್ಷ ಪರಿಯಂತವಾಗಿ ಕೀರ್ತಿಯುತರಾಗಿ ಬಾಳ್ವರು=ಯಶಸ್ಸು, ವರ್ಚಸ್ಸು ಮುಂತಾದ ಗುಣಗಳಿಂದ ಶೋಭಿತರಾಗಿ ಬದುಕುವರು.

**ದ್ರೌಪದೀಶಪತಿ ವಿಠಲರು:—** ತಂದೆ ತಾಯ್ಗಳು, "ಮಾತಾ ಚ ಕಮಲಾದೇವೀ ಪಿತಾ ದೇವೋ ಜನಾರ್ದನಃ" ಇವರ ಪ್ರೀತ್ಯರ್ಥವೇ ವಿಧ್ಯುಕ್ತಾನುಷ್ಠಾನಮಾಡೋಣ. ಶ್ರುತಿ ಸ್ಮೃತೀ ಹರೇರಾಜ್ಞಾಯಂತ ಇದ್ದ ಕಾರಣ. ||೫||

**ಗುರು ಶ್ರೀಶವಿಠಲರ ಶಿಷ್ಯರು:—** ತಂದೆತಾಯಿಗಳ = ಪೂರ್ವೋಕ್ತ ಕ್ರಮದಿಂದ ಆಚರಣೆರಹಿತರಾಗಿ, ಖ್ಯಾತಿಕಾಮುಕದಿಂದ ಮಾತಾಪಿತೃಗಳ ಪ್ರೀತಿಯ ನಿಮಿತ್ಯವಾಗಿ ನಿಂದ್ಯಕರ್ಮವನ್ನು ಬಿಟ್ಟು, ವಿಹಿತಕರ್ಮಗಳು ಒಂದೂ ಬಿಡದಲೇ, ಸಾಂಗೋಪಾಂಗ ಕರ್ಮಗಳು ಮಾಡುವವರು, ಭೂಮಿಯ ಮೇಲೆ ಶ್ಲಾಘನ ರೂಪಸ್ತೋತ್ರಮಾಡಿಸಿಕೊಂಡು ನಿತ್ಯದಲ್ಲಿ ದೇಹದಿಂದ ಸುಖ ಅನುಭವ, ದೈಶಿಕ = ದಾವದೇಶದಲ್ಲಿದ್ದರೂ, ಐಹಿಕ ಸುಖದಿಂದ ಬಹು ದಿವಸ ಕೀರ್ತಿಯುತರಾಗಿ ಬಾಳುವರು. ||೫||

**ಭಾವಸೂಚನ:—** ತಂದೇತಿ ||೫||

**ವ್ಯಾಸದಾಸಸಿದ್ಧಾಂತ ಕೌಮುದೀ**

ಪಿತೃ ಮಾತೃ ಪ್ರೀತಿಕಾಮೀ ಫಲಂ ಆಹ—

"ತಂದೆ" ಇತಿ || "ಗೋಸುಗ"-ಗೋಸ್ಕರ | ದೈಶಿಕ ದೇಶಭವ ||೫||

## ಕನ್ನಡಾರ್ಥ

ಪಿತ್ರಂತರ್ಯಾಮಿ ಶ್ರೀ ವಿಷ್ಣುವಿನ ಪ್ರೀತ್ಯುದ್ದೇಶವಾಗಿಯೇ ಮಾಡುವ ಕರ್ಮಗಳಿಗೆ ಫಲವನ್ನು ಹೇಳುತ್ತಾರೆ. “ತಂದೆ” ಎಂಬ ಪದ್ಯದಿಂದ.

**ಅವತರಿಣಿಕಾ:—** ಇನ್ನು ಪಿತೃಯಜ್ಞದಲ್ಲಿ ಹಂಸವಾಹನಾದಿ ಸಮಸ್ತ ದಿವಿಜರ, ಅಂಶಿ, ಅಂಶ, ಅಂತರ್ಗತ ಮೂರು ವಿಧವಾದ ರೂಪಗಳನ್ನು ಸ್ಮರಿಸಿ ಷಣ್ಣವತಿ ರೂಪಗಳಲ್ಲಿ ಏಕೀಕರಿಸುವ ವಿಧಾನವನ್ನೂ, ಶ್ರಾದ್ಧಪತಿ ಜನಾರ್ದನ ಸ್ವಾಮಿ ಮಹಿಮೆಯನ್ನೂ ಶ್ರೀ ವಿಜಯದಾಸರ ಪಿತೃಗಣ ಸುಳಾದಿಗನುಸರಿಸಿ ಹೇಳುತ್ತಾರೆ.




**ಅಂಶಿ ಅಂಶಾಂತರ್ಗತ ತ್ರಯು ।**
**ಹಂಸವಾಹನ ಮುಖ್ಯದಿವಿಜರ ।**
**ಸಂಶಯುದಿ ತಿಳಿದಂತರಾತ್ಮಕ ಶ್ರೀ ಜನಾರ್ದನನ ॥**
**ಸಂಸ್ಮರಣೆ ಪೂರ್ವಕದಿ ಷಡಧಿಕ ।**
**ತ್ರಿಂಶತಿತ್ರಯರೂಪವರಿತು ವಿ ।**
**ಪಾಂಸಗನ ಪೂಜಿಸುವರವರೆ ಕೃತಾರ್ಥರೆನಿಸುವರು ॥೬॥**

**ಪದ್ಯಾರ್ಥ :—** ಅಂಶಿ = ಮೂಲರೂಪ, ಅಂಶ = ವಾಸುದೇವಾದಿ ರೂಪಗಳು, ಅಂತರ್ಗತ = ಜೀವಾಂತರ್ಗತ ರೂಪ ತ್ರಯ ಹೀಗೆ ಮೂರು ವಿಧವಾಗಿ, ಹಂಸವಾಹನ ಮುಖ್ಯದಿವಿಜರ = ಹಂಸ ಪಕ್ಷಿಯೇ ವಾಹನನಾಗಿವುಳ್ಳ ಚತುರ್ಮುಖ ಬ್ರಹ್ಮದೇವರೆ ಮೊದಲಾಗಿ ಸಮಸ್ತ ತತ್ವಾಭಿಮಾನಿ ದೇವತೆಗಳ ಮೂಲರೂಪ ಅಂಶಿ, ಅವತಾರಾದಿರೂಪ ಅಂಶ, ಈ ದೇವತೆಗಳ ಅಂತರ್ಗತ ಹರಿಯ ರೂಪಗಳನ್ನು ಅಸಂಶಯದಿ ತಿಳಿದು = ಈ ಅನುಸಂಧಾನ ಪೂರ್ವಕವಾಗಿ ಚಿಂತಿಸುತ್ತಾ, ಅಂತರಾತ್ಮಕ ಶ್ರೀ ಜನಾರ್ದನನ ಸಂಸ್ಮರಣೆ ಪೂರ್ವಕದಿ = ಈ ಎಲ್ಲ ದೇವತೆಗಳ ಅಂಶಿ - ಅಂತರ್ಗತೆನಾದ ಹರಿಯೇ ಶ್ರಾದ್ಧಪತಿ ಜನಾರ್ದನ = ಜನಾನ್ = ದುರ್ಜನಾನರ್ದಯತಿ, ಹಿನಸ್ತಿ ನರಕಂ ಚ ಗಮಯತಿ, ಸುಜನೈರ್ವಾ ಪುರುಷಾರ್ಥಂ ವಾ ಯಾಚ್ಯ ಇತಿ ಜನಾರ್ದನಃ ॥ ಸ ಜಾಯತೇ ಈಯತಿ ಚ ಸಂಸಾರಮಿತಿ ಜನಾರ್ದನಃ ॥ ತಥಾ ಹಿ ಬಾಭ್ರುವ್ಯಶಾಖಾಯಾಂ॥ಸ ಭೂತಃ ಸ ಜನಾರ್ವನ ಇತಿ। ಸ ಹ್ಯಾಸೀತ

ಸ ನಾಶೀತ ಸೋರ್ದಯತೀತಿ || ದುರ್ಜನರನ್ನು ಮರ್ದನಮಾಡಿ, ನರಕವನ್ನು ಪೊಂದಿಸುತ್ತಾನಾದುದರಿಂದ ಜನಾರ್ದನ, ಸುಜನರುಗಳಿಗಾದರೂ ಪುರುಷಾರ್ಥ (ಮೋಕ್ಷ)ವನ್ನು ಕೊಡುತ್ತಾನಾದುದರಿಂದ ಜನಾರ್ದನ. ಪುನಃ ಪುನಃ ಜನನ ರೂಪವಾದ ಸಂಸಾರವನ್ನು ಕೊಡುವುದಿಲ್ಲವಾದುದರಿಂದ ಜನಾರ್ದನ ಇತ್ಯಾದಿ. **ವಿದ್ಯಾಧಿರಾಜೀಯೆ:**– ಜನೋ ಜನನಮರ್ದಯತೀತಿ ಜನಾರ್ದನಃ=ಶರಣಾಗತ ಜನರನ್ನು ಜನನಿ ಗರ್ಭದಿಂದ ಪುಟ್ಟಿಸದೇ ಜನ್ಮ ಕೊಡುವುದಿಲ್ಲ ಕಾರಣ ಜನಾರ್ದನನನ್ನು, ಸಂಸ್ಮರಣೆ ಪೂರ್ವಕದಿ = ಭಕ್ತಿಪುರಸ್ಸರವಾಗಿ ಸ್ಮರಣೆ ಮಾಡುತ್ತ, ಷಡಧಿಕ ತ್ರಿಂಶತಿತ್ರಯರೂಪವರಿತು = ಶ್ರಾದ್ಧಕಾಲ ಆವಾಹಿತ ಬ್ರಾಹ್ಮಣರಲ್ಲಿ ಪಿತೃತ್ರಯ, ಯಮ, ಸೋಮ, ಕವ್ಯವಾಹನರಲ್ಲಿ ವಸು, ರುದ್ರ ಆದಿತ್ಯ ೩೩ ಕರ್ತೃಕರ್ಮಕ್ರಿಯಾದಲ್ಲಿ ೩ ಹೀಗೆ ತ್ರಿಂಶತಿ = ೩೦ ತ್ರಯ ೩, ೩೦ × ೩ = ೯೦ಕ್ಕೆ ಆರು ಅಧಿಕವಾದರೆ ೯೬ ರೂಪಗಳನ್ನು ಚನ್ನಾಗಿ ಅರಿತು, ಇವರಂತರ್ಯಾಮಿ ಸಮಸ್ತದೇವ ಋಷಿ ಪಿತೃಗಳ ಅಂಶಿ ಅಂಶ ಅಂತರ್ಗತ ರೂಪಗಳಲ್ಲಿ ಶ್ರೀ ಜನಾರ್ದನ ರೂಪವನ್ನು ಅನುಸಂಧಾನದಿಂದ ಐಕ್ಯಚಿಂತಿಸಿ, ವಿಪಾಂಸಗನ ಪೂಜಿಸುವರೆ = ಗರುಡನ ಹೆಗಲಿನಲ್ಲಿ ವಿರಾಜಿಪ ಶ್ರೀಹರಿಯ ಮೂರ್ತಿ, ಅಂದರೆ ಗರುಡದೇವರು ಕಾಲಾಭಿಮಾನಿಗಳು, ಇಂಥ ಕಾಲನಾಮಕ ಹರಿಯನ್ನು ಮೇಲೆ ವಿವರಿಸಿದಂತೆ ಪೂಜಾ ಮಾಡತಕ್ಕವರೆ ಕೃತಾರ್ಥರೆನಿಸುವರು = ಮಾತಾಪಿತೃಗಳ ಶ್ರಾದ್ಧಾದಿಗಳನ್ನು ಜ್ಞಾನಪೂರ್ವಕ ಮಾಡಿ, ಮಾತಾಪಿತೃಗಳ ಋಣದಿಂದ ಮುಕ್ತರನ್ನ ಮಾಡಿ ಮೋಕ್ಷಾದಿ ಪುರುಷಾರ್ಥ ಹೊಂದಿಸುವ ಪುತ್ರರೇ ಕೃತಕಾರ್ಯರೆನಿಸುತ್ತಾರೆ. ಪುತ್ರನಲ್ಲಿಯೂ ಅನಿರುದ್ಧನೇ ಪುನ್ನಾಮನರಕದಿಂದ ಪಾರುಗಾಣಿಸುವನೆಂದು ಚಿಂತಿಸಬೇಕು. ಇದೇ ಶ್ರಾದ್ಧವಿಧಾನ ಮುಖ್ಯವೆಂದು.

**ಶ್ರೀ ವಿಜಯದಾಸಾರ್ಯರು :—** ಪಿತೃಗಣವಿಚಾರ ಸುಳಾದಿಲಿ ಹೇಳುತ್ತಾರೆ. ಸಾಧನ ಭಾಗ ಸುಳಾದಿ ಭಾಗ (೨) ೧೦೬ ಪುಟ ೨೪೦-೨೪೪ ಚೆನ್ನಾಗಿ ಮನವರಿಯುವುದು.

**ಧ್ರುವತಾಳದಲ್ಲಿ:**—ಪೈತ್ರಿಕವಾರದಲ್ಲಿ ದೇವಾಂಶಿ ಅಂಶಗಳ ಸ್ತೋತ್ರವ ನಾಲ್ಕು ಯುಗದವರ ಸೇವಾ | ಸೂತ್ರನಾಮಕ ಪ್ರಾಣ ಮೊದಲಾದ ದೇವತೆಗಳ ವಿ | ಚಿತ್ರ ಮಹಿಮೆ ತಿಳಿದು ತಿಳಿದು | ಪುತ್ರ ಪೌತ್ರ ಪ್ರಪೌತ್ರ ವಂಶಾಭಿವೃದ್ಧಿ

ಯಿಂದ ಗಾತ್ರ ನಿರ್ಮಲರಾಗಿ ಬಾಳುವರೊ। ಗೋತ್ರ ನೂರೊಂದು ನಾನಾಜನುಮ ಧರಿಸಿ ವಿ। ಹೋತ್ರಾದಿ ಲೋಕದಲ್ಲಿ ಇದ್ದ ಜನರು। ಪಾತ್ರ ಸತ್ಪಾತ್ರರಾಗಿ ತೃಪ್ತಿಯಾಗುವರು ಕಾ। ಲತ್ರಯ ಬಿಡದಲೆ ಊರ್ಧ್ವಗತಿಗೆ॥ **ಇತ್ಯಾದಿ.**

ಮುಂದೆ **ತ್ರಿಪಿಡಿತಾಳದಲ್ಲಿ** ದೇವತೆಗಳ ಅಂಶಗಳ ಸರಣಿ ಹೇಳುತ್ತಾರೆ. "ಹನುಮನ್ನ ಭೀಮ ಮಧ್ವ, ಶುಕ ದುರ್ವಾಸ, ಗುರುತನುಜ ಅಶ್ವತ್ಥಾಮ, ಲಕ್ಷ್ಮಣ ಬಲರಾಮ, ವನಚರವಾಲಿ, ವನ ಪರ್ವತ ಯಾಗವರ್ಣಾಶ್ರಮ ಜಾತಿ। ಇನ ಚಂದ್ರಮ ವಂಶಪರಂಪರೆ ಗ್ರಹಿಸು। ಇನಿತು ಬಿಡದೆ ಪಿತೃಪುಣ್ಯ ಕಾಲದಲ್ಲಿ ಯೋ। ಚನೆ ಮಾಡಿ ಮತಿಯಿಂದ ಕೊಂಡಾಡಿದ ಭಕ್ತಿ। ಮನುಜನ್ನ ಸುಕೃತಕೆ ಕಡೆಗಾಣೆ ಪಡೆಗಾಣೆ। ಗಣನೆ ಇಲ್ಲದೆ ಮಹಕುಲ ಉದ್ಧಾರ। ಧನ ಧಾನ್ಯ ವಿದ್ಯಾದ ವಿಜಯವಿಠಲರೇಯ। ಕುಣಿ ಕುಣಿದಾಡುವ ಪಿತೃ ರೂಪಗಳಿಂದ ॥೩॥

ಮುಂದೆ **ಅಟ್ಟತಾಳದಲ್ಲಿ** ಶ್ರಾದ್ಧಕ್ಕೆ ಅಯೋಗ್ಯರಾದವರ ವಿಚಾರ ಹೇಳಿ ತಾರತಮ್ಯ, ಪಂಚಭೇದಜ್ಞಾನ, ಹರಿವಾಯುಗಳ ಭಕ್ತರಾದವರನ್ನೇ ಶ್ರಾದ್ಧಾ-ದಿಕರ್ಮಗಳಲ್ಲಿ ಆವಾಹನ ಮಾಡುವದೆಂದು ಅಪ್ಪಣೆ ಕೊಡಿಸಿದ್ದಾರೆ.

ಮುಂದೆ ಆದಿತಾಳದಲ್ಲಿ:—ದುಸ್ಟಜನರ ಸ್ಪರ್ಶ, ದುಃಶಬ್ದದಿಂದ ದೂರ, ದುಷ್ಟಕ್ರಿಯಾದಿಂದ ದೂರ, ಶ್ರಾದ್ಧಾದಿಗಳಿಗೆ ಅನುಚಿತ ಕಾಲ, ಅಯೋಗ್ಯರ ದೃಷ್ಟಿಗೆ ಕಾಣುವಿಕೆ, ದುಷ್ಟ ಅನುಭವವನ್ನು ತೊರೆದು ಶುದ್ಧಾತ್ಮಕರಾಗಿ ಹಿಂದೆ ಉಚ್ಚಾರಮಾಡಿದ ದೇವಾಂಶರನ್ನು ಸ್ಮರಿಸಿ ಮಾಡಿದ ನೈವೇದ್ಯವು, ಶುಚಿ, ಮಾರ್ದವ, ಸ್ವಾದ, ರುಚಿ, ಅಮೃತಸಾರ ರಚನೆ ಮನೋಹರ ಅಚಲ ಅವಿ ರೋಧ ಪಚನ ಶುಭ್ರವರ್ನ ಇತ್ಯಾದಿ ರುಚಿಕರ ಸುಧೋಪಮವಾಗಿ ಭೋಕ್ತ ರಿಗೆ ಮಹಾ ರುಚಿಕರವಾಗಿ ಇಪ್ಪುದಲ್ಲದೇ ಸಕಲದೋಷ ಪರಿಹಾರವಾಗಿ, ಧರೆಯಮೇಲಿದ್ದ ಸಕಲ ಶುಭರಸಗಳು ಬಂದು ಭರಿತವಾಗುವವು. ಪಿತೃ ದಿನ ದಲ್ಲಿ ಈ ಪ್ರಕಾರ ಸಮರ್ಪಿಸಿ ಅನುಸಂಧಾನದಿಂದ ಉತ್ತಮ ಬ್ರಾಹ್ಮಣರ ದ್ವಾರಾ ಅನ್ನಪ್ರದಾನ ಮಾಡಲು, **ಧರ-ಭುವರ್ಲೋಕ ನಾಕ ಭುವನ ದಲ್ಲಿದ್ದ ಸರ್ವ ಪಿತೃಗಣದವರು ತೃಪ್ತಿಯಾಗುವರು**। ಎಂದು ಹೇಳಿ

ಮುಂದೆ ಪಿತೃಗಣದವರು ಯಾರು? ಎಷ್ಟು ಗಣ ಉಂಟೆಂಬುದನ್ನು ತಿಳಿಸುತ್ತಾರೆ. "೧. **ಮರುತ, ೨. ಆದಿತ್ಯ, ೩. ಸಾಧ್ಯ, ೪. ವಸು, ೫. ರುದ್ರ, ೬. ಅಶ್ವಿನಿ, ೭. ಋಷಿ, ಎರಡೈದು ಗಣದವರು (೭) ಪಿತೃ ಎನಿಸುವರು. ಇವರೊಳಗೂ ತಾರತಮ್ಯ ಉಂಟು ಅರಿದರೆ** ವರ ಪುಣ್ಯಕ್ಷೇತ್ರಗಯಾದಿ ಸಪ್ತಸಂಗಮದಲ್ಲಿ, ಸುರ ಭೂಸುರರಿಗೆ ಭೋಜನ ಮಾಡಿಸಿದ ಪುಣ್ಯ ಒಂದಾನಂತವಾಗಿ ನಾನಾಫಲ ಬರುವುದು. ಗುರುದ್ವಾರದಿಂದ ಪ್ರಸನ್ನನಾದ ವಿಜಯವಿಠಲರೇಯನು ಎರಡೈವತ್ತೊಂದು ಗೋತ್ರದವರ ಉದ್ಧರಿಸುವನೆಂದು ಉಪದೇಶಿಸಿದ್ದಾರೆ. ಸರ್ವಥಾ ಇದನ್ನು ಮರೆಯ ಕೂಡದು. ಈ ಅನುಸಂಧಾನದಿಂದಲೇ ಶ್ರಾದ್ಧಮಾಡಿದರೆ ಜೀವನ್ಮುಕ್ತಿ.

**ದ್ರೌಪದೀಶ ಪತಿ ವಿಠಲರು :—** ಅಂಶಿ ಅಂಶಾಂತರ್ಗತತ್ರಯ॥ ೧ ಅಂಶಿಮೂಲರೂಪ॥ "ಯೋ ಮೂಲರೂಪೀ ಭಗವಾನನಂತಃ" ಯೆಂತ ಗರುಡ ಪುರಾಣ. ೨ ಅಂಶ ವಾಸುದೇವಾದಿ॥ "ಏತೇ ಸಾಂಶಕಳಾಃ ಪ್ರೋಕ್ತಾಃ ಕೃಷ್ಣಸ್ತು ಭಗವಾನ್ ಸ್ವಯಮ್"॥ ಇತಿ ಭಾಗವತೇ। ೩. ಅಂತರ್ಗತ ಜೀವಾಂತರ್ಗತತ್ರಯ ಅಂದರೆ, ಜೀವಾಂತರ್ಗತತ್ರಯ, ಜೀವನ ಪ್ರಾಣಾಂತಸ್ಥಿತ, ಅಂತರ್ಗತ ಅಧ್ಯಾತ್ಮ ಮಾಲಾವಚನ, ಜೀವ ಶರೀರಾಕಾರ ಮೂರ್ತಿ ಅಂಶೀ, ಆವಾವ ಅವಯವದಂತೆ ಇಷ್ಟಮೂರ್ತಿಯೆಂತ ಜೀವಾಖ್ಯ ಸುಳಾದಿ, "ಜೀವನ ಪ್ರಕಾಶವ್ಯಾಪ್ತ ಮೂರ್ತಿ ಅಂಶಗ" ನಿರಂಶಾನಾಂ ಪ್ರಕಾಶ ವ್ಯಾಪ್ತಿಃ ಸಾಂಶಾನಾಂ ಅಂಶೇನ ವ್ಯಾಪ್ತಿಃ" ದೀಪಪ್ರಕಾಶವತ್ ಪ್ರಕಾಶ ವ್ಯಾಪ್ತಿಃ" ಅಯೋಗೋಳಕ ವಹ್ನಿಯೋಪಾದಿಯಲಿ ಅಂಶವ್ಯಾಪ್ತಿ. **ಜಡದಲ್ಲಿ ತ್ರಯ,** ಸೂಕ್ಷ್ಮ ಮೂಲ ಪ್ರಕೃತಿಯಲ್ಲಿ ಅಂತರ್ಗತ. ಗುಣತ್ರಯ ಪರಮಾಣುವಿನಲ್ಲಿ ಅಂಶಿ, ಜಡತ್ರಯ ಸಂಯೋಗ ವಿಕಾರದಲ್ಲಿ ಅಂಶ, ಈ ರೂಪಗಳು ಷಡಧಿಕ ತ್ರಿಂಶತಿತ್ರಯ ೯೬ ರೂಪದಿಂದ ಕ್ರೀಡಿಸುತ್ತಾನೆ. (ಶ್ರೀ ವಿಜಯದಾಸರ ಸುಳಾದಿ ಪ್ರಕಾರ ಜೀವ, ಜಡದಲ್ಲಿ, ಅಂಶಿ, ಅಂಶ. ಅಂತರ್ಗತ ರೂಪ ವಿಚಾರವು ಬಹು ಗೂಢ ಪ್ರಮೇಯ, ನೂತನವಾಗಿರುವದೆಂದು ಆನಂದವಾಗುತ್ತದೆ.)

**ಗುರು ಶ್ರೀಶವಿಠಲರ ಶಿಷ್ಯರು :—** ಅಂಶಿ ಅಂಶಾತರ್ಗತತ್ರಯ, ಶ್ರೀ ರಮಾವಲ್ಲಭ ಅಂಶ ಋಷಿಗಳಲ್ಲಿ, ಪಿತೃಗಳಲ್ಲಿ ಅಂತರ್ಗತನಾಗಿ, ಪ್ರದ್ಯುಮ್ನ

ಸಂಕರ್ಷಣ ವಾಸುದೇವ ಮೂರು ರೂಪಗಳಿಂದ ವ್ಯಾಪ್ತನಾಗಿ, ಹಂಸವಾಹನ ಮುಖ್ಯ ದಿವಿಜರ, ಹಂಸ ವಾಹನನಾದ ಬ್ರಹ್ಮನೇ ಮುಖ್ಯನಾದ ರುದ್ರ, ಆದಿತ್ಯ ವಸು ಪ್ರಮುಖರಾದ ದೇವತೆಗಳನ್ನು, ಸ್ವಂಶದಲಿ ತಿಳಿದು ಬ್ರಹ್ಮ ಅಂಶದಲ್ಲಿ ಬ್ರಹ್ಮಸ್ತಂಭ ಪರಿಯಂತ "ದೇವಋಷಿ ಪಿತೃ ಮಾನವಾಃ ತೃಪ್ಯಂತು ಪಿತರ ಸ್ಸರ್ವೇ"ಮಾದ್ರುಮಾಂತ ತಿಳಿದು, ಅಂತರಾತ್ಮಕ, ಪಿತಾ, ಪಿತಾಮಹ, ಪ್ರಪಿತಾಮಹ, ವಸು ರುದ್ರ ಆದಿತ್ಯ, ಕರ್ತಾ, ಕರ್ಮ, ಕ್ರಿಯೆಗಳಂತರ್ಗತ, ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ, ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ, ಶ್ರೀಮಜ್ಜನಾರ್ದನ ಪರಮಾತ್ಮನ್ನ, ಜ್ಞಾನ ಭಕ್ತಿ ಪುರಸ್ಸರ ಸ್ಮರಣೆಪೂರ್ವಕ ಶ್ರೀ ವಿಷ್ಣು ಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥ, ಷಡಧಿಕ ತ್ರಿಂಶತಿತ್ರಯ ರೂಪವರಿತು = ಆರಧಿಕ ತ್ರಿಂಶತಿತ್ರಯ ಮೂರು ಮೂವತ್ತು = ತೊಂಭತ್ತು (೯೬) ಷಣ್ಣವತಿ ರೂಪಗಳ ದ್ವಾರಾ ಶ್ರವಣಮಾಡಿ ತಿಳಿದುಕೊಂಡು, ವಿಪಾಂಸಗನ ಪೂಜಿಸುವರೆ ಕೃತಾರ್ಥರೆನಿಸುವರು = ಪಕ್ಷಿರಾಜನಾದ ಗರುಡನ ಸ್ಕಂಧದಲ್ಲಿ ಆರೋಹಣನಾದ ಶ್ರೀ ರಮಾ ಸಮೇತ ಜನಾರ್ದನಾತ್ಮಕ ಶ್ರೀ ಆದಿನಾರಾಯಣನ ಪೂಜಾ ಮಾಡುವರೆ ಕೃತಾರ್ಥರೆನಿಸುವರು.

೨೪ ಪಿತ್ರಂತರ್ಗತ ೮ ವಸುಗಳಲ್ಲಿ ಪ್ರದ್ಯುಮ್ನ

೩೩ ಪಿತಾಮಹಾಂತರ್ಗತ ರುದ್ರ ೧೧ರಲ್ಲಿ ಸಂಕರ್ಷಣ

೩೬ ಪ್ರಪಿತಾಮಹಾಂತರ್ಗತ ಆದಿತ್ಯ ೧೨ರಲ್ಲಿ ವಾಸುದೇವ

ಈ ಮೂರು ರೂಪಗಳು ಕೂಡಿಸಿದರೆ ೯೬ ರೂಪಗಳು. ಪಿತೃತ್ರಯ ಮಾತೃ ತ್ರಯಾದಿ, ಕರ್ತೃ ಕರ್ಮ ಕ್ರಿಯ ತದಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಯಾಮಿ, ಅ. ಪ್ರ. ಸ. ವಾ, ಚತುರ್ಮೂರ್ತ್ಯಾತ್ಮಕ ಶ್ರೀಮ ಜ್ಜನಾರ್ದನ ವಾಸುದೇವಃ ಪ್ರೀಯತಾಂ. ಪ್ರೀತೋ ಭವತು. ಈ ಪ್ರಕಾರ ವಿಧಾನಪೂರ್ವಕ ಜ್ಞಾನಿಗಳಾದ ಗುರುಗಳ ಪರಿ ಮುಖಶ್ರವಣದಿಂದ ತಿಳಿದು ಪಿತೃಗಳುದ್ದಿಶ್ಯ ತದಂತರ್ಗತ ಶ್ರೀ ರಮಾಕಾಂತ ಆದಿನಾರಾಯಣಗೆ ಸಮರ್ಪಣೆ ಮಾಡಿದರೆ ಪಿತೃಗಳು ಊರ್ಧ್ವಲೋಕದಲ್ಲಿ ಆನಂದದಿಂದ ಲೋಲ್ಯಾಡುವರು. ಕರ್ತೃನಾದ ಪುತ್ರಗೆ ಶ್ರೀ ಹರಿವಾಯುಗಳು ಅನುಗ್ರಹ ಮಾಡುವರು.

**ಭಾವಸೂಚನ:—**ಅಂಶೇತಿ ‌। ಅನಿರುದ್ಧಾದಯಃ । ವಿಪ=ಗರುಡ । "ಶ್ರಾದ್ಧೇ ನಿಯೋಜಿತೇ ದೇವನಿಕರೇ ಹರಿರೀಶ್ವರಃ॥ ಚತ್ವಾರಿಂಶದ್ಭಿರೇಕೋನೈಃ ಸ್ವರೂಪೈಶ್ಚ ಸುಖಾದಿಕೈಃ" ಇತಿ ಗುರುವೃತ್ತೇ ॥೬॥

(ಈ ಪ್ರಮಾಣಗಳಲ್ಲಿ ಪೇಳಿದ ರೂಪಗಳು ವಿಚಾರಾಂಶವಾಗಿವೆ).

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಅಂಶಿ" ಇತಿ॥ ಅಂಶೀ ಮೂಲಂ ಬಿಂಬರೂಪಮ್॥ "ಇಂದ್ರಿಯಗಂ" ಅಂಶಃ (ಇಂದ್ರಿಯಗಂ) । ಅಂತರ್ಗತಾಃ ತಾತ್ವಿಕಾಃ॥ ಹಂಸವಾಹಃ ಬ್ರಹ್ಮಾ॥ "ದ್ವಿಚತ್ವಾರಿಂಶದಾತ್ಮಾಜಃ ಅಂಶಾಂಶ್ಯಂತರ್ಗತಃ ಸ್ಥಿತಃ" ॥೬॥

## ಕನ್ನಡಾರ್ಥ

ಅಂಶಿ ಎಂದರೆ ಮೂಲ ಬಿಂಬರೂಪವು; ಅಂಶವೆಂದರೆ ಇಂದ್ರಿಯಗತವಾದ ರೂಪಗಳು. ಅಂತರ್ಗತರೆಂದರೆ ತಾತ್ವಿಕದೇವತೆಗಳು. ಹಂಸವಾಹಃ ಬ್ರಹ್ಮಾ ಎಂದು ಅರ್ಥ.

೪೨ ರೂಪಗಳಿಂದ ಹರಿಯು ಅಂಶಿ ಅಂಶಗಳಲ್ಲಿ ಅಂತರ್ಗತನಾಗಿ ಇರುತ್ತಾನೆ. ॥೬॥

**ಅವತರಣಿಕಾ :—**ಪಿತೃಸಮಾರಾಧನೆಗೆ, ರಾಕ್ಷಸ ಪಿಶಾಚಾದಿಗಳು ವಿಘ್ನಗಳು ಮಾಡುವರು. ಈ ವಿಘ್ನಗಳನ್ನು ನಿರಸನಮಾಡಿ ಶ್ರಾದ್ಧರಕ್ಷಿಸಲು ಶ್ರೀಜನಾರ್ದನರೂಪಿ ಹರಿಯು ೩,೫೫೫ ರೂಪಗಳಿಂದ ಅವರವರ ಶರೀರದಲ್ಲಿ ಇದ್ದು ಅವರ ನಾಮದಿಂದ ಕರೆಸುತ್ತಾ ರಕ್ಷಿಸಿ ಕಾಪಾಡುತ್ತಾನೆಂದು ಪೇಳುತ್ತಾರೆ.

**ಮೂರುವರೆ ಸಾವಿರದ ಮೇಲರೆ ।**
**ನೂರಯಿದು ರೂಪದಿ ಜನಾರ್ದನ ।**
**ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ॥**
**ಬಾರದಂತೆ ಬಹುಪ್ರಕಾರ ಖ ।**
**ರಾರಿಕಾಪಾಡುವನು ಸರ್ವಶ ।**
**ರೀರಗಳೊಳಿದ್ಧವರವರ ಪೆಸರಿಂದ ಕರೆಸುತಲಿ ॥೭॥**

**ಪದ್ಯಾರ್ಥ :—** ಮೂರುವರೆ ಸಾವಿರದ=೩೫೦೦, ಮೇಲರೆ ನೂರ ಯಿದು=ಅರೆನೂರು ೫೦+೫=೫೫ (ಒಟ್ಟಿಗೆ ೩೫೫೫) ರೂಪಗಳಿಂದ ಜನಾರ್ದನ ರೂಪಿ ಹರಿಯು, (ಜ=೩=ನಾ=೫, ದ=೩ ರ್ ೨, ೩+೨=೫ ನ, ೫ ಈ ಪ್ರಕಾರ ಸವ್ಯಾಂಕದಿಂದ ಜನಾರ್ದನ=೩೫೫೫ರೂಪಗಳು) ದುಷ್ಟಜನಾನ್‌ಮರ್ದಯತೀತಿ ಜನಾರ್ದನನು. ಸೂರಿಗಳು = ಜ್ಞಾನಿಗಳು, ಮಾಡುವ ಸಮಾರಾಧನೆಗೆ= ಜ್ಞಾನಪುರಸ್ಸರವಾಗಿ ಪಿತ್ರಾದಿಗಳ ಅಂತರ್ಗತ ಶ್ರೀ ಜನಾರ್ದನರೂಪಿ ಹರಿಯ ಪೂಜಾರೂಪವಾದ ಸಮಾರಾಧನೆ = ಸಮ್ಯಕ್ ಆರಾಧನೆ = ಭಕ್ತಿಜ್ಞಾನವಿಶೇಷ ದಿಂದ ಸಮೀಚೀನವಾಗಿ ಭಗವಂತನ ಮಂಗಳ ರೂಪವಾದ ಆರಾಧನೆ, ಇದು ಅಮಂಗಲರೂಪವಲ್ಲವೆಂದು, ಸಮಾರಾಧನೆ ಎಂದು ದಾಸಾರ್ಯರು ಈ ಶಬ್ದ ಉಪಯೋಗಿಸಿದ್ದಾರೆ. ಇಂಥ ಸಮಾರಾಧನೆಗೆ, ವಿಘ್ನಗಳು = ಎಡರು ಆಪತ್ತು ಗಳು ಬಾರದಂತೆ, ಬಹುಪ್ರಕಾರ=ನಾನಾವಿಧದಿಂದ ಸಮಸ್ತ ದಿಕ್ಕಿನಲ್ಲಿ ಇದ್ದು ಖರಾರಿ ಕಾಪಾಡುವನು = ಖರನಾಮಕದೈತ್ಯನನ್ನು ಸಂಹರಿಸಿದ ಶ್ರೀರಾಮ ಚಂದ್ರನಿಗೆ ಅಭಿನ್ನನಾದ ದುಷ್ಟದೈತ್ಯರಾಕ್ಷಸ ಪಿಶಾಚಾದಿಗಳು ಬಾಧೆಕೊಡು ವವರನ್ನು ಬದಿಗೊತ್ತಿ ಆ ದುಷ್ಟರನ್ನು ನಿಗ್ರಹಿಸುತ್ತ, ಜನಾರ್ದನರೂಪಿ ಹರಿಯು ಕಾಪಾಡುವನು = ಸರ್ವರೀತಿಯಿಂದಲೂ ರಕ್ಷಿಸುವನು. ಹೇಗೆಂದರೆ ಸರ್ವ ಶರೀರದೊಳಗಿದ್ದು ಅವರವರ ಪೆಸರಿಂದ ಕರೆಸುತಲಿ = ಧಾನ್ಯದಲ್ಲಿರುವ ಜೀವಿಗಳ ರಕ್ಷಣ, ಭೋಜ್ಯ ಪದಾರ್ಥರಕ್ಷಣ, ಶ್ರಾದ್ಧಕರ್ತೃವಿನಲ್ಲಿ, ಶ್ರಾದ್ಧಕರ್ಮದಲ್ಲಿ, ಶ್ರಾದ್ಧಕ್ರಿಯೆಯಲ್ಲಿಪ್ಪ ದೇವತೆಗಳಲ್ಲಿ, (ಶ್ರಾದ್ಧಭೋಕ್ತರಾದ ಬ್ರಾಹ್ಮಣರಲ್ಲಿ ವಿಶ್ವೇದೇವಾದಿಗಳಲ್ಲಿ) ಪಿತೃದೇವಾದಿಗಳಲ್ಲಿ ಅವರವರೆಲ್ಲರ ದೇಹದಲ್ಲಿ ಆಪೆಸರಿ ನಿಂದ ಇದ್ದು ಸಂರಕ್ಷಿಸುವನು.

> " ಯಾವತ್ತಿಲಾ ಮನುಷ್ಯೈಸ್ತು ಗೃಹೀತಾಃ ಪಿತೃಕರ್ಮಣಿ |
> ಗಚ್ಛಂತಿ ಭೀತಾ ಅಸುರಾಃ ಸಿಂಹತ್ರಸ್ತಾ ಮೃಗಾ ಇವ ||
> ದಕ್ಷಿಣಾಭಿಮುಖೋ ಭೂತ್ವಾ ಪ್ರಾಣಾನಾಯಮ್ಯ ವಾಗ್ಯತಃ ||
> ತಿಲಾನ್ವಿಕೀರ್ಯ ತದ್ಭೂಮೌ ದ್ವಾರೇಷು ಚ ವಿಶೇಷತಃ ||
> **ಅಪಹೃತೇತಿ ಮಂತ್ರೇಣ** ಪಿತೃಧರ್ಮಮನುಸ್ಮರನ್ ||
> **ಉದೀರತೇತಿ ಮಂತ್ರೇಣ** ಸೇಚಯೇಚ್ಚ ತಿಲೋದಕಮ್ ||
> ಶ್ರಾದ್ಧಭೂಮೌ ಗಯಾಂ ಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಮ್ ||

ತಾಭ್ಯಾಂ ಚೈವ ನಮಸ್ಕೃತ್ಯ ತತಃ ಶ್ರಾದ್ಧಂ ಪ್ರವರ್ತಯೇತ್ ||
ಶ್ರೀಕೃಷ್ಣಾಚಾರ್ಯಸ್ಮೃತಿಮುಕ್ತಾವಳಿ.

**ದ್ರೌಪದೀಶಪತಿವಿಠಲರು:**—ಮೂರು ಸಾವಿರದ ಐದುನೂರ ಐವತ್ತೈದು ೩೫೫೫ ರೂಪದಿಂದ ಜನಾರ್ದನ ಸರ್ವಶರೀರದಲ್ಲಿ ಅಂದರೆ, ಧಾನ್ಯಗತ ಜೀವತಂಡುಲಶರೀರ, ಮನುಷ್ಯಶರೀರಗತ ಜೀವರಿಗೆ, ಜನಾರ್ದನ ಭೋಜನ ಮಾಡಿಸೋಣ. ಜನಾನ್ ಅರ್ದಯತೀತಿ ಜನಾರ್ದನಃ ||೭||

**ಗುರುಶ್ರೀಶವಿಠಲರ ಶಿಷ್ಯರು:**—ತನ್ನ ನಂಬಿದಂಥ ಭಕ್ತರುಗಳಿಗೆ ಅಹಂಕಾರ ಮಮಕಾರಾದಿಗಳನ್ನು ಪರಿಹರಿಸಿ ಬೆಂಬಲವಾಗಿ ಕಾಪಾಡುವನು. ಪಿತೃಪಿತಾಮಹ ಪ್ರಪಿತಾಮಹ, ವಸು ರುದ್ರ ಆದಿತ್ಯ, ಭೋಗ್ಯ ಭೋಕ್ತೃ ಶರೀರಗಳಲ್ಲಿ ಭೋಗ್ಯ ಭೋಕ್ತೃವಾಗಿ, ಕರ್ತೃಕರ್ಮಕ್ರಿಯಾಗಳಲ್ಲಿ ಅಂಶಿ ಅಂಶಾಂತರ್ಗತನಾಗಿ, ತತ್ತನ್ನಾಮದಿಂದ ಕರೆಸುತ್ತ ಸರ್ವತ್ರ ವ್ಯಾಪ್ತನಾಗಿ ಆದಿನಾರಾಯಣ ಕಾಪಾಡುವನು.

೧ ಪಿತ ಪಿತಾಮಹ ಪ್ರಪಿತಾಮಹರಲ್ಲಿ ಅನಿರುದ್ಧ
೧ ಅಷ್ಟವಸುಗಳಲ್ಲಿ ಪ್ರದ್ಯುಮ್ನ
೧ ಏಕಾದಶರುದ್ರರಲ್ಲಿ ಸಂಕರ್ಷಣ
೧ ದ್ವಾದಶಾದಿತ್ಯರಲ್ಲಿ ವಾಸುದೇವ. ಈ ನಾಲ್ಕು ಬಗೆ ರೂಪಗಳು.
—
೪

೯ ರೂಪಗಳಿಗೆ ವಿವರ

೩ ವೈಕಾರಿಕ, ತೈಜಸ, ತಾಮಸ ಭೇದ ವಸುಗಳಲ್ಲಿ
೩ ,, ,, ,, ,, ರುದ್ರರಲ್ಲಿ
೩ ,, ,, ,, ,, ಆದಿತ್ಯರಲ್ಲಿ
—
೯ × ೪ = ೩೬ ಈ ಪ್ರಕಾರ ಮೂವತ್ತಾರು ರೂಪ

(ಇದೊಂದು ಪ್ರಕಾರವೆಂದು ತಿಳಿಸಿದ್ದಾರೆ, ಜ್ಞಾನಿಗೋಚರ)

**ಭಾವಸೂಚನ:**— ಚತುಸ್ಸಹಸ್ರೈಶ್ಚ ಸುದಿವ್ಯರೂಪೈಃ ಜನಾರ್ದನೋಽ ನಿಷ್ಟಹರಃ ಪೃಥಿವ್ಯಾಂ ಇತಿ || ವಚನಾರ್ಥಮಾಹ || ಮೂರೇತಿ ||೭||

(ಈ ನಾಲ್ಕು ಸಹಸ್ರ ದಿವ್ಯರೂಪಗಳು ಅನಿಷ್ಟಪರಿಹಾರಕವು ಈ ರೂಪಗಳ ವಿಷಯ ವಿಚಾರಾಂಶವು ಇದೆ. ಇದೆಲ್ಲಿಯು ಪ್ರಮಾಣಾರ್ಥಾವೋ ತಿಳಿಯದಾಗಿದೆ).

**ಶ್ರೀವ್ಯಾಸದಾಸಸಿದ್ಧಾಂತ ಕೌಮುದೀ**

" **ಮೂರೇತಿ** " | "ತ್ರಿಸಹಸ್ರಾರ್ಧಸಾಹಸ್ರ ಪಂಚಪಂಚಾಶದಾತ್ಮಕಃ || ತಾತ್ವಿಕಾಶ್ರಿತಚಾರ್ವಂಗಃ ಸಮಾರಾಧನವಿಘ್ನಹೃತ್ " ||೭||

**ಕನ್ನಡಾರ್ಥ**

೩೫೫೫ ರೂಪಗಳಿಂದ ಜನಾರ್ದನನು ಸರ್ವರಲ್ಲಿದ್ದು ವಿಘ್ನಗಳನ್ನು ಪರಿಹರಿಸಿ ಭಕ್ತರನ್ನು ಬಗೆಬಗೆಯಾಗಿ ಸಂರಕ್ಷಿಸುವನೆಂದು ತಾತ್ಪರ್ಯ. ||೭||

**ಅವತರಣಿಕಾ:**—ಪೂರ್ವೋಕ್ತ ಶ್ರೀಹರಿಯ ವಿಶಿಷ್ಟ ಗುಣಗಳನ್ನು ಸ್ಮರಿಸುತ್ತಾ ಹರ್ಷೋದ್ರೇಕದಿಂದ, ಜ್ಞಾನಾನಂದಾದಿ ಗುಣೋತ್ಕರ್ಷಪೂರ್ವಕ, ಜ್ಞಾನಘನನಾದ ಜ್ಞಾನಾತ್ಮಕ ಶ್ರೀಹರಿಯ ರೂಪಗಳನ್ನು ಮೈಮರೆದು ಸ್ತೋತ್ರಗೈಯ್ಯುತ್ತಾರೆ.

**ಜಯ ಜಯ ಜಯಾಕಾಂತ ದತ್ತಾ |**
**ತ್ರಯ ಕಪಿಲ ಮಹಿದಾಸ ಭಕ್ತ |**
**ಪ್ರಿಯ ಪುರಾತನಪುರುಷ ಪೂರ್ಣಾನಂದ೧ ಮಾನಘನ ||**
**ಹಯವದನ ಹರಿಹಂಸಲೋಕ |**
**ತ್ರಯವಿಲಕ್ಷಣ ನಿಖಿಳಜಗದಾ |**
**ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು||೮||**

**ಪದ್ಯಾರ್ಥ :**—ಜಯ ಜಯ= ಈ ಶಬ್ದವು ಸದಾ ಸರ್ವೋತ್ಕರ್ಷದಿಂದ ವರ್ತಿಸುವ ಶ್ರೀ ಶ್ರೀಹರಿಯೆ ನಿನಗೆ ಜಯ ಜಯವಿರಲಿ ಎಂದು ಪ್ರಾರ್ಥನೆ. **ಜಯಾಕಾಂತ** = ೧ ಶ್ರೀ ಲಕ್ಷ್ಮೀರೂಪಳಾದ ಜಯಾದೇವಿಯ ಪತಿಯಾದ, **ಸಂಕರ್ಷಣನೇ** ನಿನಗೆ ಜಯ.

---

೧ಮೂಲಪ್ರತಿಯಲ್ಲಿ ಮಾನಘನ ಎಂತ ಪಾಠವಿದೆ.

೧. ಪ್ರಳಯಸಮಯೇ ಯುಗಪತ್ ಪ್ರಜಾಃ ಕರ್ಷಯತೀತಿ **ಸಂಕ-ರ್ಷಣಃ**

೨. ಕಪಿಲಃ = ಕಂ ಆನಂದಂ ಪಿಬತೀತಿ **ಕಪಿಲಃ**, ಕಂ ಬ್ರಹ್ಮಾಣಂ ಮಾರುತಂ ಬಧ್ನಾತೀತಿ ಕಪಿಲಃ, ಕಪಿಲವರ್ಣಃ **ಕಪಿಲಃ**.

೩. ಮಹಿದಾಸ = ಇತರಾಸೂನು, ಮಹಿದಾಸ ಹರಿಯ ಅವತಾರ.

೪. ದತ್ತಾತ್ರೇಯ=ಅತ್ರಿ ಅನುಸೂಯಾದೇವಿಯರಲ್ಲಿ ಅವತಾರ ಮಾಡಿದ ವಿಷ್ಣು. ಜ್ಞಾನೋಪದೇಶಕರೂಪ.

೫. ಹಯವದನ = ಘೋಟಕಾಸ್ಯ, ಮುಕ್ತರಿಗೆ ಜ್ಞಾನೋಪದೇಶ ಮಾಡುವ ರೂಪ.

೬. ಹರಿಃ = ಶ್ರೇಷ್ಠಃ ತಸ್ಮಾದ್ಧರಿರಿತಿ ಸ್ಮೃತಃ ॥ ಮೋಕ್ಷಧರ್ಮೇ

೭. ಹಂಸಃ = ಸಂಸಾರಂ ಹಂತೀತಿ ಹಂಸಃ, ದುಃಖಾದಿದೋಷಹೀನಃ.

ಸಾರಭೂತಶ್ಚೇತಿ ಹಂಸಃ (ವಿದ್ಯಾಧಿರಾಜೀಯ) ಈ ಎಲ್ಲ ಜ್ಞಾನಪ್ರದ ರೂಪಗಳಿಗೆ ಜಯವಿರಲಿ. ಒಂದೊಂದು ರೂಪದಿಂದ ಒಬ್ಬೊಬ್ಬ ಭಕ್ತರಿಗೆ ಜ್ಞಾನೋಪದೇಶ ಮಾಡಿದುದರಿಂದ, ಭಕ್ತರಿಗೆ ಪ್ರಿಯವಾದರೂಪಗಳು. ಎಲ್ಲವೂ ಪುರಾತನ, ಅನಾದಿನಿತ್ಯದಿಂದ ಇರುವ ರೂಪಗಳು. ಪುರುಷಶಬ್ದವಾಚ್ಯವಾಗಿ ಪೂರ್ಣಜ್ಞಾನ (ಮಾನ) ಆನಂದ, ಘನ = ನಿಬಿಡೀಕೃತ ರೂಪಗಳು. ಪರಸ್ಪರ ಒಂದಕ್ಕೊಂದು ಭೇದವಿಲ್ಲದ ಜ್ಞಾನರೂಪಗಳು. ಲೋಕತ್ರಯವಿಲಕ್ಷಣ = ಮೂರು ಲೋಕದಲ್ಲಿಪ್ಪರಿಗೆ, ಬೇರೆ ಪ್ರಥಕ್ ಆಗಿ, ವಿಲಕ್ಷಣ=ವಿಗತಂ ಲಕ್ಷಣಂ ಯಸ್ಮಿನ್ ಸಃ ವಿಲಕ್ಷಣಃ, ಕಾರಣರಹಿತಸ್ಥಿತಿವಂತ, ಸರ್ವರಿಂದ ಭಿನ್ನನಾದರೂ, ನಿಖಿಳಜಗದಾಶ್ರಯ = ಸಮಸ್ತ ಜಗತ್ತಿಗೆ ಆಶ್ರಯನಾಗಿರುವನು.

**ನಿರಾಮಯಃ**=ನಿಷ್ಕ್ರಾಂತಃ ಆಮಯಾನ್ನಿರಾಮಯಃ, ಭವರೋಗಾದಿಯಿಂದ ದೂರನಾದವ, ದೋಷದೂರ, ಪೂರ್ಣಜ್ಞಾನಾನಂದರೂಪಿ ಶ್ರೀಹರಿಯೇ ಸಂತೈಸೆಂದು ಪ್ರಾರ್ಥಿಪುದು = ಸಕಲಕಾಲದೇಶ ಸಕಲ ಜನ್ಮಗಳಲ್ಲಿ ಸಕಲಪಿತೃಗಳಲ್ಲಿ ಬಿಡದೆ ಆಪ್ತನಾಗಿಪ್ಪಹರಿಯೇ ರಕ್ಷಿಸು ಪಾಲಿಸು. ಎಂದು ಪ್ರಾರ್ಥನೆ ಮಾಡಿಕೊಳ್ಳಬೇಕು.

**ದ್ರೌಪದೀಶಪತಿವಿಠಲರು**=ಜಯಜಯ ಜಯಾಕಾಂತ, ೧ ಜಯಾ ಕಾಂತ=ಸಂಕರ್ಷಣ, ೨ ಕಪಿಲ, ೩ ದತ್ತಾತ್ರೇಯ, ೪ ಮಹಿದಾಸ, ೫ ಹಯ ವದನ, ೬ ಹರಿ, ೭ ಹಂಸ, *ಏಳು ರೂಪ, ದ್ವಾದಶ ಪಿತೃಗಳಿಂದ ಹೆಚ್ಚಿಸಿದರೆ ೮೪, ೧ ವಾಸುದೇವ, ೨ ಪ್ರದ್ಯುಮ್ನ ೩ ಅನಿರುದ್ಧ ೪ ನಾರಾಯಣ ಇವು ನಾಲ್ಕು ಒಟ್ಟು ೮೮, ವಿಶ್ವಾದಿ ೪ ಆತ್ಮಾದಿ (೪) ಅಂತೂ ೯೬ ||

**ಗುರುಶ್ರೀನಿವಾಸವಿಠಲಶಿಷ್ಯರ** ವ್ಯಾಖ್ಯಾನ. ಪದ್ಯ ೮, ೯, ೧೦ ವ್ಯಾಖ್ಯಾನ ಇಲ್ಲ.

**ಭಾವಸೂಚನ:**—ಇದಾನೀಮುಕ್ತರೀತ್ಯಾ ವಿಚಿಂತ್ಯ ಹರಿಂ ಪ್ರಾರ್ಥನಾ ಕ್ರಮಮಾಹ|| ಜಯ ಜಯೇತಿ || ಇದು ಅವಿದ್ಯಮಾನಪ್ರಾರ್ಥನವಲ್ಲ. ಸ್ಥಿತಕ್ಕೆ ಪ್ರಕಾಶನ|| "ಸರ್ವದಾ ಜಯತೋ ವಿಷ್ಣೋರ್ಜಯಸ್ತಸ್ಯ ಪ್ರಕಾಶನಂ" ಇತಿ ಶ್ರುತಿಃ ಗೀತಾತಾತ್ಪರ್ಯೇ ||೮||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

ಏವಂ ಪರಮೋಪಕಾರಕರ್ತಾರಂ ರಮಾಭರ್ತಾರಂ ಸಮೀಡ್ಯ ಹರ್ಷೋ ದ್ರೇಕಾತ್ ಸ್ಮಾರಯಂತಿ "ಜಯ" ಇತಿ || "ನಿರಾಮಯ" ನಿಷ್ಪಾಪ ||೮||

## ಕನ್ನಡಾರ್ಥ

ಹಿಂದೆ ನಿರೂಪಿಸಿದಂತೆ ಪರಮ ಉಪಕಾರವನ್ನು ಮಾಡುವ ರಮಾರಮಣ ಶ್ರೀ ಹರಿಯನ್ನು ಸ್ತುತಿಸಿ ಹರ್ಷೋದ್ರೇಕದಿಂದ ನೆನಪಿಸುತ್ತಾರೆ. "ಜಯ" ಎಂಬ ಪದ್ಯದಿಂದ.

"ನಿರಾಮಯ"=ಪಾಪಗಳಿಂದ ಸದಾ ದೂರ–ರಹಿತನು. ||೮||

**ಅವತರಣಿಕಾ :**—ಷಣ್ಣವತಿ ಎಂಬ ಅಜಾದಿ ಪಂಚಾಶದ್ವರ್ಣಗತ ಅಕ್ಷರಶಬ್ದನಾಮರೂಪದಿಂದ ಸ್ತುತ್ಯನು, ಎಂದು ಆ ಷಣ್ಣವತಿ ನಾಮಕನ ಮಹಾಮಹಿಮೆ ಕೊಂಡಾಡುತ್ತಾರೆ.

---

*ಈ ೭ ರೂಪಗಳು ಜ್ಞಾನಪ್ರದರೂಪ ಚಿಂತನೆಗೈದರೆ ೭ ಲೋಕದಲ್ಲಿದ್ದ ಪಿತೃಗಳು ತೃಪ್ತರಾಗುತ್ತಾರೆ.

ಷಣ್ಣವತಿಯೆಂಬಕ್ಷರೇಡ್ಯನು ।
ಷಣ್ಣವತಿ ನಾಮದಲಿ ಕರೆಸುತ ।
ತನ್ನವರು ಸದ್ಭಕ್ತಿಪೂರ್ವಕದಿಂದ ಮಾಡುತಿಹ ॥
ಪುಣ್ಯಕರ್ಮವ ಸ್ವೀಕರಿಸಿ ಕಾ ।
ರುಣ್ಯ ಸಾಗರ ಸಲಹುವನು ಬ್ರ ।
ಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ ॥೯॥

**ಪದ್ಯಾರ್ಥ** :—ಷ=ಷಡ್ಗುಣ, ಣ್ಣ = ಣಾತ್ಮ, ವ = ವರಾಯ ನಮಃ ತಿ = ತಾರಾಭಿನ್ನ ಇಂದ್ರ, ಈ ಅಕ್ಷರದಿಂದ ಈಡ್ಯನು = ಸ್ತುತ್ಯನಾದವನು, ಷಣ್ಣವತಿ = ಷಟ್, ಪೂರ್ಣ ಜ್ಞಾನಾನಂದೈಶ್ವರ್ಯಾದಿಪಟ್ ಭಗ ಇತೀರಿತಾಃ ॥ ಎಂಬುವಂತೆ ಪೂರ್ಣಜ್ಞಾನಾನಂದಾದಿ ಷಡ್ಗುಣೈಶ್ವರ್ಯ ಸಂಪನ್ನನಾದ ಹರಿಯು, ಷಟ್, ನವತಿ ಈ ಎರಡೂ ಪದಗಳಿಂದ ಸ್ತುತ್ಯನು. ನವತಿ = ೯೦ ದೇವತೆಗಳಲ್ಲಿ ನಿಯಾಮಕನಾಗಿದ್ದು, ಅವರನ್ನು ಚಕ್ರದಂತೆ ತಿರುಗಿಸುವುದರಿಂದ ನವತಿ ಎಂದು ಪರಮಾತ್ಮನಿಗೆ ಹೆಸರು.

"ಚತುರ್ಭಿಃ ಸಾಕಂ ನವತಿಂ ಚ ನಾಮಭಿಃ ಚಕ್ರಂ ನವತ್ತಂ ವ್ಯತೀರ ವೀವಿಸತ್" ಎಂಬ ಶ್ರುತಿ. ಶ್ರುತ್ಯರ್ಥವು ಹಿಂದಿನ ಸಂಧಿಯಲ್ಲಿ ಬರೆದಿದೆ. ಇದರ ವಿವರ ಏನೆಂದರೆ.

| | |
|---|---|
| ಮರುತಗಣ | ೪೭ |
| ಆದಿತ್ಯಗಣ | ೧೨ |
| ಸಾಧ್ಯಗಣ | ೩ |
| ವಸುಗಣ | ೮ |
| ರುದ್ರಗಣ | ೧೧ |
| ಅಶ್ವಿನಿ | ೨ |
| ಋಷಿಗಣ | ೭ |
| | ೯೦ |

ಇವರೆಲ್ಲರೂ ವಿಜಯದಾಸರ ಸುಳಾದಿ ಪ್ರಕಾರಕ್ಕೆ ಪಿತೃಗಣದವರೆನಿಸುತ್ತಾರೆ. ಪಿತೃಶ್ರಾದ್ಧದಲ್ಲಿ ಇವರಿವರ ಕಾರ್ಯ ಬೇರೆ ಇದೆ. ಜ್ಞಾನಿಗಳಿಂದ ತಿಳಿಯುವುದು.

೧. ಯಮ, ೨. ಸೋಮ, ಕವ್ಯವಾಹನ, ವಸು ರುದ್ರ ಆದಿತ್ಯ ೯೬ ಜನರಲ್ಲಿ. ಹೀಗೆ ಷಣ್ಣವತಿ ನಾಮದಿಂದ ಕರೆಸುತ್ತ, ತನ್ನವರು ಸದ್ಭಕ್ತಿಯಿಂದ

ಮಾಡುವ = ಕೇವಲ ಭಕ್ತರಾದವರು. ಪಿತ್ರಂತರ್ಗತ ಷಣ್ಣವತಿ ದೇವತೆಗಳಂತರ್ಗತ ಶ್ರೀಹರಿಯ ಪ್ರೀತಿಗೋಸುಗವೇ ಮಾಡುವ, ಪುಣ್ಯಕರ್ಮವ = ಭಗವಂತನ ಸ್ಮೃತಿ ಭಗವತ್ಕರ್ತೃತ್ವ ಭಗವತ್ಪ್ರೀತಿಗೋಸುಗ ಅನುಸಂಧಾನದಿಂದ ಮಾಡಿದ ಕರ್ಮಗಳೆಲ್ಲವೂ ಪುಣ್ಯಕರ್ಮಗಳು. ಇವುಗಳನ್ನು ಕೃಷ್ಣಾರ್ಪಣಪೂರ್ವಕವಾಗಿ ಕೊಡಲು, ಸ್ವೀಕರಿಸಿ = ಕೈಕೊಂಡು, ಶ್ರೀಹರಿಯು, ಕಾರುಣ್ಯಸಾಗರ = ದಯಾಳು ಕರುಣಾಸಮುದ್ರನು. ಬ್ರಹ್ಮಣ್ಯದೇವ = ಬ್ರಹ್ಮಣ್ಯ = ತಪೋ ಜಾಂತಿಶ್ಚ ವೇದಾಶ್ಚ ವಿಜ್ಞಾನಂ ಬ್ರಹ್ಮಸಂಜ್ಞಿತಂ ತಸ್ಯ ಹಿತತ್ವಾತ್ ಬ್ರಹ್ಮಣ್ಯ, (ವಿ. ಸ ನಾ. ವಿದ್ಯಾಧಿರಾಜೀಯ) ಇವೆಲ್ಲವೂ ಶ್ರೀಹರಿಯ ನಾಮಗಳೇ. ತಪಸ್ಸು, (ಆದಿ ಅಂತ್ಯ ಇಲ್ಲದವನು,) ವೇದವೇದ್ಯನು, ವಿಜ್ಞಾನ ಉಳ್ಳವನು, ವೇದಾಧ್ಯಯನ, ತಪಸ್ಸು, ವಿಜ್ಞಾನವಂತರಾದ ಬ್ರಹ್ಮಜಿಜ್ಞಾಸುಗಳಾದ ಬ್ರಾಹ್ಮಣರಿಗೆ ಹಿತಮಾಡುವವನು, ಬ್ರಹ್ಮಣ್ಯನೆಂದು ಕರೆಸುತ್ತಾನೆ. ಮತ್ತು ದೇವ = ಕ್ರೀಡಾದಿಗುಣವಿಶಿಷ್ಟನಾದ ಹರಿಯು ಇಂಥ ಜ್ಞಾನಿ ಬ್ರಾಹ್ಮಣರಿಗೆ ಅಂದರೆ ಬ್ರಹ್ಮನನ್ನು ತಿಳಿದ ಜ್ಞಾನಿಗಳಿಗೆ, ಭವಾಬ್ಧಿಪೋತ = ಭವವೆಂಬ ಸಮುದ್ರಕ್ಕೆ ನಾವೆಯ ಸದೃಶನಾದವನು. ಬಹು ಪ್ರಕಾರದಲಿ ತನ್ನವರನ್ನು ಸಲಹುವನು. ಭಕ್ತಾಪರಾಧಸಹಿಷ್ಣು, ಅಪರೋಕ್ಷಾನಂತರ ಭಕ್ತರು ಮಾಡಿದ ಅಪರಾಧಗಳನ್ನು ಕ್ಷಮಿಸಿ, ಪ್ರಾರಬ್ಧಕರ್ಮ ಉಪಮರ್ದ ಮಾಡಿ, ಅನಿಷ್ಟವಾದ ಲಿಂಗಭಂಗಗೈದು, ಸ್ವರೂಪಾನಂದ ಮೋಕ್ಷವನ್ನು ಕೊಟ್ಟು ಇಷ್ಟು ಬಹು ಪ್ರಕಾರದಿಂದ ರಕ್ಷಿಸುವನೆಂದು ಉಪದೇಶಗೈಯ್ಯುತ್ತಾರೆ. ದಾಸರಿಗೊಲಿದ ಹರಿಯೇ ನೀನು ಅನಂತರೂಪಿ, ಅನಂತ ಜ್ಞಾನವನ್ನು ಕೊಟ್ಟು ರಕ್ಷಿಸು. ನಿನಗೆ ಜಯ ಜಯವಿರಲಿ.

**ದ್ರೌಪದೀಶ ಪತಿವಿಠಲರು:**—ಷಣ್ಣವತಿ ಎಂಬ ಅಕ್ಷರೇಡ್ಯನು. ಷಣ್ಣವತಿ ಎಂಬ ನಾಲ್ಕು ಅಕ್ಷರ ಒಂದೊಂದರಲ್ಲಿ ಕೇಶವಾದಿ ೨೪ ಮೂರ್ತಿಯಿಂದ ಹೆಚ್ಚಿಸಿದರೆ ೯೬ ರೂಪದಿಂದ ಕ್ರೀಡಿಸುತ್ತಾನೆ. (ಈ ಜ್ಞಾನ, ಈ ರೂಪವಿಜ್ಞಾನ ವಿವರ ಜ್ಞಾನಿಗಳೇ ಬಲ್ಲರು)

**ಭಾವಸೂಚನ:**— ಷಣ್ಣೇತಿ ॥ ಪೋತ = ನಾವೀ ॥ ಪ್ರಕೃತವಿವಕ್ಷಯೋಕ್ತಂ ಪುಣ್ಯೇತಿ ॥೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಷಣ್ಣವತಿ" ಇತಿ ॥ ಷಡ್ಗುಣತ್ವೇನ ಷಟ್ । ನವತಿ ದೇವಾಂತರಾತ್ಮಕತ್ವಾತ್ ತಥಾ ॥ "ಪೋತ"—ನಾವಿ ॥೯॥

## ಕನ್ನಡಾರ್ಥ

"ಷಣ್ಣವತಿ" ಎಂಬಲ್ಲಿ ಷಟ್‌ನವತಿ ಹೀಗೆ ಪದಗಳನ್ನು ಬಿಡಿಸಿ, ಆ ಪದಗಳಿಂದ "ಸ್ತುತ್ಯನು" ಎಂದು ಅರ್ಥಮಾಡಬೇಕು. ಪೂರ್ಣಜ್ಞಾನಮುಂತಾದ ಷಡ್ಗುಣ ಪರಿಪೂರ್ಣನಾದುದರಿಂದ "ಷಟ್" ಎಂದೂ, ೯೦ ದೇವತೆಗಳಲ್ಲಿ ನಿಯಾಮಕನಾಗಿದ್ದು ಅವರನ್ನು ಚಕ್ರದಂತೆ ತಿರುಗಿಸುವುದರಿಂದ ನವತಿಯೆಂದೂ ಪರಮಾತ್ಮನಿಗೆ ಷಣ್ಣವತಿ ಎಂದು ಕರೆಯುವರು.

"ಪೋತ" ನಾವೆ ಭವಾಬ್ಧಿಪೋತ "ಸಂಸಾರವೆಂಬ ಸಮುದ್ರವನ್ನು ದಾಟಿಸುವ ದೋಣಿ" ಎಂದು ಅರ್ಥ ॥೯॥

**ಅವತರಣಿಕಾ :—** ಸೃಷ್ಟಿಕರ್ತಾ, ಪಾಲನಕರ್ತಾ ಶ್ರೀಹರಿಯಿರಲು ಅನ್ಯರನ್ನು ಅಪೇಕ್ಷಿಸದೇ ಶ್ರೀ ಹರಿಯನ್ನೇ ಮೊರೆಹೊಕ್ಕು ನುತಿಗೈದರೆ ದೇವತೆಗಳಿಗೆ ಅಮೃತವನ್ನು ನೀಡಿದಂತೆ ಅನಂತ ಸುಖವನ್ನು ಕೊಟ್ಟು ರಕ್ಷಿಸುವನೆಂದು ಉಪದೇಶಿಸುತ್ತಾರೆ.

**ದೇಹಗಳ ಕೊಡುವವನು ಅವರವ ।**
**ರಹರಗಳ ಕೊಡದಿಹನೆ ಸುಮನಸ ।**
**ಮಹಿತ ಮಂಗಳ ಚರಿತ ಸದ್ಗುಣಭರಿತ ಅನವರತ ॥**
**ಅಹಿಕ ಪಾರತ್ರಿಕ ಸುಖಪ್ರದ ।**
**ಮೋಹಿಸಿ ಬೆನ್ನಿಲಿ ಬಿಟ್ಟಮೃತವ ।**
**ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನಾ**
**॥೧೦॥**

**ಪದ್ಯಾರ್ಥ :—** ದೇಹಗಳ ಕೊಡುವನು = ಸರ್ವಜೀವರಿಗೆ ಅವರವರ ಕರ್ಮ ದೇಶ ಕಾಲಾನುಗುಣವಾಗಿ ನಾನಾ ವಿಧವಾದ ಯೋನಿಯಲ್ಲಿ ಸೃಜಿಸಿ ದೇಹವನ್ನು ಕೊಡುತ್ತಾನಾದ ಮೇಲೆ, ಅವರವರ=ಆಯಾ ದೇಹವೆತ್ತಿದ ಪ್ರಾಣಿ

ಗಳಿಗೆ, ಅಹರಗಳ ಕೊಡದಿಹನೆ = ಅವರಿಗೆ ಆಯಾ ದೇಹಕ್ಕೆ ಯೋನಿಗೆ ಯೋಗ್ಯವಾದ ಊಟಮಾಡಲು, ತಿನ್ನಲು, ಮೇಯಲು ಅನ್ನ, ತೃಣ, ಫಲಾದಿ ಗಳರೂಪ ಅನ್ನವನ್ನು, ಕೊಡದಿಹನೆ? = ಕೊಡುವುದಿಲ್ಲವೇ ಅಂದರೆ ನಿಶ್ಚಯ ವಾಗಿ ಕೊಟ್ಟೇಕೊಡುವನು. ಸುಮನಸಮುಹಿತ=ದೇವತೆಗಳಿಂದ ಪೂಜ್ಯನಾದ ವನು, ಮಂಗಳಚರಿತ = ಶುಭಕರವಾದ ಪುಣ್ಯತಮ ಕೀರ್ತಿಶಾಲಿ, ಅನವರತ ಸದ್ಗುಣಭರಿತ=ನಿತ್ಯ ಜ್ಞಾನಾನಂದಾದಿ ಅನಂತ ಗುಣಪೂರ್ಣನು, ಅಹಿಕ= ಈ ಲೋಕದಲ್ಲಿರುವ ನಾನಾತರದ ಭೋಗ, ಪಾರತ್ರಿಕ = ಸ್ವರ್ಗಾದಿ ಲೋಕದ ಸುಖ, ಮತ್ತು ಊರ್ಧ್ವಲೋಕಗಳಲ್ಲಿ ಜ್ಞಾನ ಭಕ್ತ್ಯಾದಿ ಸುಖ, ಮೋಕ್ಷದಲ್ಲಿ ಸ್ವರೂಪಾನಂದಾವಿರ್ಭಾವ ಸುಖಪ್ರದನು. ತನ್ನ ನಿಜ ಭಕ್ತರಿಗೆ ಬಂದ ದೈತ್ಯಾದಿಗಳ ಉಪಟಳ ಕಳೆಯಲು, ಸಮುದ್ರಮಥನ ಕಾಲದಲ್ಲಿ ಮಂದರ ಪರ್ವತವು ಸಮುದ್ರದಲ್ಲಿ ಮುಳುಗುತ್ತಿರಲು, ಕೂರ್ಮರೂಪನಾಗಿ ಬೆನ್ನಿಲಿ ಬೆಟ್ಟವವಹಿಸಿ = ತನ್ನ ಬೆನ್ನಮೇಲೆ ಮಂದರಪರ್ವತ ಧರಿಸಿದನು. ದೇವತೆಗಳು ಪ್ರಾರ್ಥಿಸಿ ಕೂರ್ಮನ ಮೇಲೆ ಬೆಟ್ಟ ಹೊರಿಸಿದರೂ ಸಹಿಸಿ, ಅವರ ಅಪರಾಧ ಮನ್ನಿಸಿ, ದ್ರುಹಿಣ ಮೊದಲಾದವರಿಗೆ ಅಮೃತ ಉಣಿಸಿದನು. ದ್ರುಹ್ಯತಿ ದುಷ್ಟೇಭ್ಯ ಇತಿ ದ್ರುಹಿಣಃ=ದುಷ್ಟಕಾರ್ಯ ದ್ರೋಹಮಾಡಿ ಪರ್ವತ ಬೆನ್ನಿಲಿ ಹೊರಿಸಿದದನ್ನು ತಾಳಿ, ಇಂದ್ರಾದಿ ದೇವತೆ ಮೊದಲಾದವರಿಗೆ ಧನ್ವಂತರಿ ರೂಪದಿಂದ ಅಮೃತವನ್ನು ಉಣಬಡಿಸಿ ಅಮರರನ್ನಾಗಿ ಮಾಡಿದನು. ಅಹಿತ ರನ್ನು ಮುರಿದನು = ಇಂದ್ರಾದಿ ದೇವತೆಗಳಿಗೆ ಕೇಡು ಬಗೆಯುವ ದುಷ್ಟದೈತ್ಯ ರಾಕ್ಷಸರನ್ನು ಮುರಿದನು = ಸೊಕ್ಕು ತಗ್ಗಿಸಿ ಪರಾಜಯ ಹೊಂದಿಸಿದನು.

(ಇಲ್ಲಿ ದ್ರುಹಿಣ ಪದಕ್ಕೆ ಬ್ರಹ್ಮನೆಂದು ಅರ್ಥಮಾಡಿದರೆ ಮಾಡಬಹುದು ಭಾಗವತಕ್ಕೆ ವಿರುದ್ಧವಾಗುತ್ತದೆಂಬ ಭಯ)

**ದ್ರೌಪದೀಶಪತಿವಿಠಲರು:**—ದೇಹಗಳ ಕೊಡುವವನು=ಒಬ್ಬ ಜೀವನ ದೇಹ ಒಬ್ಬ ಜೀವಗೆ ಅನ್ನವಾಗುತ್ತದೆ. ಕ್ಷೀರ ಉದಕಾದಿಗಳು ದೇಹಾಂಶವೇ ಸರಿ. ತೀರ್ಥಾಭಿಮಾನಿ ದೇವತೆಗಳಿಗೆ, ತತ್ವದೇಹ ಒಂದು, ಸಾವಯವ ದೇಹವೊಂದು ಎರಡು ಪ್ರಕಾರ, ಅನ್ನಸೃಷ್ಟಿಮಾಡದೇ ದೇಹ ಕೊಟ್ಟದ್ದಾನೆಯೇ ಯಂತ ||೧೦||

**ಭಾಷಸೂಚನ:**—ದೇಹೇತಿ ||೧೦||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ದೇಹ" ಇತಿ || "ಇಹನೆ" ಇದ್ದಾನೆ. ||೧೦||

**ಕನ್ನಡಾರ್ಥ**

ಸೃಷ್ಟಿಸಿದವನು ಸಂರಕ್ಷಿಸಿಯೇ ತೀರುತ್ತಾನೆ. ಆದುದರಿಂದ ರಕ್ಷಣೆಗಾಗಿ ಸೃಷ್ಟಿಕರ್ತನನ್ನು ಬಿಟ್ಟು ಅನ್ಯರಲ್ಲಿ ಮೊರೆಯಿಡಬೇಡವೆಂದು ಆಕೂತದಿಂದ ಉಪದೇಶಿಸುತ್ತಾರೆ. ಈ ಪದ್ಯದಿಂದ. ||೧೦||

**ಅವತರಣಿಕಾ:**—ಹಿಂದಿನ ಪದ್ಯದಲ್ಲಿ ಶ್ರೀಹರಿಯು ಸಮಸ್ತಜೀವಿಗಳಿಗೆ ಅನ್ನವನ್ನು ಕೊಡುತ್ತಾನೆಂದು ಹೇಳಿದರು. ಈಗ ದೇವ, ಪಿತೃ ಮನುಜ ಪಶುಮೃಗಾದಿಗಳಿಗೆ ಯಾವ ಯಾವ ಪ್ರಕಾರ, ಯಾವ ಅನ್ನವನ್ನು ಕೊಟ್ಟು ರಕ್ಷಿಸುತ್ತಾನೆಂದು ೧೫ ನೇ ಪದ್ಯದವರೆಗೆ ಉಪದೇಶಿಸುತ್ತಾರೆ. ಇದೆಲ್ಲ ಸಪ್ತಾನ್ನ ಪ್ರಕರಣ ಸುಳಾದಿ ವಿವರವಿದೆ.

**ದ್ರುಹಿಣ ಮೊದಲಾದಮರರಿಗೆ ಸ |**
**ನ್ನಹಿತ ಮಾಯಾರಮಣ ತಾನೇ |**
**ಸ್ವಹನೆನಿಸಿ ಸಂತೃಪ್ತಿ ಬಡಿಸುವ ಸರ್ವಕಾಲದಲಿ ||**
**ಪ್ರಹಿತ ಸಂಕರ್ಷಣನು ಪಿತೃಗಳಿ |**
**ಗಹರನೆನಿಪ ಸ್ವಧಾಖ್ಯ ರೂಪದಿ |**
**ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನ ಅನಿರುದ್ಧ ||೧೧||**

**ಪದ್ಯಾರ್ಥ :**—ದ್ರುಹಿಣ ಮೊದಲಾದಮರರಿಗೆ = ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೆ, ಸನ್ನಹಿತ = "ಮಹ ಪೂಜಾಯಾಂ ಎನ್ನುವಂತೆ ಒಳ್ಳೆ ಸರ್ವೋತ್ಕೃಷ್ಟತ್ವದಿಂದ ಸರ್ವೋತ್ತಮನೆಂದು ಪೂಜೆಗೊಳ್ಳುವ, ಮಾಯಾರಮಣ = ಮಾಯಾದೇವಿಗೆ ಪತಿಯಾದ ವಾಸುದೇವನು, ತಾನೇ ಆರೂಪದಿಂದ, ಸ್ವಹನೆನಿಸಿ ಸಂತೃಪ್ತಿಬಡಿಸುವ. **ಸ್ವಹಾ** = ಸುಷ್ಠು ಆಹೂಯಂತೆ ಅನಯಾ ಸ್ವಾಹಾ = ಯಾವ ಅಗ್ನಿಮುಖದಿಂದ ಅಗ್ನಿಭಾರ್ಯಾಸ್ವಾಹಾದ್ವಾರಾ, ಯಜ್ಞ ಯಾಗಾದಿಗಳಲ್ಲಿ ಆಜ್ಯಾಹುತಿ ದೇವತೆಗಳಿಗೆ ಸ್ವಾಹಾ ಎಂತ ಹೋಮಿಸಿ

ವರೆ, ದೇವತೆಗಳು ತಮ್ಮ ತಮ್ಮ ಹವಿಸ್ಸನ್ನು ಸ್ವೀಕಾರಮಾಡುತ್ತಾ ತೃಪ್ತರಾಗು ತ್ತಾರೆ; ಈ ಹವಿರ್ದಾನವಲ್ಲಿ ದೇವತೆಗಳಿಗೆ ತೃಪ್ತಿಬಡಿಸುವನು. ಸರ್ವಕಾಲದಲ್ಲಿ ಸದಾ ವಾಸುದೇವನು ದೇವತೆಗಳಿಗೆ ಸ್ವಹಾಖ್ಯ ಅನ್ನವನೀವನು. ಪ್ರಹಿತ ಸಂಕರ್ಷಣನು = ಪ್ರಕರ್ಷೇಣ ಹೆಚ್ಚಿಗೆ ಸಜ್ಜೀವರುಗಳಿಗೆ ಹಿತ ಮಾಡುವ ಪರಮೋಪಕಾರಿಯಾದ ಸಂಕರ್ಷಣರೂಪಿ ಹರಿಯು, ಪಿತೃಗಳಿಗೆ= ಯಮ ಸೋಮ ಕವ್ಯವಾಹನ ವಸುರುದ್ರಾದಿತ್ಯ ಅರ್ಯಮಾದಿ ಪಿತೃಗಳು, ಸಮಸ್ತ ಚಿರಪಿತೃಗಳು ಪಿತೃತ್ರಯರಲ್ಲಿ ನೆಲಸಿಪ್ಪ ಎಲ್ಲ ಪಿತೃಗಳಿಗೆ, ಸ್ವಧಾಖ್ಯರೂಪದಿ = ಸ್ವದ್ಯತೇ ಕವ್ಯಾದ್ಯನೇನ **ಸ್ವಧಾ** ಕೂಯತೇ ಪಿತೃಭ್ಯ ಇತಿ **ಕವ್ಯಂ** = ಪಿತೃಗಳ ತೃಪ್ತಿಗೋಸುಗ ಅನ್ನಾದಿಗಳನ್ನು ಕೊಡುವದು ಕವ್ಯವೆನಿಸುತ್ತದೆ. ಈ ಕವ್ಯದಲ್ಲಿ ಪಿತೃಗಳಿಗೆ ಸ್ವಧಾಕಾರನಾಗಿ ತಿಲೋದಕಾದಿಗಳಿಂದ ಸಂಕರ್ಷಣನು ತೃಪ್ತಿಬಡಿಸುತ್ತಾನೆ. ಮಹಿಜ= ಭೂಮಿಯಲ್ಲಿ ಪುಟ್ಟುವ ಫಲಗಳಲಿ, ಪ್ರದ್ಯುಮ್ನ ರೂಪಿಯು, ತೃಣಪೆಸರಿನಿಂದ ಅನಿರುದ್ಧನು ಕರೆಸುತ್ತಾನೆ.

**ದ್ರೌಪದೀಶಪತಿವಿಠಲರು:—** ದ್ರುಹಿಣ ಮೊದಲಾದ ೧. ಸ್ವಾಹಾ "ದೇವಾನಾಮಾಜ್ಯಮಾಹಾರಂ" ಎಂತ ಘೃತಪೂರ್ವಕಸ್ವಾಹಾಕಾರ ಇದರೊಳಗೆ ವಾಸುದೇವ ದೇವತೆಗಳಿಗೆ ಅನ್ನ, ೨ ಸ್ವಧಾ ತಿಲೋದಕದಲ್ಲಿ ಸಂಕರ್ಷಣ ಪಿತೃ ಗಳಿಗೆ ಅನ್ನ, ೩ ಫಲದಲ್ಲಿ ಪ್ರದ್ಯುಮ್ನ, ೪ ತೃಣದಲ್ಲಿ ಅನಿರುದ್ಧ ||೧೧||

**ಗುರು ಶ್ರೀಶವಿಠಲರ ಶಿಷ್ಯರು :—** ದ್ರುಹಿಣ ಮೊದಲಾದಮರರಿಗೆ= ಬ್ರಹ್ಮಾದಿ ದೇವತೆಗಳಿಗೆ ಸನ್ಮಹಿತ, ಮಾಯಾರಮಣ ತಾನೆ ಸಮಿಾಚೀನವಾದ ಮಹಾಮಹಿಮೆಗಳುಳ್ಳ ಮಾಯಾಪತಿ ಶ್ರೀ ವಾಸುದೇವ ನಾಮಕ ಪರಮಾತ್ಮ ಸ್ವಹನೆನಿಸಿ ಸಂತೃಪ್ತಿಬಡಿಸುತ್ತಾನೆ. ಮಹಿತ ಲೋಕಮಹಿತ ಜಯಾಪತಿ ಸಂಕರ್ಷಣ, ಪಿತೃಗಳಿಗೆ ಅಹರನೆಂದೆನಿಸಿ ಸ್ವಧಾಕಾರದಿಂದ ಪಿತೃದೇವತೆಗಳನ್ನು ಸಂತೃಪ್ತಿಬಡಿಸುವ, ಮಹಿಜ ತೃಣಫಲ ಪೆಸರಿನಿಂದಲಿ = ಭೂಮಿಯಲ್ಲಿ ಜನಿತ ವಾದಂಥ ಫಲ ತೃಣಾದಿ ನಾಮದಿಂದ ಕೃತಿಪತಿ ಪ್ರದ್ಯುಮ್ನ ಕಾಂತಿಪತಿ ಅನಿ ರುದ್ಧ ಅನ್ನನೆನಿಸುವನು.

**ಭಾವಸೂಚನ:—**ದ್ರುಹಿಣೇತಿ ಬ್ರಹ್ಮ|| ಸ್ವಾಹೇತಿ ಸ್ವೀಯಂ ಸ್ವೀಕುರುತ ಇತ್ಯುಕ್ತೇಃ || ೧೧ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸಪ್ತಾನ್ನ ವಿದ್ಯಾಂ ಉಪದಿಶತಿ "ದ್ರುಹಿಣ" ಇತಿ || "ದ್ರುಹಿಣ" ಬ್ರಹ್ಮಾ| ತದ್ಗತಃ ಸನ್ || ಸ್ವೀಯಂ ಸ್ವೀಕುರುತೇ ದದಾತಿ ಚ ಇತಿ ಸ್ವಾಹಾ–ಜನಾರ್ದನಃ || "ಪ್ರಹಿತ" ಪರಮೋಪಕಾರೀ || ಸ್ವತಃ ಏವ ಧಾರಣಾತ್ ಸ್ವಧಾ || ಮಹೀ–ಭೂಮಿಃ || ೧೧ ||

## ಕನ್ನಡಾರ್ಥ

ಸಪ್ತಾನ್ನ ವಿದ್ಯೆಯನ್ನು ಉಪದೇಶಿಸುತ್ತಾರೆ. "ದ್ರುಹಿಣ" ಎಂಬ ಪದ್ಯದಿಂದ. ದ್ರುಹಿಣನೆಂದರೆ ಚತುರ್ಮುಖನು. ಬ್ರಹ್ಮಾದಿಗಳಲ್ಲಿ ಇರುತ್ತ— "ಸ್ವಾಹಾ" ಎಂಬ ಶಬ್ದದ ವಾಚ್ಯನಾಗಿ ಆಹುತಿಯನ್ನು ಸ್ವೀಕರಿಸಿ, ಬ್ರಹ್ಮಾದಿ ದೇವತೆಗಳಿಗೆ ಕೊಟ್ಟು ತೃಪ್ತಿಬಡಿಸುವನು. ಸ್ವೀಯವನ್ನು ಸ್ವೀಕಾರಮಾಡುವದರಿಂದ, ಸರ್ವವನ್ನು ಸ್ವಕೀಯವನ್ನಾಗಿ ಮಾಡಿ ಸ್ವೀಕರಿಸುವದರಿಂದ ಅಥವಾ ಸರ್ವತ್ರ ಸ್ವಕೀಯ ಭಾಗವನ್ನು ಸ್ವೀಕರಿಸುವದರಿಂದ ಸ್ವಾಹಾ ಎಂದು ಹರಿಗೆ ಕರೆಯುತ್ತಾರೆ.

"ಪ್ರಹಿತ" ಎಂದರೆ "ಪರಮೋಪಕಾರಿ" ಎಂದು ಅರ್ಥ. ಸ್ವತಃ ತನ್ನ ಷ್ಟಕ್ಕೆ ತಾನೇ ಧಾರಣ ಪೋಷಣ ಮಾಡುವದರಿಂದ ಸ್ವಧಾ ಎಂದು ಕರೆಯುತ್ತಾರೆ.

"ಸ್ವಾಹಾ" "ಸ್ವಧಾ"ನಾಮಗಳಿಂದ ವಾಸುದೇವ ಹಾಗೂ ಸಂಕರ್ಷಣರು ಆಹುತಿ ಸ್ವೀಕರಿಸಿ ಬ್ರಹ್ಮಾದಿ ದೇವತೆಗಳಿಗೂ, ಪಿತೃಗಳಿಗೂ ತೃಪ್ತಿಬಡಿಸುವರು. ಮಹೀ = ಭೂಮಿ || ೧೧ ||

**ಅವತರಣಿಕಾ :**— ಹಿಂದಿನ ಪದ್ಯದಿಂದ ಮುಂದೆ ಸಾಗುತ್ತ, ಫಲ ತೃಣ ಅನ್ನ ಮನುಜ ಪಶುಗಳಿಗೆ ಪ್ರದ್ಯುಮ್ನ–ಅನಿರುದ್ಧರೂಪನಾಗಿರುವನು. ಇಂತು ಸ್ವಾಹಾ ಸ್ವಧಾ, ಫಲ ತೃಣ ಚತುರ್ವಿಧಾನ್ನದಲ್ಲಿ ಚತುರರೂಪಾತ್ಮಕನ ಭಜಿಸುವದೆಂದು ಹೇಳುತ್ತಾರೆ.

**ಅನ್ನನೆನಿಸುವ ನೃಪಶುಗಳಿಗೆ ಹಿ |**<br>
**ರಣ್ಯ ಗರ್ಭಾಂಡದೊಳು ಸಂತತ |**<br>
**ತನ್ನನೀಪರಿಯಿಂದುಪಾಸನೆ ಗೈವ ಭಕ್ತ(ತ)ರ ನಾ ||**

**ಬನ್ನ ಬಡಿಸದೆ ಭವ ಸಮುದ್ರ ಮ।**
**ಹೋನ್ನತಿಯ ದಾಟಿಸಿ ಚತುರ್ವಿಧ।**
**ಅನ್ನಮಯ ಆತ್ಮಪ್ರದರ್ಶನ ಸುಖವನೀವ ಹರಿ ॥ ೧೨ ॥**

**ಪದ್ಯಾರ್ಥ:**—ಹಿಂದಿನ ಪದ್ಯದಲ್ಲಿ ಹೇಳಿದಂತೆ ಫಲರೂಪ ಅನ್ನ, ನೃ= ಮನುಷ್ಯರಿಗೆ ಪ್ರದ್ಯುಮ್ನನೇ ಅನ್ನರೂಪ, ತೃಣಪಶು = ಪಶುಗಳಿಗೆ, ತೃಣ ರೂಪಾನ್ನ ಅನಿರುದ್ಧನೆನಿಸುತ್ತಾನೆ. ಹಿರಣ್ಯ ಗರ್ಭಾಂಡದೊಳು = ಬ್ರಹ್ಮಾಂಡ ದೊಳು, ಸಂತತ = ನಿರಂತರ ಎಡೆಬಿಡದೆ, ತನ್ನನು ಈಪರಿ ಉಪಾಸನೆಗೈವ ಭಕತರನಾ = ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನಾಮಕ ಹರಿ ಯನ್ನ ಉಕ್ತಪ್ರಕಾರವಾಗಿ ದೇವ, ಪಿತೃ, ನರ, ಪಶುಗಳಿಗೆ ಅನ್ನರೂಪನಾಗಿ, ಜೀವನಪ್ರದನಾಗಿರುವನೆಂದು ನಿಶ್ಚಯದಿಂದ ನಂಬಿ, ಉಪಾಸನೆ ಧ್ಯಾನ ಚಿಂತನೆ ಮಾಡುವ ತನ್ನ ಭಕುತರನ್ನು, ಬನ್ನಬಡಿಸದೆ= ಕ್ಲೇಶ ದುಃಖಾದಿಗಳ ಕೊಡದೇ ಮಹೋನ್ನತಿ ಭವಸಮುದ್ರ ದಾಟಿಸಿ = ಮಹಾ ದೊಡ್ಡದಾದ ಅಗಲವಾದ ಆಳವಾದ ಇತರರಿಂದ ಪಾರಗಾಣಿಸಲು ಅಶಕ್ಯವಾದ, ಭವ = ಸಂಸಾರವೆಂಬ ಸಮುದ್ರವನ್ನು ದಾಟಿಸುತ್ತ ಸಂಸಾರಾಂಬುಧಿಯನ್ನು ಪಾರುಮಾಡಿ, ಚತು ರ್ವಿಧ=ನಾಲ್ಕುವಿಧ ಸ್ವಾಹಾ, ಸ್ವಧಾ, ಫಲ, ತೃಣ, ಅನ್ನಮಯನಾಗಿ ಅನ್ನನೇ ತಾನು ಆಗಿ, ಆತ್ಮಪ್ರದರ್ಶನ ಸುಖವನೀವ ಹರಿ = ಜೀವರುಗಳ ದೇಹಗಳಲ್ಲಿಪ್ಪ ದೇವತೆಗಳಿಗೆ ತನ್ನ ನಿಜರೂಪವನ್ನು ತೋರುತ್ತಾ ಆನಂದವನ್ನು ಕೊಡುತ್ತಾನೆ. ಬಿಂಬರೂಪನಾದ ಹರಿಯು, ಸಾಧನ ಜೀವಿಗಳಿಂದ ಈ ತರದ ಉಪಾಸನಾ ಮಾಡಿಸುತ್ತ ಪ್ರಾಣದ್ವಾರಾ ತನ್ನ ಅಪರೋಕ್ಷವನ್ನು ಹೊಂದಿಸುತ್ತಾನೆ.

**ದ್ರೌಪದೀಶಪತಿವಿಠಲರು :**— ಅನ್ನನೆನಿಪ ನೃಪಶುಗಳಿಗೆ = ಫಲ ಪ್ರದ್ಯುಮ್ನ ಮನುಷ್ಯರಿಗೆ ಅನ್ನ, ತೃಣ ಅನಿರುದ್ಧ ಪಶ್ವಾದಿಗಳಿಗೆ ಅನ್ನ. ಸ್ವಾಹಾ-ಸ್ವಧಾ ದೇವಪಿತೃಗಳಿಗೆ ಅನ್ನ ಈ ಪ್ರಕಾರ ಚತುರವಿಧ ಅನ್ನ.

**ಗುರುಶ್ರೀಶವಿಠಲರ ಶಿಷ್ಯರು :**—ನರ-ಪಶುಗಳಿಗೆ ಫಲತೃಣಾದಿಯಲ್ಲಿ ಇದ್ದು ತತ್ತನ್ನಾಮದಿಂದ ಪ್ರದ್ಯುಮ್ನನಾಮಕ ಪರಮಾತ್ಮ ಅನ್ನನೆನಿಸಿ ಭೋಗ್ಯ ಭೋಕ್ತೃನಾಗಿ ಮನುಷ್ಯರಿಗೆ ತೃಪ್ತಿ ಕೊಡುವ, ಪಶುಗಳಿಗೆ ತೃಣಗಳಂತರ್ಗತ ನಾಗಿ ತನ್ನಾಮದಿಂದ ಅನಿರುದ್ಧ ತೃಪ್ತಿಯನ್ನು ಕೊಡುವನು. ಹಿರಣ್ಯ=

ಬಂಗಾರ, ಹಿರಣ್ಯ ಗರ್ಭಾಂಡದೊಳು-ಬ್ರಹ್ಮಾಂಡದೊಳು, ಅಂತರ್ಗತ ವ್ಯಾಪ್ತ ನಾದಂಥ ಪರಮಾತ್ಮ ಸಂತತ ತನ್ನನು ಈ ಪ್ರಕಾರ ಉಪಾಸನೆಗೈವ ಭಕ್ತರನ್ನು ಶ್ರೀ ರಮಾಕಾಂತ = ಪ್ರಣವ ಪ್ರತಿಪಾದ್ಯ ಆದಿನಾರಾಯಣ, ಸರ್ವ ತನ್ನ ಪೂರ್ವೋಕ್ತಪ್ರಕಾರದಿಂದ, ಜ್ಞಾನ ಭಕ್ತಿಪುರಸ್ಸರ ಉಪಾಸನೆ ಮಾಡುವ ಭಕ್ತರ, ಭವಾಖ್ಯವೆಂಬ ಸಮುದ್ರದಲ್ಲಿ ಶ್ರಮಬಡಿಸದಲೇ ಸಂಸಾರ ಸಾಗರದಿಂದ ಉತ್ತಾರಣ ಮಾಡಿಸಿ ಚತುರವಿಧ ಅನ್ನಮಯ = ಸ್ವಾಹಾಕಾರ, ಸ್ವಧಾಕಾರ ನಾಗಿ, ಫಲಗಳಿಂದ ತೃಣಾದಿಗಳಿಂದ ನಾಲ್ಕುವಿಧ ಅನ್ನಪ್ರದನಾಗಿ, ಬ್ರಹ್ಮಾದಿ ದೇವತೆಗಳಿಗೆ, ಪಿತೃಗಳಿಗೆ, ಮನುಜರಿಗೆ, ಪಶುಗಳಿಗೆ ವಾಸುದೇವಾದಿ ನಾಲ್ಕು ರೂಪದಿಂದ ಶ್ರೀ ಆದಿನಾರಾಯಣ, ಶ್ರೀ ರಮಾಕಾಂತ, ಸ್ವರೂಪಾಭಿವ್ಯಕ್ತಿ ಜ್ಞಾನ, ಆತ್ಮಪ್ರದರ್ಶನ = ಪರಮಾತ್ಮನ ದರ್ಶನ ಸುಖರೂಪವಾದ ಭೋಗ್ಯ ಭೋಕ್ತೃನಾಗಿ ತನ್ನಾಮದಿಂದ ಚಿತ್ ಸ್ವರೂಪಾನಂದ ಅಭಿವೃದ್ಧಿ ಮಾಡಿಸಿ ನಾರಾಯಣನ ಮಂಗಳವಾದ ರೂಪಸಂದರ್ಶನದಿಂದ ವೈಕುಂಠಪುರದಲ್ಲಿ ಯೋಗ್ಯತಾನುಸಾರ ಮುಕ್ತಿ ಸುಖಪ್ರದನಾಗುವ, ಭಕ್ತವತ್ಸಲ ಕರುಣಾ ಸಮುದ್ರ ನಾರಾಯಣ ಸರ್ವಜೀವರಿಗೆ ತೃಪ್ತಿ ಕೊಡುವನು. ॥ ೧೨ ॥

**ಭಾವಸೂಚನ:**—ಅನ್ನೇತಿ ॥ ಬನ್ನ—ಕ್ಲೇಶ ॥೧೨॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನ್ನ" ಇತಿ ॥ ಪಯ ಆತ್ಮಕಮ್ ॥ ಬನ್ನ = ಕ್ಲೇಶ । ಆತ್ಮಪ್ರದರ್ಶನೇತಿ ಅಪರೋಕ್ಷದಃ ॥ ತದುತ್ತರಂ ಅನುಷ್ಠಾತುಃ ಸುಖಂ ಮೋಕ್ಷಃ ॥ ೧೨ ॥

## ಕನ್ನಡಾರ್ಥ

ಪ್ರದ್ಯುಮ್ನನು ಧಾನ್ಯಾದಿಗಳಿಂದ, ಅನಿರುದ್ಧನು ತೃಣಾದ್ಯನ್ನದಿಂದ ನರರನ್ನೂ, ಪಶುಗಳನ್ನೂ ಸಂರಕ್ಷಿಸುತ್ತಾರೆ. "ಆತ್ಮಪ್ರದರ್ಶನ"ವೆಂದರೆ ಅಪರೋಕ್ಷಜ್ಞಾನವೆಂದು ಅರ್ಥ. ತದನಂತರ ಸಾಧನಪರನಿಗೆ ಮೋಕ್ಷ ಸುಖವಾಗುವದು. ॥ ೧೨ ॥

**ಅವತರಣಿಕಾ:**—ಹಿಂದಿನ ಎರಡು ಪದ್ಯಗಳಿಂದ ನಾಲ್ಕು ವಿಧ ಅನ್ನ ವಿವರ, ಆ ಚತುರ್ಮೂರ್ತಿ ಭಗವಂತನಿಗೆ ಅರ್ಪಿಸುವ ಬಗೆ ಹೇಳಿ, ಈ ಪದ್ಯದಿಂದ

ಮನಸ್ಸು, ವಚನ, ಕಾಯದಿಂದ ಎಸಗುವ ಮೂರು ವಿಧ ಅನ್ನವೆನಿಸುತ್ತವೆ. ಈ ತ್ರಿವಿಧಾನ್ನವನ್ನು ಶ್ರೀ ನಾರಾಯಣಗೆ ಅರ್ಪಿಸುವ ಬಗೆ ವಿವರಿಸುತ್ತಾರೆ.

**ಮನವಚನ ಕಾಯಗಳ ದೆಸೆಯಿಂ ।**
**ದನುದಿನದಿ ಬಿಡದಾಚರಿಸುತಿ ।**
**ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿಪೂರ್ವಕದಿ ॥**
**ಅನಿಳ ದೇವನೊಳಿಪ್ಪ ನಾರಾ ।**
**ಯಣಗಿದನ್ನವುಯೆಂದು ಕೃಷ್ಣಾ ।**
**ರ್ಪಣವೆನುತ ಕೊಡು ಸ್ವೀಕರಿಸಿ ಸಂತೃಪ ಕರುಣಾಳು ॥ ೧೩ ॥**

**ಪದ್ಯಾರ್ಥ** :—ಮನ = ಮನಸ್ಸು, ಚಿನ್ಮನಸ್ಸು, ಜಡಮನಸ್ಸು = ಎಂದು ಎರಡು ವಿಧ, ಬಿಂಬರೂಪಿ ಹರಿಯು ಜೀವನ ಚಿನ್ಮನಸ್ಸಿನಲ್ಲಿ ಪ್ರೇರಿಸಿ ಜಡ ಮನಸ್ಸಿನಲ್ಲಿ ಪ್ರಾಣಾಂತರ್ಯಾಮಿಯಾಗಿ ವಾಯು ವೇಗದಿಂದ ಸದಾ ಬಿಡದೇ ಅನಂತ ವ್ಯಾಪಾರಗಳನ್ನು ಮಾಡಿಸುವನು. ಶ್ರೀಹರಿಯು ವಚನ ವಾಕ್ಯ ದಿಂದಲೂ, ಅನೇಕ ಉಚಿತ ಅನುಚಿತ ವಾಗ್ವ್ಯಾಪಾರವನ್ನು ಮಾಡಿಸುವನು. ಕಾಯ ದೇಹದಿಂದ ಪಂಚಕರ್ಮೇಂದ್ರಿಯ ಜ್ಞಾನೇಂದ್ರಿಯ ದ್ವಾರಾ, ಒಳ್ಳೆ, ಕೆಟ್ಟ ಕರ್ಮಗಳನ್ನು ಮಾಡಿಸುವನು ಎಂದು ಅನುದಿನದಿ ಬಿಡದಾಚರಿಸುತಿಪ್ಪ = ಪ್ರತಿದಿನ ಪ್ರತಿಕಾಲ ಕ್ಷಣ ಬಿಡದೆ, ಮನೋ-ವಾಚಾ-ಕಾಯ ಈ ತ್ರಿಬಗೆ ಯಿಂದ ಮಾಡುವ ಕಾರ್ಯ ಅನುಚಿತ = ಅಯೋಗ್ಯ ಪಾಪ, ಉಚಿತ = ಯೋಗ ಪುಣ್ಯ, ಕರ್ಮಗಳಾಗಲಿ ಇವೆಲ್ಲವನ್ನು ಸದ್ಭಕ್ತಿಪೂರ್ವಕ = ಸಕಲಕ್ಕೂ ಶ್ರೀಹರಿ ಕರ್ತಾ ಕಾರಯಿತಾ ಪ್ರಾಣಾಂತರ್ಯಾಮಿಯಾಗಿ ಎನ್ನೊಳಿದ್ದು ಸಕಲಕ್ರಿಯಾ ಮಾಡಿಸುತ್ತಾನೆಂಬ ದೃಢ ವಿಶ್ವಾಸದಿಂದ, ಅನಿಳದೇವನೊಳಿಪ್ಪ= ಶ್ರೀ ಭಾರತೀರಮಣ ಮುಖ್ಯಪ್ರಾಣ ವಾಯುದೇವರ ಅಂತರ್ಗತನಾದ ನಾರಾಯಣಗಿದನ್ನವು ಎಂದು, ಶ್ರೀ ನಾರಾಯಣಗೆ = ಮನೋ ವಾಕ್ ಕಾಯ ಕರ್ಮ ವ್ಯಾಪಾರವೆಲ್ಲ ಶ್ರೀ ಬಿಂಬರೂಪಿ ಹರಿ ನಾರಾಯಣಗೆ ಇದು ಅನ್ನವು ಎಂದು ಕೃಷ್ಣಾರ್ಪಣವೆನುತ ಕೊಡು = ತ್ರಿವಿಧವಾದ ಅನ್ನವು ಬಿಂಬ ರೂಪನಾದ ಹರಿಯ ಪಾದದಲ್ಲಿ ಸಮರ್ಪಿಸು. ಅಂದರೆ, ಸ್ವೀಕರಿಸಿ = ಸ್ವೀಕಾರಮಾಡಿ ಕೈಕೊಂಡು ತೃಪ್ತನಾಗಿ ಸಂತೃಪನು, ಕರುಣಾಳು = ದಯಾ ಸಮುದ್ರನಾದ ಹರಿಯು ಸಂರಕ್ಷಿಸುವನು.

**ಪ್ರಾಪದೀಶಪತಿ ವಿಠಲರು** :—ಮನ ವಚನ ಕಾಯಕ || ಈ ತ್ರಿವಿಧ ಕರ್ಮಕ್ಕೆ ಮುಖ್ಯ ಕಾರಣ ಸರ್ವೇಂದ್ರಿಯ ನಿಯಾಮಕ ಅನಿಳ ಮುಖ್ಯಪ್ರಾಣ ಅಂತರ್ಯಾಮಿ ಶ್ರೀ ನಾರಾಯಣಗೆ ಅನುಚಿತೋಚಿತ ಕರ್ಮ ಪಾಪ ಪುಣ್ಯ ಕರ್ಮ ಸಮರ್ಪಣ ಮಾಡೋಣವೇ ಇದೇ ಪರಮಾತ್ಮಗೆ ಅನ್ನ || ೧೩ ||

**ಗುರು ಶ್ರೀಶವಿಠಲರ ಶಿಷ್ಯರು** :—ಮನಸ್ಸಿನಿಂದ ವಾಚಾದಿಂದ ಶರೀರಧಿಂದ ಪ್ರತಿ ದಿವಸಗಳಲ್ಲಿ ಏಕಾಗ್ರಚಿತ್ತನಾಗಿ, ಶ್ರೀ ಪರಮಾತ್ಮನ ಸ್ಮರಣೆ ಮರೆಯದೇ ಆಚರಿಸುತಿಪ್ಪ ಉಚಿತ ವರ್ಣಾಶ್ರಮೋಚಿತ ಧರ್ಮ ಕರ್ಮಗಳ, ಅನುಚಿತ ಕರ್ಮಗಳ ಪಾಪ ಕರ್ಮಗಳನ್ನ ಸದ್ಭಕ್ತಿಪೂರ್ವಕದಿ = ಪರಮ ಸವಿಾಚೀನವಾದ ಸ್ನೇಹ ಪುರಸ್ಸರವಾಗಿ, ಅನಿಳದೇವನೊಳಿಪ್ಪ ನಾರಾಯಣಗಿದನ್ನವು ಎಂದು = ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ರಮಾಕಾಂತ ಶ್ರೀ ನಾರಾಯಣಗೆ, ಮನೋವಾಕ್ಕಾಯಗಳಿಂದ ಅನುಭವಿಸುವ ವಿಷಯಗಳನ್ನೂ ಅನ್ನವೆಂದು ಶ್ರೀ ಕೃಷ್ಣಾರ್ಪಣಮಾಡಿದರೆ, ಸ್ವೀಕರಿಸಿ ಸಂತೈಪ ಕರುಣಾಳು ಉದ್ಧರಿಪ ಶ್ರೀಕೃಷ್ಣ || ೧೩ ||

**ಭಾವಸೂಚನ**:—ಮನ ಇತಿ || ಅನಿಳ = ವಾಯು || ೧೩ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ತ್ರೀಣಿ ಅನ್ನಾನಿ ನಿರ್ದಿಶತಿ–"ಮನ" ಇತಿ || ೧೩ ||

## ಕನ್ನಡಾರ್ಥ

ಏಳು ವಿಧ ಅನ್ನಗಳಲ್ಲಿ ಸ್ವಾಹಾ–ಸ್ವಧಾ–ಧಾನ್ಯ–ತೃಣ ಈ ನಾಲ್ಕು ಅನ್ನಗಳನ್ನು ಹೇಳಿ ಇನ್ನುಳಿದ ಮೂರು ಅನ್ನಗಳನ್ನು ತಿಳಿಸುತ್ತಾರೆ "ಮನ" ಎಂಬ ಪದ್ಯದಿಂದ. || ೧೩ ||

**ಅವತರಣಿಕಾ** :—ಹಿಂದೆ ಪದ್ಯ ೧೧-೧೨-೧೩ರಲ್ಲಿ ಪೇಳಿದ ಬೃಹದ್ಭಾಷ್ಯೋಕ್ತ ಸಪ್ತಾನ್ನ ಬ್ರಾಹ್ಮಣ ವಿವರವನ್ನೇ ಕ್ರೋಡಿಕರಿಸಿ ಪೇಳುತ್ತಾ, ಇದನ್ನು ಜ್ಞಾನಿಗಳ ಮುಖದಿಂದ ತಿಳಿದು ಅನಿರುದ್ಧಾದಿ ಪಂಚರೂಪಿ ಹರಿಯ ಪೂಜಿಸಬೇಕು. ಶ್ರೀಹರಿಯೆ ಅನ್ನಾದ ಅನ್ನ ಅನ್ನದನೆಂಬ ರಹಸ್ಯವನ್ನು ತಿಳಿಸುತ್ತಾರೆ.

**ಏಳು ವಿಧ ಅನ್ನಪ್ರಕರಣವ ।**
**ಕೇಳಿ ಕೋವಿದರಾಸ್ಯದಿಂದಲಿ ।**
**ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳ ॥**
**ಕಾಲಕಾಲದಿ ನೆನೆದು ಪೂಜಿಸು ।**
**ಸ್ಥೂಲಮತಿಗಳಿಗಿದನು ಪೇಳದೆ ।**
**ಶ್ರೀ ಲಕುಮಿ ವಲ್ಲಭನೆ ಅನ್ನಾದನ್ನ ಅನ್ನದನು ॥ ೧೪ ॥**




**ಪದ್ಯಾರ್ಥ** :—ಏಳು ವಿಧ ಅನ್ನಪ್ರಕರಣವ=೧. ದೇವತೆಗಳಿಗೆ ಆಜ್ಯಾಹುತಿ ಸ್ವಾಹಾ ವಾಸುದೇವ, ೨. ಪಿತೃಗಳಿಗೆ ಸ್ವಧಾರೂಪವಾದ ಸಂಕರ್ಷಣ, ೩. ನರರಿಗೆ ಫಲರೂಪವಾದ ಪ್ರದ್ಯುಮ್ನ, ೪. ಪಶುಗಳಿಗೆ ತೃಣರೂಪನಾದ ಅನಿರುದ್ಧ, ನಾಲ್ಕು ವಿಧ ಪ್ರಸಿದ್ಧಾನ್ನವಲ್ಲದೆ—೧. ಮನಸ್ಸು, ೨. ವಾಕ್, ೩. ಕಾಯದಿಂದಾಗುವ ಸಕಲ ಕರ್ಮಗಳು, ನಾರಾಯಣಗೆ ಈ ಮೂರು ವಿಧವಾದ ಅನ್ನವು ಹೀಗೆ ಏಳು ಪ್ರಕಾರ ಅನ್ನ ವಿವರವನ್ನು ಆಲಸವ ಮಾಡದಲೆ ಕೋವಿದರಾಸ್ಯದಿಂದ ಕೇಳಿ=ಸೋಮಾರಿಯಾಗದೇ ಭಗವನ್ನಿಷ್ಠ ಬುದ್ಧಿಯಿಂದ ಮೂರು ವಿಧ ಅನ್ನ ಪರಮಾತ್ಮಗೆ ಹೇಗಾಗುತ್ತವೆಂಬುದನ್ನು ಜ್ಞಾನಿಗಳ ಮುಖದಿಂದ ಕೇಳು=ಶ್ರವಣ ಮನನಮಾಡು. ಮೇಲೆ ವಿವರಿಸಿದಂತೆ ಈ ಏಳು ವಿಧ ಅನ್ನನಾಮನು, ಅನ್ನಪ್ರದನಾದ ಅನಿರುದ್ಧಾದಿ ನಾರಾಯಣಾಂತ ಐದು ರೂಪಗಳನ್ನು ನೆನದು ಚಿಂತಿಸುತ್ತಾ, ಕಾಲಕಾಲದಿ ನೆನದು = ಪ್ರತಿ ಕ್ಷಣಕ್ಷಣಕ್ಕೆ ಧ್ಯಾನಿಸುತ್ತಾ, ಪಂಚರೂಪಿ ಹರಿಯ ಪೂಜಿಸು=ಪೂಜಾಮಾಡು. ಸ್ಥೂಲಮತಿಗಳಿಗಿದನು ಪೇಳದೆ = ಮಂದಮತಿಗಳು ಸಾಧನವರಿಯದ ಜಡಮತಿಗಳು ಅಜ್ಞಾನಿಗಳಿಗೆ ಇದನ್ನು ಪೇಳದೆ=ಈ ಗೋಪ್ಯವಾದ ರಹಸ್ಯವನ್ನು ಕೋವಿದರಿಂದ ತಿಳಿದದ್ದು ಪೇಳಬೇಡ. ಶ್ರೀ ಲಕುಮಿವಲ್ಲಭನೆ=ಶ್ರೀ ಲಕ್ಷ್ಮೀಕಾಂತನಾದ ನಾರಾಯಣರೂಪಿ ಹರಿಯೇ

ಅನ್ನ = ಅನ್ನರೂಪನು.
ಅನ್ನದ = ಅನ್ನ ಕೊಡುವವನು.
ಅನ್ನಾದ = ಅನ್ನ ಉಂಬುವವನು.

ಎಂದು ಹಿಂದೆ ವಿವರಿಸಿದ್ದನ್ನೇ ಇಲ್ಲಿಯೂ ಮತ್ತೂ ವಿವರಿಸಿದ್ದಾರೆ. ಶ್ರೀಹರಿಯೇ ಮುಖ್ಯ ಅನ್ನ–ಅನ್ನರೂಪ–ಅನ್ನಪ್ರದ–ಜೀವನಪ್ರದನು ಹೇಗೆಂಬುದು

ಬಹು ರಹಸ್ಯ ವಿಷಯ. ಇದೇ ಕಾರಣ ಜ್ಞಾನಿಗಳ ಮುಖದಿಂದ ತಿಳಿಯ ಬೇಕೆಂದು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು:**—ಏಳು ವಿಧ ಅನ್ನಪ್ರಕರಣ = ಜೀವರಿಗೆ ನಾಲ್ಕು ವಿಧ ಅನ್ನ. ಪರಮಾತ್ಮಗೆ ಮೂರು ಅನ್ನ. ಏಳು ವಿಧ, ಇದಕ್ಕೆ ಕಾರಣ ಅನಿರುದ್ಧಾದಿ ರೂಪಗಳು. ಅನ್ನ = ಅನ್ನರೂಪ, ಅನ್ನದ = ಅನ್ನ ಕೊಡುವವ, ಅನ್ನಾದ = ಉಂಬುವವ. ॥ ೧೪ ॥

**ಗುರು ಶ್ರೀಶವಿಠಲರ ಶಿಷ್ಯರು:** ೧. ಶ್ರೀ ಮಾಯಾರಮಣ ವಾಸು ದೇವ ಸ್ವಾಹಾಕಾರನಾಗಿ ಬ್ರಹ್ಮಾದಿ ದೇವತೆಗಳಿಗೆ ತೃಪ್ತಿ ಕೊಡುವ.

೨. ಜಯಾಪತಿ ಸಂಕರ್ಷಣ ಸ್ವಧಾಕಾರನಾಗಿ ಪಿತೃದೇವತೆಗಳಿಗೆ ತೃಪ್ತಿ ಕೊಡುವ.

೩. ಶ್ರೀ ಕೃತಿಪತಿ ಪ್ರದ್ಯುಮ್ನ, ಮಹಿಜ ಫಲಾದಿನಾಮಗಳಿಂದ ಅನ್ನ ನೆನಿಸಿ, ನರರಿಗೆ ತೃಪ್ತಿ ಕೊಡುವ.

೪. ಶ್ರೀ ಶಾಂತಿಪತಿ ಅನಿರುದ್ಧ ಭೂಮಿಯಿಂದ ಉತ್ಪನ್ನವಾದ ತೃಣಾದಿ ಗಳಿಂದ ಪಶುಗಳಿಗೆ ತೃಪ್ತಿ ಕೊಡುವ.

೩. ೧. ಮನೋ, ೨. ವಾಕ್, ೩. ಕಾಯ ಕರ್ಮಗಳಿಂದ ಅನು ಭವಿಸುವ ವಿಷಯಗಳ ಅನಿಳಾಂತರ್ಗತ ಶ್ರೀ ಆದಿನಾರಾಯಣನಿಗೆ ಸರ್ವ ಸಮರ್ಪಣೆ ಮಾಡಿದರೆ ಶ್ರೀ ಹರಿಗುರುಗಳು ಉದ್ಧರಿಸುವರು. ಸಪ್ತಾನ್ನ ಪ್ರಕರಣ ಶ್ರೀ ಗುರುಗಳ ದ್ವಾರಾ ತಿಳಿದು ಹರಿವಾಯುಗಳಿಗೆ ಸಮರ್ಪಿಸಬೇಕು. ಹೃದ್ಗುಹ ನಿವಾಸಿ ಶ್ರೀ ರಮಾಪತಿ ಶ್ರೀ ಆದಿನಾರಾಯಣ ಪ್ರೀತನಾಗಿ ವೈಕುಂಠಪುರವೈದಿಸುವ. ॥ ೧೪ ॥

**ಭಾವಸೂಚನ:**—ಏಳು ವಿಧೇತಿ॥ ಲೇಹಾದಿ ಭಿನ್ನಂ ಚತುರ್ವಿಧಂ ಸರ್ವಸಾಧಾರಣಮನ್ನಮ್ ॥೪॥ ಪಶುಭ್ಯಃ ತೃಣ ಕ್ಷೀರಾದಿಕಮ್ ॥೫॥ ಊರ್ಜಾಖ್ಯಂ ದೇವಾನಾಮ್ ॥೬॥ ಸ್ವಧಾಖ್ಯಂ ಪಿತ್ರ್ಯಾಣಾಂ ಅನ್ನಮ್ ॥೭॥

ಯಥೋಕ್ತಂ ಬೃಹದ್ಭಾಷ್ಯೇ, ತೃತೀಯಾಧ್ಯಾಯಾಂತೇ ಸಪ್ತಾನ್ನ ಬ್ರಾಹ್ಮಣೇ॥ "೧ ಸ ಹೀದಮನ್ನಂ ಧಿಯಾ ಅಧಿಂಯಾ ಜನಯತಿ ಕರ್ಮಭಿರಿತಿ॥

ವಚನಾತ್॥ ಸಪ್ತಾನ್ನಾನಿ ಯದಾ ವಿಷ್ಣುಃ ಪರಮಃ ಪುರುಷೋ ವಿಭುಃ। ಸಸರ್ಜ ತೇಷಾಂ ಸ್ಥಾನಾನಿ (ಸ್ವಾರ್ಥಾನಿ) ಚಕಾರ ತ್ರೀಣಿ ಕೇಶವಃ॥ ಮನೋ ವಾಚಂ ತಥಾ ಪ್ರಾಣಂ ತಸ್ಮಾತ್ತ್ರೈಸ್ಸೃಷ್ಟಿಮೇತಿ ಸಃ॥ ಚತುರ್ಥಂ ಭೋಜ್ಯಮೇ- ವಾನ್ನಂ ಸರ್ವಸಾಧಾರಣಂ ಸ್ಮೃತಮ್॥ ಚತುಷ್ಪಾದ್ಭ್ಯೋ ದ್ವಿಪಾದ್ಭ್ಯಶ್ಚ ಪಶುಭ್ಯಃ ಪಯ ಆತ್ಮಕಂ॥ ಪ್ರಾಯಶ್ಚ ಸಪ್ತಮಾನ್ನಂ ಸಃ ಗೋಕ್ಷೀರಂ ಮುಖ್ಯ- ಮತ್ರ ಚ॥ ಆತ್ಮನೇ ಚೈವ ದೇವಾನಾಂ (ತದ್ಧೋತ್ರಪರಿಕೀರ್ತಿತಂ) ತದ್ಧೋ- ಮಾರ್ಥಂ ಪ್ರಕಲ್ಪಿತಮ್॥ ೨ ಸಪ್ತಾನ್ನಸೃಷ್ಟಿತತ್ವಜ್ಞಸ್ತ್ವೇಕ ಹೋಮೇನ ಮುಚ್ಯತೇ॥ ೩ ಸಪ್ತಾನ್ನಂ ಸೃಜತೇ ಯಸ್ಮಾದಿತಿ। ತಥಾ॥ ೪ ಅಗ್ರೇ॥ ಊರ್ಜಂ ದೇವಾನ್ನಮುದ್ದಿಷ್ಟಂ ಊರ್ಜಿತಾಸ್ತು ಗುಣಾಸ್ತಥಾ॥ ತದಪ್ಯಾ- ಪ್ನೋತಿ ಸ ನರಃ ಯೋಗ್ಯಾ ಏತದುಪಾಸನೇ॥ ೫ ಸ ಹಿ ಜೀವೇಷು ಸಂವಿಷ್ಟಃ ಪಿಂಡಾತ್ಪುತ್ರ ಜನಿಂ ತಥಾ॥ ಯತ್ಕರೋತಿ ಪಿತೄಣಾಂ ಚ ಸಂಶ್ರಯಸ್ತತ ಏವ ಸ ಇತಿ॥ ತೃಣೋದಕಾದಿದಾನೇನ ಪಶೂನಾಮನ್ನತೋ ನೃಣಾಂ॥ ಉಪ- ಕಾರಾಚ್ಚ ಸರ್ವೇಷಾಂ ಪ್ರಾಣಿನಾಮಾಶ್ರಯೋ ಹರಿರಿತಿ ಚ॥ ಆಲಸ = ಆಲಸ್ಯ ॥೧೪॥

ಭಾವಸೂಚನೆಕಾರರು ಶ್ರೀ ಸರ್ವಜ್ಞರು ಭಾಷ್ಯದಲ್ಲಿ ಅಲ್ಲಲ್ಲೆ ಉದಾ ಹರಿಸಿದ ಬೇರೆ ಬೇರೆ ವಾಕ್ಯರೂಪ ಪ್ರಮಾಣಗಳನ್ನು ಅರ್ಥವತ್ತಾಗಿ ಸಂಗ್ರಹಿಸಿ ದ್ದಾರೆ.

ಲೇಹ, ಪೇಯ, ಚೋಷ್ಯ, ಖಾದ್ಯ, ೪ ವಿಧ ಬೇರೆಯಾಗಿರುವ ಮನು ಜರು ಭಕ್ಷಿಸುವ ನಾಲ್ಕು ವಿಧ ಅನ್ನವು ಸರ್ವಸಾಧಾರಣವು. ೫ ಪಶುಗಳಿಗೆ ತೃಣ ಕ್ಷೀರಾದಿಗಳು. ೬ ಊರ್ಜವೆಂಬ ಅನ್ನವು ದೇವತೆಗಳಿಗೆ. ೭ ಸ್ವಧಾಖ್ಯ ಅನ್ನವು ಪಿತೃಗಳಿಗೆಂದು ಏಳು ವಿಧವಾಗಿದೆಂದು ಬರೆದಿರುವರು. ಮನೋ, ವಾಕ್, ಕಾಯ, ಅನ್ನ ಇದರಲ್ಲಿ ಹೇಳಿಲ್ಲ. ಜ್ಞಾನಿಗಳಾದವರಿಂದ ತಿಳಿಯುವ ದಾಗಿದೆ.

ಆದರೆ ಇವರೇ ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ ಮುಂದೆ ವಿವರಿಸಿದ್ದಾರೆ. ಇದು ವಿಚಾರಾಂಶವಾಗಿದೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ನನು ಏತತ್ ಕದಾಪಿ ಅಶ್ರುತಂ ಕಥಂ ಉಪಾಸ್ಯಂ ಚೇತ್ ಬೃಹ- ದ್ಭಾಷ್ಯಾದಿ ನಿಪುಣಾಚಾರ್ಯಾನ್ ಉಪೇಹಿ ಶರಣಮ್ ಇತ್ಯಾಹ—"ಏಳು

ವಿಧ" ಇತಿ || ಸ್ವಯಂ ಅನ್ನಗಃ ಅನ್ನಂ ಭೂತ್ವಾ ಅನ್ನಂ ಪ್ರಭಕ್ಷ್ಯ ಸರ್ವಗಃ ಸನ್ ಅನ್ನಂ ದದಾತಿ ಇತಿ.

ಇತಿ ನಾಮತ್ರಯೇಡ್ಯಃ || ಯಥಾಹ

"ಸಪ್ತಾನ್ನವಿತ್ ವೇದದ್ರಷ್ಟಾ || ತದ್ಬ್ರಾಹ್ಮಣೇ

"ಯತ್ಸಪ್ತಾನ್ನಾನಿ ತಪಸಾ ಜನಯತ್ ಪಿತಾ | ಏಕಮಸ್ಯ ಸಾಧಾರಣಮ್ ದ್ವೇ ದೇವಾನ್ ಅಭಾಜಯತ್ | ತ್ರೀಣಿ ಆತ್ಮನೇಽಕುರುತ | ಪಶುಭ್ಯ ಏಕಂ ಪ್ರಾಯಚ್ಛತ್ ಇತಿ || ತ್ರೀಣಿ ಆತ್ಮನೇಽಕುರುತೇತಿ ಮನೋ ವಾಚಂ ಪ್ರಾಣಂ ತಾನಿ ಆತ್ಮನೇಽಕುರುತ || ತದ್ಭಾಷ್ಯೇ ಚ |

"ಪಿತಾ ವಿಷ್ಣುಃ || ಯತ್ ಯದಾ | ತಪಸಾ ಪ್ರಾಣಿನಾಂ ಕರ್ಮಭಿಃ | ಮೇಧಯಾ ಸ್ವೇಚ್ಛಯಾ | "ಸಪ್ತಾನ್ನಾನಿ ಯದಾ ವಿಷ್ಣುಃ ಪರಮಃ ಪುರುಷಃ ವಿಭುಃ | ಸಸರ್ಜ ತೇಷಾಂ ಸ್ವಾರ್ಥಾನಿ ಚಕಾರ ತ್ರೀಣಿ ಕೇಶವಃ || ಮನೋ ವಾಚಂ ತಥಾ ಪ್ರಾಣಂ ತಸ್ಮಾತ್ ತೈಃ ತುಷ್ಟಿಂ ಏತಿ ಸಃ || ತತ್ಪ್ರಕಾರಶ್ಚ ತತ್ರೈವ ದ್ರಷ್ಟವ್ಯಃ|| ವಿಸ್ತೃತಿಭಿಯಾ ಉಪರಮ್ಯತೇ|| "ಚತುರ್ಥಂ ಭೋಜ್ಯಮೇವಾನ್ನಂ ಸರ್ವಸಾಧಾರಣಂ ಸ್ಮೃತಮ್ || ತದೇವ ಮಂತ್ರ ಯುಕ್ತತ್ವಾತ್ ಬಲಿಹೋಮಾತ್ಮನಾ ದ್ವಯಮ್ || ದೇವಾನಾಂ ಪ್ರದದೌ || ಚತುಷ್ಪಾದ್ಭ್ಯಃ ದ್ವಿಪಾದ್ಭ್ಯಶ್ಚ ಪಶುಭ್ಯಃ ಪಯ ಆತ್ಮಕಮ್ || ಪ್ರಾಯಚ್ಛತ್ ಸಪ್ತಮಾನ್ನಂ ಸಃ| "ನ ನರಾ ಯೋಗ್ಯಾಃ ಏತದುಪಾಸನೇ || ಜ್ಞಾನಮಾತ್ರೇಣ ದೇವಾನಾಂ ಸಾಮೀಪ್ಯಂ ಪ್ರಾಪ್ನುವಂತಿ ತೇ ||" ಇತಿ.ನಾರಾಯಣೀಯೇ || "ಚತುರ್ವಿಧ" ನಾಲ್ಕನೇದು ||೧೪||

## ಕನ್ನಡಾರ್ಥ

ಪರಮಾತ್ಮನು ಅನ್ನನೆನಿಸುವನೆಂಬುದಾಗಿ ಹೇಳಿದ ಸಂಗತಿಯು ನಮ್ಮ ಅನುಭವದಲ್ಲಿ ಕಂಡುಬಂದಿರುವುದಿಲ್ಲ; ನಾವು ಈ ಉಪಾಸನೆಯನ್ನೇ ಎಂದೂ ಕೇಳಲಿಲ್ಲ ಆದುದರಿಂದ ಹೇಗೆ ಉಪಾಸಿಸಬೇಕು ? ಎಂದು ಸಂಶಯವು ಬರಬಹುದು. ಆದರೆ ಬೃಹದಾರಣ್ಯಭಾಷ್ಯ ಪ್ರವಚನದಲ್ಲಿ ನಿಪುಣರಾದ ಗುರುಗಳಿಗೆ ಶರಣು ಹೋಗಬೇಕು, ಅಂದರೆ ಈ ಸಂಶಯವು ದೂರವಾಗುತ್ತದೆ ಎಂದು ಹೇಳುತ್ತಾರೆ. "ಏಳುವಿಧದ" ಎಂಬ ಪದ್ಯದಿಂದ.

"ತಾನು (ಹರಿಯು) ಸ್ವತಃ ಅನ್ನರೂಪನಾಗಿ, ಅನ್ನದಲ್ಲಿ ಇದ್ದು, (ಅನ್ನನಾಮಕನಾಗಿ) ಅನ್ನವನ್ನು ಭಕ್ಷಿಸಿ, ಎಲ್ಲ ಕಡೆಗಳಲ್ಲಿ ಇದ್ದು ಅನ್ನವನ್ನು ಕೊಡುವನು" ಎಂಬುದಾಗಿ "ಅನ್ನ, ಅನ್ನಾದ, ಅನ್ನದಾತಾ" ಎಂಬ ಮೂರು ನಾಮಗಳಿಂದ ಹರಿಯನ್ನು ಸ್ತುತಿಸಬೇಕು. ಇದೇ ಅಭಿಪ್ರಾಯವನ್ನು "ಸಪ್ತಾನ್ನವಿದ್ ವೇದದ್ರಷ್ಟಾ" ಏಳುವಿಧ ಅನ್ನವನ್ನು ತಿಳಿದವನು. "ವೇದ-ದ್ರಷ್ಟಾ"; ಎನಿಸುವನು ಎಂಬುದು ಹೇಳುತ್ತದೆ.

**ಸಪ್ತಾನ್ನ ಬ್ರಾಹ್ಮಣದಲ್ಲಿ:**—"ಸಮಸ್ತ ಜಗಜ್ಜನಕನಾದ ಶ್ರೀವಿಷ್ಣುವು (೧) ಪ್ರಾಣಿಗಳು ತಿನ್ನಬೇಕಾದುದು (೨) ವೈಶ್ವದೇವ (೩) ಬಲಿಹರಣ (೪) ಮನಸ್ಸು (೫) ವಾಕ್ಕು (೬) ಪ್ರಾಣ (೭) ಹಾಲು; ಎಂಬ ಏಳುವಿಧ ಅನ್ನಗಳನ್ನು ತನ್ನದೇ ಇಚ್ಛೆಯಿಂದ ಪ್ರಾಣಿಗಳ ಕರ್ಮಗಳನ್ನನುಸರಿಸಿ ಸೃಷ್ಟಿ-ಸಿದನು. ಈ ಏಳು ಅನ್ನಗಳ ಮಧ್ಯದಲ್ಲಿ ಒಂದುವಿಧ ಅನ್ನವು (ಮೊದಲನೆ ಯದು) ಈ ಸಮಸ್ತ ಜಗತ್ತಿಗೆ ಸಾಧಾರಣವಾದುದು. ದೇವತೆಗಳಿಗೆ ವೈಶ್ವದೇವ, ಬಲಿಹರಣಗಳೆಂಬ ಎರಡುವಿಧ ಅನ್ನಗಳನ್ನು ಹಂಚಿದನು. ಮನಸ್ಸು ವಾಕ್ ಪ್ರಾಣಗಳೆಂಬ ಮೂರುವಿಧ ಅನ್ನಗಳನ್ನು ತನಗೋಸುಗ ಮಾಡಿಕೊಂಡನು. ಕೊನೆಯದಾದ "ಹಾಲು" ಎಂಬ ಅನ್ನವನ್ನು ಪಶು ಮೊದಲಾದವುಗಳಿಗೆ ಹಂಚಿ ದನು. (ಕೊಟ್ಟನು)" ಎಂಬುದಾಗಿ ಉಕ್ತವಾಗಿದೆ. ಮತ್ತು "ತ್ರೀಣಿ" ಎಂಬ ವಾಕ್ಯವನ್ನು ಉಪನಿಷತ್ತು ತಾನೇ ಮನಸ್ಸು, ವಾಕ್ಕು, ಪ್ರಾಣ, ಈ ಮೂರು ಅನ್ನಗಳನ್ನು ತನಗೆ ಮಾಡಿಕೊಂಡನು" ಎಂದು ವ್ಯಾಖ್ಯಾನಿಸು-ತ್ತದೆ.

ಬೃಹದಾರಣ್ಯ ಭಾಷ್ಯದಲ್ಲಿ – ಪಿತಾ ಎಂಬುದಕ್ಕೆ "ವಿಷ್ಣುವು" ಎಂದು ಅರ್ಥ. ("ಯೋ ನಃ ಪಿತಾ" ಎಂದು ಹೇಳಿರುವದರಿಂದ ವಿಷ್ಣುವೇ ಪಿತೃ ಶಬ್ದವಾಚ್ಯಗಃ) "ಯತ್" ಯಾವಾಗ" "ತಪಸಾ" ಪ್ರಾಣಿಗಳ ಕರ್ಮಗಳಿಂದ ಅಂದರೆ ಅವುಗಳನ್ನನುಸರಿಸಿ ಎಂದು ಅರ್ಥ "ಮೇಧಯಾ" ಸ್ವೇಚ್ಛೆಯಿಂದ (ತನ್ನ ಇಚ್ಛೆಯಿಂದ) ಉಪಲಕ್ಷಣ ಪದಗಳಿಗೆ ಹೀಗೆಯೇ ಅರ್ಥ ಹೇಳಬೇಕು. ಅದೇ ಸಮಂಜಸ; ಎಂಬ ವಿಷಯದಲ್ಲಿ ಪ್ರಮಾಣವಿರುತ್ತದೆ. "ಪರಮ ಪುರುಷ ಶ್ರೀಹರಿಯು ಏಳು ಅನ್ನಗಳನ್ನು ಸೃಷ್ಟಿಸಿ ಅವುಗಳ ಮಧ್ಯದಲ್ಲಿ ಮನೋ ವಾಕ್ ಪ್ರಾಣಗಳೆಂಬ ಮೂರು ಅನ್ನಗಳನ್ನು ತನಗಾಗಿ ಮಾಡಿ

ಕೊಂಡನು. ಹೀಗೆ ತಾನು ಅವುಗಳನ್ನು ಅನ್ನಗಳನ್ನಾಗಿ ಮಾಡಿರುವದರಿಂದ ಅನ್ನಗಳಾದುದರಿಂದ ಶ್ರೀಹರಿಯು ಅವುಗಳಿಂದ ತೃಪ್ತಿಹೊಂದುತ್ತಾನೆ" ಎಂದು ಹೇಳಲಾಗಿರುತ್ತದೆ.

ತೃಪ್ತಿಹೊಂದುವ ಬಗೆಯನ್ನು ಭಾಷ್ಯದಲ್ಲಿಯೇ ನೋಡಿ ತಿಳಿದುಕೊಳ್ಳಬೇಕು. ಗ್ರಂಥವಿಸ್ತಾರದ ಭೀತಿಯಿಂದ ನಾವು ಇಷ್ಟಕ್ಕೆ ವಿಶ್ರಮಿಸುತ್ತೇವೆ. ಹೆಚ್ಚಿನ ಸಂಗತಿಯನ್ನು ಬರೆಯುವುದಿಲ್ಲ.

"ಸರ್ವರೂ ತಿನ್ನುವ ಅನ್ನವು ನಾಲ್ಕನೆಯದು ಎಂದರೆ ಉಪನಿಷತ್ತಿನಲ್ಲಿ "ಅಸ್ಯ ಸುಧಾರಸಂ" ಎಂದು ಮೊದಲು ಹೇಳಲ್ಪಟ್ಟದ್ದು." ಸರ್ವರಿಗೂ ಸಾಧಾರಣವಾದ ಅನ್ನವೇ ಮಂತ್ರಗಳಿಂದ ಸಂಸ್ಕೃತವಾದರೆ ವೈಶ್ವದೇವ ಹಾಗೂ ಬಲಿಹರಣಗಳೆನಿಸುವವು. ಇವೆರಡನ್ನು ದೇವತೆಗಳಿಗೆ ಕೊಟ್ಟನು. "ನಾಲ್ಕು ಕಾಲುಗಳುಳ್ಳ ಪಶುಗಳಿಗೂ (ಎರಡು ಕಾಲಿನ) ಮನುಷ್ಯರಿಗೂ "ಹಾಲು" ಎಂಬ ಏಳನೆಯ ಅನ್ನವನ್ನು ಕೊಟ್ಟನು. "ಈ ಸಪ್ತಾನ್ನ ಉಪಾಸನೆಯಲ್ಲಿ ದೇವತೆಗಳು ಯೋಗ್ಯಅಧಿಕಾರಿಗಳು, ಮನುಷ್ಯರಲ್ಲ. ಮನುಷ್ಯರು ಈ ಸಪ್ತಾನ್ನ ವಿದ್ಯೆಯ ಜ್ಞಾನದಿಂದ ಮಾತ್ರವೇ ದೇವತೆಗಳ ಸಾಮೀಪ್ಯವನ್ನು ಹೊಂದುತ್ತಾರೆ" ಎಂದು ಭಾಷ್ಯದಲ್ಲಿ "ನಾರಾಯಣೀಯ" ಗ್ರಂಥದ ಆಧಾರವನ್ನು ತೋರಿಸಿರುತ್ತಾರೆ.

**ಅವತರಣಿಕಾ :—** ಸಪ್ತಾನ್ನ ಉಪಾಸನೆಮಾಡಿ ಭಗವಂತನಿಗೆ ಅರ್ಪಿಸುವವರಿಗೆ ಶ್ರೀಹರಿಯು ಕೊಡುವ ಫಲವನ್ನು ಹೇಳುತ್ತಾರೆ.

**ಎಂದರಿದು ಸಪ್ತಾನ್ನಗಳ ದೈ ।**
**ನಂದಿನದಿ ಮರೆಯದೆ ಸದಾ ಗೋ ।**
**ವಿಂದಗರ್ಪಿಸು ನಿರ್ಭಯದಿ ಮಹಯಜ್ಞ ವಿದುಇದೆಂದು ॥**
**ಇಂದಿರೇಶನು ಸ್ವೀಕರಿಸಿ ದಯೆ ।**
**ದಿಂದ ಬೇಡಿಸಿಕೊಳದೆ ತವಕದಿ ।**
**ತಂದುಕೊಡುವನು ಪರಮಮಂಗಳ ತನ್ನದಾಸರಿಗೆ ॥೧೫॥**

**ಪದ್ಯಾರ್ಥ :—** ಎಂದರಿದು ಸಪ್ತಾನ್ನಗಳ ಹಿಂದೆ ಹೇಳಿದಂತೆ ಸವಿಸ್ತರವಾಗಿ ಗುರುಮುಖದಿಂದ ಸಪ್ತಾನ್ನ ಪ್ರಕರಣವನ್ನು ತಿಳಿದು, ದೈನಂದಿನದಿ=

ಪ್ರತಿನಿತ್ಯದಲ್ಲಿ, ಮರೆಯದೇ = ಧ್ಯಾನದಲ್ಲಿ ತಂದು ಚಿಂತಿಸು ಮರೆಯಬೇಡ ಧ್ಯಾನೋಪಾಸನೆಮಾಡಿ ಸದಾ ಗೋವಿಂದಗರ್ಪಿಸು=ನಿತ್ಯದಲ್ಲಿಯೂ ವೇದ ಪ್ರತಿಪಾದ್ಯ ಮುಕ್ತಿಪ್ರದನಾದ ಗೋವಿಂದನಾಮಕ ಹರಿಗೆ ಅರ್ಪಿಸಬೇಕು. ನಿರ್ಭಯದಿ=ಭಯರಹಿತನಾಗಿ ಅಂದರೆ ಈ ಸಪ್ತಾನ್ನಗಳನ್ನು ತಿಳಿದು ಪ್ರಾಣಾಗ್ನಿ ಹೋತ್ರಾದಿಗಳನ್ನುಮಾಡಲು ದುರ್ಬುದ್ಧಿ ಹುಟ್ಟಿಸಲು ದೈತ್ಯಾದಿಗಳ ಭಯವಿಲ್ಲ. ಇದು ಮಹಯಜ್ಞವಿದುಯೆಂದು=ಈ ಪ್ರಕಾರ ತಿಳಿದು ಸಪ್ತಾನ್ನ ಉಪಾಸನೆ ಅರ್ಪಣೆ ಸೋಮಚಯನ ಅಶ್ವಮೇಧ ಯಜ್ಞಗಳಿಕಿಂತಲೂ ಹೆಚ್ಚಿನ ಯಾಗ; ಯಾಗಭೋಕ್ತನಾದ ಇಂದಿರೇಶನು ದಯದಿಂದ ಸ್ವೀಕರಿಸಿ = ಶ್ರೀಲಕ್ಷ್ಮೀ ಪತಿಯು ಸ್ವೀಕರಿಸಿ ಬಹು ಪ್ರೀತಿಕರನಾಗಿ ತೃಪ್ತಿಪೊಂದುವನು. ಬೇಡಿಸಿ ಕೊಳದೆ=ಅರ್ಪಣೆ ಬಗೆ ತಿಳಿದು ನಿಷ್ಕಾಮ್ಯದಿಂದ ಸಮರ್ಪಿಸಿದರೆ, ಭಕ್ತನ ಪ್ರಾರ್ಥನೆ ಇಲ್ಲದೇ, ಸ್ವಪ್ರಸಾದದಿಂದ, ತವಕದಿ=ಬಹುತ್ವರೆಯಿಂದ, ತನ್ನ ದಾಸರಿಗೆ=ನಿಜಭಕ್ತರಾದ ಸಪ್ತಾನ್ನ ಪ್ರಕರಣವನ್ನು ಅರಿತು ಅರ್ಪಿಸುವ ನಿಜ ಭಕ್ತರಿಗೆ, (ದೇವಾದಿಗಳಿಗೆ) ಮನುಜರು ಈ ವಿವರವನ್ನು ಗುರುಗಳಿಂದ ಅರಿತು ಜ್ಞಾನ ಉಳ್ಳವರಾದರೆ ಸಾಕು. ಅವರಿಗೂ, ಪರಮ ಮಂಗಳ= ಉತ್ತಮ ಶುಭ ಕರವಾದ ಮೋಕ್ಷರೂಪ ಮಂಗಳ, ತಂದುಕೊಡುವನು = ಬೇರೆ ಕಡೆಯಿಂದ ಹುಡುಕಿ ತಂದುಕೊಡುವನಲ್ಲ. ತನ್ನಿಚ್ಛೆ ಸ್ವಪ್ರಸಾದದಿಂದ ಅನುಗ್ರಹಿಸಿ ಮುಕ್ತಿ ಕೊಡುವನು.

**ದ್ರೌಪದೀಶಪತಿ ವಿಠಲರು** :—ಎಂದಿದು ಸಪ್ತಾನ್ನಗಳ=ದೈನಂದಿನದಿ ಯೆಂದರೆ, ದಿನದಿನ–ನಿರಂತರ.

(ಗುರು ಶ್ರೀಶವಿಠಲರ ಶಿಷ್ಯರವ್ಯಾಖ್ಯಾನ ಈ ಪದ್ಯದಿಂದ ಮುಂದೆ ಇಲ್ಲ).

**ಭಾವಸೂಚನ** :—॥ ಎಂದರಿದ್ವಿತಿ ॥

**ವಿಶೇಷಸೂಚನೆ** :--ಶ್ರೀ ವಿಜಯದಾಸಾರ್ಯರು, **ಸಪ್ತಾನ್ನ ಉಪಾಸನೆ ಸುಳಾದಿ ೧೦೪ ಸಾಧನ ಭಾಗ (೨)** ಪುಟ ೨೩೪–೨೩೭ ವರೆಗೆ ಸವಿಸ್ತಾರವಾಗಿ ಹೇಳಿದ್ದಾರೆ. ಈ ಸುಳಾದಿ " ಅಪ್ರತಿಹತದ್ರವ್ಯಗತವಾಗುವು ದಕ್ಕೆ" ಧ್ರುವತಾಳದಿಂದ ಆರಂಭಿಸಿ ಅಟ್ಟತಾಳಪೂರ್ತಿ, ಬ್ರಾಹ್ಮಣಜನ್ಮ ಅಧಿಕಾರಿ

ವಿವಕ್ಷಾ, ಜ್ಞಾನಪ್ರಾಚುರ್ಯ, ಅನೇಕ ರೂಪಗಳ ಚಿಂತನೆ, ಬಲಪ್ರಾಚುರ್ಯ ಅನಂತರೂಪಕ್ರಿಯಾ ಅವತಾರಾದಿಗಳು, ಅತಿರೋಹಿತ, (ತಿರೋಹಿತ ವಿಭೂತಿ ಮನುತ್ರಯೋದಶರಲ್ಲಿ ರಾಜರಲ್ಲಿರುವುದು) ತಿಳಿವುದು, ಪಾತಾಳಾದಿ ತ್ರಿಗುಣ ತತ್ವಪರಿಯಂತರವೂ, ಅನಿಮಿಷಾದಿಗಳಿಂದ ತೃಣಾಂತಚೇತನರಲ್ಲಿ ವನಜ-ನಾಭನ ರೂಪ ತತ್ತದಾಕಾರನಾಗಿ ವ್ಯಕ್ತ ಅವ್ಯಕ್ತನಾಗಿಪ್ಪನು. ಅವರವರ ತನುವುಗಳಂತೆ ರೂಪಧಾರಣಮಾಡಿಕೊಂಡಿಹನೆಂದು ಚಿಂತಿಸಬೇಕು (ಇದು ಗುರು ಮುಖದಿಂದ ತಿಳಿಯುವದು). **ಮುಂದೆ ಆದಿತಾಳದಲ್ಲಿ** ಸಪ್ತಾನ್ನ ಉಪಾಸನೆ ಹೇಳುತ್ತಾರೆ.

"ಶ್ರೀಹರಿ ಜಗತ್ತಿನೊಳು ಏಕಾಂಶದಲ್ಲಿ ಪೊಕ್ಕು। ಸ್ನೇಹಭಾವವೆ ಇತ್ತು ವ್ಯಾಪಾರ ಮಾಡಿಸುವ। ದೇಹಧಾರಿಮನುಜಂಗೆ ಸಾಧನ ನಿರ್ಮಿಸಿದನು। ಮಹಸುಲಭವಾಗಿ ತೋರುತಿದೆ ನೋಡಿರೋ। ಗೃಹಮೇಧಿಗೆ ಇದು ಪರಮ ಮುಖ್ಯವಾದುದು. **ಸಪ್ತಾನ್ನ ಬಗೆಯು ತಿಳಿಯಬೇಕು। ಸ್ವಹಾ ಸ್ವಧಾ ಕಾರಪ್ರಕರಣಹಂತಾನ್ನ। ಮಹಿರುಹತೃಣವೆಂದು ನಾಲ್ಕು ಬಗೆಯು ಅನ್ನ। ದೇಹ ವಾಚ ಮನಸು ಸಂದೇಹವಿಲ್ಲದೆ ಸಪ್ತಾನ್ನಾಯಿತು ಕೇಳಿ।** ಸ್ವಹಾ ಸ್ವಧಾ ಅನ್ನದೇವ ಪಿತೃಗಳಿಗೆ। ಅಹಂತ ಅನ್ನ ಅತಿಥಿ ಅಭ್ಯಾಗತ ಸರ್ವರಿಗೆ। ತಾಹತೃಣಾದಿಗಳು ಪಶ್ವಜಾತಿಗೆ ಇತ್ತು। ಆಹಾರದಿಂದಲಿ ಸುಖ ಬಡಿಸಲಿಬೇಕು। ದೇಹಿ ಒಬ್ಬಗೆ ಸಪ್ತಾನ್ನ ದಾನದ ಪುಣ್ಯ ಮಹತ್ತಾಗಿ ಬರುವದು ಅಲ್ಪಮಾಡಿದರಾಗೆ। ಗಹನಇದೆ ಇದೇ ಸಮಸ್ತ ಜನರಿಂದ। ಅಹದೆಂದರೆ ಪುಣ್ಯ ಅವಗೆ ಸಿದ್ಧಿಸುವದು। **ಶ್ರೀಹರಿ ತನಗೆ ಮೂರು** ಲೋಕಕ್ಕೆ ನಾಲ್ಕು ನೇಮಿಸಿ। ಬಹಳ ದಯದಿಂದ ಭಕುತರನ ಪಾಲಿಸುವ। ರಹಸ್ಯ ಇನ್ನುಂಟು ಪ್ರವಿಷ್ಟ ಅಪ್ರವಿಷ್ಟ। ವಿಹಾರರೂಪದಿಂದ। ಶ್ರೀಹರಿ ಕ್ರೀಡೆಯಾಡುವ। ಮೋಹಕ ಜನರಿಗೆ ತಿಳಿಯಗೊಡದೆ ದಾ। ಸೋಹಂ ಎಂದವರಿಗೆ ಕರತಳಾಮಲಕವೆನ್ನು। ಗುಹಾಶಯನ ನಮ್ಮ ವಿಜಯ ವಿಠ್ಠಲತಾನೆ। ದೇಹಿದೇಹದಲ್ಲಿ ನಿಂದುತೃಪ್ತಿಯಾಗುವ ॥೫॥ ಪ್ರೀತಿಯಿಂದಲಿ ಇನಿತು ಸಪ್ತಾನ್ನಉಪಾಸ್ತಿ। ನೀತಿಯಿಂದ ಲಿಮಾಡೆ ವಿಜಯವಿಠಲವೊಲಿವ ॥೬॥ ಉಪನಿಷದರ್ಥವೆ ಈ ಸುಳಾದಿ ಇದೆ. ಚನ್ನಾಗಿ ಜ್ಞಾನಿಗಳಿಂದ ತಿಳಿವುದು.

## ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ

"ಎಂದು" ಇತಿ ॥ "ಮಹಾಯಜ್ಞ" ಇತಿ ॥ " ಸಂವತ್ಸರಂ ಗೋಪಯಸಾ ಯೇನ ಹೋಮಃ ಹರೇಃ ಕೃತಃ । ಭಗವತ್ತತ್ವವಿದುಷಾ ತಸ್ಯ ಮುಕ್ತಿಃ ನ ಸಂಶಯಃ ॥" " ಅದೃಷ್ಟಭಗವದ್ರೂಪಸ್ಯ ಏತತ್ ದರ್ಶನಕಾರಣಮ್ ॥ " ಭಗವದ್ದೃಷ್ಟಿಪೂತಸ್ತು ವಿನಾ ಹೋಮೇನ ಮುಚ್ಯತೇ ॥ ಸಪ್ತಾನ್ನ ಸೃಷ್ಟಿ ತತ್ವಜ್ಞಃ ತು ಏಕಹೋಮೇನ ಮುಚ್ಯತೇ ॥ ಇತಿ ॥ " ತವಕ " ತವ ॥ ೧೫ ॥

## ಕನ್ನಡಾರ್ಥ

ಯಜ್ಞಗಳಲ್ಲಿ ಇದು ಶ್ರೇಷ್ಠವಾದುದು. ಗೋಕ್ಷೀರದಿಂದ " ವರ್ಷ ಪರ್ಯಂತರವಾಗಿ ಹೋಮ ಮಾಡುವ ಭಗವತ್ತತ್ವಜ್ಞಾನಿಗೆ ಮೋಕ್ಷವಾಗುವು ದರಲ್ಲಿ ಸಂಶಯವಿಲ್ಲ. ಭಗವಂತನ ರೂಪವನ್ನು ಅಪರೋಕ್ಷೀಕರಿಸದವನಿಗೆ ನೋಡದವನಿಗೆ ಈ ಹೋಮದಿಂದ ಭಗವಂತನ ಸಂದರುಶನವಾಗುತ್ತದೆ. ಭಗವಂತನನ್ನು ನೋಡಿ ಅವನ ದೃಷ್ಟಿಯಿಂದ ಪವಿತ್ರನಾದವನು, ಅಥವಾ ಭಗವಂತನ ದರ್ಶನದಿಂದ ಪವಿತ್ರನಾದವನು ಹೋಮವಿಲ್ಲದೇ ಮುಕ್ತನಾಗು ತ್ತಾನೆ. ಭಗವಂತನ ತತ್ವವನ್ನು ತಿಳಿಯುವುದರಲ್ಲಿ ವಿಶೇಷ ಜ್ಞಾನಿಯಾಗಿರು ರುವುದರಿಂದ ಏಳುವಿಧ ಅನ್ನಗಳನ್ನು ಸೃಷ್ಟಿಸಿದ ಶ್ರೀಹರಿಯನ್ನು ತಿಳಿದವನು ಒಂದೇ ಹೋಮದಿಂದ ಒಂದೇ ದಿವಸದಲ್ಲಿ ಮಾಡಿದ ಪಯೋಹೋಮದಿಂದ ಮುಕ್ತನಾಗುತ್ತಾನೆ" ಎಂದು " ನಾರಾಯಣೀಯ " ವೆಂಬ ಗ್ರಂಥದಲ್ಲಿ ಹೇಳಿರುತ್ತದೆ. ॥ ೧೫ ॥

**ಅವತರಣಿಕಾ** :—ವೇದವಿಹಿತವಾದ ಧರ್ಮ ಕರ್ಮ ಭಕ್ತಿಯಿಂದ ಭಗವದುಪಾಸನೆಬಿಟ್ಟು, ಅಜ್ಞಾನಿಗಳು ಧರ್ಮಾರ್ಥಕಾಮಗಳನ್ನು ಬಯಸು ತ್ತಾರೆಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ.

**ಸೂಜಿಕರದಲಿ ಪಿಡಿದು ಸಮರವ ।**
**ನಾ ಜಯಿಸುವೆನು ಯೆಂಬನರನಂ ।**
**ತೀ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ ॥**

**ಶ್ರೀಜಗತ್ಪತಿ ಚರಣಯುಗಳ ಸ।**
**ರೋಜ ಭಕ್ತಿಜ್ಞಾನ ಪೂರ್ವಕ।**
**ಪೂಜಿಸದೆ ಧರ್ಮಾರ್ಥಕಾಮವ ಬಯಸಿ ಬಳಲುವರು**
**॥ ೧೬ ॥**

**ಪದ್ಯಾರ್ಥ :**—ಒಬ್ಬ ಹೇಡಿ ಮನುಜ ತಿಳಿಯದೇ, ಸೂಜಿ ಕರದಲಿ ಪಿಡಿದು = ಸಣ್ಣದಾದ ಸೂಜಿಯನ್ನು ಕೈಯಲ್ಲಿ ಹಿಡಿದುಕೊಂಡು ಆ ಚಿಕ್ಕ ಸೂಜಿಯಿಂದ ಏನು ಕಾರ್ಯವಾಗಬೇಕು ಎಂಬುದನ್ನು ಅರಿಯದೇ, ಸಮರವ= ಕಾಳಗವ, ಯುದ್ಧದಲ್ಲಿ ಮಹಾರಥಿಕರನ್ನು ಸೋಲಿಸಿ, ನಾನು ಜಯಿಸುವೆನು = ಅಹಂಕಾರದಿಂದ ನಾನು ಸಮರ್ಥ ಈ ಸೂಜಿಯಿಂದ ಗೆಲ್ಲುವೆನು. ಎಂಬ ನರನಂತೆ= ಎಂಬುವ ಅಜ್ಞಾನಿ ಪಶುಮಾನವನಂತೆ, ಈ ಜಗತ್ತಿನೊಳುಳ್ಳ ಅಜ್ಞಾನಿಗಳು, ನಿತ್ಯದಲಿ = ಈ ಸದ್ಯಃಕಾಲದಲ್ಲಿ ಭೂಮಿಯಲ್ಲಿರುವ ಸಾಧನ ಮಾರ್ಗವನ್ನರಿಯದ, ತಿಳುವಳಿಕೆ ಇಲ್ಲದ ಶಾಸ್ತ್ರಸನುಮತವಾಗಿ, ಶ್ರೀಜಗತ್ಪತಿ ಚರಣಯುಗಳ = ಸಮಸ್ತ ಲೋಕಕ್ಕೆ ಒಡೆಯನಾದ ಶ್ರೀಹರಿಯೇ ಎನ್ನಬಿಂಬ ಶ್ರೀಹರಿರೂಪಿಬಿಂಬನ, ಪಾದಯುಗಳ ಸರೋಜ = ಪಾದಪದ್ಮದ್ವಯಗಳನ್ನು, ಭಕ್ತಿಜ್ಞಾನ ಪೂರ್ವಕ ಅರ್ಚಿಸದೇ = ಸರ್ವೋತ್ತಮನೆಂಬಜ್ಞಾನ, ಪರಮೋತ್ತಮವಾದ ಸ್ನೇಹಪೂರ್ವಕವಾದ ಭಕ್ತಿಪೂರ್ವಕವಾಗಿ ಪೂಜಿಸದೆ = ಅರ್ಚಿಸದೇ ಧ್ಯಾನಿಸದೇ ಉಪಾಸನೆ ಮಾಡದೇ, ಕೇವಲ ಬಹಿರಂಗ ಅರ್ಥರೂಪವಾದ, ಧರ್ಮ = ಕಾಮ್ಯಯಜ್ಞಯಾಗಾದಿಕರ್ಮ ಮುಂತಾದವುಗಳನ್ನು, ಬಯಸಿ ಬಳಲುವರು = ಆಶಿಸುತ್ತ ಕ್ಲೇಶಪಡುವರು.

**ದ್ರೌಪದೀಶಪತಿ** ವಿಠಲರು:—"ಸೂಜಿಕರದಲಿ"

**ಭಾವಸೂಚನ:**—ಸೂಜೀತಿ ॥ ೧೬ ॥

## ವ್ಯಾಸದಾಸ ಸಿದ್ಧಾಂತ ಕೌಮುದೀ

"ಸೂಜಿ" ಇತಿ. ॥ "ಸಮರ" ಯುದ್ಧ "ಉಳ್ಳ" ಇದ್ದ॥ ॥ ೧೬ ॥

## ಕನ್ನಡಾರ್ಥ

ಶ್ರೀಹರಿಯ ಪ್ರೀತಿಗೆ ಸಾಧನಗಳಾದ ಜ್ಞಾನ ಭಕ್ತಿಪೂರ್ವಕ ಹರಿಯ ಚರಣಾರಾಧನೆಯನ್ನು ಬಿಟ್ಟು, ಧರ್ಮಾರ್ಥ ಕಾಮಗಳನ್ನು ಬಯಸುವವರು,

ಶಸ್ತ್ರಧಾರಿಗಳೆದುರು ರಣಾಂಗಣದಲ್ಲಿ ಸೂಜಿಧಾರಿಗಳಾಗಿ ಹೋರಾಡಿ ಬಳಲುವ ನರರಂತೆ ಸಂಸಾರದಲ್ಲಿ ಬಳಲುವರು" ಎಂದು ಈ ಪದ್ಯದ ಭಾವ. ॥ ೧೬ ॥

**ಅವತರಣಿಕಾ** :— ಈ ೧೬ ನೆಯ ಪದ್ಯ ಆರಂಭಿಸಿ, ೨೨ ನೇ ಪದ್ಯ ೬ ಪದ್ಯದಲ್ಲಿ ಶ್ರೀಹರಿಯ ಅನಂತಾನಂತ ಗುಣ ರೂಪ ಕ್ರಿಯೋತ್ಕರ್ಷಪೂರ್ವಕ ಸ್ತೋತ್ರಗೈಯುತ್ತಾರೆ.

**ಶಕಟಭಂಜನ ಸಕಲ ಜೀವರ ।**
**ನಿಕಟಗನು ತಾನಾಗಿ ಲೋಕಕೆ ।**
**ಪ್ರಕಟನಾಗದೆ ಸಕಲಕರ್ಮವ ಮಾಡಿಮಾಡಿಸುತ ॥**
**ಅಕುಟಿಲಾತ್ಮಕ ಭಕತ ಜನರಿಗೆ ।**
**ಸುಖದ ನೆನಿಸುವ ಸರ್ವಕಾಲದಿ ।**
**ಅಕಟಕಟ ಈತನ ಮಹಾಮಹಿಮೆಗಳಿಗೇನೆಂಬೆ ॥ ೧೭ ॥**

**ಪದ್ಯಾರ್ಥ** :— ಶಕಟಭಂಜನ = ಶಕಟನೆಂಬೋದೈತ್ಯನನ್ನು ಸಂಹಾರ ಮಾಡಿದ ಶ್ರೀ ಕೃಷ್ಣರೂಪಿ ಹರಿಯು, ಸಮಸ್ತ ಪಾಪಗಳನ್ನು ದೂರಗೈಸಿ ಸಕಲ ಜೀವರ ನಿಕಟಗನು ತಾನಾಗಿ= ಬ್ರಹ್ಮಾದಿ ತೃಣಾಂತ ಜೀವರ ಮುಕ್ತಿಯೋಗ್ಯರ ನಿಕಟಗನು, ಸಮೀಪಗನು ತಾನೆ ಆಗುತ್ತ ಅಪರೋಕ್ಷಜ್ಞಾನವನ್ನಿತ್ತು, ಲೋಕಕೆ ಪ್ರಕಟನಾಗದೇ = ಅಜ್ಞ ಜನರಿಗೆ ತೋರಿಕೊಳ್ಳದೇ, ಸಕಲಕರ್ಮವ ಮಾಡಿ ಮಾಡಿಸುತ = ಎಲ್ಲ ಪುಣ್ಯಪಾಪಕರ್ಮಗಳನ್ನೂ ಶ್ರೀಹರಿಯು ತಾನೆ ಮಾಡಿಸುತ್ತ (ದೇವತೆಗಳ ದ್ವಾರ ಮಾಡಿಸುವನು) ಅಕುಟಿಲಾತ್ಮಕ ಭಕತ ಜನರಿಗೆ= ತನ್ನ ನಂಬಿದ ಭಕ್ತ ಜನರಿಗೆ ವಂಚನವಿಲ್ಲದವನು, (ಅಭಕ್ತರಾದ ದೈತ್ಯಾದಿಗಳಿಗೆ ತನ್ನ ನಿಜಜ್ಞಾನವೀಯದ ವಂಚಕನು), ಭಕ್ತ ಜನರಿಗೆ ಸರ್ವ ಕಾಲದಿ= ತನ್ನ ನಿಜ ಭಕ್ತರಿಗೆ ಸರ್ವದೇಶ ಕಾಲ ಸರ್ವಾವಸ್ಥೆಯಲ್ಲಿ, ಸುಖದ ನೆನಿಸುವ= "ಸುಖಂ ಮೋಕ್ಷಲಕ್ಷಣಂ ಭಕ್ತೇಭ್ಯೋ ದದಾತೀತಿ ಸುಖದಃ" (ವಿದ್ಯಾಧಿರಾಜೀಯ) = ಭಕ್ತರಿಗೆ ಮೋಕ್ಷರೂಪವಾದ ಸುಖವನ್ನು ಕೊಡುವನು. ಈ ಮೋಕ್ಷ ಸುಖವೇ ಸದಾ ಸರ್ವಕಾಲದಲ್ಲಿಪ್ಪುದು. ಅಕಟಕಟ= ಅಹೋ ಏನಾಶ್ಚರ್ಯ ! ಈತನ = ಈ ಬಿಂಬರೂಪಿಹರಿಯು ಸಮೀಪಗನು ಅಂತರಂಗದಲ್ಲಿ ಕಂಡದಾಸಾರ್ಯರು ಈತನು ಇಲ್ಲೇ ಇರುವನು. ಮಹಾ

ಮಹಿಮೆಗಳಿಗೇನೆಂಬೆ=ಅನಂತವಾದ ಮಹಾಮಾಹಾತ್ಮ್ಯಗಳು ರಮಾಬ್ರಹ್ಮಾದಿ ದಿಗಳಿಗೆ ಅಸದಳವಾದ ಮಾಹಾತ್ಮ್ಯ ಏನುಪೊಗಳಿ, ಎನ್ನಿಂದ ಸ್ತೋತ್ರಗೈ ಯಲು ಅಶಕ್ಯ, ಅಸದಳವಾದುದರಿಂದ ಅಚ್ಚರವೆನಿಸುವದು ಇಂತಹ ಹರಿಯ ಮಹಾಮಾಹಾತ್ಮ್ಯ ||೧೭||

**ದ್ರೌಪದೀಶಪತಿವಿಠಲರು :**—ಶಕಟಭಂಜನ, ನಿಕಟಗನು, ಮುಖ್ಯವಾಗಿ ಭಕ್ತರಿಗೆ, ಅಕುಟಿಲ ನಿರ್ವಂಚಕ, ದೈತ್ಯರಿಗೆ ವಂಚಕ.

**ಭಾವಸೂಚನ:**—ಶಕಟೇತಿ|| ನಿಕಟ=ಸಮೀಪ, ಸುಖದೇತಿ|| "ಸುಖ ದೋ ನೈಕದಾಗ್ರಜ" ಇತ್ಯುಕ್ತೇಃ ||೧೭||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಶಕಟ" ಇತಿ || ಶಕಟಃ ದೈತ್ಯಃ || ನಿಕಟ = ಸಮೀಪ || "ಅಕಟಕಟ" "ಅನನ್ವಿತಂ ತೇ ಭಗವದ್ವಿಚೇಷ್ಟಿತಮ್ || ಇತಿ ಭಾಗವತೇ ಅಚಿಂತ್ಯಃ ||೧೭||

## ಕನ್ನಡಾರ್ಥ

ಪರಮಾತ್ಮನ ಮಹಿಮೆಯು ಮನೋವಚನಗಳಿಗೆ ಗೋಚರವಾಗುವದು; ಅತ್ಯದ್ಭುತವು" ಎಂದು ನಿರೂಪಿಸುತ್ತಾರೆ. "ಶಕಟ" ಎಂಬ ಪದ್ಯದಿಂದ. ಶಕಟ ನೆಂಬುದು ದೈತ್ಯನ ಹೆಸರು. ನಿಕಟ=ಸಮೀಪ, ಹತ್ತಿರ, ಭಾಗವತದಲ್ಲಿ "ಪರಮಾತ್ಮನ ವಿವಿಧ ವ್ಯಾಪಾರಗಳು ಮನುಷ್ಯರ ಅಲ್ಪಮತಿಗಳಿಗೆ ಸರಿಯಾಗಿ ಸಾಕಲ್ಯದಿಂದ ತಿಳಿಯಲ್ಪಡುವುದಿಲ್ಲ" ಎಂದು ಹೇಳಿರುವುದರಿಂದ "ಅಚಿಂತ್ಯ ಮಹಿಮೆಗಳು" ಎಂದು ತಿಳಿಯಬೇಕು. ||೧೭||

**ಅವತರಣಿಕಾ :**—ಬಿಂಬನಾದ ಶ್ರೀಹರಿಯೇ, ನಿತ್ಯವಾದ ದೇಶಕಾಲ ಪ್ರಣವ, ವೇದ, ಮೂಲಜಡಪ್ರಕೃತಿ, ಬ್ರಹ್ಮಾದಿ ಜೀವರು ನಿತ್ಯರು. ಇವರಲ್ಲಿ ಮೂಲಕಾರಣನಾಗಿ ಅಂಶೀನಾಮದಿಂದ ಲೀಲಾಮಾಡುತ್ತ ಹಾಲಿನೊಳಗೆ ತುಪ್ಪವಿದ್ದಂತೆ ಇದ್ದು ಶ್ವೇತದ್ವೀಪಾದಿಗಳಲ್ಲಿರುವ ಅಂಶೀ ಹರಿಯ ಸೋತ್ರ ಗೈಯ್ಯುತ್ತಾರೆ.

**ಶ್ರೀಲಕುಮಿವಲ್ಲಭನು ವೈಕುಂ |**
**ಠಾಲಯದಿ ಪ್ರಣವಪ್ರಕೃತಿ ಕೀ**
**ಲಾಲಜಾಸನ ಮುಖ್ಯಚೇತನರೊಳಗೆ ನೆಲೆಸಿದ್ದು ||**

**ಮೂಲಕಾರಣ ಅಂಶಿನಾಮದಿ ।**
**ಲೀಲೆಗೈಸುತ ತೋರಿಕೊಳ್ಳದೆ ।**
**ಪಾಲಿನೊಳು ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ ॥೧೮॥**

ಪ್ರಮಾಣ, ಅಂಶಾ ಏವ ಹಿ ಮೇ ಜೀವಾ ಅಂಶೀ ಹಿ ಪರಮೇಶ್ವರಃ ಇತಿ ಭಾಷ್ಯೇ ॥

**ಪದ್ಯಾರ್ಥ:**—ಶ್ರೀಲಕುಮಿವಲ್ಲಭನು = ಶ್ರೀ ಲಕ್ಷ್ಮೀದೇವಿಗೆ ಪತಿಯಾದ ಹರಿಯು, ವೈಕುಂಠಾಲಯದಿ = ನಿತ್ಯವಾದ ವೈಕುಂಠ ಶ್ರೀಭಾಗದಲ್ಲಿಯೂ, (ಇದರಿಂದ ನಿತ್ಯ ದೇಶಕಾಲ ಸೂಚಿತ) ಪ್ರಣವ = ಓಂಕಾರದಲ್ಲಿ ಸಕಲ ವೇದ ಗಳಿಗೆ ಮೂಲವಾದ ಓಂಕಾರದಲ್ಲಿ (ನಿತ್ಯವಾದ ಸಕಲ ವೇದಗಳಲ್ಲಿ) ಪ್ರಕೃತಿ = ನಿತ್ಯಳಾದ ಪ್ರಕೃತಿ ರಮಾದೇವಿಯಲ್ಲಿ, ಮತ್ತು ಪ್ರಕೃತಿ = ಮೂಲಜಡ ಪ್ರಕೃತಿನಿತ್ಯವಾದುದು. ರಮಾ ಅಭಿಮನ್ಯ ಮಾನವಾದುದು ನಿತ್ಯ. ಈ ಪ್ರಕೃತಿಯಲ್ಲಿ, ಕೀಲಾಲಜಾಸನಮುಖ್ಯಚೇತನರೊಳಗೆ ನೆಲೆಸಿದ್ದು = ಬ್ರಹ್ಮ ದೇವರು ಮೊದಲಾಗಿ ಸಕಲಚೇತನರಾದ ನಿತ್ಯರಾದ ಜೀವರಲ್ಲಿಯೂ, ಹೀಗೆ ನಿತ್ಯವಸ್ತುಗಳಲ್ಲಿ ನೆಲಸಿದ್ದು=ಸಂತತವಾಗಿ ಎಡಬಿಡದೆ ಇದ್ದು, ಮೂಲಕಾರಣ= ಎಲ್ಲಕ್ಕೂ ಮೂಲಕಾರಣನು, ಅಂಶಿ ಎಂದು ಕರೆಸುತ್ತಾ, ಲೀಲೆಗೈಸುತ ತೋರಿ ಕೊಳ್ಳದೆ = ಸಕಲ ನಿತ್ಯವಸ್ತುಗಳಲ್ಲಿದ್ದು ಆ ವಸ್ತುಗಳ ಅಸ್ತಿತ್ವಕ್ಕೆ ಕಾರಣವಾದ ಲೀಲಾ ಶಕ್ತಿಪ್ರದಾತೃನಾಗಿ, ಅಜ್ಞರಿಗೆ ತಿಳಿಸದೇ, ಪಾಲಿನೊಳು ಘೃತವಿದ್ದ ತೆರದಂತಿಪ್ಪ = ಹಾಲಿನಲ್ಲಿ ತುಪ್ಪವು ಹೇಗೆ ಕಾಣಿಸದೆ ಇರುವದೋ ಅದರಂತೆ ಶ್ರೀಹರಿಯು, ನಿತ್ಯವಸ್ತುಗಳಲ್ಲಿ ಅಂಶಿ ಎಂದು ಇರುವನಲ್ಲದೇ, ತ್ರಿಸ್ಥಳದಿ = ಮೂರುಸ್ಥಾನವಾದ ಶ್ವೇತದ್ವೀಪ ಅನಂತಾಸನ ವೈಕುಂಠದಲ್ಲಿಯೂ ಇರುವನು.

**ದ್ರೌಪದೀಶಪತಿವಿಠಲರು:**— ಶ್ರೀಲಕುಮಿವಲ್ಲಭನು ॥ ೧ ಪ್ರಣವ ವೇದಾಭಿಮಾನಿಗಳು ೨ ಪ್ರಕೃತಿ ಲಕ್ಷ್ಮೀ ಮೂಲಪ್ರಕೃತಿಗೆ ಅಭಿಮಾನಿ, ಕೀಲಾಲಜಾಸನ-ಬ್ರಹ್ಮ ಇವರೊಳಗೆ ಮೂಲರೂಪಿ ಪರಮಾತ್ಮ ಅಂಶಿಯೆಂತ ಕರೆಸುತ್ತಾನೆ. ಕ್ಷೀರಘೃತದ ಹಾಗೆ ॥೧೮॥

**ಭಾವಸೂಚನ:**— ಶ್ರೀತಿ ಪ್ರಣವಃ ಪ್ರಾಣದ ಇತ್ತ್ಯುಕ್ತೇಃ ॥ ಕೀಲಾಲಜ = ಪದ್ಮ, ಅಂಶೀತಿ ॥ ಅಂಶಾ ಏವ ಹಿ ಮೇ ಜೀವಾ ಅಂಶೀ ಹಿ ಪರಮೇಶ್ವರಃ ॥ ಇತ್ಯುಕ್ತತ್ವಾತ್ ॥೧೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ ॥ ಆಲಯೇ. ಪ್ರಕೃತಿ–ಜಡ ॥ "ಕೀಲಾಲಜ" ಪದ್ಮ ॥೧೮॥

## ಕನ್ನಡಾರ್ಥ

ಮೂಲಕಾರಣ ಅಂಶಗಳೆಂಬ ಮೂರು ರೂಪಗಳನ್ನು ನಿರೂಪಿಸಲು ಉಪಕ್ರಮಿಸುತ್ತಾರೆ "ಶ್ರೀಲಕುಮಿ" ಎಂಬ ಪದ್ಯದಿಂದ ವೈಕುಂಠವೆಂಬ ತನ್ನ ನಿಜಗೃಹದಲ್ಲಿ ಒಂದು ರೂಪ. "ಪ್ರಕೃತಿ"— ಜಡಪ್ರಕೃತಿ. ಕೀಲಾಲಜವೆಂದರೆ ಕಮಲ, ಪದ್ಮವೆಂದು ಅರ್ಥ. ॥೧೮॥

**ಅವತರಣಿಕಾ :—** ಮೂಲರೂಪಿ ಅಂಶಿನಾಮಕಹರಿಯ, ಅವತಾರಾದಿ ಅನಂತರೂಪಗಳನ್ನು ಸ್ತೋತ್ರಗೈಯುತ್ತಾರೆ. ಹಿಂದೆ ಅಂಶಿ ಅಂಶರೂಪಗಳನ್ನು ವಿವರಿಸಿದಂತೆ ಈ ಪದ್ಯದಲ್ಲಿ ಅವತಾರ ರೂಪಗಳಲ್ಲಿಪ್ಪ ಹರಿಯ ಮಾಹಾತ್ಮ್ಯೆ ಕೊಂಡಾಡುತ್ತಾರೆ.

**ಮೂರು ಯುಗದಲಿ ಮೂಲರೂಪನು ।**
**ಸೂರಿಗಳ ಸಂತೈಸಿ ದಿತಿಜ ಕು ।**
**ಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು ॥**
**ಕಾರುಣಿಕ ಭೂಮಿಯೊಳು ನಿಜಪರಿ ।**
**ವಾರಸಹಿತವತರಿಸಿ ಬಹುವಿಧ ।**
**ತೋರಿದನು ನರವತ್ಪ್ರವೃತ್ತಿಯ ಸಕಲಚೇತನಕೆ ॥ ೧೯ ॥**

**ಪದ್ಯಾರ್ಥ :—** ಮೂರು ಯುಗದಲಿ ಮೂಲರೂಪನು = ಶ್ರೀಹರಿಗೆ ತ್ರೈಯುಗನೆಂದು ನಾಮಉಂಟು, ಕೃತ, ತ್ರೇತಾ ದ್ವಾಪರಯುಗಾದಿಗಳಲ್ಲಿಯೇ ಶ್ರೀಹರಿಗೆ ಅವತಾರ ಉಂಟು. ಇಂತು ಮೂರು ಯುಗದಲ್ಲಿ ಮೂಲರೂಪಿ ನಾರಾಯಣನಾದ ಹರಿಯು, ಸೂರಿಗಳ ಸಂತೈಸಿ= ಜ್ಞಾನಿಗಳಾದ ಅನೇಕ ಭಕ್ತರನ್ನು ರಕ್ಷಿಸಿ, ದಿತಿಜಕುಮಾರಕರ ಸಂಹರಿಸಿ=ದಿತಿದೇವಿಪುತ್ರರಾದ ದೈತ್ಯರುಗಳನ್ನು ಸದೆಬಡೆದು, ಅಧರ್ಮ ಪ್ರವೃತ್ತಿಯನ್ನು ದೂರಗೈಸುತ್ತಾ, ಧರ್ಮವನುಳಹಬೇಕೆಂದು = ಸದ್ಧರ್ಮವನ್ನು ಪರಂಪರಾಗತ ವೇದವಿಹಿತವಾದ ಧರ್ಮವನ್ನು ಉಳಿಸಲು, ಕಾರುಣಿಕ ಭೂಮಿಯೊಳು ನಿಜಪರಿವಾರಸಹಿತವತರಿಸಿ = ಕಾರುಣಿಕ ದಯಾಳುವಾದ ಶ್ರೀಹರಿಯು, ತನ್ನ ನಿಜಭಕ್ತರಾದ ವಾಯುದೇವರೇ

ಮೊದಲಾದ ದೇವತೆಗಳಿಂದ ಕೂಡಿಕೊಂಡು, ಅವತರಿಸಿ = ಪ್ರಾದುರ್ಭೂತನಾಗಿ ನರವತ್ಪ್ರವೃತ್ತಿಯ = ದಶರಥಕೌಸಲ್ಯಾ ವಸುದೇವದೇವಕಿ ಮುಂತಾದ ನರ ಜನ್ಮವನ್ನು ತಾಳಿದ ದೇವಾಂಶರಲ್ಲಿ ತಾನೂ ಶುಕ್ಲಶೋಣಿತರಹಿತನಾಗಿ ಚಿದಾನಂದ ರೂಪದಿಂದಲ್ಲಿಯೇ ಅವತಾರಮಾಡಿ, ಸಕಲಚೇತನರಿಗೆ=ಸಕಲ ಜೀವರಿಗೆ ಮನುಜರಲ್ಲಿ ಅವತರಿಸುವಕಾಲ ನರರಂತೆ ತೋರುತ್ತಾನೆಂಬ ಪ್ರಮೇಯವನ್ನು ಬಿಚ್ಚಿ ಹೇಳಿದ ಕರುಣಾಳುಗಳು.

**ದ್ರೌಪದೀಶಪತಿ ವಿಠಲರು :**—ಮೂರು ಯುಗದಲಿ = ಕೃತಯುಗದಲ್ಲಿ ಮೂಲರೂಪಿ ಪರಮಾತ್ಮನ ಭಜನೆ ಯಾಕೆಂದರೆ, ನರಸಿಂಹಅವತಾರವಿದ್ದರೂ, ಮೂಲರೂಪಿ ನಾರಾಯಣನ ಉಪಾಸನ, ತ್ರೇತಾಯುಗದಲಿ ಶ್ರೀರಾಮ ಇದ್ದ ಕಾಲಕ್ಕೂ, ನರಸಿಂಹ ಉಪಾಸನಾ, ದ್ವಾಪರದಲ್ಲಿ ಕೃಷ್ಣನಿದ್ದ ಕಾಲಕ್ಕೂ ರಾಮ ಮೂರ್ತಿಭಜನೆ. ಕಲಿಯುಗದ ಆದಿ ಕೊನೆಯಲ್ಲಿ ಬುದ್ಧ ಕಲ್ಕಿ ಇದ್ದ ಕಾಲಕ್ಕೂ ಶ್ರೀಕೃಷ್ಣೋಪಾಸನೆ. "ಕಲೌ ಕೃಷ್ಣಃ ಪ್ರಶಸ್ಯತೇ" ಎಂತ ಪ್ರಮಾಣ. **ಭಾವಸೂಚನ:**—ಮೂರೇತಿ ॥ ೧೯ ॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

" ನರ " ಇತಿ ॥ " ನರವತ್ " ಇತಿ ॥ " ಪ್ರಾಪ್ತೇ ನರೇಷು ಜನನೇ ನರವತ್ ಪ್ರವೃತ್ತಿಃ " ॥ ಇತಿ. ॥ ೧೯ ॥

## ಕನ್ನಡಾರ್ಥ

ಮೂಲರೂಪೀ ಹರಿಯ ಅವತಾರಗಳನ್ನು ತಿಳಿಸುತ್ತಾರೆ—" ಮೂರು " ಎಂಬ ಪದ್ಯದಿಂದ.

" ನರವತ್ ಪ್ರವೃತ್ತಿಯ ತೋರಿದನು" ಎಂಬುದು " ಮನುಷ್ಯರಲ್ಲಿ ತನ್ನ ಪ್ರಾದುರ್ಭಾವವು ಆಗುವ ಕಾಲದಲ್ಲಿ ನರರಂತೆ ಪ್ರವರ್ತಿಸುತ್ತಾನೆ " ಎಂಬ ಶ್ಲೋಕದ ಅನುಕರಣವಾಗಿರುತ್ತದೆ, ॥ ೧೯ ॥

**ಅವತರಣಿಕಾ :**—ಇನ್ನು ಮೂಲ ಜಡಪ್ರಕೃತಿಗತನಾದ ಮೂಲ ರೂಪಿಯು, ಮೂಲ ಪ್ರಕೃತಿ ಉಪಚಯದ್ವಾರಾ ೨೪ ತತ್ವಗಳನ್ನು ರಚನೆಮಾಡಿ ತದ್ರೂಪತತ್ವನ್ನಾಮದಿಂದ ಕರೆಸುತ್ತಾ ಬ್ರಹ್ಮಾಂಡನಿರ್ಮಾಣಮಾಡಿ, ಕಾರ್ಯ ರೂಪಗಳನ್ನು ತೋರುವನೆಂದು ಬಣ್ಣಿಸುತ್ತಾರೆ.

**ಕಾರಣಾಹ್ವಯ ಪ್ರಕೃತಿಯೊಳಗಿ।**
**ದ್ದಾರಧಿಕ ಹದಿನೆಂಟು ತತ್ವವ॥**
**ತಾರಚಿಸಿ ತದ್ರೂಪತನ್ನಾಮಂಗಳನೆ ಧರಿಸಿ॥**
**ನೀರಜಭವಾಂಡವನು ನಿರ್ಮಿಸಿ।**
**ಕಾರುಣಿಕ ಕಾರ್ಯಾಖ್ಯರೂಪದಿ।**
**ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ ॥ ೨೦ ॥**

**ಪದ್ಯಾರ್ಥ :—** ಕಾರಣಾಹ್ವಯ = ಮೂಲಕಾರಣನಾಮದಿಂದ ಕರೆಸುವ ಪ್ರಕೃತಿಯೊಳಗಿದ್ದು ಮೂಲಜಡಪ್ರಕೃತಿಯೊಳಗೆ ಇದ್ದು, ಕಾರಣನೆನಿಸಿ = ಆರಧಿಕ ಹದಿನೆಂಟು ತತ್ವವ = ೬ = ೧೮ = ೨೪ ತತ್ವಗಳನ್ನು ಅಂದರೆ, ಅವ್ಯಕ್ತ, ಮಹತ್ತತ್ವ ಅಹಂಕಾರ ಮನಸ್ಸು (೪) ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚತನ್ಮಾತ್ರಾ, ಪಂಚ ಭೂತ ಇಂತು ೨೪ ತತ್ವಗಳನ್ನು ತಾ = ತಾನು ಸ್ವತಃ ಜಡದಲ್ಲಿ ಪ್ರವೃತ್ತಿ ನಿಮಿತ್ತನಾಗಿ, ರಚಿಸಿ = ಉಪಚಯ ಹೊಂದಿಸಿ, ತದ್ರೂಪ = ಆ ೨೪ ತತ್ವಗಳ ವಿಕಾರವಾದಂತೆ, ಚಿನ್ಮಯನಾದ ತಾನು ಆ ೨೪ ಕೇಶವಾದಿ ತತ್ವರೂಪಗಳನ್ನು ತನ್ನಾಮಂಗಳನೆ ಧರಿಸಿ = ಆಯಾ ತತ್ವಗಳ ನಾಮದಿಂದ ತಾನೇ ಕರೆಸುತ್ತಾ, ಆ ೨೪ ತತ್ವಗಳಿಂದಲೇ, ನೀರಜಭವಾಂಡವನು ನಿರ್ಮಿಸಿ = ಬ್ರಹ್ಮಾಂಡವನ್ನು ನಿರ್ಮಾಣಮಾಡಿ, ಕಾರುಣಿಕ = ದಯಾಳುವಾದ ಶ್ರೀಹರಿಯು, ಕಾರ್ಯಾಖ್ಯ ರೂಪದಿ = ಆ ಬ್ರಹ್ಮಾಂಡದೊಳಗೆ ಪ್ರವೇಶಿಸಿ, ಕಾರ್ಯರೂಪದಿಂದ ಇದು ಸಹಜ, ಸಾಲಿಗ್ರಾಮಗಳಲ್ಲಿ, ಆಹಿತ = ರಾಮಕೃಷ್ಣ ವೇದವ್ಯಾಸಾದಿ ಪಂಚ ಲೋಹಶಿಲಾದಿ ಪ್ರತಿಮಾಗಳಲ್ಲಿ, ಅಚಲಗಳು ಪರ್ವತಗಳಲ್ಲಿಯೂತೋರುವನು.

**ದ್ರೌಪದೀಶಪತಿವಿಠಲರು :—**ಕಾರಣಾಹ್ವಯ ॥ ಆರಧಿಕ ಹದಿನೆಂಟು ೨೪ ತತ್ವ ನಿರ್ಮಿಸಿ, ಅದರೊಳಗೆ ಪ್ರವೇಶ ಕಾರ್ಯರೂಪ, ಆಹಿತ ರಾಮಕೃಷ್ಣಾದಿಪ್ರತಿಮೆ, ಪರ್ವತ ಅಚಲ, ಸಹಜ ಸಾಲಿಗ್ರಾಮ ॥ ೨೦ ॥

**ಭಾವಸೂಚನೆ:—**ಕಾರಣೇತಿ ॥ ೨೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಕಾರಣ " ಇತಿ ॥

## ಕನ್ನಡಾರ್ಥ

ಪರಮಾತ್ಮನು ಪ್ರಕೃತಿಯಲ್ಲಿ ಕಾರಣ ರೂಪದಿಂದ ತನ್ನಾಮಕನಾನಾಗಿದ್ದು, ೨೪ ತತ್ವಗಳನ್ನು ನಿರ್ಮಿಸಿ, ಅವುಗಳಲ್ಲಿ ಆ ಆ ನಾಮರೂಪಗಳಿಂದಿದ್ದು ಬ್ರಹ್ಮಾಂಡವನ್ನು ನಿರ್ಮಿಸಿ, ಕಾರ್ಯರೂಪದಿಂದ, ಸಹಜಾಹಿತಾಚಲ ಪ್ರತಿಮೆಗಳಲ್ಲಿರುವನು" ಎಂದು ಈ ಪದ್ಯದ ಭಾವ,

**ಅವತರಣಿಕಾ** :—ಹಿಂದೆ ವಿವರಿಸಿದ, ಅಂತರ್ಗತ ಅಂಶಿಅಂಶರೂಪಗಳು ಯಾವವು ಎಂಬುದನ್ನು ಕ್ರೋಡೀಕರಿಸಿ ವಿವರಿಸುತ್ತಾ ಈ ಮೂರು ರೂಪಗಳೂ ಸುಖಮಯವಾದರೂ, ಜೀವರಿಂದ ಮಾಡಿಸಿದ ಸಕಲ ವ್ಯಾಪಾರಗಳಲ್ಲಿ ತನ್ನ ಶುಭ ಸಾರವನ್ನು ಭುಂಜಿಸುತ್ತಾ ಶ್ರೀಹರಿಯು ತ್ರಿವಿಧರಿಗೆ ತ್ರಿವಿಧಗತಿ ಕೊಡುವನೆಂದು ಬಣ್ಣಿಸುತ್ತಾರೆ.




**ಜೀವರಂತರ್ಯಾಮಿ ಅಂಶಿ ಕ।**
**ಳೇವರಗಳೊಳಗಿಂದ್ರಿಯಗಳಲಿ।**
**ತಾ ವಿಹಾರವಗೈವುತನುದಿನ ಅಂಶನಾಮದಲಿ॥**
**ಈ ವಿಷಯಗಳನುಂಡು ಸುಖಮಯ।**
**ಈವ ಸುಖ ಸಂಸಾರದುಃಖವ**
**ದೇವ ಮಾನವ ದಾನವರಿಗವಿರತ ಸುದಾಮಸಖ ॥ ೨೧ ॥**

**ಪದ್ಯಾರ್ಥ** :—ಜೀವರಂತರ್ಯಾಮಿ = ಸಕಲ ಜೀವರ ಅಂತರಂಗದಲ್ಲಿ ನಿಯಾಮಕರೂಪ ಅಂತರ್ಗತವೇ ಅಂಶಿ, ಕಳೇವರಗಳೊಳಗಿಂದ್ರಿಯಗಳಲಿ = ಜೀವರ ದೇಹ ಕಳೇವರ ದೇಹ ಇಂದ್ರಿಯಗಳಲಿ=ಮನಸ್ಸಾದಿಸಕಲ ಇಂದ್ರಿಯಗಳಲಿ, ಅಂಶನಾಮದಿಂದ ಕರೆಸುತ್ತಾ, ಅಂಶಿ, ಅಂಶರೂಪಗಳಿಂದ ತಾವಿಹಾರವಗೈವುತನುದಿನ = ಪ್ರತಿನಿತ್ಯದಲ್ಲಿ ಸಕಲ ಜೀವರಿಂದ ಆಗುವ ಎಲ್ಲ ವ್ಯಾಪಾರಗಳನ್ನೂ ತಾನೇ ನಿಂತು ಪ್ರೇರಿಸಿ ಮಾಡಿಸುತ್ತಾ, ಈ ವಿಷಯಗಳನುಂಡು ಸುಖಮಯ = ಸಕಲ ವ್ಯಾಪಾರಗಳಲ್ಲಿ ತದ್ರೂಪತನ್ನಾಮಗಳಿಂದ ಇದ್ದು ತಾನು ಪೂರ್ಣ ಆನಂದಮಯನಾದ, ತನ್ನ ಸ್ವಾಭಿಖ್ಯರಸಗಳನ್ನು ಸ್ವೀಕರಿಸುತ್ತಾ, ಜೀವರುಗಳಾದ ದೇವತೆಗಳಿಗೆ, ಸುಖ, ಮಾನವರಿಗೆ ಸಂಸಾರ ಮಿಶ್ರಸುಖ, ದಾನವರಿಗೆ = ದನುದೇವಿ ಮಕ್ಕಳಾದ ದಾನವದೈತ್ಯಾದಿಗಳಿಗೆ, ದುಃಖವ =

ಕ್ಲೇಶವನ್ನು, ಅನವರತ= ಎಡಬಿಡದೆ, ಈವ = ಕೊಡುವನು. ಈ ಹರಿಯು ಎಂಥವನೆಂದರೆ, ಸುದಾಮಸಖ= ಸುಧಾಮನಿಗೆ ಸ್ನೇಹಿತನೆಂಬ ಈ ವಿಶೇಷಣವು ಬಹು ಸಮಂಜಸವಾಗಿದೆ. ತನ್ನಲ್ಲಿ ಸ್ನೇಹ ಮಹಾಭಕ್ತಿಯುಳ್ಳ ಬಡವನೂ, ಬಾಲ್ಯಮಿತ್ರನೂ ಆದ ಸುಧಾಮಬ್ರಾಹ್ಮಣನಿಗೆ ಅನಂತಸುಖವನ್ನು ಕೊಟ್ಟಂತೆ, ಮುಕ್ತಿಯೋಗ್ಯರಾದ ಅಲ್ಪಜೀವರಿಗೂ ಅವಿರತ ಆನಂದಗಳನ್ನು ಕೊಡುವನು.

**ದ್ರೌಪದೀಶಪತಿವಿಠಲರು** :—ಜೀವರಲ್ಲಿ ಅಂತರ್ಯಾಮಿ, ಜೀವದೇಹಗಳಲ್ಲಿ ಅಂಶಿ, ಇಂದ್ರಿಯಗಳಲ್ಲಿ ಅಂಶ, ಅಂಶಿ ಎಂದರೆ ಜೀವಾಂತರ್ಗತ ರೂಪ ಅನಂತಾನಂತರೂಪಗಳು ಅಂಶಿಯೆಂತ ಕರೆಸುತ್ತದೆ. ಒಬ್ಬನೆಂತಲೂ, ಒಬ್ಬನೇ ಅನಂತನೆಂತಲೂ, ಶಾಸ್ತ್ರಸಿದ್ಧ, ಆಧ್ಯಾತ್ಮವಚನ ವಿಷಯ, ಎಂದರೆ ಭೋಗ, ಕ್ಷೀರ ಪಾನ ಸುಖ, ವಿಷಪಾನ ದುಃಖ, ಈ ಎರಡೂ ಪರಮಾತ್ಮಗೆ ಸುಖವೇ ಸರಿ. ಹ್ಯಾಗಂದರೆ ತದ್ರೂಪ ತದ್ರಸ ತದ್ಗತ ತನ್ನಿಯಾಮಕ ತದ್ಭಿನ್ನ ತಚ್ಛಬ್ದ ವಾಚ್ಯನಾದ ಪ್ರಯುಕ್ತ, ಜೀವರಧಿಕಾರಾನುಸಾರ, ಸುಖದುಃಖ ಸಂಸಾರ ಈ ಪ್ರಕಾರ ಉಣಿಸಿ ವಿಹಾರ ಮಾಡುತ್ತಾನೆ ‖ ೨೧ ‖

**ಭಾವಸೂಚನ** :—ಜೀವೇತಿ ‖ ಅಂಶೀತಿ ‖ ಅಂಶೀ ಹಿ ಪರಮೇಶ್ವರ ಇತ್ಯುಕ್ತೇಃ ‖ ೨೧ ‖

## ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ

" ಜೀವ " ಇತಿ ‖ " ಅಂಶೀ " ಮೂಲರೂಪೀ ‖ ಇಂದ್ರಿಯಾಂತರ್ಗತಃ ಅಂಶಃ ‖ " ಜೀವಾಂತರ್ಯಾಮಿ" ಇತಿ ಪೂರ್ವೋಕ್ತರೂಪತ್ರಯಂ ವಿವೃತಮ್ ‖ ೨೧ ‖

## ಕನ್ನಡಾರ್ಥ

ಅಂಶಿರೂಪವನ್ನು ವಿವರಿಸಿಸತ್ತಾರೆ " ಜೀವರಂತರ್ಯಾಮಿ " ಎಂಬ ಪದ್ಯದಿಂದ.

" ಅಂಶೀ " ಮೂಲರೂಪ ಇಂದ್ರಿಯಗಳಲ್ಲಿ ಅಂತರ್ಗತವಾದುದು ಅಂಶ. ಜೀವಾಂತರ್ಯಾಮಿರೂಪವು ಅಂಶಿ. ಈ ಮೂರು ಪದ್ಯಗಳಿಂದ ಮೂರು ರೂಪಗಳು ವಿವರಿಸಲ್ಪಟ್ಟವು. ‖ ೨೧ ‖

**ಅವತರಣಿಕಾ :**—ದೇಶಾಟನ ಮಾಡಿ, ತೀರ್ಥಕ್ಷೇತ್ರಯಾತ್ರೆಮಾಡಿ ದೇಹಶ್ರಮ ಬಡಿಸದೇ, ದುರಾಶೆ ಕಾಮ್ಯಕರ್ಮಗಳನ್ನು ಬಿಟ್ಟು ಬ್ರಹ್ಮಾದಿ ಸಕಲ ಜೀವರೂ, ಪೃಥಿವ್ಯಾದಿ ೨೪ ಜಡತತ್ವಗಳೂ ಶ್ರೀಹರಿಗೆ ಅಧಿಷ್ಠಾನವಾದವು ಎಂದು ಧ್ಯಾನಮಾಡಿ ಪೂಜಿಸುತ್ತಿರಬೇಕೆಂದು ಉಪದೇಶಿಸುತ್ತಾರೆ.

**ದೇಶ ದೇಶವ ಸುತ್ತಿ ದೇಹಾ।**
**ಯಾಸಗೊಳಿಸದೆ, ಕಾಮ್ಯಕರ್ಮದು।**
**ರಾಶೆಗೊಳಗಾಗದಲೆ ಬ್ರಹ್ಮಾದ್ಯಖಿಳ ಚೇತನರು ॥**
**ಭೂಸಲಿಲ ಪಾವಕ ಸಮೀರಾ।**
**ಕಾಶವೊದಲಾದಖಿಳ ತತ್ವಪ।**
**ರೇಶಗಿವಧಿಷ್ಠಾನವೆಂದರಿದರ್ಚಿಸನವರತ ॥ ೨೨ ॥**

**ಪದ್ಯಾರ್ಥ :**— ದೇಶದೇಶವಸುತ್ತಿ = ನಾನಾ ದೇಶಗಳಲ್ಲಿಪ್ಪ ಪುಣ್ಯ ಕ್ಷೇತ್ರಗಳು, ಪುಣ್ಯ ತೀರ್ಥಯಾತ್ರೆ ಮಾಡುವದು, ಬಹುಕಷ್ಟ, ದ್ರವ್ಯವೆಚ್ಚ ದೇಹದಂಡನೆ ಮಾಡದೇ, ದೇಹಾಯಾಸಗೊಳಿಸದೆ = ಕೇವಲ ಜಲಗಳೇ ತೀರ್ಥಗಳು. ಮೂರ್ತಿಗಳೇ ದೇವರು ಎಂದು ಅರಿದು, ಏನು ಮಾಡಿದರೂ ದೇಹಶ್ರಮುವಲ್ಲದೇ ಏನೂ ಫಲವಿಲ್ಲ. ಕಾಮ್ಯಕರ್ಮ ದುರಾಶೆಗೊಳಗಾಗದಲೇ= ಮನಸ್ಸಿನಲ್ಲಿ ದ್ರವ್ಯ ದಾರಾಪುತ್ರ ವಿಷಯಾಸೆ ಸಂಸಾರಸುಖಾದಿಗಳು ಇವೆಲ್ಲ ಐಹಿಕ ಸುಖಗಳನ್ನು ಬಯಸುವದೇ ದುರಾಶಾ= ಕೆಟ್ಟ ಆಶಾಗಳು ಇವು ನಾಶ ಹೊಂದಿಸುವವೆಂದು ತಿಳಿದು, ದುಷ್ಟ ಆಶಾ ಬಿಡಬೇಕು. ಬ್ರಹ್ಮಾದಿ ಅಖಿಳ ಚೇತನರು = ಬ್ರಹ್ಮದೇವರೆ ವೊದಲು ಮಾಡಿ ತೃಣಾಂತ ಸಕಲ ಜೀವಿಗಳು, ಭೂ = ಪ್ರಥ್ವಿ ಸಲಿಲ = ಉದಕ, ಪಾವಕ = ಅಗ್ನಿ, ಸಮೀರ = ವಾಯು, ಆಕಾಶವೇ ವೊದಲು ಮಾಡಿ ೨೪ ಜಡತತ್ವಗಳು ಪರೇಶಗೆ = ಪರ ಉತ್ತಮ ಳಾದ ಶ್ರೀ ಲಕ್ಷ್ಮೀದೇವಿಗೆ ಈಶ ಒಡೆಯಗೆ, ಇವು = ಈ ಎಲ್ಲ ಚೇತನರು ಜಡಗಳು, ಅಧಿಷ್ಠಾನವೆಂದು = ಅಧಿತಿಷ್ಠತಿ ಅಧಿಷ್ಠೀಯತೇ ವಾ ಅಧಿಷ್ಠಾನಂ ॥ ಆಯಾ ವಸ್ತುಗಳಲ್ಲಿ ಇರುವನು. (ಅಥವಾ ತಾನು ಇರಲಿಕ್ಕೆ ಯೋಗ್ಯ ಸ್ಥಾನ ವನ್ನಾಗಿ ಮಾಡುವನು) ಹೀಗೆ, ಜೀವಜಡಾಂತರ್ಯಾಮಿ ಶ್ರೀಹರಿಯ ಅಧಿಷ್ಠಾನವನ್ನು ತಿಳಿದು, ಅನವರತ=ನಿತ್ಯದಲ್ಲಿ, ಅರ್ಚಿಸು=ಪೂಜಿಸಬೇಕು.

**ದ್ರೌಪದೀಶಪತಿವಿತಲರು:**—ಬ್ರಹ್ಮಾದಿ ಚೇತನರು, ಪಂಚಮಹಾ ಭೂತಾದಿ ೨೪ ತತ್ವಶರೀರ ಉಳ್ಳವರಾದ ಕಾರಣ, ಇವರೊಳಗೆ ಅಂತರ್ಗತ ಪರಮಾತ್ಮನೆಂದು ತಿಳಿದು ಉಪಾಸನೆ ಮಾಡು, ಕಾಮ್ಯಕರ್ಮ ಬ್ಯಾಡೆಂದು ಹೇಳುತ್ತಾರೆ.

**ಭಾವಸೂಚನ:**—ದೇಶೇತಿ ||೨೨||

## ಶ್ರೀವ್ಯಾಸದಾಸಸಿದ್ಧಾಂತ ಕೌಮುದೀ

"ದೇಶ" ಇತಿ|| "ತತ್ವ" ಇತಿ "ದ್ವಯಂ ಚ" ಇತ್ಯನ್ವಯಃ ||೨೨||

## ಕನ್ನಡಾರ್ಥ

ಕಾಮ್ಯಕರ್ಮಗಳನ್ನು ಬಿಟ್ಟು ನಿಷ್ಕಾಮದಿಂದ ತತ್ವ ಹಾಗೂ ತತ್ವೇಶರು ಗಳಲ್ಲಿ ಭಗವಂತನನ್ನು ಚಿಂತಿಸುವುದೇ ಕರ್ತವ್ಯವೆಂದು ಉಪದೇಶಿಸುತ್ತಾರೆ. "ದೇಶ" ಎಂಬ ಪದ್ಯದಿಂದ. "ತತ್ವಪ" ಎಂಬ ಪದವು ತತ್ವ ತತ್ವೇಶರುಗಳಲ್ಲಿ ಎಂಬ ಅರ್ಥವನ್ನು ಹೇಳುವದು. ||೨೨||

**ಅವತರಣಿಕಾ:**— ಹಿಂದಿನ ಪದ್ಯದಲ್ಲಿ ಚೇತನ ಜಡಾಧಿಷ್ಠಾನಗತ ಹರಿಯ ಉಪಾಸನೆ ಮುಖ್ಯವೆಂದು ಹೇಳಿ, ಈಗ ಜೀವರುಗಳಲ್ಲಿ ಕ್ಷರ ಅಕ್ಷರರು ಎಂದು ಎರಡು ವಿಧ, ಜಡಗಳಲ್ಲಿ ಪಂಚವಿಧ ವಿಚಾರವನ್ನು ಈ ಪದ್ಯದಿಂದ ನಿರೂಪಿಸುತ್ತಾರೆ.

**ಎರಡು ವಿಧದಲಿ ಲೋಕದೊಳು ಜೀ |**
**ವರುಗಳಿಪ್ಪರು ಸಂತತ ಕ್ಷರಾ |**
**ಕ್ಷರವಿಲಿಂಗ ಸಲಿಂಗ ಸೃಜ್ಯಾಸೃಜ್ಯ ಭೇದದಲಿ ||**
**ಕರೆಸುವದು ಜಡಪ್ರಕೃತಿ ಪ್ರಣಪಾ |**
**ಕ್ಷರಮಹಾದಣುಕಾಲ ನಾಮದಿ |**
**ಹರಿಸಹಿತ ಭೇದಗಳ ಪಂಚಕ ಸ್ಮರಿಸು ಸರ್ವತ್ರ ||೨೩||**

**ಪದ್ಯಾರ್ಥ :**—ಸಂತತವಾಗಿ = ನಿತ್ಯದಲ್ಲಿ ಎರಡು ವಿಧದಲಿ ಲೋಕದಲಿ ಜೀವರುಗಳಿಪ್ಪರು ಕ್ಷರ ಅಕ್ಷರರೆಂದು ದ್ವಿವಿಧ || "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ || ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ

ಉಚ್ಯತೇ ॥ ಗೀತಾ ಅ. ೧೫ ಶ್ಲೋಕ ೧೬॥ ಇದಕ್ಕೆ ಶ್ರೀ ಮಂತ್ರಾಲಯ ಗುರು ಸಾರ್ವಭೌಮರು ಗೀತಾವಿವೃತಿಯಲ್ಲಿ "ಏವಂ ಸರ್ವಾಂತರ್ಯಾಮಿತ್ವಂ ಪ್ರಪಂಚ್ಯಾಧುನಾ ಸರ್ವೋತ್ತಮತ್ವಂ ಪ್ರಪಂಚಯತಿ॥ ದ್ವಾವಿತಿ ॥ ಇಮೌ ಪ್ರಮಾಣಪ್ರಮಿತೌ, ಪುರುಷೌ = ಚೇತನೌ, ಲೋಕೇ = ಈಶಿತವ್ಯವರ್ಗೇ । ದ್ವಾವೇತೌ ಕಾವಿತ್ಯತ ಆಹ ॥ ಕ್ಷರಶ್ಚೇತಿ । ಸರ್ವಾಣಿ ಭೂತಾನಿ ಬ್ರಹ್ಮಾದಿ ಜೀವರಾಶಿಃ ಶರೀರಕ್ಷರಣ ಹೇತುನಾಕ್ಷರ ಉಚ್ಯತೇ । ಕೂಟಸ್ಥಃ ಕೂಟ ಮಾಕಾಶಂ ತದ್ವತ್ ಸ್ಥಿತಃ ಪುರುಷಃ ಅಕ್ಷರದೇಹತ್ವಾತ್ ಶ್ರೀರಕ್ಷರ ಉಚ್ಯತೇ॥ "ಪುಲ್ಲಿಂಗೇನೋಚ್ಯತೇ॥ಸ್ತ್ರೀ ಚ ಪುಂವಚ್ಛಕ್ತಿಮತೀ ಕ್ವಚಿದಿ"ತಿ॥ ಛಾಂದೋಗ್ಯ ಭಾಷ್ಯೋಕ್ತೇಃ ॥ ಎಂದು ಅಪ್ಪಣೆ ಕೊಡಿಸಿದಂತೆ ॥ ಬ್ರಹ್ಮಾದಿ ತೃಣಾಂತಜೀವರು ನಿತ್ಯರಾದರೂ, ಸ್ಥೂಲ ದೇಹಾದಿ (ವಿಯೋಗ) ನಾಶವುಳ್ಳವರು ಕ್ಷರ ಜೀವಿ ಗಳೆಂದು ಕರೆಸುವರು. ಅಕ್ಷರ = ನಾಶರಹಿತವಾದ ದೇಹವುಳ್ಳವರು, ಶ್ರೀಹರಿ ರಮಾದೇವಿಯರು, ಇವರು ನಾಶರಹಿತವಾದ ದೇಹವುಳ್ಳವರು. "ಅಕ್ಷರ ಇತಿ ನ ಕ್ಷರತಿ, ನ ವಿನಶ್ಯತಿ, ಇತ್ಯಕ್ಷರಃ ॥ ಅಶ್ನುತೇ ವ್ಯಾಪ್ನೋತಿ ವಾ ॥ "ಅಕ್ಷರಂ ನಕ್ಷರಂ ವಿಂದ್ಯಾದಶ್ನುತೇಃಪ್ಯಕ್ಷರೋಕ್ಷರ ಇತಿ ಕಾತ್ಯಾಯನ ವಚನಾತ್" (ವಿ.ಸ.ನಾ. ವಿದ್ಯಾಧಿ ರಾಜೀಯ) ಇವರು ನಾಶರಹಿತರಾದ ಚಿನ್ಮಯದೇಹರು. ಇದರಲ್ಲಿ ಶ್ರೀಹರಿಯು ಸಚ್ಚೇತನ ಸಚ್ಚಿದಾನಂದ ನಿತ್ಯಮುಕ್ತ. ರಮಾದೇವಿಯರು ನಾಶವಿಲ್ಲದೇ ಶಶ್ವದೇಕಪ್ರಕಾರವಾಗಿ ದೇಹವುಳ್ಳವರು. ಇವರೂ ಜೀವರಲ್ಲ. ಇವರನ್ನು ಜೀವರಲ್ಲಿ ಅಕ್ಷರಳಾಗಿ ಏಕೆ ಗಣನೆ ಎಂದರೆ, ಯದ್ಯಪಿ ಈಶಕೋಟಿ ಪ್ರವಿಷ್ಟಳು ಎನ್ನುವದಕ್ಕೆ ಬಹು ಪ್ರಮಾಣ ಉಂಟು, ಆದರೆ ಶ್ರೀ ಲಕ್ಷ್ಮಿಯು ಪರಾಧೀನಳು. ಸರ್ವದಾ ಶ್ರೀಹರಿಯ ಅಧೀನಳು. ಅಸ್ವತಂತ್ರಳು. ಎಂಬುದಕ್ಕೆ ಜೀವರಗಳು ಅಸ್ವಂತಂತ್ರರು. ಈ ಪರಾಧೀನತೆ ಎನ್ನುವದು ಅಸ್ವತಂತ್ರಚೇತನ ರಲ್ಲಿ ಗಣನೆ ಹೊರ್ತಾಗಿ ಲಕ್ಷ್ಮೀದೇವಿಯು ಜೀವಳಲ್ಲ. ಜೀವಕೋಟಿಯಲ್ಲಿ ಪ್ರವಿಷ್ಟಳಲ್ಲ. "ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ವಮೇವ ಚ" ಎಂಬ ಶ್ರೀ ಸರ್ವಜ್ಞರ ತತ್ವಸಂಖ್ಯಾನ ಉಕ್ತಿಯಂತೆ ಚೇತನಳಾದ ರಮೆಯನ್ನು, ಅಕ್ಷರಶಬ್ದವಾಚ್ಯಳೆಂದು ವೇದಾದಿಗಳಲ್ಲಿ ಹೊಗಳಿದಂತೆ ಗೀತಾವಿವೃತಿಕಾರರು, ಕೂಟಸ್ಥಃ=ಆಕಾಶದಂತೆ ನಿರ್ವಿಕಾರವಾಗಿರುವ, ಪುರುಷಃ ಅಕ್ಷರಃ ನಾಶವಾಗದೇ ಒಂದೇ ರೀತಿ ಇರುವಳು, ಶ್ರೀರಕ್ಷರ ಉಚ್ಯತೇ = ಶ್ರೀ ದೇವಿಯು ಅಕ್ಷರಳೆಂದು

ಕರೆಸುತ್ತಾಳೆ, ಸ್ತ್ರೀಯಳಾದರೂ ಪುಂಶಕ್ತಿ ಇದ್ದಕಾರಣ ಪುರುಷಶಬ್ದದಿಂದ ಕರೆಸುತ್ತಾಳೆಂದು ಛಾಂದೋಗ್ಯ ಭಾಷ್ಯದಲ್ಲಿ ಹೇಳಿದೆ. ರಮೆಯು ಬ್ರಹ್ಮಾದಿ ಜೀವರುಗಳಂತೆ ಅಸ್ವತಂತ್ರಳಲ್ಲ="ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಂ ಋಷಿಂ ತಂ ಸುಮೇಧಾಮ್॥" ಇತ್ಯಾದಿ ಶ್ರುತಿ ವಾಕ್ಯದಂತೆ ಶ್ರೀ ಸರ್ವಜ್ಞರು "ವಿಶ್ವಸ್ಥಿತಿ ಪ್ರಲಯ ಸರ್ಗ ಮಹಾವಿಭೂತಿ । ವೃತ್ತಿಪ್ರಕಾಶ ನಿಯಮಾವೃತಿ ಬಂಧಮೋಕ್ಷಾಃ॥ ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ" ॥ ಎಂದು ದ್ವಾದಶ ಸ್ತೋತ್ರದಲ್ಲಿ ಹೇಳಿದ್ದಾರೆ. ಮಹಾಲಕ್ಷ್ಮಿದೇವಿಯರಿಗೆ ಇಂತಹ ಶಕ್ತಿ ಇದೆ. ಕಾರಣ ಜೀವಕೋಟಿಯಲ್ಲಿ ಗಣನೆ ಇಲ್ಲ.

ಇಂತು ಪೂರ್ವ ಅಪರೋಕ್ಷಿ ಜ್ಞಾನಿಗಳ ಸಮ್ಮತವಾಗಿದೆ. ವಿಲಿಂಗ = ವಿರಜಾನದಿ ಸ್ನಾನದಿಂದ ಲಿಂಗದೇಹನಾಶವಾದವರು ಮುಕ್ತರಾಗಿ ಸ್ವರೂಪಸುಖ ವುಳ್ಳವರು ನಾಶರಹಿತರು ಅಕ್ಷರರು ಸಲಿಂಗರು=ಲಿಂಗದೇಹಯುಕ್ತರಾದವರು ಇದರಲ್ಲಿ ಸೃಜ್ಯರು, ಸೃಷ್ಟಿಗೆ ಬಂದವರು, ಅನೇಕದೇಹಗಳ ಹೊಂದಿ ಆ ದೇಹ ನಾಶವುಳ್ಳವರು. ಅಸೃಜ್ಯರು = ಸೃಷ್ಟಿಗೆ ಬಾರದೇ ಇದ್ದವರು, ಅನಾದಿ ಅನಿತ್ಯ ಲಿಂಗದೇಹವುಳ್ಳವರು. ಕ್ಷರರು ದೇಹದಿಂದ ನಾಶವುಳ್ಳವರೆಂದು ಅರ್ಥ ಮಾಡಿದರೆ ಸಮಂಜಸವೋ ? ಜ್ಞಾನಿಗಳಿಂದ ವಿಚಾರಾಂಶ. †

ಜಡಪ್ರಕೃತಿ = ಮೂಲಜಡಪ್ರಕೃತಿ. ಪ್ರಣವ = ಓಂಕಾರ, ಅಕ್ಷರ ಅಜಾದಿ ೫೧ ವರ್ಣಗಳು, ಮಹಾಕಾಲಗಳು ನಿತ್ಯ ಜಡವಾದವು. ಇವುಗಳಿಗೆ ವಿಕಾರವಿಲ್ಲ ಅಣುಕಾಲ=ಲವ ತೃಟಿ ಕ್ಷಣ ಪಳ ಗಳಿಗೆ ಇವೆಲ್ಲವೂ, ಅನಿತ್ಯ ಜಡಗಳು. ಇವು ಗಳಿಗೆ ನಾಶಉಂಟು. ಇಂತು ನಿತ್ಯಾ ನಿತ್ಯ ಜಡ ನಾಮದಿಂದ ಕರೆಸುತ್ತವೆ. ಹೀಗೆ ಜೀವ, ಜಡ, ಹರಿ = ಈಶ ಈ ಮೂರು ಸಹಿತವಾದ ಭೇದಗಳ ಪಂಚಕ=ಐದು ವಿಧವಾದ ಭೇದವನ್ನು ಸರ್ವತ್ರ ಸ್ಮರಿಸು = ಸರ್ವತ್ರ–ಸದಾ ಸೃ ಷ್ಟಿ ಯ ಲ್ಲಿ

---

† ಜೀವರು ಸ್ವರೂಪತಃ ಮುಕ್ತರಾದ ಮೇಲೆ ನಾಶವಿಲ್ಲ ನಿತ್ಯರು. ಅಕ್ಷರರು. ವಿಲಿಂಗರು. ದೇಹನಾಶನಿಮಿತ್ಯ ಅಕ್ಷರರು. ಇವರಲ್ಲಿ ಸಲಿಂಗರು ಸೃಜ್ಯರು ಅಸೃಜ್ಯರು. ಇವರು ಕ್ಷರ ಜೀವಿಗಳೆಂದು ಒಂದು ಪ್ರಕಾರ ವಿಚಾರಾಂಶ.

ಮುಕ್ತಿಯಲ್ಲಿ ಕೂಡಾ ಐದು ಭೇದಗಳು ನಿತ್ಯವಾಗಿರುವವೆಂದು ಚಿಂತಿಸು. ಪಂಚ ಭೇದವಿಚಾರ ಮುಂದಿನ ಪದ್ಯದಲ್ಲಿ ಹೇಳುತ್ತಾರೆ.

**ದ್ರೌಪದೀಶ ಪತಿ ವಿಠಲರು :**—ಎರಡು ವಿಧದಲಿ ೧. ಕ್ಷರ ಬ್ರಹ್ಮಾದಿಗಳು, ೨. ಅಕ್ಷರ ಲಕ್ಷ್ಮೀ, ಸೃಜ್ಯರು ಸಲಿಂಗರು. ಲಕ್ಷ್ಮೀ ಅಸೃಜ್ಯಳು. ಜೀವರ ಹಾಗೆ ಸೃಷ್ಟಿ ಇಲ್ಲ. ಅನಂತ ಬ್ರಹ್ಮರ ಹಾಗೆ ಅನಂತ ಲಕ್ಷ್ಮೀ ಇಲ್ಲ. ೩ ವಿಲಿಂಗರು ಲಿಂಗದೇಹಹೋದವರು. ೪. ಜಡ ದಾವದೆಂದರೆ ೧. ಪ್ರಕೃತಿ, ೨. ಪ್ರಣವ, ೩. ಅಕ್ಷರ ೪. ಮಹಾಕಾಲ, ೫. ಅಣುಕಾಲ ಈ ಐದಕ್ಕೆ ನಿಯಾಮಕ ಹರಿಸಹಿತ ಪಂಚಭೇದ.

**ಭಾವಸೂಚನ:**— ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚೇತ್ಯಾದೇಃ ||೨೩||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಎರಡು" ಇತಿ. || "ದ್ವಾವಿಮೌ" ಇತ್ಯುಕ್ತೇಃ || ಪ್ರಣವಾಂತಂ ಅಕ್ಷರ ಇತಿ ||೨೩ ||

## ಕನ್ನಡಾರ್ಥ

"ದ್ವಾವಿಮೌ" ಎಂಬ ಗೀತಾವಾಕ್ಯದಂತೆ ಕ್ಷರಾ-ಕ್ಷರಗಳೆಂದು ಎರಡು ವಿಧ. "ಪ್ರಣವಾಕ್ಷರ" ಎಂದು ಜೋಡಿಸಬೇಕು. "ಕ್ಷರ-ಅಕ್ಷರ, ಮುಕ್ತ-ಅಮುಕ್ತ, ಸೃಜ್ಯ-ಅಸೃಜ್ಯ. ಜಡಪ್ರಕೃತಿ, ವೇದ, ಅಣುಮಹತ್ಕಾಲಗಳು ; ಹೀಗೆ ಪ್ರಭೇದಗಳನ್ನು ತಿಳಿದು ಹರಿಯನ್ನು ಸರ್ವತ್ರ ಸ್ಮರಿಸು." ಎಂದು ತಾತ್ಪರ್ಯ. || ೨೩ ||

**ಅವತರಣಿಕಾ :**—ಹಿಂದೆ ಪೇಳಿದಂತೆ ಹರಿಸಹಿತ ಭೇದಗಳ ಪಂಚಕ ಸ್ಮರಿಸು ಸರ್ವತ್ರ ಎಂದು ಪೇಳಿದ್ದು ಸವಿಸ್ತರ ಭೇದಗಳನ್ನು ಸೂಚಿಸುತ್ತಾರೆ. ಇಲ್ಲಿ ಪಿತೃಗಣ ವಿಚಾರದಲ್ಲಿ ಅಂಶಿ, ಅಂಶ, ಅಂತರ್ಗತ, ಕರ್ತೃ, ಕರ್ಮ, ಕ್ರಿಯೆಗಳಲ್ಲಿ ಪಂಚರೂಪಾತ್ಮಕನ ಕಾರ್ಯ ನಿಜವಾಗಿ ತಿಳಿದಾಚರಿಸಿದರೆ ಜೀವರಿಗೊಬ್ಬರಿಗೊಬ್ಬರು ಸಂಬಂಧರಲ್ಲ. ಎಲ್ಲ ಜೀವಜೀವರಿಗೆ ಭೇದ. ಪರಮಾತ್ಮನ ದಾಸರೆಂದು ನಿಜವಾದ ಜ್ಞಾನಪುಟ್ಟುವದೆಂದು ಉಪದೇಶಿಸುತ್ತಾರೆ.

**ಜೀವ ಜೀವರ ಭೇದ ಜಡಜಡ ।**
**ಜೀವ ಜಡಗಳ ಭೇದ ಪರಮನು ।**
**ಜೀವ ಜಡಸುವಿಲಕ್ಷಣನು, ಯೆಂದರಿದು ನಿತ್ಯದಲಿ ॥**
**ಈ ವಿರಿಂಚಾಂಡದೊಳು ಎಲ್ಲಾ ।**
**ಠಾವಿನಲಿ ತಿಳಿದೈದು ಭೇದ ಕ ।**
**ಳೇವರದೊಳರಿತಚ್ಯುತನ ಪದವೈದು ಶೀಘ್ರದಲಿ ॥ ೨೪ ॥**

**ಪದ್ಯಾರ್ಥ** :—ಜೀವ ೧ ಜೀವರಭೇದ = ಜೀವ ಒಬ್ಬನಿಗೆ ಇನ್ನೊಬ್ಬ ಜೀವನು ಬೇರೆಬೇರೆಯಾಗಿರುವನು ೨ ಜಡ ಜಡ = ನಿತ್ಯವಾದ ಜಡಗಳಲ್ಲಿ ಪರಸ್ಪರ ಭೇದ ಅನಿತ್ಯವಾದ ಜಡಗಳಿಗೂ ನಿತ್ಯ ಜಡಗಳಿಗೂ ಭೇದ. ಅನಿತ್ಯ ಜಡಗಳಿಗೂ ಭೇದವುಂಟು. ೩ ಜೀವ ಜಡಗಳಭೇದ = ಜೀವರಿಗೂ ಎಲ್ಲ ಜಡಗಳಿಗೂ ಭೇದ, ಪರಮನು = ಉತ್ತಮನು ಶ್ರೇಷ್ಠನಾದ ಹರಿಯು, ೪ ಜೀವರಿಂದ, ವಿಲಕ್ಷಣನು = ಬೇರೆಯಾಗಿದ್ದಾನೆ. ೫ ಪರಮನು ಜಡಸುವಿಲಕ್ಷಣನು = ಸರ್ವೋತ್ತಮನಾದ ಹರಿಯು ಜಡಗಳಿಂದಲೂ ಬೇರೆಯಾಗಿರುವನು. ನಿತ್ಯದಲಿ= ಸರ್ವಕಾಲದಲ್ಲಿ ಸೃಷ್ಟಿಯಲ್ಲಿ ಮುಕ್ತಿಯಲ್ಲಿ ಪಂಚಭೇದ ಸತ್ಯ, ಯೆಂದರಿದು- ಎಂದು ತಿಳಿಯಬೇಕು. ಈ ವಿರಿಂಚಾಂಡದೊಳು, ಎಲ್ಲಾ ಠಾವಿನಲಿ = ಈ ಬ್ರಹ್ಮಾಂಡದಲ್ಲಿಪ್ಪ ಎಲ್ಲದೇಶ ಕಾಲಗಳಲ್ಲಿ, ತಿಳಿದು ಐದುಭೇದ = ಈ ಪಂಚ ವಿಧವಾದ ಭೇದವನ್ನರಿಯಬೇಕು. ಅಲ್ಲದೇ, ಕಳೇವರದೊಳರಿತು = ಈ ಸ್ಥೂಲ ಕಳೇವರಿದಿ ಸಹ ಐದು ಭೇದವಿದೆ. ೧ ಸ್ಥೂಲಶರೀರದಲ್ಲಿಪ್ಪ ೨೪ ಜಡತತ್ವಗಳು ಒಂದಕ್ಕೊಂದು ಭೇದ. ೨ ಸ್ಥೂಲಶರೀರಕ್ಕೂ ಅನಿರುದ್ಧ ಶರೀರಕ್ಕೂ ಭೇದ, ೩ ಅನಿರುದ್ಧ ಶರೀರಕ್ಕೂ ಅವ್ಯಕ್ತ ಲಿಂಗಶರೀರಕ್ಕೂ ಪರಸ್ಪರ ಭೇದ, (೪) ಈ ಶರೀರಗಳಲ್ಲಿಪ್ಪ ಜೀವನಿಗೂ ಈ ಜಡವಾದ ಶರೀರಕ್ಕೂ ಭೇದ, ೫ ಜೀವನಲ್ಲಿಪ್ಪ ಬಿಂಬ ಶ್ರೀಹರಿಗೂ ಜೀವನಿಗೂ ಭೇದ. ಎಲ್ಲ ಜಡ ಶರೀರಗಳಿಗೂ ಈಶನಿಗೂ ಭೇದ. ಈ ಪ್ರಕಾರ ಭೇದ ತಿಳಿದು, ಅಚ್ಯುತನಪದವೈದು ಶೀಘ್ರದಲಿ = ಜೀವನಿಂದ ಯಾವಾಗಲೂ ಚ್ಯುತನಾಗಿ ಅಗಲದಿದ್ದ ಬಿಂಬಮೂರ್ತಿ ಶ್ರೀಹರಿಯ ಪಾದವನ್ನು, ಐದು ಶೀಘ್ರದಲಿ = ತ್ವರಿತಧ್ಯಾನೋಪಾಸನೆಯಿಂದ ಬಿಂಬನನ್ನು ಸಾಕ್ಷಾತ್ಕರಿಸು.

**ದ್ರೌಪದೀಶಪತಿವಿಠಲರು :**—ಜೀವಜೀವರಭೇದ=೧ ಜೀವಜೀವಕ್ಕೂ ಭೇದ, ೨ ಜಡಜಡಕ್ಕೂ ಭೇದ ೩ ಜೀವ ಜಡಭೇದ ೪ ಜೀವ ಪರಮಾತ್ಮ ಭೇದ ೫ ಜಡಪರಮಾತ್ಮ ಭೇದ. ಜೀವಜಡಗಳಿಂದ ಅತ್ಯಂತ ವಿಲಕ್ಷಣ ಪರಮಾತ್ಮ.

ತನ್ನದೇಹದಲ್ಲೇ ಪಂಚಭೇದ ಹ್ಯಾಗಂದರೆ, ಲಿಂಗ, ಅವ್ಯಕ್ತ, ಅನಿರುದ್ಧ ಸ್ಥೂಲದೇಹಗಳಾದದ್ದರಿಂದ ಪರಸ್ಪರಭೇದ ೧ ಈ ದೇಹದಿಂದ ಜೀವ ಭಿನ್ನನಾದ ಪ್ರಯುಕ್ತ ಜಡಜೀವಭೇದ ೩ ಈ ಜೀವಗೂ ತತ್ವಾಭಿಮಾನಿಗಳಾದ ಜೀವರಿಗೂ ಪರಸ್ಪರಭೇದ ೪ ಇಂಥ ಜೀವರಿಂದ ಪರಮಾತ್ಮಗೆ ಭೇದ ೫ ಜಡವಾದ ಶರೀರ ದಿಂದ ಪರಮಾತ್ಮಗೂ ಭೇದ ॥ ೨೪ ॥

**ಭಾವಸೂಚನ :**—ಜೀವೇತಿ ॥

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

" ಜೀವ " ಇತಿ ॥ ಅಪರೋಕ್ಷಾಂತರಂಗತ್ವಾತ್ ಅಭ್ಯಾಸಃ ॥ ೨೪ ॥

## ಕನ್ನಡಾರ್ಥ

ಪಂಚಭೇದಜ್ಞಾನಪುರಃಸರವಾಗಿ ಸರ್ವೋತ್ತಮತ್ವಾದಿಬುದ್ಧಿಯಿಂದ ಕೂಡಿದ ನಿರ್ಮಲಭಕ್ತಿಯಿಂದ ವಿಷ್ಣೂಪಾಸನವನ್ನು ಮಾಡಿದರೇ ಮೋಕ್ಷವಾಗು ವದರಿಂದ ಪಂಚಭೇದಗಳನ್ನು ನಿರೂಪಿಸುತ್ತಾರೆ " ಜೀವ " ಎಂಬ ಪದ್ಯದಿಂದ ಈ ತಾರತಮ್ಯಜ್ಞಾನವು ಅಪರೋಕ್ಷಕ್ಕೆ ಅಂತರಂಗಸಾಧನವಾದುದರಿಂದ, ಪರಸ್ಪರ ಭೇದಜ್ಞಾನವಾಗಲಿಕ್ಕೆ " ಜೀವ ಜೀವ " ಎಂದು ಎರಡೆರಡು ಆವೃತ್ತಿ ಗಳಿಂದ ಹೇಳಲ್ಪಟ್ಟಿರುತ್ತದೆ. ॥ ೨೪ ॥

**ಅವತರಣಿಕಾ :**—ಆದಿ ಸೃಷ್ಟಿಯಲ್ಲಿಯೂ, ಕ್ಷರ ಅಕ್ಷರರು ಪಂಚಭೇದ ಸತ್ಯವು ನಿತ್ಯವಾಗಿರುವದೆಂದು ವಿವರಿಸುತ್ತಾರೆ.

**ಆದಿಯಲ್ಲಿ ಕ್ಷರಾಕ್ಷರಾಖ್ಯ ।**
**ದ್ವೇಧ ಅಕ್ಷರದೊಳು ರಮಾಮಧು ।**
**ಸೂದನರು ಕ್ಷರಗಳೊಳು ಪ್ರಕೃತಿ ಪ್ರಣವಕಾಲದೊಳು ॥**

**ವೇಧಮುಖ್ಯತೃಣಾಂತ ಜೀವರ ।**
**ಭೇದಗಳನರಿತೀರಹಸ್ಯವ ।**
**ಬೋಧಿಸದೆ ಮಂದರಿಗೆ ಸರ್ವತ್ರದಲಿ ಚಿಂತಿಪುದು ॥ ೨೫ ॥**



**ಪದ್ಯಾರ್ಥ** :—ಆದಿಯಲ್ಲಿ = ಆದಿಸೃಷ್ಟಿ ಪ್ರಾರಂಭಕ್ಕೆ, ಕ್ಷರ ಅಕ್ಷರಾಖ್ಯ ಧ್ವೇಧ = ಕ್ಷರರು ಅಕ್ಷರರು ಎಂದು ಎರಡು ಪ್ರಕಾರ, ಅಕ್ಷರದೊಳು = ನಾಶ ರಹಿತರಾದವರಲ್ಲಿ, ರಮಾಮಧುಸೂದನರು = ಶ್ರೀಲಕ್ಷ್ಮೀದೇವಿ, ಮಧುನಾಮಕ ದೈತ್ಯನನ್ನು ಸಂಹಾರ ಮಾಡಿದ ಶ್ರೀಹರಿ ಇಬ್ಬರೇ ಅಕ್ಷರರು, ಕ್ಷರಗಳೊಳು, ಪ್ರಕೃತಿ=ಮೂಲಜಡ ಪ್ರಕೃತಿಗೆ ಅನಾದಿ ನಿತ್ಯತ್ವ ರಮಾಭಿಮನ್ಯವಾದುದು. ಸೃಷ್ಟಿಪ್ರಾರಂಭದಲ್ಲಿ ಮೂಲಜಡ ಪ್ರಕೃತಿಯಿಂದ ಸತ್ವ, ರಜ ತಮೋಬಿಂದು ಗಳನ್ನು ಉಪಚಯಮಾಡಿ ಅವ್ಯಕ್ತಾದಿ ಪ್ರಥ್ವೀತನಕ ಅಸಂಸೃಷ್ಟ, ಸಂಸೃಷ್ಟ, ತತ್ವಗಳು ನಾಶಹೊಂದುವವು. ಪ್ರಣವ = ಓಂಕಾರ ನಿತ್ಯವಾದರೂ, ಸೃಷ್ಟಿ ಪ್ರಾರಂಭದಲ್ಲಿ ಓಂಕಾರದಿಂದ ಸರ್ವಭಾಷಾ ಅಭಿವ್ಯಂಜಕಶಕ್ತಿ ಇತ್ತು. ನಿತ್ಯಾ ನಿತ್ಯವಾದ ಪುರಾಣಾದಿಗಳು, ಅರ್ಥತಃ ನಿತ್ಯ ಶಬ್ದತಃ ಅನಿತ್ಯ ನಾಶವಾಗುವುವು. ಮಹಾಕಾಲನಿತ್ಯವಾದರೂ, ಸೃಷ್ಟಿಪ್ರಾರಂಭದಲ್ಲಿ ಅಣುಕಾಲಾದಿಗಳು ಅನಿತ್ಯ ನಾಶವಾಗುವವು. ಇದಲ್ಲದೆ, ಪ್ರಣವಕ್ಕೆ ಬ್ರಹ್ಮ, ಕಾಲಕ್ಕೆ ಗರುಡ ಅಭಿಮಾನಿಗ ಳಾದರೂ, ಈ ಬ್ರಹ್ಮಾದಿ ಜೀವರ ಸ್ಥೂಲಶರೀರಕ್ಕೆ ನಾಶವುಂಟು. ಕಾರಣ ಅನಿ ತ್ಯವಾದವೆಲ್ಲ ಕ್ಷರರೆಂದು, ಮತ್ತು ವೇಧ ಮುಖ್ಯ ತೃಣಾಂತ ಜೀವರ = ಬ್ರಹ್ಮ ದೇವರೆ ಮೊದಲು ಮಾಡಿ, ತೃಣಪರಿಯಂತ ಎಲ್ಲ ಜೀವರ ಸ್ಥೂಲಾರಂಭಿಸಿ ಲಿಂಗದೇಹ ಪರಿಯಂತ ನಾಶವುಳ್ಳವೆಂದು ಇವರು ಕ್ಷರರು ಎಂದು ಕರೆಸಿ ಕೊಂಡರು. ಭೇದಗಳನರಿತೀರಹಸ್ಯವ = ೧ ಅಕ್ಷರರಲ್ಲಿ ಎರಡು ವಿಧ ರಮಾ ನಾರಾಯಣರು, ಕ್ಷರರಲ್ಲಿ ಮೇಲೆ ವಿವರಿಸಿದಂತೆ. ೨ ಪ್ರಕೃತಿ ೩ ಪ್ರಣವ ೪. ಕಾಲ, ೫. ಬ್ರಹ್ಮಾದಿ ತೃಣಾಂತಜೀವರು ಹೀಗೆ ಪಂಚಭೇದ ಷಡ್ಭೇದ, ದಶ-ದ್ವಾದಶ, ಅನಂತಭೇದಗಳು ಇವೆ ಎಂದು ತಿಳಿದು, ಈ ರಹಸ್ಯವ = ಈ ಗುಟ್ಟು ತತ್ವವನ್ನು, ಮಂದರಿಗೆ ಬೋಧಿಸದೆ = ಅಜ್ಞರಾದ-ಮಿಥ್ಯಾ ಜ್ಞಾನಿ ಗಳಿಗೆ ಉಪದೇಶ ಮಾಡದೇ ತಿಳಿಸದೇ ಈ ಎಲ್ಲ ವಿಧವಾದ ಭೇದಗಳನ್ನು ಸರ್ವತ್ರದಲ್ಲಿ ಚಿಂತಿಪುದು = ಎಲ್ಲ ದೇಶ ಕಾಲಗಳು ಭೇದವು ನಿತ್ಯ-ಸತ್ಯವೆಂದು ಚಿಂತನೆ ಮಾಡುವದೆಂದು ಉಪದೇಶಿಸಿದ್ದಾರೆ.

**ದ್ರೌಪದೀಶಪತಿವಿಠಲರು**:-ಆದಿಯಲಿ ಕ್ಷರಾಕ್ಷರಾಖ್ಯದ್ವೇಧ=ಆದಿಯಲ್ಲಿ ಸೃಷ್ಟಿಕಾಲ ಆರಂಭದಲ್ಲಿ ದ್ವೇಧ = ಎರಡುಪ್ರಕಾರ, ಕ್ಷರ-ಅಕ್ಷರ, ಅಕ್ಷರರಲ್ಲಿ ರಮಾಮಧುಸೂದನರು. ಪಟ್ಟು ೨, ಪ್ರಕೃತಿ ಪ್ರಣವಕಾಲದೊಳು ಎಂದರೆ ೧. ಪ್ರಕೃತಿ ಎಂದರೆ ಮೂಲ ಪ್ರಕೃತಿ ಅಭಿಮಾನಿ ಲಕ್ಷ್ಮಿ, ಅವ್ಯಕ್ತ ತತ್ವಾಭಿಮಾನಿ, ಸರಸ್ವತಿ ಭಾರತಿ ಇವರು ಅವಾಂತರ ಅಭಿಮಾನಿಗಳು. ಅವ್ಯಕ್ತ ತತ್ವಾತ್ಮನೇ ಬ್ರಹ್ಮಾಣಿ ಭಾರತೀಭ್ಯೋ ನಮಃ ಯಂತ ತತ್ವನ್ಯಾಸ ||

೨. ಪ್ರಣವ ಓಂಕಾರ ಇದಕ್ಕೆ ಅಭಿಮಾನಿ ಬ್ರಹ್ಮ

೩. ಕಾಲಾಭಿಮಾನಿ ಗರುಡ, ಪ್ರಕೃತಿ, ಕಾಲ, ಪ್ರಣವ, ವೇದ (ಧ)ದಿಂದ ತೃಣಾಂತ ಸರ್ವಜೀವರು ಬದ್ಧರು.

ಪಂಚಭೇದ ತಾತ್ಪರ್ಯವೇನಂದರೆ :—

೩, ಪ್ರಕೃತಿ, ಪ್ರಣವ, ಕಾಲ ಮೂರು ಜಡ

೧. ಜೀವರು ಒಂದು.

೧. ಈಶಕೋಟಿಗಳಾದ ರಮಾ ಪರಮಾತ್ಮರು, ಅಂತು ಪಂಚಭೇದ.

—

೫

ಜೀವರುಗಳು ಜಡವಾದ ಸೂಕ್ಷ್ಮ ಪರಮಾಣುವಿನೊಳಗೆ ಗಣತೋಪ್ಯನಂತಾನಂತ ಜೀವರುಗಳು ಇರುತ್ತಾರೆ. "ಪರಮಾಣುಪ್ರದೇಶೇಷು ಹ್ಯನಂತಾ ಪ್ರಾಣರಾಶಯಃ" || ೨೫ ||

**ಭಾವಸೂಚನ** :—ಆದೀತಿ || ೨೫ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆದಿ"|| ಇತಿ "ದ್ವೇಧ"-ದ್ವಿವಿಧ | "ಜೀವರ"—"ಕ್ಷರರ" ಇತಿ ಪೂರಣೀಯಮ್ || ೨೫ ||

## ಕನ್ನಡಾರ್ಥ

ಕ್ಷರಾಕ್ಷರಗಳಲ್ಲಿ ಲಕ್ಷ್ಮೀದೇವಿಯು ಅಕ್ಷರಳೆನಿಸಿದ್ದರೂ ಮುಖ್ಯ ಅಕ್ಷರ ಶಬ್ದವಾಚ್ಯನು ಶ್ರೀಹರಿಯೊಬ್ಬನೇ; ಲಕ್ಷ್ಮೀದೇವಿಗೆ ಪಾರತಂತ್ರ್ಯವಿರುವದರಿಂದ ಅಮುಖ್ಯಳು ಎಂದೂ, ಆದರೂ ಇತರ ಕ್ಷರರಿಂದ ವಿಲಕ್ಷಣಳೆಂದೂ ತಿಳಿ

ಸಲು ರಮಾ ಮಧುಸೂದನರನ್ನಿಬ್ಬರನ್ನೂ ಅಕ್ಷರಗಳೆಂದು ನಿರೂಪಿಸಿರುತ್ತಾರೆ. "ದ್ವೇಧ"-ಎರಡು ವಿಧ. "ಜೀವರ" ಎಂಬುದಕ್ಕೆ "ಕ್ಷರ ಜೀವರ" ಎಂದು ಅರ್ಥ ತಿಳಿಯಬೇಕು. ‖ ೨೫ ‖

**ಅವತರಣಿಕಾ** :—ಶ್ರೀಹರಿಯು ಸರ್ವತ್ರ ವ್ಯಾಪ್ತನಾಗಿದ್ದರೂ ಬಹು ರೂಪ ಬಹುನಾಮದಿಂದ, ಆಯಾ ಅಧಿಷ್ಠಾನಗಳಂತೆ ತಕ್ಕ ವ್ಯಾಪಾರ ಮಾಡಿ ಸುತ್ತಾನೆ. ಹೊರ್ತಾಗಿ ತನ್ನ ಪೂರ್ಣಶಕ್ತಿ ತೋರುವದಿಲ್ಲವೆಂದು ದೀಪದ ದೃಷ್ಟಾಂತದಿಂದ ತಿಳಿಸುತ್ತಾರೆ.

**ದೀಪದಿಂ ದೀಪಗಳು ಪೊರಮ |**
**ಟ್ಟಾಪಣಾಲಯಗತ ತಿಮಿರಗಳ |**
**ತಾ ಪರಿಹರಗೈಸಿ ತದ್ಗತ ಪದಾರ್ಥ ತೋರ್ಪಂತೆ ‖**
**ಸೌಪರಣಿ ವರವಹನು ತಾ ಬಹು |**
**ರೂಪ ನಾಮದಿ ಎಲ್ಲ ಕಡೆಯಲಿ |**
**ವ್ಯಾಪಿಸಿದ್ದು ಯಥೇಷ್ಟಮಹಿಮೆಯ ತೋರ್ಪ ತಿಳಿಸದಲೆ**
**‖ ೨೬ ‖**

**ಪದ್ಯಾರ್ಥ:** —ದೀಪದಿಂ = ಪ್ರಕಾಶಮಾನವಾದ ಒಂದು ದೀಪದಿಂದ ಅನೇಕ ಪ್ರಕಾಶಮಾನವಾದ ದೀಪಗಳು, ಪೊರಮಟ್ಟು = ಹೊರಗೆ ಹೊರಟು, ಆಪಣಾಲಯಗತ ತಿಮಿರಗಳ ಪರಿಹರಗೈಸಿ, ಅಂಗಡಿ ಮತ್ತು ಮನೆಯಲ್ಲಿದ್ದ ಕತ್ತಲೆಯನ್ನು ಪರಿಹರಿಸಿ, ದೀಪ ಪ್ರಕಾಶದಿಂದ ಕತ್ತಲೆ ತನ್ನಿಂತಾನೆ ದೂರಾಗಿ ತದ್ಗತ = ಆ ಅಂಗಡಿಯಲ್ಲಿರುವ, ಪದಾರ್ಥ ತೋರ್ಪಂತೆ = ಸಕಲ ವಸ್ತು ಗಳನ್ನು ತೋರುವಂತೆ (ಒಂದು ದೀಪದ ಜ್ಯೋತಿಯಿಂದ ಇನ್ನೊಂದು ಪ್ರಕಾಶ ಹೇಗೆ ಪ್ರಕಾಶವು ಒಂದೇ ಇದ್ದರೂ, ಅನಂತ ದೀಪವಾಗಿ ತೋರುತ್ತವೋ, ಎಲೆಕ್ಟ್ರಿಕ್ ಪವರ್ ಒಂದೇ ರೀತಿ ಪ್ರಕಾಶಮಾನವಾಗಿದ್ದರೂ, ಆಯಾ ಕ್ಯಾಂಡಲ ನಂಬರ ಬಲ್ಬುಗಳಲ್ಲಿ ಬಲ್ಬಿನ ಶಕ್ತಿಗೆ ತಕ್ಕಂತೆ ಪ್ರಕಾಶ ತೋರುತ್ತದೊ) ಇದ ರಂತೆ ಸೌಪರಣಿ ವರವಹನ = ಕಾಲಾಭಿಮಾನಿ ಗರುಡವಾಹನನಾದ ಹರಿಯು ಬಹಿರಂಗದಲ್ಲಿ ಕಾಲರೂಪದಿಂದ, ಬಹುರೂಪದಿಂದ, ಆಯಾ ಅಧಿಷ್ಠಾನಗತ ನಾಗಿ, ಆಯಾರೂಪ, ಆಯಾ ನಾಮದಿಂದ ಎಲ್ಲ ಕಡೆಯಲ್ಲಿ ವ್ಯಾಪಿಸಿದ್ದು, =

ಸರ್ವತ್ರವ್ಯಾಪ್ತನಾಗಿ ಇದ್ದು, ಯಥೇಷ್ಟ ಮಹಿಮೆಯ = ಯಾವ ಯಾವ ಜೀವರ ಯೋಗ್ಯತಾನುಗುಣವಾದ, ತನ್ನ ಇಚ್ಛಾನುರೂಪ (ಅಥವಾ ಯಥೇಷ್ಟ ಬಹು) ಮಹಿಮೆಯನ್ನು ತೋರ್ಪನು, ತಿಳಿಸವಲೆ= ತನ್ನ ಅನಂತ ಮಹಿಮಾಗಳನ್ನು ಪೂರ್ಣ ಯಾರಿಗೂ ತಿಳಿಸುವದಿಲ್ಲ.

**ದ್ರೌಪದೀಶಪತಿವಿಠಲರು:**—ದೀಪದಿಂ ದೀಪಗಳ, ಭಗವದ್ಭಕ್ತರೆಂಬ ಅಪಣಾಲಯ ಅಂಗಡಿಯೆನಿಪ, ಪರಮಾಖ್ಯದೀಪ ವಂದನಂತವಾಗಿ, ಅವರವರ ಯೋಗ್ಯತಾನುಸಾರ ತೋರ್ಪ. ಸಾಕಲ್ಯ ಒಬ್ಬರಿಗೂ ತೋರಿಸನು.

**ಭಾವಸೂಚನ** :—ದೀಪೇತಿ ॥ ಪೊರಮಟ್ಟು = ಹೊರಹೊರಟು ॥೨೯॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೀಪ" ಇತಿ ॥ "ಆಪಣ" = ಅಂಗಡಿ । "ತಿಮಿರ" = ಕತ್ತಲೆ ॥ ೨೬ ॥

## ಕನ್ನಡಾರ್ಥ

ಪರಮಾತ್ಮನು ವ್ಯಾಪ್ತನಾಗಿದ್ದರೂ ಅನೇಕ ಬಹುರೂಪಗಳಿಂದ ಆಯಾ ಅಧಿಷ್ಠಾನಗಳಿಗೆ ಅನುಸಾರವಾಗಿ ಅಲ್ಲಲ್ಲಿ ಅಭಿವ್ಯಕ್ತನಾಗಿ ತನ್ನ ಮಹಿಮೆಯನ್ನು ತೋರಿಸುತ್ತಾನೆ. ಎಂಬುದನ್ನು ದೀಪದೃಷ್ಟಾಂತದಿಂದ ವಿಶದಪಡಿಸುತ್ತಾರೆ. "ದೀಪ" ಎಂಬ ಪದ್ಯದಿಂದ ॥ ೨೬ ॥

**ಅವತರಣಿಕಾ** :— ಸಕಲ ಜೀವರು-ಬಿಂಬನಾದ ಶ್ರೀಹರಿಗೆ ಪ್ರತಿಬಿಂಬರು, ಛಾಯಾಸದೃಶರು. ಎಂದು ಇಂದ್ರಚಾಪ ಕಾಮನಬಿಲ್ಲಿನ ದೃಷ್ಟಾಂತದಿಂದ ಪೇಳುತ್ತಾರೆ. ನೆಳಲು ಜೀವನ ದೇಹದ ಆಧೀನವಾಗಿ ಹೇಗೆ ಸಂತತ ಇರುತ್ತದೆಯೋ ಜೀವರುಗಳು ಸದಾ ಪರಮಾತ್ಮನ ಆಧೀನರಾಗಿರುತ್ತಾರೆಂದು ವಿಶದೀಕರಿಸುತ್ತಾರೆ.

**ನಳಿನ ಮಿತ್ರಗೆ ಇಂದ್ರಧನು ಪ್ರತಿ ।**
**ಫಲಿಸುವಂತೆ ಜಗತ್ರಯವು ಕಂ ।**
**ಗೊಳಿಪದಸುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ ॥**
**ತಿಳಿಯೆ ತ್ರಿಕಕುದ್ಧಾಮನತಿ ಮಂ ।**
**ಗಳ ಸುರೂಪವ ಸರ್ವ ಠಾವಿಲಿ ।**
**ಪೊಳೆವ ಹೃದಯಕೆ ಪ್ರತಿ ದಿವಸ ಪ್ರಹ್ಲಾದ ಪೋಷಕನು ॥೨೭॥**

**ಪದ್ಯಾರ್ಥ :**—ನಳಿನಮಿತ್ರಗೆ = ಕಮಲ ಸಖನಾದ ಸೂರ್ಯನಿಗೆ, ಇಂದ್ರಧನು = ಇಂದ್ರಚಾಪ-ಕಾಮನಬಿಲ್ಲು ಎಂತ ಪ್ರಸಿದ್ಧಿಯಾಗಿ ವರ್ಷಾ ಕಾಲದಲ್ಲಿ ತೋರುವುದು. ಪ್ರತಿಫಲಿಸುವಂತೆ = ಸೂರ್ಯನಿಗೆ ಎದುರಾಗಿ ಮೂಡುವಂತೆ, ಜಗತ್ರಯವು = ಜಗತ್ ಶಬ್ದಜೀವವಾಚಿಯಾದ ಕಾರಣ, ತ್ರಿವಿಧ ಜೀವರು, ಕಂಗೊಳಿಪದನುಪಾಧಿಯಲಿ = ಬಾಹ್ಯೋಪಾಧಿಯಿಲ್ಲದೇ, ಅನುಪಾಧಿ ಸ್ವರೂಪೋಪಾಧಿಯುಂದದಲಿ = ಅಂದರೆ, ಮನುಜಾದಿ ದೇಹದ ಛಾಯಾ ನೆಳಲು, ಹೇಗೆ ದೇಹದಂತೆ ಅವಸ ಅಧೀನವಾಗಿ ಕಾಣು ತ್ತಿದೆಯೋ; ಸೂರ್ಯನಿಗೆ ಯಾವ ಉಪಾಧಿ ಇಲ್ಲದೇ ಸೂರ್ಯನ ಛಾಯಯೇ ನೀರು ತುಂಬಿದ ಮೋಡದಲ್ಲಿ ಪ್ರತಿಬಿಂಬಿಸುವಂತೆ, (ಈ ಶಾಸ್ತ್ರಾರ್ಥ ವಿಚಾರ ಮುಂದೆ) ಪ್ರತಿಬಿಂಬಾಹ್ವಯದಿ ಕಂಗೊಳಿಪದು = ಛಾಯೆಯು ಹೇಗೆ ದೇಹಾ ಧೀನವಾಗಿ ದೇಹ ತಿರುಗಿದಂತೆ ತಿರುಗುತ್ತದೆಯೋ ಪ್ರತಿಬಿಂಬನಾಮದಿಂದ ಕರೆಸುತ್ತದೆ. ತಿಳಿಯೆ ತ್ರಿಕಕುದ್ಧಾಮನತಿ ಮಂಗಳ ಸುರೂಪವ ಸರ್ವ ತಾವಿಲಿ = ಶ್ವೇತದ್ವೀಪ ಅನಂತಾಸನ ವೈಕುಂಠ ಮಂದಿರನಾದ ಶ್ರೀಹರಿಯೇ ಸರ್ವರ ಬಿಂಬನೆಂದು, ಶ್ರೀಹರಿಯ ಮಂಗಳ ಸುರೂಪವನ್ನು ಧ್ಯಾನಿಸಿ ಉಪಾ ಸನೆ ಮಾಡುವದು, ಸಚ್ಚಿದಾನಂದಹರಿಗೆ ಸರ್ವದಾ ದಾಸ=ಬಂಬಾಧೀನನೆಂದು ಉಪಾಸನೆ ಮಾಡಲು ಪ್ರಹ್ಲಾದಪೋಷಕನು=ನಿರ್ವ್ಯಾಜ ಭಕ್ತನಾದ ಪ್ರಹ್ಲಾದ ಪ್ರಕರ್ಷೇಣ ಆಹ್ಲಾದ ಕೊಡುವ, ಚಿನ್ಮಯರೂಪನಾದ ಜೀವನಲ್ಲಿ ನೃಸಿಂಹ ರೂಪದಿಂದ ಇರುವ ಹರಿ ಸಕಲ ದುರಿತ ಪರಿಹರಿಸಿ, ಪ್ರತಿದಿವಸ = ನಿತ್ಯದಲ್ಲಿ ಹೃದಯಕೆ ಪೊಳೆವ = ಈ ಸ್ಥೂಲದೇಹದ ಹೃತ್ಕಮಲದಲ್ಲಿ ಹೊಳೆಯುವನು ಕಾಣಿಸುವನು. ಶ್ರೀಹರಿ ಎನಗೆ ಬಿಂಬ. ನಾನು ಪ್ರತಿಬಿಂಬನೆಂದು ಉಪಾಸನೆ ಮಾಡಬೇಕು.

**ದ್ರೌಪದೀಶಪತಿ ವಿಠಲರು :**—ನಳಿನ ಮಿತ್ರಗೆ ಇಂದ್ರನು = ಸೂರ್ಯಗೆ ಸೂರ್ಯನ ಕಿರಣ ಇದ್ದಹಾಗೆ ಪರಮಾತ್ಮನ ಸಾಂಶರೂಪಗಳು, ಕಾಮನಬಿಲ್ಲು ಸೂರ್ಯಗೆ ಸುತ್ತುಗಟ್ಟಿದಹಾಗೆ, ಜೀವರುಗಳು ಭಿನ್ನಾಂಶರು ಎಂದರೆ ಯಥಾ ಯೋಗ್ಯ " ತತ್‌ಸದೃಶ ತದಧೀನತ್ವಂ ಪ್ರತಿಬಿಂಬತ್ವಂ "ಎಂತ ಪ್ರಮಾಣ

|| ೨೭ ||

**ಭಾವಸೂಚನ:**-ಈ ಜ್ಞಾನಿಗಳು ಬಹು ಸೂಕ್ಷ್ಮವಾಗಿ, ಶಾಸ್ತ್ರಕ್ಕೆ ವಿರೋಧ ಬಾರದಂತೆ ಸೂರ್ಯನಿಗೂ ಸೂರ್ಯಕಿರಣಗಳಿಗೂ ಹೇಗೆ ಅಭೇದವೋ ಶ್ರೀಹರಿಯ ಮತ್ಸ್ಯಾದಿರೂಪಗಳಿಗೆ ಅಭೇದ. ಜೀವರು ಮತ್ಸ್ಯಾದಿರೂಪಗಳಿಗೆ ಸಾಮ್ಯವಾಗ ಲಾರರು. ಸೂರ್ಯನ ಛಾಯೆಯೇ ಕಾಮನಬಿಲ್ಲು ಸೂರ್ಯನಿಗೆ ಸುತ್ತು ಗಟ್ಟಿದಂತೆ ಸೂರ್ಯನ ನೆಳಲು ಪ್ರತಿಫಲಿಸುತ್ತದೆ ಎಂದು ಜ್ಞಾನಿಗಳು ಬಹುಸಮಂಜಸವಾಗಿ ಎಗಡು ಸೂತ್ರ ಭಾಷ್ಯಾರ್ಥಗಳನ್ನು ವಿವರಿಸಿದ್ದಾರೆ. "ಓಂ ಆಭಾಸ ಏವ ಚ" ಇದಕ್ಕೆ, ಶ್ರೀ ಮಂತ್ರಾಲಯದ ಪ್ರಭುಗಳು ನ್ಯಾಯಮುಕ್ತಾವಳಿಯಲ್ಲಿ "ಸಿದ್ಧಾಂತಸ್ತು ಬಿಂಬಸ್ಯೈಕರೂಪತ್ವೇಪಿ, **ಜೀವಸ್ಯ ಅನಾದಿಸ್ವರೂಪೋಪಾಧಿ** ಅವಿದ್ಯಾಕರ್ಮಾದಿವೈಚಿತ್ರ್ಯೇಣ ಪ್ರತಿಬಿಂಬವೈಚಿತ್ರ್ಯೋಪಪತ್ತೇಃ॥ ರೂಪಂ-ರೂಪಮಿತಿ ಶ್ರುತೇಃ ॥ ಪ್ರತಿಬಿಂಬೋ ಜೀವನಸಂಬಂಧ ಇತಿ ಶ್ರುತಿಃ ಭಿನ್ನೋಪಾಧ್ಯಾಯತ್ತತ್ವರೂಪ ಪ್ರತಿಬಿಂಬನಿಷೇಧಪರೇತಿ ॥ ಅತ್ರಪ್ರತಿನಯಂ ಸಮನ್ವಯಾಕ್ಷೇಪಸಮಾಧಿಫಲೇ ವಕ್ತವ್ಯೇ ॥

ಮತ್ತು ಶ್ರೀ ಮಂತ್ರಾಲಯಗುರುಸಾರ್ವಭೌಮರು ಬ್ರಹ್ಮಸೂತ್ರಭಾಷ್ಯ **ಭಾವಪ್ರದೀಪದಲ್ಲಿಯೂ, ಈ ಸೂತ್ರಕ್ಕೆ, ಆಭಾಸಏವೇತಿ** ॥ ಜೀವಸಮುದಾಯಃ ಪರಮೇಶ್ವರಸ್ಯರೂಪಂ ರೂಪಂ ಪ್ರತಿ ಪ್ರತಿರೂಪಃ ಪ್ರತಿಬಿಂಬೋ ಬಭೂವ। ಭೂತ್ವಾ ವರ್ತತ ಇತಿ ಶ್ರುತೇರ್ಜೀವಾನಾಂ ಪ್ರತಿಬಿಂಬಾಂಶತ್ವಂ ನ ಮತ್ಸ್ಯಾದೀನಾಂ ಚ ತದಭಾವಾತ್ ನ ಸಾಮ್ಯಮಿತ್ಯರ್ಥಃ॥ ಸೂತ್ರಾರ್ಥೇ ಸ್ಮೃತಿಂ ಚಾಹ॥ **ವಾರಾಹೇ ಚ** ಪರೇ ಸ್ವರೂಪಾಂಶ ಇತರಾಣಿ ಮತ್ಸ್ಯಾದಿಪ್ರಾದುರ್ಭಾವರೂಪಾಣಿ ತು ಸ್ವರೂಪಾಣ್ಯೇವಾತಃ ಸರ್ವಸಾಮ್ಯೋಪೇತಾನೀತ್ಯರ್ಥಃ॥ ನ ಜೀವಸ್ಯ ಪರಮಾತ್ಮಪ್ರತಿಬಿಂಬಾಂಶತ್ವಂ ಯುಕ್ತಮ್। **ಜೀವಾತಿರಿಕ್ತೋಪಾಧ್ಯಭಾವಾದಿತ್ಯತ ಆಹ** ॥ ಸೋಪಾಧಿರಿತಿ॥ **ಅನುಪಾಧಿ ಪ್ರತಿಬಿಂಬಃ**॥ ಯಥೈಷಾ ಛಾಯಾ ಪುರುಷೇ ಪುರುಷಾಧೀನತಯಾ ವರ್ತತೇ॥ ತಥೈವ ತಜ್ಜೀವಜಾತಮೇತಸ್ಮಿನ್ನೀಶ್ವರೇ ಆತತಮಾಯತ್ತಮಧೀನಮಿತ್ಯರ್ಥಃ। **ಇದಮಪ್ಯನುಪಾಧಿ ಪ್ರತಿಬಿಂಬಸ್ಯೈವೋದಾಹರಣಮ್**॥ ತಥಾ ಚಾತಿರಿಕ್ತೋಪಾಧ್ಯಭಾವೇ**ಽಪೀಂದ್ರಚಾಪಛಾಯಾದಿವಜ್ಜೀವಸ್ಯ ಪ್ರತಿಬಿಂಬಾಂಶತ್ವಂ ಸಂಭವತೀತಿ ಭಾವಃ**॥ ಇತ್ಯಾದಿ ॥ ಇಲ್ಲಿ ಜೀವನ ಸ್ವರೂಪವೇ ಅನುಪಾಧಿ ಬಿಂಬವೆಂದೂ ಈ ಸ್ವರೂಪೋಪಾಧ್ಯತಿರಿಕ್ತ ಬೇರೆ ಉಪಾಧಿ ಇಲ್ಲವಾದುದರಿಂದ, ಇಂದ್ರಚಾಪಛಾ

ಯಾದಂತೆಯೇ (ಸೂರ್ಯನ ಛಾಯೆಯೇ ಇಂದ್ರಚಾಪ) ಜೀವನಿಗೆ ಪ್ರತಿಬಿಂಬ ತ್ವಾಂಶವು ಸಂಭವಿಸುತ್ತದೆಂದು ಗುರುರಾಜರ ವಚನವನ್ನು ನೋಡದೇ ಹಿಂದಿನ ಅನೇಕರು ತಾವು ಸ್ವತಃ ತತ್ವ ತಿಳಿಯದೇ, ಗುರುಗಳಿಂದ ವಿಚಾರಿಸದೇ ಇಂದ್ರ ಚಾಪದೃಷ್ಟಾಂತ ಸೋಪಾಧಿಕವೆಂದು ಹಿಂದೆ ಅಚ್ಚಾದ ಎರಡು ಟೀಕಾದಲ್ಲಿ ದಾಸರಾಯರು, ಸೋಪಾಧಿಕಕ್ಕೆ ಅನುಪಾಧಿಕವೆಂದು ಬರೆದು ದಾಸರಿಗೆ ಅಜ್ಞತ್ವ ಕಲ್ಪಿಸಿದ ಮಹಾಪುರುಷರನ್ನು ಯಮರಾಜನು ಸ್ವೋತ್ತಮ ದ್ರೋಹಿ ಗಳನ್ನು ದಂಡಿಸದೆ ಬಿಡನೆ? ಶಾಂತಂ ಪಾಪಂ. ಈ ಬಿಂಬ ಪ್ರತಿಬಿಂಬ ಭಾವ ಲಕ್ಷಣ ಸೂತ್ರಭಾಷ್ಯಕ್ಕೆ ಟೀಕಾ ಎಲ್ಲ ಟಿಪ್ಪಣಿಕಾರರ ವಚನಗಳಂತೆ ಮತ್ತು ದಾಸರಾಯರ ವಾಕ್ಯಗಳಿಗೆ ಸಮನ್ವಯಿಸಿ, ಬಿಂಬ ಅಂದರೇನು? ಪ್ರತಿಬಿಂಬ ವೆಂದರೇನು? ಇದರ ಎಲ್ಲ ಸವಿಸ್ತರ ವಿಚಾರ ಸರ್ಗಸಾರದಲ್ಲಿ ವಿವರಿಸಿದೆ. ಮುಖ್ಯ ವಾಗಿ ಇಲ್ಲಿ ವಿಚಾರಾಂಶವೇನೆಂದರೆ, ಅಂತರಾತ್ಮನಾದ ಬಿಂಬರೂಪಿ ಹರಿಗೆ, ಜೀವನ ಸ್ವರೂಪ ಚಿದ್ದೇಹಾಕಾರದಲ್ಲಿ ತಾನೇ ಪ್ರತಿಬಿಂಬನಾಗಿ ಆತ್ಮರೂಪಿ ಹರಿಯು ಜೀವನ ಸ್ವರೂಪ ಸ್ಥಿತಿಗೆ ಆಧಾರನಾಗಿದ್ದು ಪ್ರತಿಬಿಂಬನೆನಿಸುತ್ತಾನೆ. ಕಾರಣ ಜೀವನ ಸ್ವರೂಪ ನಿತ್ಯ. ಇದೇ ಪ್ರತಿಬಿಂಬತ್ವ ಲಕ್ಷಣವೆಂದು ದಾಸ ರಾಯರು ಪೇಳಿದ ಮುಖ್ಯತತ್ವಾಂಶ.

**ಭಾವಸೂಚನ:**—ನಳಿನೇತಿ॥ ಉಪಾಧಿ ಎರಡು. ಸ್ವರೂಪಭೂತ ಬಾಹ್ಯ ಎಂತ, ಬಾಹ್ಯ ಇದ್ದಾಗ್ಗೆ ಸೋಪಾಧಿ ಪ್ರತಿಬಿಂಬಾ, ಅನ್ಯಥಾನುಪಾಧಿ ಬಾಹ್ಯೋಪಾಧಿವರ್ಜಿತಾ॥ ಈ ಉಪಾಧಿದ್ವಯದೃಷ್ಟಾಂತ ಹೇಳುತ್ತಾರೆ. **ನಳಿನೇತಿ॥ ತದುಕ್ತಂ ವಿಷ್ಣುರಹಸ್ಯೇ॥** "ಜೀವೋಪಾಧಿರ್ದ್ವಿಧಾ ಪ್ರೋಕ್ತೋ ಸ್ವರೂಪೋ ಬಾಹ್ಯ ಏವ ಚ॥ ಬಾಹ್ಯೋಪಾಧಿರ್ಲಯಂ ಯಾತಿ ಮುಕ್ತಾವನ್ಯಸ್ಯ ತು ಸ್ಥಿತಿಃ॥ ಸರ್ವೋಪಾಧಿವಿನಾಶೇ ತು ಪ್ರತಿಬಿಂಬಂ ಕಥಂ ಭವೇದಿತಿ ॥೨೭॥ ಉಪಾಧಿ ಎರಡು ವಿಧ ೧ ಬಾಹ್ಯೋಪಾಧಿ ದೇಹಾದಿಗಳು ೨ ಜೀವನ ಸ್ವರೂಪ ಉಪಾಧಿಗೆ ನಾಶವಿಲ್ಲ. ಬಾಹ್ಯೋಪಾಧಿ ದೇಹಾದಿಗಳಿಗೆ ನಾಶವುಂಟೆಂದು ಹೇಳಿದ ಮೇಲೆ, ಸ್ವರೂಪ ಉಪಾಧಿಗೆ ನಾಶವಿಲ್ಲ. ಇದ್ದಂತೆ ಇರುವದು. ಸರ್ವ ಉಪಾಧಿಗಳು ನಾಶವಾದರೆ, ಪ್ರತಿಬಿಂಬನು ಉಳಿಯುವ ಬಗೆ ಹೇಗೆ? ಜೀವನ ಸ್ವರೂಪವೆ ಇಲ್ಲದಂತಾಗುವದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಳಿನ" ಇತಿ॥ ನನು ಅಯಂ ಸೋಪಾಧಿಕ ಏವ॥ ಸೂರ್ಯ ಸ್ವರೂಪೋಪಾಧೇಃ ಸತ್ವಾತ್॥ ಇತಿ ಚೇತ್ ನ॥ ಕ್ವಚಿತ್ ರಾತ್ರಾವಪಿ ತದ್ದರ್ಶನಾತ್॥" ಇತಿ ಅಭಿನವಚಂದ್ರಿಕೋಕ್ತೇಃ॥ "ಸೋಪಾಧಿಃ ಅನುಪಾಧಿಶ್ಚ" ಇತಿ ವಚನಾತ್॥ ಸ್ಪಷ್ಟತ್ವಾತ್ ಸೋಪಾಧ್ಯನುಕ್ತಿಃ ॥ ೨೭ ॥

## ಕನ್ನಡಾರ್ಥ

ಸೂರ್ಯನಿಗೆ ಇಂದ್ರ ಧನಸ್ಸು ಪ್ರತಿಫಲಿಸುವಂತೆ ಈ ಜಗತ್ರಯವು ಪರಮಾತ್ಮನಿಗೆ ಉಪಾಧಿಯಲ್ಲ ಉಪಾಧಿಯಿಲ್ಲದೇ ಪ್ರತಿಬಿಂಬವಾಗುತ್ತದೆ ಎಂದು ಹೇಳಿರುತ್ತಾರೆ. ಪರಮಾತ್ಮನಿಗೆ ಜೀವರು ಪ್ರತಿಬಿಂಬರು. ಪರಮಾತ್ಮನು ಬಿಂಬ. ನಮ್ಮ ಮುಖ ಮುಂತಾದ ಬಿಂಬಗಳಿಗೆ ಕನ್ನಡಿಯೊಳಗೆ ಪ್ರತಿಬಿಂಬವಾಗಬೇಕಾದರೆ ಕನ್ನಡಿ ಮೊದಲಾದ ಉಪಾಧಿಗಳು ಇರಬೇಕು. ಬಿಂಬನಿಗೆ ಉಪಾಧಿ ಸಂಸ್ಪರ್ಶದಿಂದ ಪ್ರತಿಬಿಂಬವಾಗುತ್ತದೆ. ಆದುದರಿಂದ ಪರಮಾತ್ಮನು ಬಿಂಬನಾದರೆ ಜೀವನು ಪ್ರತಿಬಿಂಬನೆನಿಸಬೇಕಾದರೆ .ಮಧ್ಯದಲ್ಲಿ ಉಪಾಧಿಯು ಇರಬೇಕು. ಉಪಾಧಿ ನಾಶವಾದನಂತರ (ಕನ್ನಡಿ ಮುಂತಾದ) ನೆಳಲು ಮುಂತಾದ ಪ್ರತಿಬಿಂಬಗಳು ನಾಶಹೊಂದುವಂತೆ ಜೀವರೆಂಬ ಪ್ರತಿಬಿಂಬ ಉಪಾಧಿನಾಶದಿಂದ ನಾಶ ಹೊಂದುವರು. ಜೀವಭಾವವು ಹೋಗುವದು. ಬ್ರಹ್ಮ ಒಂದೇ ಉಳಿಯುವುದು. ಇಂಥ ಬಿಂಬ ಪ್ರತಿಬಿಂಬ ಭಾವದಿಂದ ತಾತ್ವಿಕವಾಗಿ ಜೀವ ಭಾವವೇ ಇಲ್ಲದಂತಾಗುತ್ತದೆ. ಉಪಾಧಿಯಿಂದ ಜೀವರು ಕಲ್ಪಿತರೆಂದು ಹೇಳಿದಂತಾಗುತ್ತದೆ. ಆದುದರಿಂದ ಇದು ಹೇಗೆ ಸರಿ ? ಎಂದು ಸಂಶಯವು ಬರುತ್ತದೆ. ಈ ಸಂಶಯವನ್ನು ನಿವಾರಿಸಲು ಶ್ರೀಮದಾಚಾರ್ಯರು "ಆಭಾಸ ಏವ ಚ" ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ಬಿಂಬ ಪ್ರತಿಬಿಂಬ ಭಾವವನ್ನು ಸಮರ್ಥಿಸುತ್ತ "ರೂಪಂ ರೂಪಂ ಪ್ರತಿರೂಪೋ ಬಭೂವ" ಎಂಬ ಶ್ರುತಿಯನ್ನು ಉದಾಹರಿಸಿರುತ್ತಾರೆ. ಮತ್ತು ವರಾಹಪುರಾಣ ವಚನಗಳ ಆಧಾರವನ್ನೂ ತೋರಿಸಿರುತ್ತಾರೆ.

ಪ್ರತಿಬಿಂಬಗಳಲ್ಲಿ ಎರಡು ತರಹಗಳಿರುತ್ತವೆ. ಕೆಲವು ಬಾಹ್ಯದೇಹಾದಿ ಪ್ರತಿಬಿಂಬಗಳಲ್ಲಿ ಅವಶ್ಯವಾಗಿ ಉಪಾಧಿಗಳು ಬೇಕೇ ಬೇಕಾಗುತ್ತವೆ. ಕನ್ನಡಿ ಮುಂತಾದವುಗಳಲ್ಲಿ ಆಗುವ ಪ್ರತಿಬಿಂಬಗಳು ಈ ತರಹದವು ಆಗಿರುತ್ತವೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

### ಕನ್ನಡಾರ್ಥ

ಆದರೆ ಇನ್ನೂ ಕೆಲವು ಪ್ರತಿಬಿಂಬಗಳು ಉಪಾಧಿಯಿಲ್ಲದೇನೇ (ಸ್ವರೂಪಾತಿರಿಕ್ತ ಅಂದರೆ–ಬಿಂಬ ಹಾಗೂ ಪ್ರತಿ ಬಿಂಬಗಳನ್ನು ಬಿಟ್ಟು ಬೇರೆ ಉಪಾಧಿಗಳಿಲ್ಲದೆ) ಆಗುತ್ತವೆ. ಸೂರ್ಯನಿಗೆ ಆಗುವ ಇಂದ್ರ ಧನಸ್ಸು ಈ ತರಹದ ಪ್ರತಿಬಿಂಬವು. ಇದಕ್ಕೆ ಬೇರೆ ಉಪಾಧಿಯು ಇರುವದಿಲ್ಲ. ಇದಕ್ಕೆ "ನಿರುಪಾಧಿ ಪ್ರತಿಬಿಂಬ"ವೆನ್ನುತ್ತಾರೆ. "ಜೀವನು ಪರಮಾತ್ಮನಿಗೆ ನಿರುಪಾಧಿ ಪ್ರತಿಬಿಂಬನು. ಜೀವನ ಸ್ವರೂಪವೇ ಜೀವನಿಗೆ ಉಪಾಧಿಯು. ಹಾಗೂ ತಾನೇ ಪ್ರತಿಬಿಂಬನು" ಎಂದು ಪೈಂಗಿಶ್ರುತಿಯ ಆಧಾರವನ್ನು ತೋರಿಸಿರುತ್ತಾರೆ.

ಬೇರೆ ಉಪಾಧಿಗಳಿಂದ ಆಗುವ ಪ್ರತಿಬಿಂಬಗಳಲ್ಲಿ ಮಾತ್ರ (ಸೋಪಾಧಿಕ ಪ್ರತಿಬಿಂಬಗಳಲ್ಲಿ) ಉಪಾಧಿನಾಶದಿಂದ ಪ್ರತಿಬಿಂಬ ನಾಶವಾಗುವದು. ಆದುದರಿಂದ ಜೀವನು ನಿರುಪಾಧಿಕ ಪ್ರತಿಬಿಂಬನಾದುದರಿಂದ ಉಪಾಧಿನಾಶದಿಂದ ಜೀವನಾಶವೆಂಬ ಭಯವಿಲ್ಲ. ಜೀವ ಪರಮಾತ್ಮರಿಗೆ ತಾತ್ವಿಕಭೇದವೂ, ಜೀವನಿಗೆ ಪರಮಾತ್ಮನ ವಿಭಿನ್ನಾಂಶಭಾವವೂ ಸಿದ್ಧವಾಗುತ್ತದೆ ಎಂದು ಅಂಶಾಧಿಕರಣದಲ್ಲಿ ನಿರೂಪಿಸುರುತ್ತಾರೆ.

ಈ ವಿಷಯದಲ್ಲಿ ಷಟ್ಪ್ರಶ್ನೋಪನಿಷತ್ತಿನಲ್ಲಿ ಹೇಳಿರುವ "ಛಾಯಾ" (ನೆಳಲು) ಎಂಬುದೂ ನಿರುಪಾಧಿಕ ಪ್ರತಿಬಿಂಬವೆಂದು ಹೇಳಿರುತ್ತಾರೆ. ಪುರುಷನ ದೇಹವೇ ಬಿಂಬ. ಅಲ್ಲಿ ಬೇರೆ ಯಾವುದೂ ಉಪಾಧಿಯಾಗಲು ಸಾಧ್ಯವಿಲ್ಲ. ಆದುದರಿಂದ ಪುರುಷ ದೇಹದ ಛಾಯೆಯು ನಿರುಪಾಧಿಕ ಪ್ರತಿಬಿಂಬವೆಂದು ಗೊತ್ತಾಗುತ್ತದೆ. ಇನ್ನು ಸೂರ್ಯನಿಗೆ ಇಂದ್ರಚಾಪವು (ಕಾಮನಬಿಲ್ಲು) ನಿರುಪಾಧಿಕ ಪ್ರತಿಬಿಂಬವಲ್ಲ, ಸೂರ್ಯನ ಸ್ವರೂಪವೇ ಉಪಾಧಿಯೆಂದು ಹೇಳಬಹುದು. ಆದರೆ ಸೂರ್ಯನಿಂದ ಭಿನ್ನವಾದ ಉಪಾಧಿಯು ಇಲ್ಲವೆಂದೇ ಇದಕ್ಕೆ ಉತ್ತರ.

ಪ್ರಕೃತ ವ್ಯಾಖ್ಯಾನಕಾರರು "ಸೂರ್ಯನೇ ಉಪಾಧಿಯಾದುದರಿಂದ ಇಂದ್ರಚಾಪವು ಸೋಪಾಧಿಕ ಪ್ರತಿಬಿಂಬ" ವೆಂದು ಶಂಕಿಸಿ, "ರಾತ್ರಿಯಲ್ಲಿಯೂ ಒಮ್ಮೊಮ್ಮೆ ಕಂಡು ಬರುವುದರಿಂದ ಇಂದ್ರಚಾಪಕ್ಕೆ ಸೂರ್ಯನು ಉಪಾಧಿ

ಯಾಗಲಾರನು" ಎಂದು *ಅಭಿನವ "ಚಂದ್ರಿಕೆಯಲ್ಲಿ ಹೇಳಿರುತ್ತಾರೆ" ಎಂಬುದಾಗಿ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುತ್ತಾರೆ. "ಸೋಪಾಧಿಕ ಪ್ರತಿಬಿಂಬಗಳು ಸ್ಪಷ್ಟವಿರುವುದರಿಂದ ಪ್ರತ್ಯೇಕ ದೃಷ್ಟಾಂತವನ್ನು ಹೇಳಿಲ್ಲುವ ದಿಲ್ಲ" ಎಂದು ತಿಳಿಯಬೇಕು.

**ಅವತರಣಿಕಾ:**— ಹರಿಯ ಭಕ್ತಿಯ ರಸದಲ್ಲಿ ಮನಸ್ಸು ತೊಯ್ದವಗೆ ಸಂಸಾರದಲ್ಲಿ ಇದ್ದರೂ, ದುರಿತ ರಾಶಿಗಳು ಬಾಧಿಸವು ಎಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ರಸ ವಿಶೇಷದೊಳತಿ ವಿಮಲಸಿತ ।**
**ವಸನ ತೋಯಿಸಿ ಅಗ್ನಿಯೊಳಗಿಡೆ ।**
**ಪಸರಿಸುವದು ಪ್ರಕಾಶ ನಸುಗುಂದದಲೆ ಸರ್ವತ್ರ ॥**
**ತ್ರಿಶಿರ ದೂಷಣ ವೈರಿ ಭಕ್ತಿಸು ॥**
**ರಸದಿ ತೋಯ್ದ ಮಹಾತ್ಮರನು ಬಾ ।**
**ಧಿಸವು ಭವದೊಳಗಿದ್ದರೆಯು ಸರಿ ದುರಿತರಾಶಿಗಳು ॥ ೨೮ ॥**

## ಪದ್ಯಾರ್ಥ

ರಸ ವಿಶೇಷದೊಳು = ಅಗ್ನಿಸ್ತಂಭಕವಾದ ಅಗ್ನಿಯಿಂದ ಬಾಧೆಯಾಗದೇ ಇದ್ದ ಒಂದು ಗಿಡಮೂಲಿಕೆ ತೊಪ್ಪಲರಸದಲ್ಲಿ, ವಿಮಲಸಿತ ವಸನ = ಬೆಳ್ಳಗೆ ಉಳ್ಳ ಸ್ವಚ್ಛವಾದ ಅರಿವೆಯನ್ನು ತೋಯಿಸಿ, ಈ ಶುಭ್ರ ಬಟ್ಟೆಯನ್ನು ಅಗ್ನಿ ಸಂಬಂಧವಾಗದ ರಸದಲ್ಲಿ ನೆಟ್ಟಗೆ ನೆನೆಯಿಸಿ, ಅಗ್ನಿಯೊಳಗಿಡೆ = ಅಗ್ನಿ-ಬೆಂಕಿ ಯಲ್ಲಿ ಹಾಕಲು, ನಸುಗುಂದದಲೆ ಪ್ರಕಾಶವು ಸರ್ವತ್ರ ಪಸರಿಸುವದು = ಆ ವಸ್ತ್ರವು ಸುಡದೇ ನೊಂದದೇ ಅತಿ ಸ್ವಚ್ಛವಾಗಿ ಬಿಳುಪಾಗಿರುವ ವಸ್ತ್ರಪ್ರಕಾಶವು ಅಗ್ನಿ ಜ್ವಾಲೆಯಲ್ಲಿ ಬಿಳುಪಾಗಿಯೇ ಕಾಣುವದು. ಇದರಂತೆಯೇ, ತ್ರಿಶಿರ ದೂಷಣ ವೈರಿ = ತ್ರೇತಾಯುಗದಿ ಇದ್ದ ತ್ರಿಶಿರನೆಂಬ ಒಬ್ಬ ರಕ್ಕಸ, ದೂಷಣ= ಖರನೆಂಬ ರಕ್ಕಸನಿಗೆ ಸೋದರ-ರಾವಣನ ಮಲತಾಯಿಯ ಮಗ, ಇವರಿಬ್ಬ ರಿಗೆ ವೈರಿಯಾಗಿ ಸಂಹರಿಸಿದ ಶ್ರೀರಾಮಚಂದ್ರದೇವರ, ಭಕ್ತಿ ಸುರಸದಿ ತೋಯ್ದ ಮಹಾತ್ಮರನು = ಅತಿ ವಿಮಲವಾದ ಭಕ್ತಿ ಎಂಬ ರಸದಿ ನೆನೆದು

*ಈ ವಿಷಯವನ್ನು ಪಂಡಿತರು ಸಮಾಲೋಚಿಸಬೇಕೆಂದು ಬೇಡಿಕೆ.

ಒದ್ದೆಯಾದ ಭಕ್ತಿರಸದಲ್ಲಿ ಮುಳುಗಿದ ಮಹಾತ್ಮರನು, ಮಹಾತ್ಮ, ಸಂತ ಜ್ಞಾನವಂತರನ್ನು, ಭವದೊಳಗಿದ್ದರೆಯು ಬಾಧಿಸವು = ಅಗ್ನಿಯಂತೆ ಸುಡುವ ಸಂಸಾರಾಗ್ನಿಯಲ್ಲಿ ಇದ್ದರೂ, ಸುಡದೇ ದುರಿತರಾಶಿಗಳು ಬಾಧಿಸವು, ಪಾಪ ಸಮೂಹವು ಬಾಧೆ ಮಾಡಲಾರವು.

**ದ್ರೌಪದೀಶಪತಿವಿಠಲರು:**—ತ್ರಿಶಿರದೂಷಣವೈರಿಯೆಂದರೆ ರಾಮ. ಪರಮಾತ್ಮನ ಭಕ್ತಿರಸದಿ ತೊಯಿದ ಭಗವದ್ಭಕ್ತರನ್ನು ಸಂಸಾರವೆಂಬ ಅಗ್ನಿಯು ಸುಡದು.

**ಭಾವಸೂಚನ:**—ರಸವಿಶೇಷೇತಿ । ನಸುಗುಂದದಲೆ ನೊಂದದಲೆ ॥ ೨೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ರಸ" ಇತಿ ॥ "ನಸುಗುಂದದಲೇ" ನೊಂದದೆ. ವಸ್ತ್ರಮುವಶಿಸ್ಯತೇ ॥ ರಸಃ ದಹ್ಯತೇ ॥ "ಸ ಏವ ರಸಃ ವಸ್ತ್ರಸ್ಯ ರಕ್ಷಕಃ ಯಥಾ'' ಇತ್ಯಸ್ಯ ಪ್ರಕೃತೋ ಪಯೋಗಃ ॥ ೨೮ ॥

## ಕನ್ನಡಾರ್ಥ

ಪ್ರಜ್ವಲಿಸುವ ಅಗ್ನಿಯಲ್ಲಿ ಅಗ್ನಿಭೇದಕ ರಸದಲ್ಲಿ ಎದ್ದಿದ (ತೋಯಿಸಿದ) ವಸ್ತ್ರವನ್ನು ಹಾಕಲು, ವಸ್ತ್ರವು ಸುಡದೇ ಹಾಗೆಯೇ ಉಳಿಯುವದು. ಆ ರಸವು ಸುಟ್ಟುಹೋಗುತ್ತದೆ. ಆ ರಸವೇ ವಸ್ತ್ರಕ್ಕೆ ಹೇಗೆ ರಕ್ಷಕವೋ ಹಾಗೆ ಹರಿಭಕ್ತಿರಸದಿಂದ ಆರ್ದ್ರವಾದ ಹೃದಯವುಳ್ಳವನಿಗೆ ಆ ಭಕ್ತಿರಸವೇ ರಕ್ಷಕವೆಂದು ತಿಳಿಯಬೇಕು. ॥ ೨೮ ॥

**ಅವತರಣಿಕಾ:** ಅಸ್ವತಂತ್ರಳಾದ ಶ್ರೀ ಲಕ್ಷ್ಮೀದೇವಿಯರು ದೇಶ ಕಾಲದಿಂದ ಸಮಳೆನಿಸಿ ಭಗವದಧೀನಳಾಗಿ ಸದಾ ಭಗವಂತನ ಅತಿ ಸಾಮಿಪ್ಯ ದಲ್ಲಿರುವರು. ರಮಾ ಪರಮಾತ್ಮರಿಗೂ ಭೇದವೆನ್ನುವದಕ್ಕೆ ಸಮುದ್ರದಲ್ಲಿ ನದಿಗಳಿಪ್ಪ ದೃಷ್ಟಾಂತದಿಂದ ಸೂಚಿಸುತ್ತಾರೆ.

**ವಾರಿ ನಿಧಿಯೊಳಗುಳ್ಳಖಿಳ ನದಿಗಳು ।**
**ಬೇರೆ ಬೇರೆ ನಿರಂತರದಲಿ ವಿ ।**
**ಹಾರಗೈಯುತ ಪರಮಮೋದದಲಿಪ್ಪ ತೆರದಂತೆ ॥**

**ಮೂರು ಗುಣಗಳ ಮಾನಿಯೆನಿಸುವ ।**
**ಶ್ರೀ ರಮಾರೂಪಗಳು ಹರಿಯಲಿ ।**
**ತೋರುತಿಪ್ಪವು ಸರ್ವಕಾಲದಿ ಸಮರಹಿತವೆನಿಸಿ ॥ ೨೯ ॥**

**ಪದ್ಯಾರ್ಥ:**—ವಾರಿನಿಧಿಯೊಳಗೆ=ಸಮುದ್ರದೊಳಗೆ, ಉಳ್ಳ ಅಖಿಳನದಿಗಳು=ಗಂಗಾ, ಗೋದಾ, ಕೃಷ್ಣಾ ಮುಂತಾದ ಸಮಸ್ತ ಸಮುದ್ರಗಾಮಿಯಾಗಿ ಹರಿದು ಸಮುದ್ರದೊಳಗೆ ಕೂಡಿದರೂ, ಸಮುದ್ರ ಲವಣೋದಕದಲ್ಲಿ ಕಲೆಯದೇ ಪ್ರತಿಯೊಂದು ನದಿಯೂ ಸಮುದ್ರದಲ್ಲಿ ಬೇರೆ ಬೇರೆಯಾಗಿ ಇರುವವು. ವಿಹಾರ ಗೈಯ್ಯುತ ಪರಮಮೋದದಲಿಪ್ಪತೆರದಂತೆ = ಪ್ರಥಕ್ ಪ್ರಥಕ್ ನದಿಗಳು ಸಂಚರಿಸಿ ಉಪ್ಪು ಉದಕವನ್ನು ಕೂಡದೇ ಸೀನೀರಾಗಿಯೇ ನದ್ಯಭಿಮಾನಿ ದೇವತೆಗಳು ಹರ್ಷದಿಂದ ಇರುವಂತೆಯೇ, ಮೂರು ಗುಣಗಳ ಮಾನಿಯೆನಿಸುವ = ಸತ್ವ, ರಜ, ತಮೋಗುಣಗಳಿಗೆ ಅಭಿಮಾನಿಯೆನಿಸುವ, ಶ್ರೀ ರಮಾರೂಪಗಳು = ಶ್ರೀಹರಿಯ ಅಧೀನಳಾದ ಅನಂತ ಶ್ರೀ ಲಕ್ಷ್ಮೀರೂಪಗಳು, ಹರಿಯಲಿ= ಸಮುದ್ರ ಸದೃಶ ಗಂಭೀರನೂ, ಅಪಾರನೂ, ಆಳವಾದ, ಏಕದೇಶ ದೃಷ್ಟಾಂತ, ಶ್ರೀಹರಿಯಲ್ಲಿ–ಶ್ರೀ ಪರಮಾತ್ಮನ ಅತ್ಯಂತ ಸಾಮಿಪ್ಯದಲ್ಲಿ, ಶ್ರೀಹರಿಯ ಅನಂತ ಅವತಾರಗಳಲ್ಲಿ ಅನಂತರೂಪಗಳನ್ನು ಧರಿಸಿ ಇರುವಳಲ್ಲದೇ ಶ್ರೀಹರಿಯ ಪ್ರತಿರೂಪ ವಕ್ಷಸ್ಥಳದಲ್ಲಿ, ವ್ಯಕ್ತ ಅವ್ಯಕ್ತದಿಂದ ಶ್ರೀಹರಿಯ ಸೇವಿಸುತ್ತ ಬೇರೆ ಇರುವಳು. ಶ್ರೀಹರಿಗೂ ಶ್ರೀ ರಮೆಗೂ ಸದಾ ಭೇದ. ಸಮುದ್ರರಾಜನಾದ ವರುಣನಲ್ಲಿ ಪತಿಯ ಸೇವೆ ಗಂಗಾದಿ ನದ್ಯಭಿಮಾನಿ ಪತ್ನಿಯರು ಸೇವಿಸುವರು. ಕಿಂಚಿತ್ ದೃಷ್ಟಾಂತ, ದೇಶ ಕಾಲ ಸಮಳು. ಗುಣತಃ ಅಸಮಳು.

**ದ್ರೌಪದೀಶ ಪತಿವಿಠಲರು :**—ವಾರಿ ನಿಧಿಯೊಳಗುಳ್ಳಖಿಳ ನದಿಗಳು = ಸಮುದ್ರದೊಳಗೆ ನದಿಗಳು ಹೇಗೆ ಬೇರೆ ಬೇರೆ ಇರುತ್ತವೋ, ಹಾಗೆ ಪರಮಾತ್ಮಾಖ್ಯ ಸಮುದ್ರದೊಳಗೆ ರಮಾರೂಪವೆಂಬ ನದಿಗಳು ಸಮರಹಿತವೆಂದರೆ ದೇಶ ಕಾಲತಃ ಸಮಳೇ ಹೊರ್ತು ಗುಣರೂಪತಃ ಅಸಮಳೆಂತ ಭಾವ ॥ ೨೯ ॥

**ಭಾವಸೂಚನ :**— ವಾರಿನಿಧೀತಿ ॥ ೨೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ವಾರಿನಿಧಿ " ಇತಿ ॥ ನದೀನಾಂ ಪೃಥಕ್ ರಮಣಂ " ವಾಯುಸ್ತು " ಇತಿ ಮಾನೇನ ತನ್ಮಾತ್ರವೇದ್ಯಮ್ ॥ ೨೯ ॥

## ಕನ್ನಡಾರ್ಥ

ಇಲ್ಲಿ " ನದಿಗಳು ಸಮುದ್ರರಾಜನ ಸಂಗಡ ಪ್ರತ್ಯೇಕ ಪ್ರತ್ಯೇಕವಾಗಿ ವಿಹರಿಸುತ್ತವೆ " ಎಂದು ಹೇಳಿರುತ್ತಾರೆ. " ನದಿಗಳು ಪ್ರತ್ಯೇಕವಾಗಿ ವಿಹರಿಸುವವು " ಎಂಬ ಈ ಸಂಗತಿಯು " ವಾಯುಸ್ತು " ಎಂಬ ಪುರಾಣಗಳಲ್ಲಿ ಹೇಳಲಾಗಿರುತ್ತದೆ. ಅದೃಶ್ಯವಾದ ಈ ಸಂಗತಿಯು ಅಭಿಮಾನಿ ದೇವತೆಗಳಿಗೆ ಅನ್ವಯಿಸಬಹುದು. ಇದನ್ನು ಶಾಸ್ತ್ರದಿಂದ ತಿಳಿಯಬೇಕು. ॥ ೨೯ ॥

**ಅವತರಣಿಕಾ :—** ಸೂರ್ಯನ ಉದಯವನ್ನು, ದಿವಾಂಧವಾದ ಕೆಟ್ಟ ಗೂಗೆಯು ನೋಡಲಾರದೆ ನಿಂದಿಸಿದರೆ, ಸೂರ್ಯನಿಗೇನಾದರೂ ಕಳಂಕವಾಗುವದೆ ? ಸೂರ್ಯೋದಯದಿಂದ ಸಜ್ಜನರು, ಸ್ನಾನಸಂಧ್ಯಾದಿ ಸತ್ಕರ್ಮ ಹರಿಗರ್ಪಿಸಿ ಆನಂದಪಡುವಂತೆ, ಗೂಗೆಯ ಸದೃಶರಾದ ಅಜ್ಞಾನಿಗಳು ತಿಳಿಯದೆ ನಿಂದಿಸಿದರೇನಾಗುವುದು ? ಅನಂತ ಸೂರ್ಯಕೋಟಿ ಪ್ರಕಾಶನಾದ ಶ್ರೀಹರಿಯೇ ಈ ಗ್ರಂಥಪ್ರತಿಪಾದ್ಯನಾಗಿರುವನು. ಜ್ಞಾನಿಗಳು ಈ ಕವಿತೆ ಕೇಳಿ ಆನಂದ ಪಡುವರೆಂದು ಉಪದೇಶಿಸಿದ್ದಾರೆ.

**ಕೋಕನದ ಸಖನುದಯ ಘೂಕಾ ।**
**ಲೋಕನಕೆ ಸೊಗಸದಿರೆ ಭಾಸ್ಕರ ।**
**ತಾ ಕಳಂಕನೆ ಈ ಕೃತೀಪತಿ ಜಗನ್ನಾಥನಿರೆ ॥**
**ಸ್ವೀಕರಿಸಿ ಸುಖಬಡಲರಿಯದ ವಿ ।**
**ವೇಕಿಗಳು ನಿಂದಿಸಿದರೇನಹ ।**
**ದೀಕವಿತ್ವವ ಕೇಳಿ ಸುಖಬಡದಿಹರೆ ಕೋವಿದರು ॥ ೩೦ ॥**

**ಪದ್ಯಾರ್ಥ :—** ಕೋಕನದ = ಕೆಂದಾವರೆಯ, ಕೆಂಪುಕಮಲದ, ಸಖ = ಮಿತ್ರ ಸೂರ್ಯನು ಉದಯವಾಗಲು, ಘೂಕಾಲೋಕನಕೆ = ಕೆಟ್ಟಪಕ್ಷಿ, ಹಗಲಿನಲ್ಲಿ ಕಣ್ಣುಕಾಣದ ಗೂಗೆಗೆ, ಸೊಗಸದಿರೆ = ಶೋಭಿಸದೇ ಪ್ರಕಾಶ ಕಾಣಸದೆ, ಸೂರ್ಯನನ್ನು ನಿಂದಾಮಾಡಿದರೆ, ಭಾಸ್ಕರ ತಾ ಕಳಂಕನೇ =

ಪ್ರಕಾಶಮಾನನಾದ ಸೂರ್ಯನು, ತಾನು ದೋಷ (ಕಪ್ಪು) ಉಳ್ಳವನಾಗುವನೆ? ಸರ್ವಥಾ ಸೂರ್ಯನಲ್ಲಿ ಕಪ್ಪುಕಳಂಕವಿಲ್ಲ. ಸುಪ್ರಕಾಶನು. ಅದರಂತೆಯೇ, **ಈ ಕೃತೀಪತಿ** ಜಗನ್ನಾಥನಿರೆ=ಈ ಹರಿಕಥಾಮೃತಸಾರವೆಂಬ ಸದ್ಗ್ರಂಥ ಪತಿ ಒಡೆಯ, ಪ್ರತಿಪಾದ್ಯ, ಕೃತೀಪತಿ (ಪುನಃ ಆವರ್ತನ) ವೇದಾಭಿಮಾನಿ ಕೃತೀ ದೇವಿಯ ಪತಿ ಪ್ರದ್ಯುಮ್ನನಾದ ಹರಿಯೇ ಅನಂತಕೋಟಿ ಸೂರ್ಯಪ್ರಕಾಶ ಮಾನನಾಗಿ ಬಿಂಬರೂಪಿ ಜಗನ್ನಾಥ= ಜಗತ್ತಿಗೆ ಸ್ವಾಮಿಯಾದ ಹರಿಯ ಮಹಿಮೆಯನ್ನು, ಸ್ವೀಕರಿಸಿ = ಆದರ ಪ್ರೀತಿಯಿಂದ ಗ್ರಹಣಮಾಡದೇ ತಿಳಿ ಯದೇ, ಈ ಕವಿತ್ವ= ಈ ಛಂಧೋಬದ್ಧ ಹರಿಗುಣಗಳನ್ನು ಪೊಗಳುವ ಮಂಗಳ ಕವಿತಾ ರೂಪವಾದ ಹರಿಕಥಾಮೃತಸಾರವನ್ನು, ಅವಿವೇಕಿಗಳು = ದುಷ್ಟರು ವಿಚಾರಶೂನ್ಯರು, ಅಜ್ಞಾನಿಗಳು, ನಿಂದಿಸಿದರೇನಹದು = ಇದು ಕನ್ನಡ ಭಾಷೆ. ಇದರಲ್ಲಿ ಏನಿದೆ? ಎಂದು ನಿಂದಾಮಾಡಿದರೆ ಏನಾಗುವುದು? ಏನೂ ಆಗುವುದಿಲ್ಲ. (ಸೂರ್ಯನನ್ನು ಗೂಗೆ ನಿಂದಾಮಾಡಿದಂತೆ) ಈ ಕವಿತ್ವವ ಕೇಳಿ ಸುಖಬಡದಿಹರೆ ಕೋವಿದರು = ಜ್ಞಾನಿಗಳು ಕವಿತೆ ಕೇಳಿ ಆನಂದಪಡದಿರುವರೇ? ಏಕಂದರೆ ಭಗವಂತನ ಚರಿತಾಮೃತಕಥಾಸಾರವಿದು.

**ದ್ರೌಪದೀಶಪತಿ ವಿಠಲರು** :—ಕೋಕನದಸಖನುದಯ.

**ಭಾವಸೂಚನ** :—ಕೋಕನದೇತಿ ಪದ್ಮ|| ಘೂಕೇತಿ|| ಉಲೂಕೋ ಘೂಕದೇವೇಂದ್ರಾವಿತಿ ನಾನಾರ್ಥಮಂಜರ್ಯಾಮ್ || ೩೦ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕೋಕನದ" ಇತಿ || "ಕೋಕನದ ಸಖ" ಸೂರ್ಯಃ|| ಪದ್ಮ ಮಿತ್ರತ್ವಾತ್ || "ಘೂಕ" ಗೂಗೆ || "ಸೊಗಸಿದರೆ" ತನ್ನೇತ್ರಯೋಃ ಆಭಾಸೇಪಿ || "ಇತಿ" ಇರಲು || ೩೦ ||

## ಕನ್ನಡಾರ್ಥ

ಕೋಕನದವೆಂದರೆ ಕಮಲ, ಅದಕ್ಕೆ ಸಖನೆಂದರೆ ಸೂರ್ಯನು; ಸೂರ್ಯನು ಕಮಲ ಮಿತ್ರನೆಂಬುದು ಪ್ರಸಿದ್ಧವಿರುತ್ತದೆ. "ಘೂಕ" ಗೂಗೆ || "ಸೊಗಸಿದರೆ" ಗೂಗೆಯ ಕಣ್ಣುಗಳಿಗೆ ಸೂರ್ಯನ ಉದಯವು ಭಾಸವಾಗದಿದ್ದರೆ" ಎಂದರ್ಥ.

ಸೂರ್ಯೋದಯವನ್ನು ತಾನು ನೋಡದೆ ನಿಂದಿಸುವ ಗೂಗೆಯಂತೆ ನಮ್ಮ ಉಪಾಸ್ಯಮೂರುತಿ (ದಾಸರ) ಜಗನ್ನಾಥರೇ ಇಲ್ಲಿ ನಿಂತು ಮಾಡಿಸಿದ ಈ ಹರಿಕಥಾಮೃತಸಾರಕವನಗಳನ್ನು ಮರುಳಮತಿಗಳು ಓದಿ ಸುಖಬಡದಿದ್ದರೆ ಈ ಗ್ರಂಥಕ್ಕೆ ಕಲಂಕವಿಲ್ಲ; ಕೋವಿದರು ವೇದಾಂತ ಪರಿನಿಷ್ಠಿತರು ಇದನ್ನು ಕೇಳಿ ಓದಿ ಸಂತೋಷಪಡದೆ ಇರಲಾರರು. ಎಂದು ತಾತ್ಪರ್ಯ ॥ ೩೦ ॥

**ಅವತರಣಿಕಾ:**—ಅಸದುಪಾಸಕರೂ, ಅಜ್ಞಾನಿಗಳೂ ಆದ ದೈತ್ಯಾದಿಗಳಿಗೆ ವಿಷಯದಲ್ಲೇ ಕಾತುರತೆ ಪುಟ್ಟಿಸಿ ಮೋಹಪಡಿಸುತ್ತಾನೆಂದು, ಚೇತನಾಚೇತನ ವಿಲಕ್ಷಣ ಈ ಪದ್ಯದಿಂದ ಜೀವನಪ್ರಕ್ರಿಯಾಸಂಧಿ ಉಪಸಂಹರಿಸುತ್ತಾರೆ.

**ಚೇತನಾಚೇತನಗಳಲಿ ಗುರು।**
**ಮಾತರಿಶ್ವಾಂತರ್ಗತ ಜಗ।**
**ನ್ನಾಥವಿಠಲ ನಿರಂತರದಿ ವ್ಯಾಪಿಸಿ ತಿಳಿಸಿ ಕೊಳ್ಳದಲೆ॥**
**ಕಾತರವ ಪುಟ್ಟಿಸಿ ವಿಷಯದಲಿ।**
**ಯಾತುಧಾನರ ಮೋಹಿಸುವ ನಿ।**
**ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ॥ ೩೧ ॥**

[ಅಂತುಸಂಧಿ ೧೪ಕ್ಕೆ ಪದ ೪೪೩ಕ್ಕೆ ಜೀವನಪ್ರಕ್ರಿಯಾಸಂಧಿ ಸಮಾಪ್ತ ಮಂಗಳಮಾಹ. ಶ್ರೀಗುರುಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು]

**ಪದ್ಯಾರ್ಥ:**—ಚೇತನ = ಬಹ್ಮಾದಿಸಕಲ ತೃಣಾಂತ ಜೀವರಲ್ಲಿ ಅಚೇತನ ಮೂಲ ಪ್ರಕೃತಿಯಾರಂಭಿಸಿ ಸಕಲಜಡಗಳಲ್ಲಿ, ಗುರುಮಾತರಿಶ್ವಾಂತರ್ಗತ = ಗುರು=ಮಹಾ ಅಜ್ಞಾನಾಂಧಕಾರವನ್ನು ಕಳೆಯುವ, ಸರ್ವಜ್ಞರ ಮೂಲಗುರು ಮಾತರಿಶ್ವಾಂತರ್ಗತ = ಮಾತರಿ ಶ್ವದತಿ ಮಾತರಿಶ್ವ= ಅಂತರಿಕ್ಷದಲ್ಲಿ ಸಂಚರಿಸುವವಾಯು, ಮಾತರಿಶ್ವವಾಯು ಅಂತರ್ಗತನಾದ ಜಗನ್ನಾಥ ವಿಠಲ = ವಿಠ್ಠಲ = ಅಜ್ಞಾನಿಗಳನ್ನು ಜ್ಞಾನಮಾರ್ಗಕ್ಕೆ ಪ್ರೇರಿಸಿ, ಜ್ಞಾನ ಕೊಡುವ ವಿಠಲರೂಪಿ ಹರಿಯೇ, ಜಗತ್ತಿಗೆ ಸ್ವಾಮಿಯಾಗಿ ನಿಯಮನ ಮಾಡುವವನು. ನಿರಂತರದಿ=ನಿತ್ಯದಲ್ಲಿ, ಚೇತನಾಚೇತನರಲ್ಲಿ ವಾಯ್ವಧಿಷ್ಠಾನನಾಗಿ ವ್ಯಾಪಿಸಿದುದನ್ನು, ಯಾತುಧಾನರಿಗೆ=ಯಾತೂನಿ ರಕ್ಷಾಂಸಿ ದಧಾತೀತಿ ಯಾತುಧಾನಃ = ರಾಕ್ಷಸರುಗಳ ಪೋಷಣ ಮಾಡುವವರು ಯಾತುಧಾನರು

ರಾಕ್ಷಸಶ್ರೇಷ್ಠರಿಗೆ, ತನ್ನ ಶಕ್ತಿ ತಿಳಿಸಿಕೊಡದೇ, ಮೋಹಿಸುವ = ಮಂಕುಬುದ್ಧಿ ಕೊಟ್ಟು, ವಿಷಯದಲಿ ಕಾತುರವ ಪುಟ್ಟಿಸುವ = ಅಸಂಬದ್ಧವಾದ ಸಂಸಾರ ಕೆಟ್ಟ ವಿಷಯಾದಿಗಳಲ್ಲಿ ಆತುರವನ್ನು ಪುಟ್ಟಿಸಿ, ಮೋಹಗೊಳಿಸುವನು. ನಿರ್ಭೀತ = ಪರರಿಂದ ಶ್ರೀಹರಿಗೆ ಭೀತಿ = ಅಂಜಿಕೆ ಇಲ್ಲ. ನಿತ್ಯಾನಂದಮಯ= ನಿತ್ಯ ಜ್ಞಾನಾನಂದ ಶರೀರ ಉಳ್ಳವನು. ನಿರ್ದೋಷನು = ಪಾರತಂತ್ರ್ಯಾದಿ ದೋಷವಿಲ್ಲದವನು. ನಿರವದ್ಯ = ಗಂಭೀರವಾಣಿಯುಳ್ಳವನೆಂದು ಶ್ರೀಹರಿಯ ಅನಂತಮಹಿಮಾ ವರ್ಣನ ಮಾಡಿರುವರು. ಇತಿ ಜೀವಪ್ರಕ್ರಿಯಾಸಂಧಿ ಪದ್ಯಾರ್ಥ ದಾಸರು ಬರೆಸಿದಂತೆ ಬರೆದದು. ಶ್ರೀ ಮಧ್ವೇಶಾರ್ಪಣಮಸ್ತು.

**ದ್ರೌಪದೀಶಪತಿ ವಿಠಲರು** :—ಚೇತನಾಚೇತನಗಳಲಿ || ಭಗವದ್ಭಕ್ತರಿಗೆ ವಿಷಯ ಸುಖದಲ್ಲಿ ರತಿ ಹುಟ್ಟಸದೆ, ದೈತ್ಯರನ ಮೋಹಿಸುವ ಜಗನ್ನಾಥ ವಿಠಲ|| ಸಂಧಿಸಮಾಪ್ತ ಮಧ್ವೇಶಾರ್ಪಣಮಸ್ತು ||

ಸಂಧಿ ೧೫—ಪದ್ಯ-೧೧-೧೨-೧೩ ಮಾತ್ರಕ್ಕೆ ಇವರ ಟೀಕಾ ೧ ಪತ್ರ ದೊರೆತಿದೆ. ಮುಂದಿನ ಗ್ರಂಥ ಸಿಕ್ಕಿಲ್ಲ. ದಾಸರ ಚಿತ್ತ ||

**ಭಾವಸೂಚನ** :—ಚೇತನೇತಿ|| ಕಾತರ = ಆತುರತ್ವ ||೩೧|| ಓಮಿತಿ ಶ್ರೀಮಜ್ಜಗನ್ನಾಥ ದಾಸಾರ್ಯಕೃತ ಹರಿಕಥಾಮೃತಸಾರ ವ್ಯಾಖ್ಯಾನೇ ಭಾವ ಸೂಚನೇ ಪಿತೃಗಣ ಸಂಧಿಃ ಸಮಾಪ್ತಃ || ೪ ||

|| ಶ್ರೀ ಮಧ್ವೇಶಾರ್ಪಣಮಸ್ತು ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—"ಚೇತನ" ಇತಿ || "ಕಾತರ" = ಆತುರ | "ನಿರನಿಷ್ಟಃ ನಿರವದ್ಯಃ" ಇತಿ ಶ್ರುತೇಃ || ೩೧ ||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ
ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ
ಸರ್ವಜೀವನಕಲ್ಪ ಸಂಧಿಃ ಸಮಾಪ್ತಃ
|| ಶ್ರೀ ಮಧ್ವೇಶಾರ್ಪಿತಮಸ್ತು ||



ಇತಿ ಶ್ರೀ ಲಕ್ಷ್ಮೀನೃಸಿಂಹಾನುಗೃಹೀತ ಕಾಯಾಧವಾನುಜ ಸಹ್ಲಾದಾವತಾರ ಭೂತ ರಂಗವಲ್ಲೀ ದಾಸಾಪರ ಪರ್ಯಾಯ ಜಗನ್ನಾಥದಾಸ ವಿರಚಿತ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ಶ್ರೀಮತ್ಸವಿಾರ ಪದಾರ್ಹಲಾತವ್ಯಾಖ್ಯ ಋಜುದೇವತಾತ್ಮಕ ಹಯವದನೋಪಾಸಕ ರಜತ ಪೀಠಗ ಕೃಷ್ಣಾರ್ಚಕ ವಿರಿಂಚಿ ಮಾತ್ರೋಪಾಸ್ಯ ತ್ರೈವಿಕ್ರಮಾದಿ ಗುಣೋಪಪನ್ನಮೂರ್ತಿ ಪ್ರತಿಷ್ಠಾಪನಚುಂಚು ಸರ್ವಜ್ಞಾಚಾರ್ಯಪ್ರದತ್ತ ಪರಂಪರಾ ಪ್ರಾಪ್ತಸ್ವಮಠೀಯ ಭೂವರಾಹಾರ್ಚನತತ್ಪರ ಸೋದೇಶ ಶ್ರೀಮದ್ವಾದಿರಾಜಾನುಗ್ರಹ ಪಾತ್ರೀಭೂತ ಜಂಬುಖಂಡೀ ಶ್ರೀನಿವಾಸಾರ್ಯ ದುಗ್ಧಾಬ್ಧಿ ಸಂಭೂತ ಶ್ರೀಮತ್ಕಾಲೀಯಮರ್ದನ ಸಂಸೇವಕ ಕೃಷ್ಣಾಪುರಗ ವಿದ್ಯಾಧೀಶತೀರ್ಥ ವಿನೇಯ ವಾದಿರಾಜ ವಿರಚಿತಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಸರ್ವಜೀವನಕಲ್ಪ ಸಂಧಿಃ ಸಮಾಪ್ತಃ || ೧೪ ||

## ಕನ್ನಡಾರ್ಥ

ಮುಖ್ಯ ಪ್ರಾಣಾಂತರ್ಗತನಾಗಿ ಶ್ರೀಹರಿಯು ಚೇತನಾಚೇತನ ಸಕಲ ವಸ್ತುಗಳಲ್ಲಿ ವ್ಯಾಪಿಸಿ, ತನ್ನ ಇರವನ್ನು ಅರಿಯಗೊಡದೆ, ವಿಷಯಗಳಲ್ಲಿ ಆತುರತೆಯನ್ನು ಹುಟ್ಟಿಸಿ, ದೈತ್ಯರನ್ನು ತಾಮಸ ವ್ಯಾಪಾರಗಳಿಂದ ಮೋಹಿಸುವನು. "ನಿರ್ದೋಷ–ನಿರವದ್ಯ–ನಿರ್ಭೀತ" ಈ ವಿಶೇಷಣಗಳಿಂದ "ನಿರವಿಷ್ಟೋ ನಿರವದ್ಯಃ" ಎಂಬ ಶ್ರುತಿಯ ಅರ್ಥವನ್ನೇ ನಿರೂಪಿಸಿರುತ್ತಾರೆ. ||೩೧||

ಇಲ್ಲಿಗೆ ಶ್ರೀ ಹರಿಕಥಾಮೃತಸಾರ ಟೀಕಾ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ "೧೪ನೆಯ ಸರ್ವಜೀವರ ಕಲ್ಪಕ ಸಂಧಿಯು" ಅನುವಾದವು ಮುಗಿದುದು.

|| ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ||

## ೧೫ನೆಯ ಶ್ವಾಸ ಸಂಧಿಯ ಪೂರ್ವ ಪೀಠಿಕೆ

**(೧) ಶ್ವಾಸಗಳ ನಿರೂಪಣೆ:**—ಶ್ವಾಸಸಂಖ್ಯಾವಾಚಕ ಮತ್ತು ಸಂಖ್ಯಾ ಎಣಿಕೆ, (೨) ಶ್ವಾಸವೇ ಹಂಸನಾಮಕ ಹರಿಯ ಗುಣೋತ್ಕರ್ಷ ಹೇಗೆ? (೩) ಹಂಸಮಂತ್ರ ಅಧಿಕಾರಿ ಯಾರು? (೪) ಪ್ರತಿನಿತ್ಯ ಜಪಸಂಕಲ್ಪ ಮಾಡುವ ಬಗೆ ಹೇಗೆ? (೫) ಹಂಸಮಂತ್ರಾರ್ಥವೇನು? ಇತ್ಯಾದಿಗಳ ವಿಚಾರಾಂಶ ಅತ್ಯವಶ್ಯವಾಗಿ ಇಲ್ಲಿ ಮಾಡುವದು ಸಜ್ಜನರ ಸೇವೆಯಾಗಿದೆ. ಶ್ವಾಸ ಮಂತ್ರ ಜಪ ವಿಚಾರ ಹಿಂದೆ ೧ನೇ ಸಂಧಿ ೪ನೇ ಪದ್ಯದಲ್ಲಿ ಶ್ರೀ ತಾಮ್ರಪರ್ಣಿ ದ್ರೌಪದೀಶಪತಿ ವಿಠಲರು ಮುಂತಾದ ಪ್ರಭೃತಿಗಳ ಟಿಪ್ಪಣಿಯಲ್ಲಿ ಸಂಕ್ಷಿಪ್ತವಾಗಿ ಸೂಚಿಸಿದೆ. ಧಾರ್ಢ್ಯಾರ್ಥವಾಗಿ ಇಲ್ಲಿ ಹೆಚ್ಚಿನ ವಿಚಾರ ಮಾಡುತ್ತದೆ. ೧. ಪ್ರಾಣದೇವರು ತ್ರಿವಿಧ ಜೀವರಲ್ಲಿ ಶ್ವಾಸ ಸಂಖ್ಯಾ ಎಣಿಸಿದರೇನು? ಉಸುಬಿನ ಕಣಗಳು ಎಣಿಸದಂತೆ ನಿರರ್ಥಕವು ಎಂದು ಕೆಲವರ ಊಹ. ಆದರೆ ಇದಕ್ಕೆ ಸವಿನಯ ಪ್ರಾರ್ಥನೆ. ಜೀವನಯುಕ್ತವಾದ ಮಾತ್ರವೂ ಜೀವಿಸಲಿಕ್ಕೆ, ಉಸಿರಾಡಿಸುವದು. ಮುಖ್ಯಜೀವನ ಉಪಾಯ. ಶ್ವಾಸ ಉಚ್ಛ್ವಾಸ ವಿನಾ ಜೀವಿಸಲು ಶಕ್ಯವಿಲ್ಲ ಕಾರಣ ಶ್ವಾಸಗಳ ಬಗೆ ತಿಳಿಯುವದು ಮುಖ್ಯ. ಜೀವರು ತಾವೇ ಶ್ವಾಸ ಬಿಡಲು ಸಮರ್ಥರೇ? ಇಲ್ಲ. ಹಂಸನಾಮಕ ಹರಿಯ ಆಜ್ಞೆಯಿಂದ ಶ್ರೀ ವಾಯು ದೇವರು ಋಜುಪುಂಗವರು ಶ್ವಾಸಗಳ ಮಾಡಿ ಜೀವರುಗಳಿಂದ ಮಾಡಿಸಲು ಹರಿ ಇತ್ತ ಶಕ್ತಿಯಿಂದ ಬ್ರಹ್ಮ ಕಲ್ಪಾಂತದವರೆಗೆ ಸಕಲ ಪ್ರಾಣಿಗಳಲ್ಲಿ ಮಾಡಿ ಸಲು ಸಮರ್ಥರು. ಶ್ವಾಸವು ಕಾಲ ಕ್ಲೃಪ್ತತೆಯನ್ನು ತೋರುವದು. ಇದು ಕಾಲನಾಮಕ ಹರಿಯು ಜೀವನ ಪರಿಮಿತಿ ಆಯುರ್ದಾನ ಮಾಡಲು, ಶ್ವಾಸ ರೂಪ ಸಂಖ್ಯಾ ಶಬ್ದವಾಚ್ಯನಾಗಿಯೂ ಇರುವದರಿಂದ, ಸಕಲ ದೇಶ ಕಾಲದಲ್ಲಿ ಅಪರಿಚ್ಛಿನ್ನ ವ್ಯಾಪ್ತನಾದುದರಿಂದ ದೇಶ, ಕಾಲ, ಶಬ್ದವಾಚ್ಯನಾಗಿ ಸಜ್ಜನರಿಂದ ಉಪಾಸನೆಗೊಳ್ಳುತ್ತಾನೆ. ಕಾರಣ ಶ್ವಾಸಗಳ ಸಂಖ್ಯೆಯನ್ನು ತಿಳಿದು ಭಗವ ದುಪಾಸನೆ ಸಾಧನಮಾಡುವ ಸಜ್ಜೀವರು ಶ್ವಾಸ ಜಪಬಲ್ಲವರಾದುದರಿಂದ ರಾತ್ರಿಕಾಲದಲ್ಲಿಯೂ ಸಹ ತಮ್ಮ ಮೂಗಿನ ಶ್ವಾಸೋಚ್ಛ್ವಾಸಗಳಿಂದ ಅರಿತು ಇಷ್ಟು (ಟೈಮು) ಹೊತ್ತಾಗಿದೆ. ಎಂದು ಕಾಲಸೂಚನೆಯನ್ನು ಮಾಡುವ ಜ್ಞಾನಿ ಗಳ ಪದರೇಣು ಸೇವಿಸಿದ ಅನುಭವವೂ ಈ ಪಾಮರನನ್ನು ಪ್ರೇರಿಸಿ ಕಾಲ

ನಾಮಕನು ಸೂಚಿಸುತ್ತಾನೆ. ಹೀಗೆ ಅನುಭವದಿಂದ ಜ್ಞಾನಿಗಳು ಕಾಲ ನಾಮಕ ಹರಿಯು ಧ್ಯಾನ ಸಂಖ್ಯೆಯಿಂದ ಅರಿಯುತ್ತಾರೆ. ಕಾರಣ ಸಂಖ್ಯಾ ವಾಚಕವು ಮುಖ್ಯವಾದದು.

ಇಷ್ಟೇ ಅಲ್ಲ ಅನೇಕ ವಿಚಾರ ಉಂಟು. ಗ್ರಂಥ ಬಾಹುಲ್ಯ ಭಯ.

**(೨) ಇನ್ನು ಶ್ವಾಸಗಳೇ ಹಂಸಮಂತ್ರಗಳ್ಹೇಗೆ ಆಗುವವು?** ಎಂಬ ಬಾಲಶಂಕಾಕ್ಕೆ ಸರ್ವಮಾತುಗಳೆಲ್ಲ ಮಂತ್ರವು. ಶ್ವಾಸ ಉಚ್ಛ್ವಾಸ ಇರದಿದ್ದರೆ, ಮಾತುಗಳಾಡುವ ಬಗೆ ಹೇಗೆ? ಅಜಾದಿ ೫೧ ವರಣಗಳು, ಸರ್ವಶಬ್ದಗಳು, ಸರ್ವ ಘೋಷಗಳು, ಗರ್ಗರಾದಿ ಶಬ್ದವಾದ್ಯಗಳು, ಸರ್ವಶ್ವಾಸಗಳು (ಚಾಮರ ಗಳಾಗಿ) ಮುಖ್ಯವಾಗಿ ಭಗವಂತನ ಪ್ರತಿಪಾದ್ಯಗಳೇ ಆಗಿರುತ್ತವೆ. ಆದುದ ರಿಂದ ಈ ಶ್ವಾಸಗಳೆಲ್ಲ ಮಂತ್ರವರ್ಣಗಳಾಗಿ ಭಗವದುಪಾಸನೆ ಮಾಡಲು ಮುಖ್ಯವಾದವು, ಹರಿಯ ಗುಣೋತ್ಕರ್ಷವಾದವು. ಇನ್ನು ಶ್ವಾಸವೇ ಹಂಸ ಮಂತ್ರವಾಗಲು ಕಾರಣವೇನು? ಅಂದರೆ, ಸರ್ವಜೀವರಲ್ಲಿ ಆಗುವ ಶ್ವಾಸ-ಉಚ್ಛ್ವಾಸಗಳು ಯಾವ ಶಬ್ದದಿಂದ ಹೊರಗೆ ಹೊರಡುತ್ತವೆ. ಉಸಿರು ಒಳಗೆ ಎಳೆದುಕೊಂಬುವಾಗ ಆಗುವ ಶಬ್ದವೇನು? ಉಸಿರು ಹೊರಗೆ ಬಿಡುವ, ಒಳಗೆ ಎಳೆಯುವ ಸಂಧಿಕಾಲದಲ್ಲಿ ಆಗುವ ಶಬ್ದ ಹೇಗೆಂಬ ಸೂಕ್ಷ್ಮ ವಿಚಾರ ವನ್ನು ಜ್ಞಾನಿಗಳಾದ ದಾಸರಾಯರೇ ಆಜ್ಞೆ ಕೊಡಿಸಿದ್ದಾರೆ.

೧. ಒಳಗಿನಿಂದ ಹೊರಗೆ ಉಸಿರು ಬಿಡುವಾಗ "**ಹಂಸ**" ಎಂದು ಶಬ್ದ ಹೊರಡುತ್ತದೆ. ಈ ಶ್ವಾಸವು ಹನ್ನೆರಡು ಅಂಗುಲಿ ನ್ಯಾಸದಿಂದ ಹೆಚ್ಚಿಗೆ ಹೋಗ ಕೂಡದು. ೨. ಹೊರಗಿನ ಶ್ವಾಸವನ್ನು ಒಳಗೆ ತೆಗೆದುಕೊಳ್ಳುವಾಗ **ಸೋಹಂ** ಎಂದು ಉಚ್ಚಾರವಾಗುತ್ತದೆ. ಪುನಃ ಈ ಶ್ವಾಸವನ್ನು ಹೊರಗೆ ಬಿಡುವಾಗ "**ಸ್ವಾಹಾ**" ಎಂದು ಉಚ್ಚಾರವಾಗುತ್ತದೆ. ಹೀಗೆ ಶ್ವಾಸ-ಉಚ್ಛ್ವಾಸ-ನಿಶ್ವಾಸ ಗಳಲ್ಲಿ "ಹಂಸಃ ಸೋಹಂ ಸ್ವಾಹಾ" ಎಂದು ಶಬ್ದ ಹೊರಡುವದೇ ಹಂಸ ಮಂತ್ರ ವರಣಗಳು ಭಗತ್ಪ್ರತಿಪಾದ್ಯವಾಗಿರುತ್ತವೆ.

(೧) "ಹಂಸಃ ಸೋಹಂ ಸ್ವಾಹಾ" ಎಂದು ಸತ್ವಜೀವರಲ್ಲಿ "**ಭೂ**" ಪೂರ್ಣನೆಂತಲೂ, (೨) ಸೋಹಂ **ಸ್ವಾಹಾ**-ತಾಮಸ ಜೀವರಲ್ಲಿ **ಅಭೂ**-ಅಪೂರ್ಣನೆಂತಲೂ, **ಭೂರಭೂ**-ಹಂಸನು ಪೂರ್ಣನೂ ಅಪೂರ್ಣನೂ ಎಂದು

ಸುಖಿಯೂ ದುಃಖಿಯೂ ಎಂದು ಉಪಾಸನೆಮಾಡಿ ಪ್ರಾಣದೇವರು ತ್ರಿವಿಧ ಗತಿ ಮುಕ್ತಿ, ಅಂಧತಮ, ಸುಖದುಃಖ ಮಿಶ್ರ ಸಾಂತಾನಿಕ ಲೋಕವನ್ನು ಕೊಡುವನು. ಹೀಗೆ ೭೨ ಮಹಾಮಂತ್ರಗಳಲ್ಲಿ ಹಂಸಮಂತ್ರವು ಮುಖ್ಯ ವಾದುದು.

(೩) **ಈ ಹಂಸಮಂತ್ರ ಜಪಾಧಿಕಾರಿಗಳು** ಮುಖ್ಯವಾಗಿ ಬ್ರಹ್ಮ ವಾಯುಗಳು. ಇದನ್ನು ತಂತ್ರಸಾರದಲ್ಲಿ ಸರ್ವಜ್ಞರು ವರ್ಣಿಸಿದಂತೆ ಛಲಾರಿ ಆಚಾರ್ಯರು "ಅನೇನ ಓಂ ಹಂಸಃ ಸೋಽಹಂ ಸ್ವಾಹಾ ಇತಿ ಸಪ್ತಾಕ್ಷರ ಹಂಸಮಂತ್ರ ಉದ್ಧೃತೋ ಭವತಿ। ಅಯಂ ಸಪ್ತಾಕ್ಷರ ಹಂಸಮಂತ್ರಃ ನ ಸರ್ವಾಧಿಕಾರಿಕ ಇತ್ಯಾಹ। ಬ್ರಹ್ಮಾದ್ಯೇಷ್ವಿತಿ ಚತುರ್ಮುಖಾದಿ ದೇವೇ ಷ್ವಿತ್ಯರ್ಥಃ। ತೇನ ಚತುರ್ಥೇಽ ಸಪ್ತಾಕ್ಷರೇ ಹಂಸಮಂತ್ರೇ ಬ್ರಹ್ಮಾದಿದೇವಾ ಏವಾಧಿಕಾರಿಣೋ ಜಪಾದೌ ನಾನ್ಯೇ॥" ಬ್ರಹ್ಮಾದಿ ದೇವತೆಗಳೇ ಈ ಓಂಕಾರ ಸಹಿತವಾದ ಸಪ್ತಾಕ್ಷರಕ್ಕೆ ಅಧಿಕಾರಿಗಳು. ಮನುಷ್ಯಮಾತ್ರಕ್ಕೆ ಶ್ರೀ ವಾಯು ದೇವರು ಹಂಸಮಂತ್ರ ಮಾಡಿ ಹರಿಗೆ ಅರ್ಪಿಸುವರೆಂಬ ಸಂಕಲ್ಪ ಮಾತ್ರ ಮಾಡಿ ಸಮರ್ಪಿಸಬೇಕು.

## ಹಂಸಮಂತ್ರ ಸಂಕಲ್ಪ ಕ್ರಮ

ಏವಂ ದಿವಸಕೃತ ಶ್ವಾಸರೂಪ ಹಂಸಮಂತ್ರ ಜಪೋಪಸಂಹಾರಃ॥ ಸ ಯಥಾ॥ ಓಂ ಹಂಸಃ ಸೋಽಹಂ ಸ್ವಾಹಾ ಓಂ॥ ಇತಿ ಮಂತ್ರೇಣ ಪ್ರಾಣಾ ಯಾಮಃ॥ (೩೬-೨೪-೧೨)

**ತತಃ ಷಡಂಗನ್ಯಾಸಃ**॥ ಓಂ ಹಂಸಃ ಹೃದಯಾಯ ನಮಃ। ಓಂ ಸೋಽಹಂ ಶಿರಸೇ ಸ್ವಾಹಾ। ಓಂ ಸ್ವಾಹಾ ಶಿಖಾಯೈ ವೌಷಟ್, ಓಂ ಹಂಸಃ ಕವಚಾಯ ಹುಮ್। ಓಂ ಸೋಽಹಂ ನೇತ್ರಾಭ್ಯಾಂ ವಷಟ್। ಓಂ ಸ್ವಾಹಾ ಅಸ್ತ್ರಾಯ ಫಟ್, ಇತಿ ದಿಗ್ಬಂಧಃ॥

**ಋಷಿಃ ಛಂದಸ್ಸು ದೇವತಾ**॥ ಹಂಸ ಷಡಕ್ಷರ ಮಂತ್ರಸ್ಯ ಬ್ರಹ್ಮಾ ಋಷಿಃ ಶಿರಸಿ। ಗಾಯತ್ರೀ ಛಂದಃ ಮುಖೇ। ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಹಂಸರೂಪಿ ಶ್ರೀ ಲಕ್ಷ್ಮೀನಾರಾಯಣೋ ದೇವತಾ ಹೃದಯೇ। ಶ್ವಾಸರೂಪ ಜಪೋಪಸಂಹಾರೇ ವಿನಿಯೋಗಃ॥

## ಅಥ ಧ್ಯಾನಮ್

"ಧ್ಯಾಯೇದ್ರವೀಂದುಃ ಕರಮಿಂದು ಸಹಸ್ರ ಲಕ್ಷಕಾಂತಿಂ ಪ್ರಿಯಾಸಹಿತ ಮಾಸ್ಥಿತಮಿಂದುಬಿಂಬೇ। ಶಂಖಾರಿದೋರ್ದ್ವಯಮುದರ್ಕ ಮಹೇಂದು ಬಿಂಬಾತ್ ಸಂಚಿತ್ಯಮಾನಮಮೃತೇನ ರಮಾಧಿನಾಥಮ್ ॥

ಈ ಧ್ಯಾನ ಮಂತ್ರಾರ್ಥ, ನಾಮ, ರೂಪ, ಗುಣ ಕ್ರಿಯೋತ್ಕರ್ಷಣ ಪೂರ್ವಕವಾಗಿ ಛಲಾರಿ ಆಚಾರ್ಯರ ಟಿಪ್ಪಣಿ ॥ **ಧ್ಯಾನಪ್ರಕಾರಮಾಹ** ಧ್ಯಾಯೇದಿತಿ ॥ **ರವೀಂದೂ**-ಸೂರ್ಯಚಂದ್ರೌ ಊರ್ಧ್ವಕರಯೋಃ ಯಸ್ಯ ತಮ್ । **ಶಂಖಾರೀ**-ಶಂಖಚಕ್ರೇ ಅಧೋ ದೋರ್ದ್ವಯೋಃ ಯಸ್ಯ ತಂ। **ಸಹಸ್ರ ಲಕ್ಷೇತಿ** ಅಧಿಕಾರ್ಯಪೇಕ್ಷಯಾ । ಸಹಸ್ರೇತಿ ಲಕ್ಷಣ ವಿಶಿಷ್ಟಂ ವಾ । **ಇಂದು ಬಿಂಬೇ ಆಸ್ಥಿತಂ** ಚಂದ್ರಮಂಡಲಮಧ್ಯೇ ವಿದ್ಯಮಾನಂ **ಉದರ್ಕ ಮಹೇಂದು ಬಿಂಬಾತ್**-ಉದ್ರಿಕ್ತ ಮಹಾ ಚಂದ್ರಮಂಡಲ ದೇಶಾತ್ । **ನಿಃಸೃತೇನ** ಅಮೃತೇನ ಸಂಸಿಚ್ಯಮಾನಂ **ಪ್ರಿಯಯಾ**-ವರಟಾನಾಮಕ ಲಕ್ಷ್ಮ್ಯಾ ಸಹಿತಂ ರಮಾಧಿನಾಥಂ। ಧ್ಯಾಯೇದಿತ್ಯನ್ವಯಃ॥ (ಈ ಮಂತ್ರಾರ್ಥವು ಸುಗಮವಾಗಿದೆ.)

ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಹಂಸರೂಪಿ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ "ಪೂರ್ವೇದ್ಯುಸ್ಸೂರ್ಯೋದಯಮಾರಭ್ಯ ಅದ್ಯ ಸೂರ್ಯೋದಯಪ್ರರ್ಯಂತಂ ಮದ್ದೇಹಸ್ಥಿತ ಮುಖ್ಯಪ್ರಾಣಕೃತೇನ "ಷಟ್‌ಶತಾಧಿಕೈಕವಿಂಶತ್ ಸಹಸ್ರ ಸಂಖ್ಯಾಕ ಶ್ವಾಸರೂಪ ಹಂಸಮಂತ್ರ ಜಪೇನ ಭಗವಾನ್ ಮುಖ್ಯ ಪ್ರಾಣಪತಿ ಹಂಸರೂಪಿ ಲಕ್ಷ್ಮೀನಾರಾಯಣಃ ಪ್ರೀಯತಾಂ ಇತಿ ಸಮರ್ಪ್ಯ । ಮುಖ್ಯ ಪ್ರಾಣೇನ ಮದ್ದೇಹೇ ಯೋಽಯಂ ಮಂತ್ರಜಪಸ್ಸದಾ। ಅನುಗ್ರಹಾಯ ಮೇ ವಿಷ್ಣು ಪ್ರೀತಯೇ ಕ್ರಿಯತೇ ಹಿ ಸಃ ॥ ಏಕ ವಿಂಶತಿ ಸಹಸ್ರಾತ್ಮಾ ಷಟ್ ಶತ ಮಹರ್ನಿಶಮ್। ತತ್ ಸರ್ವಂ ವಿಷ್ಣುಪೂಜಾಸ್ತು ಪ್ರಾಣಯಾಮಪತಿಃ ಸಃ॥ ಇತಿ ಪಠೇತ್॥

ಪುನಃ ಪೂರ್ವವತ್ ಗುರು ನಮಸ್ಕಾರಂ, ಪ್ರಾಣಾಯಾಮನ್ಯಾಸಂ ಕೃತ್ವಾ ಧ್ಯಾನ ಶ್ಲೋಕಂ ಪಠೇತ್ ॥ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ನಾರಾಯಣ ಪ್ರೇರಣಯಾ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಮ್,

**ಪುನಃ ಸಂಕಲ್ಪ :**–"ಅದ್ಯ ಸೂರ್ಯೋದಯಮಾರಭ್ಯ ಶ್ವಃ ಸೂರ್ಯೋದಯಪರ್ಯಂತಂ ಮುಖ್ಯಪ್ರಾಣೋ ಮದ್ದೇಹೇ ಸ್ಥಿತ್ವಾ, ಷಟ್ ಶತಾಧಿಕೈಕ ವಿಂಶತಿ ಸಹಸ್ರ ಸಂಖ್ಯಾಕ (೨೧೬೦೦) ಶ್ವಾಸರೂಪ ಹಂಸಮಂತ್ರಂ ಕರೋತಿ (ತತ್ಪ್ರೇರಿತೋऽಹಂ ಕರೋಮಿ ಛಾಪಾಪುಸ್ತಕ ಪಾಠಾಂತರ) ಇತಿ ಸಂಕಲ್ಪೈಯತ್ಪ್ರಾಮಾಣ್ಯಾದ್ಯದಪ್ರಾಮಾಣ್ಯಾಚ್ಯ ತಾಭ್ಯಾಂ ಪರಮಪುರುಷಂ ಉಪಾಸ್ಯೇ ಮುಖ್ಯ ಯೋಗೇನ ಸ ಹಂಸಃ ಪ್ರೀಯತಾಂ ಹರಿರಿತಿ ಪಠೇತ್ ॥

ಈ ಸಂಕಲ್ಪದ ಸಾರಾಂಶವೇನೆಂದರೆ ಮುಖ್ಯ ಪ್ರಾಣದೇವರು ನನ್ನ ದೇಹದೊಳಗಿದ್ದು "ಹಂಸಃ ಸೋಽಹಂ ಸ್ವಾಹಾ" ಎಂಬ ಮಂತ್ರ ಜಪಗಳನ್ನು ನನ್ನಮೇಲೆ ಅನುಗ್ರಹಗೋಸುಗವೂ, ಶ್ರೀ ವಿಷ್ಣು ಪ್ರೀತ್ಯರ್ಥವಾಗಿಯೂ ಅದ್ಯ-ಇಂದಿನ ಸೂರ್ಯೋದಯ ಆರಂಭಮಾಡಿ ನಾಳಿನ ಸೂರ್ಯೋದಯ ಪರಿಯಂತರವೂ ೨೧೬೦೦ ಹಂಸಮಂತ್ರಗಳ ಜಪಮಾಡಿ ಹರಿಗೆ ಅರ್ಪಿಸುವನೆಂದು ಚಿಂತನೆ ಮಾಡುವದು.

ಪೂರ್ವದ ಸಂಪ್ರದಾಯಜ್ಞರು ಇಷ್ಟೇ ಸಂಕಲ್ಪ ಮಾತ್ರ ಮಾಡಿ ಹರಿಗೆ ಅರ್ಪಿಸುವ ಕ್ರಮ ಇದೆ. ಇತ್ತೀಚಿನ ಹಲವು ಸಂಪ್ರದಾಯಜ್ಞರು, ಪ್ರಾಣದೇವರು ಹಂಸಮಂತ್ರ ತಾವು ಜಪಿಸಿ, ನನ್ನಿಂದ ಮಾಡಿಸಿದರೆ, ಮಾಡುವೆನೆಂದು ಹೇಳುತ್ತಾ ೧೦೮ ಹಂಸಮಂತ್ರ ಮಾಡಿ, ಅರ್ಘ್ಯ ಕೊಡುವ ಸಂಪ್ರದಾಯವೂ ಉಂಟು.

**(೫) ಹಂಸ ಮಂತ್ರಾರ್ಥವೇನೆಂದರೆ :**— "ಸಂಸಾರಂ ಹಂತೀತಿ ಹಂಸಃ= ಸಂಸಾರವನ್ನು ನಾಶಮಾಡುತ್ತಾನೆ ಕಾರಣ ಹಂಸನೆಂದೂ, ದುಃಖಾದಿ ದೋಷಹೀನನಾದುದರಿಂದ ಹಂಸಃ, ಸಾರಭೂತನಾದುದರಿಂದ ಹಂಸಃ "ನಿತ್ಯಂ ಹೀನೋ ಅಖಿಳೈರ್ದೋಷೈಃ ಸಾರಭೂತೋ ಯತೋ ಹರಿಃ ॥ ಹಂಸ ಇತ್ಯುಚ್ಯತೇ ತಸ್ಮಾದಿತ್ಯಾದಿ ವಚನಾತ್—(ಎಂದು ಶ್ರೀ ವಿದ್ಯಾಧಿರಾಜೀಯ ವಿ. ಸ. ನಾಮ) ಶ್ರೀ ಶ್ರೀ ವಿದ್ಯಾಧಿರಾಜರ ಶಿಷ್ಯರು ಶ್ರೀ ನರಸಿಂಹ ಭಿಕ್ಷುಗಳು ಸಕಲ ಮಂತ್ರಾರ್ಥಗಳನ್ನು ಬರೆದಿರುವರು, ಹಂಸಮಂತ್ರಾರ್ಥ:—

"ಅನಂತ ದೇಶ ಕಾಲ ಗುಣತಃ ಪರಿಚ್ಛೇದ ಶೂನ್ಯಃ ಕ ಶಬ್ದವಾಚ್ಯೇನ ಸರ್ವಜ್ಞೇಷ್ಟಕಸ್ವರೂಪತ್ವೇನ, ಷಶಬ್ದವಾಚ್ಯೇನ ಜ್ಞಾನೇನ ಚ ॥ ಓಂ ಓಂ ತಃ ಪೂರ್ಣಃ ಅತಃ ಸರ್ವ ಬಾಹ್ಯಾಭ್ಯಂತರೋಪದ್ರವ ಕ್ಷಯಕಾರಿತ್ವಾದ್ವಾ ಕ್ಷೇಂ।

ಹಿನಸ್ತಿ ತ್ಯಜತಿ ದೋಷಾನಿತಿ **ಹಂ**। ಗುಣಸಾರತ್ವಾತ್ಸಃ ಹಂಸಃ।' ಸ ಉಕ್ತತ್ರಯ ವಿಶೇಷಣ ವಿಶಿಷ್ಟಃ ಸರ್ವಹೇಯತ್ವಾದ್ವಾ ಅಸ್ಮದಂತರ್ಯಾಮಿತ್ವಾದ್ವಾ ಅಹಂ ಸೋಹಂ ಸುಖರೂಪತ್ವಾತ್ ಸ್ವಾಹಾ॥

ಅನಂತ ದೇಶ ಕಾಲಗಳಲ್ಲಿ ಗುಣದಿಂದ ಪೂರ್ಣನಾಗಿ, ನಾಶರಹಿತನಾಗಿ, ಸರ್ವಚೇಷ್ಟಕ ಸ್ವರೂಪನೂ, ಜ್ಞಾನಪೂರ್ಣನೂ (ಜ್ಞಾನಪ್ರದನೂ) ಸಕಲ ಬಹಿರಂತರಂಗ ಉಪದ್ರವಾದಿಗಳನ್ನು ನಾಶಮಾಡುವನೂ, ಸಕಲ ದೋಷಗಳನ್ನು ದೂರಗೈಸುವವನೂ ಎನ್ನುವದಕ್ಕೆ ಹಂ ಎಂತಲೂ, ಗುಣಸಾರನಾದುದರಿಂದ ತ್ಸಃ ಹಂಸನೆಂತಲೂ, ಮೇಲೆ ವಿವರಿಸಿ ಮೂರು ವಿಶೇಷಣಗಳಿಂದ ವಿಶಿಷ್ಟನಾದುದರಿಂದ, ಸರ್ವಾಹೇಯತ್ವಾತ್ ಎನ್ನ ಅಂತರ್ಯಾಮಿಯಾದುದರಿಂದ **ಅಹಂ** ಎಂತಲೂ, ಸೋಹಂ ಸುಖರೂಪನಾದುದರಿಂದಲೂ, ಸ್ವಾಹಾ.

ಹೀಗೆ ಹಂಸಮಂತ್ರವನ್ನು ಅರ್ಥಪೂರ್ತಿ ತಿಳಿದು ನಿತ್ಯಸಂಕಲ್ಪದೊಡನೆ ಶ್ರೀ ಪ್ರಾಣಾಂತರ್ಯಾಮಿ ಹರಿಗೆ ಅರ್ಪಿಸಬೇಕು.

ಪ್ರಾಣಾಯಾಮದ್ವಾರಾ ಶ್ವಾಸನಿರೋಧದಿಂದ ಆಯುವೃದ್ಧಿಯೂ ಆಗುತ್ತದೆ. ಸ್ತ್ರೀ ಸಂಗಾದಿಯಲ್ಲೂ, ಶ್ರಮಸಾಧ್ಯ ಕೆಲಸಗಳಲ್ಲಿಯೂ, ಓಡುವದರಲ್ಲಿಯೂ, ಕೋಪಾವಿಷ್ಟನಾಗಿರುವಾಗ್ಗೆ ಶ್ವಾಸಗಳು ಭರದಿಂದ ಸಾಗಿ, ನೂರು ವರುಷಕ್ಕೆ ಆಗುವ ಶ್ವಾಸಗಳು ಹೆಚ್ಚು ಹೊರಬಿದ್ದು ಆಯುಸ್ಸು ಕ್ಷೀಣವಾಗುತ್ತದೆ. ಕಾರಣ ಪ್ರಾಣಯಾಮ ದ್ವಾರಾ ವಾಯು ನಿರೋಧ ಮಾಡಿ, ಹಿಂದೆ ಕೆಲ ಋಷಿಗಳು ಸಹಸ್ರಾರು ವರ್ಷ ಮನ್ವಂತರ ಆಯುರ್ಮಾನರಾಗಿ ಜೀವಿಸಿದ ಅನೇಕ ಚರಿತ್ರೆಯುಂಟು. ಕಾರಣ ಪ್ರಾಣಾಯಾಮ ಮುಖ್ಯವಾಗಿ ಮಾಡುವದು.

## (೧೫) ಹದಿನೈದನೇ ಶ್ವಾಸ ಸಂಧಿಯ ಸಾರ

ಕಾಲಾತೀತನೂ ಕಾಲಬಾಧಾರಹಿತನೂ ಕಾಲರೂಪಿ ಆದ ಪರಮಾತ್ಮನ ಉಪಾಸನೆ ಹೇಗೆ ಮಾಡುವದೆಂಬ ವಿಚಾರವನ್ನು ಹೇಳುತ್ತಾರೆ. ಹಿಂದೆ, ಪ್ರಕೃತಿ, ವೇದ, ಜೀವದಲ್ಲಿಪ್ಪ ಬಿಂಬನ ಉಪಾಸನೆ ಹೇಳಿ, ಇಲ್ಲಿ ದೇಶ ಕಾಲದಿಂದ ಪ್ರಕೃತಿ ಬದ್ಧನಾದ ಜೀವನು ಕಾಲ ಪಾಶದಿಂದ ಮುಕ್ತನಾಗುವನು ಹೇಗೆ? "ಕಾಲಾಹ್ವಯ ಕಾಲಣುಕಾಲಗ, ಕಾಲಾತೀತ ತ್ರಿಕಾಲಜ್ಞ ॥

ಕಾಲಪ್ರವರ್ತಕ ಕಾಲನಿವರ್ತಕ, ಕಾಲೋತ್ಪಾದಕ ಕಾಲಮೂರ್ತೇ ತವ ದಾಸೋಹಂ॥ ಎಂದು ಶ್ರೀ ಜಗನ್ನಾಥದಾಸರ ಉಕ್ತಿ" ಈ ಶ್ವಾಸ, ಸಂಧಿಯಲ್ಲಿ ವಿವರಿಸಿದ್ದಾರೆ. ಹಿಂದೆ ದಾಸರಾಯರು, ಪ್ರಕೃತಿ, ಪ್ರಣವ, ಕಾಲ ಈ ಮೂರು ಸಹಿತವಾಗಿ ಪಂಚಭೇದವೆಂದು ಹೇಳಿದ್ದಾರೆ. ಪ್ರಕೃತಿ, ಪ್ರಣವ, ಜೀವರಲ್ಲಿ ಬಿಂಬನಾದ ಹರಿಯ ಧ್ಯಾನೋಪಾಸನಾಕ್ರಮ ೧೧-೧೨-೧೩-೧೪ನೇ ಸಂಧಿಯಲ್ಲಿ ಸವಿಸ್ತರವಾಗಿ ಹೇಳಿ ಮಹಾ ಕಾಲಾರಂಭಿಸಿ, ಸೂಕ್ಷ್ಮಕಾಲ ಲವ ತ್ರುಟಿ, ಕಾಲ ವಿವರವನ್ನು ತಿಳಿಯಲು, ಕಾಲವಿವರಣೆ, ಮಹಾಕಾಲವು, ಅನಾದ್ಯನಂತ ಕಾಲದಲ್ಲಿಯೂ ಶಶ್ವದೇಕಪ್ರಕಾರವಾಗಿ, ನಿತ್ಯವಾದ ಅವ್ಯಾಕೃತಾಕಾಶ ದೇಶದಲ್ಲಿ, ಹೂವಿನಲ್ಲಿ ಸುಗಂಧ ವ್ಯಾಪಿಸಿದಂತೆ ಇರುವದು: ಕಾಲ ಶಬ್ದವಾಚ್ಯನಾದ ಹರಿಯೇ ನಿಯಾಮಕನೂ, ಬಿಂಬನೂ, ಆಗಿರುವನು.

ಇಂಥ ಮಹಾಕಾಲವು ಲಿಂಗ ಉಪಚಯ, ಯಾವಾಗ್ಯೆ ಆಯಿತೋ ಆಗ್ಗೆ ಆಸೂಕ್ಷ್ಮಕಾಲವೇ ಲವತೃಟ್ಯಾದಿ ಕಾಲಾರಂಭವಾಗಿ, ಕಾಲೋತ್ಪಾದಕನಾದ ಹರಿಯು, ತಾನು ಕಾಲ ದೇಶಭಾಧೆಗಳಿಂದ ದೂರನಾದರೂ, ಪ್ರಕೃತಿಮನೆಮಾಡಿಕೊಂಡು ಜೀವರನ್ನ ಬದ್ಧರನ್ನಾಗಿ ಮಾಡಿರುವನು. ಈ ಕಾಲನಾಮಕ ಹರಿಯು ಅಣುಕಾಲಗಳಲ್ಲಿದ್ದು ಕಾಲಾತೀತನಾಗಿ, ಭೂತ ಭವಿಷ್ಯದ್ವರ್ತಮಾನ ಕಾಲಗಳನ್ನು ಬಲ್ಲ ತ್ರಿಕಾಲಜ್ಞನು. ಕಾಲವನ್ನು ಪ್ರವರ್ತಕ ಚೋದನ ಮಾಡುವವನು. ಮತ್ತು ಉತ್ಪಾದನಮಾಡುವನು. ಕಾಲನಿವರ್ತಕನೂ, ಕಾಲಮೂರ್ತಿಯೂ ಆಗಿಪ್ಪ ಕಾಲನಾಮ ಹರಿಯನ್ನೂ ಕಾಲವನ್ನೂ ತಿಳಿದು ಭಜಿಸಿದರೆ, ಕಾಲಬಾಧೆಯಿಂದ ದೂರಗೈಸುವನು. ಜೀವನು ಅನಾದಿನಿತ್ಯನು. ಅಸೃಜ್ಯಾವಸ್ಥೆಯಲ್ಲಿ ಸಹ ಶ್ವಾಸಕಾರ್ಯ ನಡೆದಿದ್ದರೂ, ಅದು ಹರಿಯಾಧೀನವಾಗಿಯೂ, ನಿಷ್ಕ್ರಿಯ ಚೇತನಾ ಭಾಸರೆಂದು ಕರೆಸುವರು. ಸೃಷ್ಟಿಗೆ ತರಲು ಕಾಲನಾಮಕ ಹರಿ ಲಿಂಗ ಸಂಬಂಧಗೈಸೆ, ಸಾಧನಕಾಲ ಅಣ್ವಾದಿಕಾಲ ಪ್ರಾರಂಭ. ಇದೇ ಸೃಷ್ಟ್ಯಾರಂಭ ಕಾಲ. ಉತ್ಪತ್ತಿ, ಸೂಕ್ಷ್ಮ ಪರಮಾಣು ಲವ ತೃಟಿ ಕಾಲದಲ್ಲಿಯೂ ಸಹ, ಜೀವನದಲ್ಲಿ ಹಂಸನಾಮಕ ಪರಮಾತ್ಮನು ಶ್ರೀ ಭಾರತೀರಮಣ ಮುಖ್ಯ ಪ್ರಾಣ ದೇವರದ್ವಾರಾ ತ್ರಿವಿಧರಲ್ಲಿ ಅವರ ಸ್ವರೂಪಯೋಗ್ಯತೆಯಂತೆ ಹಂಸ ಮಂತ್ರ ಜಪಮಾಡಿಸುವನು. ಶ್ವಾಸಕಾರ್ಯವೇನು? ಪ್ರಾಣ ದೇವರು ಮಾಡುತ್ತಾರೋ? ಈ ವಿವರವನ್ನು ತಿಳಿದು, ಉಪಾಸನೆ ಮಾಡುವದೇಯೇ

ಕಾಲ ಪಾಶದಿಂದ ಬಿಡುಗಡೆ. ಶ್ವಾಸ ಕಾರ್ಯದಿಂದಲೆ, ಕಾಲದ ಅಳತೆ ಅದರ ಸ್ವರೂಪ ತಿಳಿಯುವದು.

ಭಾರತೀಶನು ಒಂದು ಘಳಿಗಿ ೬೦ ಪಳಕ್ಕೆ ೩೬೦ ಶ್ವಾಸ ಜಪಗಳನ್ನು ಜೀವನಿಂದ ಮಾಡಿಸುವನು. ೧ ಪಳಕ್ಕೆ ಆರು ಶ್ವಾಸ, "ಹಂಸಃ ಸೋಽಹಂ ಸ್ವಾಹಾ" ಇದೇ ಮಂತ್ರ (೬) ಒಂದು ಪಳದಲ್ಲಿ ಆಗುತ್ತ ಹರಿ,= ತ್ಯಕ್ತ ದೋಷನಾದ ಸಃ = ಸಾರ ಭೂತನಾದ ಹರಿಗೆ, ಪ್ರತಿಬಿಂಬ, ದಾಸನೆಂಬೋ ಶ್ವಾಸ ಆಹುತಿ ಸ್ವಾಹಾ ಎಂದು ಹಾಕುತ್ತಾನೆ. ಮುಕ್ತಿ ಯೋಗ್ಯರಲ್ಲಿ ಹಂಸ ನಾಮಕನು ಈ ಪ್ರಕಾರದಿಂದ ಶ್ವಾಸೋಚ್ಛ್ವಾಸ ಮಾಡುತ್ತಾನೆ. ತಮೋ ಯೋಗ್ಯರಲ್ಲಿ ಇದರ ವಿಪರೀತ ಆ ನಿರ್ದುಷ್ಟನಾದ, ಹರಿಯ ಜ್ಞಾನವಿಲ್ಲದೇ ಸೋಽಹಂ ಸ್ವಾಹಾ, ಆ ಹಂಸನೇ ಸೋಽಹಂ ನಾನು ಎಂಬ ಭಾವನೆ. ಮಿಶ್ರರಲ್ಲಿ ಹಂಸನಿಂದೊಡಗೂಡಿದ ನಾನೆಂಬೋ, ಹಂಸ ನಾಮಕ ಹರಿಯ ಸರ್ವ ಕರ್ತೃತ್ವ ಬಿಂಬತ್ವ ಜ್ಞಾನ ರಹಿತನಾಗಿ ತ್ರಿವಿಧರಲ್ಲಿ ಅವರ ಯೋಗ್ಯತಾನುಸಾರ ಭಾರತೀಶನು ಸರ್ವ ಜೀವರೊಳಿದ್ದು ಜೇಸರದೆ ಮಾಡುತ್ತ ಸ್ವರ್ಗ ನರಕ ಭೂ ಸೇರಿಸುವನು.

ಜೀವನ ಯೋಗ್ಯತೆ ಸ್ವಭಾವ ಸತ್ವರಜೋತಮ ಜೀವರ್ಯಾರೆಂಬುವದು ತಿಳಿಯಲು ನಿದ್ರಾಕಾಲದಲ್ಲಿ ಆಜೀವನಲ್ಲಿ ಶ್ವಾಸ ಕಾರ್ಯ ನಡೆದಾಗ ಶ್ವಾಸ, ಹಂ ಉಚ್ಛ್ವಾಸ, ಸ, ಎಂದೂ ಪ್ರಾಣಾಯಾಮ ರೇಚಕ, ಪೂರಕ ಕ್ರಮವನ್ನರಿತು ಮಾಡುವರಿಗೇವೇ ಜೀವರು. ಇವನು ಸತ್ವಗುಣದವ, ಇವನು ರಜೋಗುಣದವ ಇವ ತಮೋಗುಣದವನೆಂಬ ಜ್ಞಾನವೂ ಆಗುವದು. ಇಂಥಾ ಹಂಸ ಮಂತ್ರ ವನ್ನು ಪ್ರಣಾಯಾಮ ಪೂರ್ವಕ ಯೋಗ್ಯತಾನುಸಾರ ಜಪಿಸುವವರಿಗೆ ಶ್ವಾಸ ನಿರ್ಬಂಧಿಸಿದ ಪ್ರಾಣಾಯಾಮ ಇಷ್ಟು ಮಾತ್ರ ಉಳ್ಳದ್ದು ಆ ಕಾಲಜ್ಞಾನ ಕಾಲನಿಯಾಮಕ ಹರಿಯ ಜ್ಞಾನವಾಗಿ, ತ್ರಿಕಾಲ ದರ್ಶಿತ್ವ ಹೊಂದುತ್ತಾನೆ. ಅತ್ಯಧಿಕವಾದ ಸಾಧನ.

ಇಂತು ಘಳಿಗೆ, ತಾಸು, ಯಾಮ, ದ್ವಿತೀಯಯಾಮ, ತೃತೀಯ ಯಾಮ, ೧೨ ತಾಸು ರಾತ್ರಿ ಹಗಲು ಕೂಡಿದ ದಿವಸ, ಪಕ್ಷ, ಮಾಸ ಋತು, ಅಯನ, ವರುಷ, ೧೦೦ ವರ್ಷ, ಮಾನವ ಆಯುಷ ಪರಿ ಮಿತಿಯಲ್ಲಿ ಎಷ್ಟೆಷ್ಟು ರೂಪಗಳಿಂದ, ಪ್ರಾಣಾಂತರ್ಯಾಮಿಯಾಗಿಪ್ಪ

ಹಂಸನಾಮಕ ಹರಿಯ ಕಾರಣ ಕಾರ್ಯ ರೂಪಗಳನ್ನು ಧ್ಯಾನಿಸಿ ಉಪಾಸನೆಗೈಯಲು ಶ್ವಾಸ ಸಂಖ್ಯಾಕ್ರಮಗಳನ್ನು ಹೇಳಿದರಲ್ಲದೆ ನಿರರ್ಥಕವಾಗಿ ಉಸುಬಿನ ಕಣಗಳನ್ನು ಎಣಿಸಿದಂತಲ್ಲ. ಶ್ವಾಸ, ಶ್ವಾಸಮಂತ್ರ ಜಪಕ್ರಮ ಅವುಗಳ ಕಾಲಾನುಸಾರ ಜೀವನ ಗುಣಧರ್ಮ, ಪ್ರವರ್ತಕರಾದ ಭಾರತೀಶನಾದಪ್ರಾಣ, ಹಂಸನಾದ ಹರಿಯ ಉಪಾಸನೆಯ ಕ್ರಮವಿದು. ಹೀಗೆ ಉಪಾಸನೆ ಮಾಡಲು ಕಾಲದೇಶಗಳ ಬಾಧೆಯಿಂದ ಬಿಡುಗಡೆ ಎಂದರೆ ಆಯಾಕಾಲ ದೇಶಗಳಲ್ಲಿ ಜನನ ಮರಣಾದ್ಯ ಜನ್ಮ ತೆತ್ತುವದರಿಂದ ಬಿಡುಗಡೆ. ಇದೇ ಮುಖ್ಯ ಕಾಲೋಪಾಸನೆ. ಶ್ವಾಸ ಮಂತ್ರ ಕ್ರಮಸಂಖ್ಯಾ.

| | | |
|---|---|---|
| ೧ | ಘಳಿಗಿಗೆ ಶ್ವಾಸ ಮಂತ್ರ | ೩೬೦ |
| ೧ | ತಾಸಿಗೆ (೨॥ ಘಳಿಗೆ) | ೯೦೦ |
| ೧ | ಯಾಮ (೩) ತಾಸಿಗೆ | ೨,೭೦೦ |
| ೨ | ಯಾಮ (೬) ತಾಸಿಗೆ | ೫,೪೦೦ |
| ೩ | ಯಾಮ (೯) ತಾಸಿಗೆ | ೮,೧೦೦ |
| ೪ | ಯಾಮ (೧೨) ತಾಸಿಗೆ | ೧೦,೮೦೦ |
| ೧ | ದಿವಸ ೨೪ ತಾಸಿಗೆ | ೨೧,೬೦೦ |
| ೧೫ | ದಿವಸದ ೧ ಪಕ್ಷಕ್ಕೆ | ೩,೨೪,೦೦೦ |
| ೨ | ಪಕ್ಷವಾದ (೧) ಮಾಸಕೆ | ೬,೪೮,೦೦೦ |
| ೨ | ತಿಂಗಳಾದ (೧) ಋತುವಿಗೆ | ೧೨,೯೬,೦೦೦ |
| ೩ | ಋತುವಾದ (೧) ಅಯನಕ್ಕೆ | ೩೮,೮೮,೦೦೦ |
| ೨ | ಅಯನ = ೧ ವರ್ಷಕ್ಕೆ | ೭೭,೭೬,೦೦೦ |

ಒಂದು ವರುಷಕ್ಕೆ ಇಷ್ಟು ಶ್ವಾಸಜಪಗಳು, ಗುರುವರ್ಯ, ಗುರುಗಳಲ್ಲಿ ಶ್ರೇಷ್ಠರಾದ ದ್ವಾತ್ರಿಂಶಲ್ಲಕ್ಷಣೋಪೇತರಾದ ಶ್ರೀ ವಾಯುದೇವರು ಈ ಹಂಸ ಮಂತ್ರವನ್ನು ತಾವು ಮಾಡಿಸುತ್ತಾರೆಂದು ಯಾರು ಸಜ್ಜನರು ತಿಳಿಯುವರೋ ಅವರ ದುರಿತಗಳನ್ನು ಪರಿಹರಿಸುವರು. ಸುರವಿರೋಧಿಗಳಾದ ದೈತ್ಯರ ಸ್ವಭಾವ ತಿಳಿದವರಾದ ವಾಯು ದೇವರು, ಆ ದೈತ್ಯರಲ್ಲಿ ನೆಲಸಿದ್ದು, ಅವರ ದೈತ್ಯ ಸ್ವಭಾವ ಗುಣದಂತೆ ಸೋಹಂ ಉಪಾಸನೆ

ಅವರಂತೆ ಮಾಡಿಸಿ ನಿರಯವೀವರು. ವಾಯುದೇವರಿಗೆ ದೋಷವೆತ್ತ ಣದಯ್ಯಾ, ಇಂಥ ಹಂಸೋಪಾಸನೆ ಶ್ವಾಸ ಮಾಡಿಸುವ ಕಾರ್ಯ ವಾಯುದೇವರ ವ್ಯತಿರಿಕ್ತವಾಗಿ ಇನ್ನಾರಿಗೂ ಅಧಿಕಾರವಿಲ್ಲ. ಪರಮಾತ್ಮನಿಗೆ ಮುಖ್ಯ ಪ್ರತಿಬಿಂಬರು. ಜಗತ್ತಿಗೆ ದ್ವಿತೀಯ ಈಶ್ವರರು. ಪ್ರಳಯದಲ್ಲೂ ಕೂಡ ಅಜ್ಞಾನಾದಿ ದೋಷಗಳಿಲ್ಲ. ಅಮೃತನೆಂದು ಕರೆಸುವ ವಾಯುದೇವರು, (ಅನಿಲ ದೇವನು.) ಸರ್ವ ಜೀವರೊಳಿದ್ದು ಹೀಗೆ ಹಂಸೋಪಾಸನೆಯ ಮಾಡುತ್ತಿರುವ ಕ್ರಮ. " ಶ್ವಾಸ ಬಿಡುವ ಶಕ್ತಿ ಲೇಶಿಲ್ಲೆಂಬುದೆ " ಇಂಥ ಜ್ಞಾನವಿಲ್ಲದೇ ಈ ವಾಯುದೇವರ ಶ್ವಾಸ ಜಪ, ಮಹಾಕಾರ್ಯ ತಿಳಿಯದೇ, ಚಿಂತನೆಯ ಮಾಡದೇ ಕಂಡ ನೀರಿನಲ್ಲಿ ಮುಳುಗಿ ಮನೆಯಲ್ಲಿ ಕೃಷ್ಣಾಜಿನಾದ್ಯಾಸನದಿ ಕುಳಿತು, ಬೇಸರಿಯದಲೇ ಜಪ ಮಣಿಗಳನ್ನು ಡಂಭಾಚಾರದಿಂದ ತಿರುವಿ ಎಣಿಸಿದರೆ ಫಲವಿಲ್ಲ.

ದೇಹಕ್ಕೆ ಉಪಚಯವಾದ, ಅನ್ನ, ಉದಕ, ಘೃತ ತಥಭಿಮಾನಿಗಳಾರು ? ಶ್ವಾಸೋಚ್ಛ್ವಾಸಕ್ಕೆ ಕಾರಣರಾರು ? ಅವರು ಯಾರ ಅಧೀನ? ಯಾರು ಮುಂದೆ ಶ್ವಾಸ ಜಪ ಅರ್ಪಿಸುವದು ಯಾರಿಗೆ? ಅದರಿಂದ ಕಾರ್ಯವೇನು ? ಇತ್ಯಾದಿ ವಿಷಯಗಳನ್ನು ಹೇಳಲು, ಛಾಂದೋಗ್ಯ ಉಪನಿಷತ್ ದಹರ ವಿದ್ಯಾದಂತೆ, ಶ್ರೀ ವಿಜಯರಾಯರ ಸುಳಾದಿ ಅರ್ಥ. " ಕೇಳುವದುಂಡನ್ನ ಮೂರು ಭಾಗವಾಗಿ :—

೧ ಅನ್ನ = ಪೃಥ್ವಿ, ಅಭಿಮಾನಿ, ಮಹಾದೇವರು ಈ ಸ್ಥೂಲಾನ್ನದಿಂದ ಪುರೀಷ ಮಲ

,, ಮಧ್ಯದಿಂದ = ಮಾಂಸ

,, ಸೂಕ್ಷ್ಮಭಾಗ = ಮನಸ್ಸಿಗೆ ಉಪಾದಾನ ಕಾರಣ

೨ ಉದಕ, = ಪ್ರಾಣ = (ವಾಯು)

,, ಸ್ಥೂಲ ಭಾಗ = ಮೂತ್ರ

,, ಮಧ್ಯಭಾಗದಿಂದ = ರಕ್ತ

,, ಸೂಕ್ಷ್ಮಭಾಗ = ವಾಕ್ಯಕ್ಕೆ ಉಪಾದಾನ

೩ ಘೃತ = ತೇಜಕ್ಕೆ = ಮಹಾಲಕ್ಷ್ಮಿ

,, ಸ್ಥೂಲ ಭಾಗ = ಅಸ್ಥಿಗೆ ಕಾರಣ

,, ಮಧ್ಯಭಾಗ = ರೇತಸ್ಸಿಗೆ ಕಾರಣ

**ಘೃತ ಸೂಕ್ಷ್ಮ ಭಾಗ = ಶ್ವಾಸೋಚ್ಛ್ವಾಸಕ್ಕೆ ಕಾರಣ.**

ಜಡ, ಅನ್ನ, ಪೃಥ್ವಿ, ಜಡೋದಕದಲ್ಲಿ ಉದಕ ತೇಜಸ್ಸಿನ ಲಯ ಇದಕ್ಕೆ ಅಭಿಮಾನಿಯಾದ ಮಹಾದೇವರು, ಉದಕಾಭಿಮಾನಿಗಳಾದ ವಾಯುದೇವರಲ್ಲಿ, ಶಿವ ಪವನರು, ತೇಜೋ ರೂಪಳಾದ ರಮಾಧೀನತ್ವವೈದುವರು. ರಮೆಯು, ಮಧುಸೂದನನೈದುದಳು ಎಂದು ನಿತ್ಯದಲ್ಲಿ, ಅನ್ನೋದಕ ಕೊಡು ಎಂದು ಇಲ್ಲಿ ಹೇಳಿದ್ದು ವ್ಯರ್ಥವಲ್ಲ. ಶ್ವಾಸೋಚ್ಛ್ವಾಸಕ್ಕೆ ಕಾರಣವಾದ ಅನ್ನೋದಕ, ಘೃತದಿಂದ ತತ್ಕಾರ್ಯ ಪ್ರವರ್ತಿಸುವ, ದೇವತೆಗಳು ರಮಾ ಶ್ರೀ ಹರಿಯ ಕಾರಣ ಕಾರ್ಯಗಳನ್ನರಿತು ಶ್ವಾಸ ರೂಪವಾದ ಹಂಸ ಮಂತ್ರ ಜಪಿಸುವರೆಂಬ ರಹಸ್ಯಾರ್ಥ ಕಾಲೋಪಾಸನೆ ಇದು.

ಜಾಲಿ ತೊಪ್ಪಲು ಮೆದ್ದು, ಮೇಕೆಗಳು ಹಾಲು ಕರೆಯುವಂತೆ ತನ್ನ ನಿಜ ಭಕ್ತರಾದವರ, ಕೀಳು ಕರ್ಮ, ಜಡವಾದ ಸ್ಥೂಲ ಕರ್ಮವಾದರೂ ಜ್ಞಾನ ಪೂರ್ವಕ ಸಮರ್ಪಣೆ ಮಾಡಲು ಸ್ವೀಕರಿಸಿ, ನಿಜ ಗತಿ ಇತ್ತು ವೈಕುಂಠದಲ್ಲಿಟ್ಟು ಪೊರೆಯುವನು. ಮೇಲೆ ಹೇಳಿದಂತೆ ಶ್ವಾಸೋಚ್ಛ್ವಾಸಕ್ಕೆ ಕಾರಣ ಚಂದ್ರ, ಸೂರ್ಯ ಸ್ವರ, ಮತ್ತು ತೇಜ, ಅಗ್ನಿ, ಇವರಲ್ಲಿ, ಶಿವ, ವಾಯು, ಭಾರ್ಗವಿ ತೇಜೋ ರೂಪಗಳಾದ ಲಕ್ಷ್ಮಿ ಇವರಲ್ಲಿ ಕ್ರಮೇಣ ಶ್ರೀ ಕೃಷ್ಣ, ಹಯವದನ, ವಸುಧಾಧಿಪಾರ್ದನ = ಪರುಶುರಾಮನೇ ತಾನು ತ್ರಿವೃತು ಎನಿಸುತ್ತ ಅನ್ನ, ಉದಕ, ಅನಳ ಈ ಪೆಸರುಳ್ಳವನಾಗಿ ಸಲಹುವನು.

ದೀಪ ಕರದಲ್ಲಿ ಪಿಡಿದು ಕೊಂಡು ಹೋಗುವಾಗ್ಗೆ ಮಾರ್ಗದಲ್ಲಿ ಭಾವಿ ಇದ್ದುದು ಕಣ್ಣಿಗೆ ದೀಪ ಪ್ರಕಾಶದಲ್ಲಿ ಕಾಣಿಸಿದರೂ, ಆ ಭಾವಿಯಲ್ಲಿ ಬಿದ್ದಂತೆ, ಮಹಾ ಉಪನಿಷದರ್ಥ ನಿತ್ಯ ಪೇಳುವರೆಲ್ಲರೂ, ಶ್ರೀ ಪವನ ಮುಖಾದಿಗಳಿಂದ ವಿನುತನಾದ, ಸ್ವತಂತ್ರ ಕರ್ತೃನಾದ ಹರಿಯ ವ್ಯಾಪಾರಗಳನ್ನು ತಿಳಿಯದೇ ಜೀವ ಕರ್ತೃತ್ವ ಹೇಳುತ್ತಾರೆ. ಜೀವ ಕರ್ತೃ ಅಲ್ಲವೇನು ಅಂದರೆ, ಜೀವಾಂತರ್ಗತ ಬಿಂಬ ಚಲಿಸದೇ ಪ್ರತಿಬಿಂಬ ಚಲಿಸುವದಿಲ್ಲಾದ್ದರಿಂದ ಮುಖ್ಯ ಕರ್ತಾ ಪರಮಾತ್ಮನಿಗೆ ಪುಣ್ಯ ಪಾಪಗಳಿಲ್ಲ. ಹರಿ ಕರ್ತೃತ್ವಾನುಸಂಧಾನ ತಿಳಿದು ಮಾಡುವ ಸಜ್ಜೀವನಿಗೂ

ಕರ್ಮ ಸಾಕ್ಷಾತ್ಕಾರವೇ ಹೊರ್ತಾಗಿ, ಸ್ಥೂಲ ಕರ್ಮಗಳ ಲೇಪ, ಸ್ಥೂಲಾದಿ ದೇಹಕ್ಕೆ "ಹರಿಮಾಡಿದ ವ್ಯಾಪಾರ ತಿಳಿಸಿದರೆ ತಿಳಿಯುವ" ಇದೇ ಜೀವನಿಷ್ಠ ಧರ್ಮ. ಇದೇ ಜೀವೋಪಿ ಕರ್ತಾ ಎಂಬುವದಕ್ಕೆ ಅರ್ಥ. ಜೀವನಲ್ಲಿರುವ ಜ್ಞಾನೇಚ್ಛಾಕ್ರಿಯಾದಿಗೆ ಸತ್ತಾಪ್ರದನಾಗಿ ಶಕ್ತಿದ ನಾದಮೇಲೆ ಜೀವನಿಗೆಲ್ಲಿ ಸ್ವಾತಂತ್ರ್ಯ? ಕರ್ತಾ ಶಾಸ್ತ್ರಾರ್ಥದ ನಿಜಾರ್ಥ ತಿಳಿಯದೇ ವ್ಯರ್ಥ ಭಾರವ ನೀಂಪೊತ್ತಿರುವಿ, ಎಂದು ದಾಸರ ವಚನ ಸಕಲವೂ ಹರಿಯಾಧೀನ ತೇನ ವಿನಾ "ತೃಣಮಪಿ ನ ಚಲತಿ" ಎಂಬುದನ್ನರಿಯದೆ ಪಾಪಪುಣ್ಯಕೆ ಜೀವಕರ್ತಾ ಅಕರ್ತೃಹರಿ, ಎಂಬುವರು ವೇದ ಉಪನಿಷದರ್ಥಗಳು ತಿಳಿಯದೇ ಪೇಳಿದರೂ ಫಲವಿಲ್ಲ.

ಇನ್ನು ಕಾಲನಾಮುಕಹರಿಯಲ್ಲಿ ಶ್ವಾಸೋಚ್ಛ್ವಾಸರೂಪ, ಕರ್ಮ ಯಜ್ಞತ್ವೇನ ಹೋಮಕ್ರಮವನ್ನು ಹೇಳುತ್ತಾರೆ. ಅನಿಲ ದೇವರು ವಾಙ್ಮನೋಮಯನೆನಿಸಿ ವಾಗಭಿಮಾನಿ, ಅಗ್ನಿ ಜೀವಾಭಿಮಾನಿ, ವರುಣ ಆವಹನೀಯಾಗ್ನಿ, ವನದೊಳಗೆ ರುದ್ರ. ಕರ್ಮೇಂದ್ರಿಯದಲ್ಲಿ ಮುಖ್ಯ ವಾಕ್, ಇದರಿಂದ ಪ್ರವಚನ, ಮನೋ ಜ್ಞಾನೇಂದ್ರಿಯಗಳಿಗೆ ಮುಖ್ಯ ಮನಸ್ಸಿನಿಂದ ಧ್ಯಾನ "ಧ್ಯಾನಪ್ರವಚನಾಭ್ಯಾಂ ಯಥಾಯೋಗ್ಯಮುಪಾಸ ನಮ್" ಎಂತ ಪ್ರಮಾಣ. ಆದುದರಿಂದ ಎರಡು ವಿಧಕರ್ಮವು. ಮುಖ್ಯ ಪ್ರಾಣದೇವರು ಮನೋಮಯವಾಙ್ಮಯನೆನಿಸಿ ಶ್ವಾಸ ಕಾರ್ಯ ಮಾಡಿಸುತ್ತಾರೆ, ಹೀಗೆ ವಾಙ್ಮಯ, ಮನೋಮಯನೆಂದು ಎರಡು (ಪಾದ) ರೂಪಗಳಲ್ಲಿ, ಭಕ್ತಪ್ರಹ್ಲಾದ ಪೋಷಕನಾದ ನರಸಿಂಹಾಭಿನ್ನ ಸಂಕರುಷಣನು ನೆಲಸಿದ್ದು ವೇದಶಾಸ್ತ್ರ ಪುರಾಣಗಳನ್ನು ಶ್ರೀ ವಾಯುದೇವರಿಗೆ ಸಂವಾದರೂಪ ವಾಗಿದೆಂದು ತಿಳಿವುತ ಮನನ ಗೈವರನ್ನು ಸಲಹುವನು.

ದಶ ದಿಶದೊಳಗೆ ವಾಯು ಸಂಚರಿಸಿ ಕುಸುಮ ಪರಿಮಳವನ್ನು ಪಸರಿಸುವಂತೆ ಇಂದಿರೇಶನು ಸರ್ವತ್ರನಾಗಿ ಸರ್ವ ವ್ಯಾಪಾರಗಳನ್ನು ಮಾಡಿ ಜೀವರಿಗೆ ಸುಖವನ್ನು ತಂದುಕೊಡುವನೆಂದು ತಿಳಿದುಪಾಸನೆಮಾಡುವುದು. ಹೀಗೆ ಪಂಚರೂಪಿ ಪ್ರಾಣ ದೇವರು, ಪಂಚರೂಪಿ ಭಗವತ್ಕಾರ್ಯ ಗಳನ್ನು ಯಜ್ಞತ್ವೇನ ಸಮರ್ಪಿಸಿದರೆ, ಮೋಕ್ಷದಲ್ಲಿಯೂ ಪಂಚಪ್ರಾಣರ ದ್ವಾರವಾಗಿ ಸುಖಿಸುವರೆಂದು ಹೇಳುತ್ತಾರೆ. ಪೂರ್ವದ್ವಾರದಿಂದ ಮನ್ನು

ಷ್ಯೋತ್ತಮರು, ಸೂರ್ಯ, ಸಂಜ್ಞಗತನಾದ ತನ್ನಾಮಉಳ್ಳ ಭಾರತೀ ರಮಣನ ದ್ವಾರ ಪ್ರವೇಶಿಸಿ ನಾರಾಯಣನನ್ನು ಭಜಿಸುವರು.

ವೈಕುಂಠ ದಕ್ಷಿಣ ದ್ವಾರಸ್ಥ, ಚಂದ್ರರೋಹಿಣಿ ವ್ಯಾನಾಂತರ್ಯಾಮಿ, ಕೃತಿ ಪತಿ ಪ್ರದ್ಯುಮ್ನನ ರೂಪವನು ಆರಾಧಿಸುತ್ತ ಪಿತೃಗಣ ಸ್ವೇಚ್ಛಾನುಸಾರ ಸಂಚರಿಸುವರು.

ವೈಕುಂಠ ಪಶ್ಚಿಮ ದ್ವಾರದಿಂದ ಪ್ರವೇಶರಾಗಿ ಋಷಿ ಗಣವು, ಅಗ್ನಿ ನಾಮಕ ವ್ಯಾನಸ್ಥ ಸಂಕರುಷಣನ್ನ ಧೇನಿಸುವರು.

ತುಂಬುರ ಮೊದಲಾದ ಅಖಿಳ ಗಂಧರ್ವರು, ವೈಕುಂಠಪುರದ ಉತ್ತರ ಬಾಗಿಲಲ್ಲಿ ಪ್ರವೇಶಗೈದು ಅಲ್ಲಿಪ್ಪ ಸುರಪ ಶಚಿಗನಲ್ಲಿ ವಿರಾಜಿಪ ಸಮಾನಾಂತರ್ಗತ ಹರಿನ್ಮಣಿ ನಿಭ ಶಾಂತಿಪತಿ ಅನಿರುದ್ಧನ್ನ ಧೇನಿಸುವರು.

ಗರುಡ ಶೇಷಾದಿ ದೇವೇಂದ್ರನೇ ಮೊದಲಾಗಿ ಪುಷ್ಕರನೆ ಕಡಿಯಾದ ಎಲ್ಲ ದೇವತೆಗಳು, ಊರ್ಧ್ವ ದ್ವಾರಗತ ಭಾರತಿ ಉದಾನಾಂತರ್ಗತ ಮಾಯಾ ಪತಿ ವಾಸುದೇವನ ಪರಮ ಮಂಗಳ ಮಂದಿರವಾದ ವೈಕುಂಠವನ್ನೈದಿ ಮುಕುಂದನ ನೋಡಿ ಸುಖಿಸುವರು.

ಅಧಿಕಾರ ವಿವಕ್ಷೆಯಿಂದ, ಹಂಸ ಮಂತ್ರ ಜಪ ಮಾಡುತ್ತ ಮುಕ್ತಿ ಯೋಗ್ಯರಾದ, ದೇವ, ಋಷಿ, ಪಿತೃ, ಪ, ನರಾದಿಗಳ ತಾರತಮ್ಯವನ್ನು ತಿಳಿದವರಿಗೆ ವೈಕುಂಠವಾಗುವದು.

ಹರಿ ವಾಯುಗಳ ಲೀಲೆ ತಿಳಿಯದೇ ಬೆಳಗಿದ ಹೂಜೆಯಂತೆ, ದೇಹ ವನ್ನು ತೊಳೆದು ನಾಮಮುದ್ರೆಗಳನ್ನು ಧರಿಸಿ ಕುತರ್ಕ ಯುಕ್ತಿಗಳನ್ನು ಮಾಡುತ್ತ ಸರ್ವಜ್ಞರ ಶಾಸ್ತ್ರ ಮರ್ಮ ತಿಳಿಯದೇ ಇರುವ ನರನು, ಶಂಕಿಸಿದ ರೇನು ? ಏನೂ ಲಾಭವಿಲ್ಲ.

ಅನೇಕವಾಗಿ ಸಮುದ್ರ ತೆರೆಗಳು ತೋರುವಂತೆ, ಪರಮಾತ್ಮನ ಅನಂತ ರೂಪಗಳು ಹರಿ, ಹಂಸ, ಉದ್ಗೀಥ, ಹಯವದನ, ಕೃಷ್ಣಾದಿ ಅನಂತ ಅವತಾರಗಳು ನಿತ್ಯವಾದವು. ಬ್ರಹ್ಮಾಂಡಕ್ಕೆ ಮೂಲಕಾರಣವಾದ ಪದ್ಮ

ನಾಭರೂಪಿ ಹರಿಯಲ್ಲಿ ಇರುತಿಹವು. ಈ ರೂಪಗಳಿಗೆ ಅತ್ಯಂತ, ಅಭಿನ್ನನಾದ ಹರಿಯೇ ಸಮಸ್ತ ಪ್ರಾಣಿಗಳ ಚಿದ್ ಹೃದಯುಗತ ರೂಪಗಳು ಅವ್ಯವಧಾನದಲ್ಲಿ ಇರುವವು. ಇವುಗಳಿಗೆ ಐಕ್ಯ ಚಿಂತಿಸುವದು. ಇನ್ನು ಇಂಥ ಪರಮಾತ್ಮನ ಉದರದೊಳಗೆ ಈ ಜಗತ್ರಯವು ಇರುವದು. (ಹೇಗಂದರೆ ಸಮುದ್ರದಲ್ಲಿ ಮಕರಾದಿ ಜೀವರು ಇರುಳು ಹಗಲು ಚರಿಸುತ್ತ ಇದ್ದಂತೆ,) ಈ ಜಗತ್ತು ಪರಮಾತ್ಮನ ಉದರದೊಳಗಿದ್ದರೂ, ಹರಿಗೆ ಪ್ರತಿಬಿಂಬವಾಗಿ ಹರಿನಾಮ ರೂಪಂಗಳನ್ನೇ ಧರಿಸಿಹದು. ಗರ್ಭಿಣಿ ಇದ್ದ ತಾಯಿಯು, ಸೌಷ್ಠ ಪದಾರ್ಥ ಭೋಜನವಮಾಡಲು, ಗರ್ಭಗತವಾದ ಶಿಶು ದಿನೆ ದಿನೆ ಅಭಿವೃದ್ಧಿಯಾಗುವಂತೆ ಪದ್ಮನಾಭ ರೂಪ ಹರಿಯು, ಸರ್ವರಿಗೆ ಅವರವರ ತಕ್ಕ ರಸಗಳನ್ನು ಉಂಡುಣಿ ಸುವನು. ಸಂರಕ್ಷಿಸುವ ಪವಿತ್ರಳಾದ ಗಂಗಾ ಜನಕ ದೋಷ ದೂರ ಜರೆ ಮರಣಾದಿಗಳಿಲ್ಲದ ಗಭೀರನು. ಫಲಿತಾರ್ಥವೇನೆಂದರೆ ಒಂದು ರೂಪ ಧ್ಯಾನ ಮಾಡಿ ನೈವೇದ್ಯ ಕೊಟ್ಟರೆ ಹರಿಯು ಸ್ವೀಕರಿಸಿ ಸಂತುಷ್ಟನಾಗಿ ಅನಂತ ಜೀವರಿಗೆ ಸುಖಕೊಡುವ ಅನಂತ ರೂಪಿಯ ಅಗಾಧ ಮಹಿಮೆ. ಶುಕರು ಶ್ರೀ ವೆಂಕಟನಿಗೆ ಉತ್ತರಾಣಿ ಅಕ್ಕಿಗಳಿಂದ ತೃಪ್ತಿ ಬಡಿಸಿದುದೆ ಸಾಕ್ಷಿ.

ವಿಷಯಾದಿ ಆಶೆಗೆ ಒಳಗಾದವನು, ಜನರಿಗೆ ದಾಸನೆನಿಸುವನು ಆಶೆಯನ್ನೆ ತನ್ನ ನಿಜದಾಸ ಗೈದ ಅಂದರೆ ನಿರಾಶೆಯುಳ್ಳ ಜ್ಞಾನಭಕ್ತಿ ವಿರಕ್ತಿಯುಳ್ಳ ಪುರುಷಗೆ ಜನರೆಲ್ಲ ದಾಸರಾಗಿರುವರು. ಅದರಂತೆ ಕಾಮ್ಯ ಕರ್ಮ ರತನಾಗದೆ, ಯಾವ ಫಲಾಪೇಕ್ಷೆ ಇಲ್ಲದೆ ಶ್ರೀಶನಾದ ಹರಿಯಂಘ್ರಿ ಭಜಿಸಲು, ಕರುಣಾ ಸಮುದ್ರನಾದ ಹರಿ ರಮಾ ಸಹಿತ ವಶನಾಗುವ. ದ್ಯು ನದಿಯಾದ ಗಂಗೆಯ ಅಂತ್ಯ ಮೂಲ ಕಾಣದಿರುವ ಮನುಷ್ಯನು ಗಂಗೆಯ ಒಂದು ತಟಾಕ ಒಂದು ಭಾಗದಲ್ಲಿ ಮಜ್ಜನ ಗೈದು ಸಮಸ್ತ ದೋಷಗಳಿಂದ ಮುಕ್ತನಾಗುವಂತೆ ಪಾಪ ರಹಿತನಾದ ಹರಿಯ ಅನಂತಾನಂತ ಸುಗುಣಗಳೊಳಗೆ, ಒಂದೇ ಗುಣವಾದರೂ "ಮಮ ಸ್ವಾಮಿ, ಸರ್ವ ಸ್ವಾಮಿ ಬಿನ್ನರಹಿತ ಅಖಿಳ ಜಗದಂತರ್ಯಾಮಿ" ಎಂಬ ಭಾವನೆಯಿಂದ ಆತ್ಮಾದಿ ಗುಣೋಪಾಸನೆ ಮಾಡಲು ಅವನೇ ಮಹಾತ್ಮ ಧನ್ಯ ಕೃತಾರ್ಥನೆಂದೆನಿಸುವನು. ಜಗತ್ತಿನಲ್ಲಿ ಪಂಚರೂಪಿ ಹರಿಯು ಮಾನಿಮಾನದನು, ವಾಸುದೇವನು, ಕಾರ್ಪಾಸ = ಹತ್ತಿಯೊಳಗೆ, ಸಂಕರುಷಣ ತೂಲ ರಾಶಿ ( ಅರಳಿಯಲ್ಲಿ )

ತಂತು ಎಳೆಗಳಲ್ಲಿ ಪ್ರದ್ಯುಮ್ನ, ವಾಸ ವಸ್ತ್ರ ರೂಪದಲ್ಲಿ ಅನಿರುದ್ಧ ದೇವನು ಇದ್ದು, ಈ ಜಡಗಳಲ್ಲಿ ತಾನಿದ್ದು ನಾರಾಯಣನು ವಸ್ತ್ರ ರೂಪದಿಂದ ಶೋಭಿಪ ಭೂಷಣನು ತಾನೆ ತೋರ್ಪನು ನಿತ್ಯದಲ್ಲಿ ಮಾನ್ಯನಾಗಿಯೂ, ಮಾನದ ಮಾನ ರಕ್ಷಕನಾಗಿ ಇರುವನು. ಹೀಗೆ ಲಲನೆಯಿಂದೊಡಗೂಡಿ, ಚೈಲ ವಸ್ತ್ರಗಳೊಳಗೆ, ಓತ ಪ್ರೋತವಾಗಿ ಜಗನ್ನಾಥ ವಿಠ್ಠಲನು ನೆಲಸಿದ್ದು, ಸರ್ವ ಕಾಲಗಳಲ್ಲಿ, ಪಂಚ ರೂಪಿ ಹರಿಯು, ಚಳಿ, ಬಿಸಲು ಮಳೆ ಗಾಳಿಯೆಂದು ಒಂದು ಅರ ಘಳಿಗೆಯಾದರೂ ಬಿಡದಲೇ ಕಾಯುವನೆಂದು ನಿಜವಾಗಿ ತಿಳಿದು ಸದಾ ಸರ್ವಾಂತರಾತ್ಮಕನಾದ ಹರಿಯನ್ನು ಇಳೆಯೊಳು ಭೂಮಿಯಲ್ಲಿ, ಅಥವಾ ದೇಹದಲ್ಲಿ ಅರ್ಚಿಸುವದು. ಹೀಗೆ ಪ್ರತಿಯೊಂದು ಕಾರ್ಯದಲ್ಲಿ ಪಂಚ ರೂಪಿ ಪರಮಾತ್ಮನನ್ನು ಅರ್ಚಿಸುವ ಜ್ಞಾನಬೇಕು. ಹೀಗೆ ಶ್ವಾಸ ಜಪವೂ ಶ್ರೀಹರಿಗೆ ಯಜ್ಞತ್ವೇನ ಸಮರ್ಪಿಸಿ, ಕಾಲೋಪಾಸನೆ ಮಾಡುವದು.

ಇಲ್ಲಿಯವರಿಗೆ ಶ್ರೀ ಹರಿಕಥಾಮೃತಸಾರ ೧೫ ಸಂಧಿಗಳು, ಸರಿಯಾಗಿ ಪರಸ್ಪರ ಸಂಧಿ ಕ್ರಮ ಒಂದಕ್ಕೊಂದು ಸಂಧಿಗಳ ಸಂಬಂಧ, ವಿವೇಚಿಸಲಾಯಿತು.

ಈ ಮಹಾ ಗ್ರಂಥವು ೧೧-೧೨ ಕಡೆಗೆ ಅಚ್ಚಾಗಿ ಪ್ರಕಟವಾಗಿದೆ. ಆದರೆ ಬಹು ಕಡೆ ಮೂಲವೇ ತಪ್ಪು ಆಗಿದೆ. ಮತ್ತು ೧೬ ನೇ ಸಂಧಿಗಳಿಂದ ಸಂಧಿಗಳೇ ವ್ಯತ್ಯಾಸವಾಗಿ ಸರಿ ಇಲ್ಲದೇ ಪರಸ್ಪರ ಒಂದಕ್ಕೊಂದು ಸಂಬಂಧವೇ ಹತ್ತುವದಿಲ್ಲ. ಹೀಗಾಗಿ ಮೂಲ ಗ್ರಂಥವೇ ಸರಿಯಾಗಿ ಪ್ರಕಟವಾಗಿಲ್ಲ. ವ್ಯಾಖ್ಯಾನಗಳು ಅಷ್ಟೇ.

ಶ್ರೀಮಜ್ಜಗನ್ನಾಥ ವರ್ಯರ, ಸಾಕ್ಷಾತ್ ಶಿಷ್ಯರು ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ಪ್ರಾಣೇಶ ವಿಠ್ಠಲರು, ಲಿಂಗಸೂಗೂರ, ಶ್ರೀ ಗುರು ಶ್ರೀಶ ವಿಠ್ಠಲರೂ ಕಂಪಲಿದಾಸರ ಲಿಖಿತ ಪರಂಪರೆಯಿಂದ ಬಂದ ಮೂಲ ಗ್ರಂಥ ಶುದ್ಧವಾಗಿಯೂ, ಮತ್ತು ಕೆಳಗಾಣಿಸಿದಂತೆ ಮುಂದಿನ ೧೬ ಸಂಧಿಗಳಿರುವವು. ಮುಂದೆ ಹರಿಕೃಪೆಯಿಂದ ಮೂಲ ಗ್ರಂಥ ಅಚ್ಚಾಗುವದು.

೧೬ ನೇ ಸಂಧಿ :– ಸ್ವಗತ ಸ್ವಾತಂತ್ರ್ಯ ಸಂಧಿ

೧೭ ,, ದತ್ತ ಸ್ವಾತಂತ್ರ್ಯ ಸಂಧಿ

| | | |
|---|---|---|
| ೧೮ ನೇ ಸಂಧಿ | | ಬಿಂಬೋಪಾಸನ ಸಂಧಿ |
| ೧೯ | ,, | ಅವರೋಹಣ ಕ್ರಮದಿಂದ, ಗುಣ ತಾರ ತಮ್ಯ ಸಂಧಿ |
| ೨೦ | ,, | ( ಸ್ಥಾವರಾದಿಗಳಿಂದ ) ಆರೋಹಣ ತಾರತಮ್ಯ ಸಂಧಿ |
| ೨೧ | ,, | ಕರ್ಮ ವಿಮೋಚನ ಸಂಧಿ |
| ೨೨ | ,, | ಭಕ್ತಾಪರಾಧ ಸಹಿಷ್ಣು ಸಂಧಿ |
| ೨೩ | ,, | ಬೃಹತ್ತಾರತಮ್ಯ ಸಂಧಿ (ಅಂಶ ಆವೇಶಾವತಾರ) |
| ೨೪ | ,, | ಕಲ್ಪ ಸಾಧನ ಸಂಧಿ |
| ೨೫ | ,, | ಕ್ರೀಡಾ ವಿಲಾಸ ಸಂಧಿ (ಸರ್ವ ಸ್ವತಂತ್ರ) |
| ೨೬ | ,, | ಅವರೋಹಣ ತಾರತಮ್ಯ ಸಂಧಿ |
| ೨೭ | ,, | ಅನುಕ್ರಮಣಿಕಾ ತಾರತಮ್ಯ ಸಂಧಿ |
| ೨೮ | ,, | ಗಣಪತಿ ಸ್ತೋತ್ರ ಸಂಧಿ |
| ೨೯ | ,, | ಅಣು ತಾರತಮ್ಯ ಸಂಧಿ |
| ೩೦ | ,, | ದೈತ್ಯ ತಾರತಮ್ಯ ಸಂಧಿ |
| ೩೧ | ,, | ನೈವೇದ್ಯ ಪ್ರಕರಣ ಸಂಧಿ |
| ೩೨ | ,, | ಕಕ್ಷಾ ತಾರತಮ್ಯ ಸಂಧಿ (ದೇವತಾ ತಾರತಮ್ಯ) |

ಈ ಪ್ರಕಾರ ಸಂಧಿಗಳ ಕ್ರಮವಿರುವವು. ಇವುಗಳ ಸಂಬಂಧ ಕ್ರಮ ವಾಗಿಯೂ, ಶ್ರೀ ವಿಜಯದಾಸರ ಸುಳಾದಿಗಳು, ಇತರ ಪ್ರಮಾಣಗಳ ಆಧಾರ ಮೇಲಿಂದ ಹಿರಿಯರ ವಚನಾನುಸಾರ ವಿವರಿಸುತ್ತದೆ. ಜ್ಞಾನಿಗಳು ಸುಖಿಸಿ ಮುದಬಡುವದು. ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಈ ಶುದ್ಧ ಪ್ರತಿಯ ಕ್ರಮಕ್ಕೆ ಅನುಸರಿಸಿದ್ದಾರೆ.

ಹಿಂದೆ ಪ್ರಕೃತಿ ವೇದ, ಜೀವ, ಕಾಲ ದೇಶಗಳಲ್ಲಿ ಬಿಂಬನಾದ ಹರಿಯ ಉಪಾಸನಾಧ್ಯಾನ ಕ್ರಮವನ್ನು ವರ್ಣಿಸಿ ಮುಂದೆ ಜೀವರಿಗೆ ಬಂಧಕವಾದ ಸ್ವಭಾವಾನುಸಾರ ಗುಣಧರ್ಮ, ಅನಾದಿ ಕರ್ಮ ಸ್ವರೂಪ ಹಿಂದೆ ಕೆಲಮಟ್ಟಿಗೆ ವಿವೇಚಿಸಿರುವರು. ಮುಂದೆ ಅದರ ಬಿಡುಗಡೆ ಹೇಗೆ? ದೇವರು ಸರ್ವ ತಂತ್ರ ಸ್ವತಂತ್ರನು, ಸರ್ವಕರ್ತಾ, ಕಾರಯಿತಾ, ಇದ್ದ ಮೇಲೆ ಅಸ್ವತಂತ್ರನಾದ

ಜೀವನಿಗೆ ಕರ್ಮರೂಪ ಪಾಪ ಪುಣ್ಯ ಬದ್ಧತೆಯಿಂದ ಫಲ ಭೋಕ್ತೃತ್ವ ಏಕೆ ಇವೇ ಮುಂತಾದ ಅನೇಕ ಪ್ರಮೇಯಗಳನ್ನು ಹಿಂದೆ ಅಲ್ಲಲ್ಲೇ ಹರಿಯೇ ಸರ್ವಕರ್ತಾ, ಸ್ವತಂತ್ರ ಎಂದು ವರ್ಣಿಸಿದ್ದರೂ ಹರಿಯ ಸ್ವಗತದತ್ತ ಸ್ವಾತಂತ್ರ್ಯ ಎಂಥದು ಎಂಬ ವಿಚಾರಗೈದಿರುವರು.

॥ ಶ್ರೀಗುರುರಾಜೋ ವಿಜಯತೇ ॥

# ೧೫ ಶ್ವಾಸ ಸಂಧಿ

ಶ್ರೀ ರಾಘವೇಂದ್ರಗುರು. ಶ್ರೀ ವರದೇಂದ್ರಗುರು

ಹರಿಕಥಾಮೃತ ಸಾರ ಗುರುಗಳ। ಕರುಣದಿಂದಾಪನಿತು ಪೇಳುವೆ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ಪಲ್ಲ॥

**ಭಾರತೀಶನು ಘಳಿಗೆಯೊಳು ವಡು।**
**ನ್ನೂರ ಅರವತ್ತು ಸ (ಸಿ) ರು ಜಪಗಳ।**
**ತಾರಚಿಸುವನು ಸರ್ವಜೀವರೊಳಿದ್ದು ಬೇಸರದೆ॥**
**ಕಾರುಣಿಕ ಅವರವರ ಸಾಧನ।**
**ಪೂರಯಿಸಿ ಭೂಸ್ವರ್ಗ ನರಕವ।**
**ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು ॥೧॥**

**ಅವತರಣಿಕಾ** :—ಹಿಂದಿನ ೧೪ ನೇ ಸಂಧಿಯಲ್ಲಿ ಜೀವರಲ್ಲಿ ಜೀವಾಂತರ್ಗತ ಜೀವನಿಯಾಮಕನಾಗಿ ಇಪ್ಪ ಶ್ರೀಹರಿಯಲೀಲಾ, ಜೀವಜೀವರ ಭೇದ ಜೀವ ಪರಮಾತ್ಮನಿಗೆ ಪ್ರತಿಬಿಂಬ, ತತ್‌ಸದೃಶ, ತದಧೀನವಾಗಿ ಸದಾ ಇರುವನು. ಜೀವನ ಅಸ್ತಿತ್ವಕ್ಕೆ ಬಿಂಬರೂಪ ಹರಿಯೇ ಮುಖ್ಯ ಕಾರಣ. ಇಂತಹ ಚಿತ್‌ಸ್ವರೂಪನಾದ ಜೀವನನ್ನು, ಬಿಂಬನಾದ ಪುರುಷನಾಮಕ ಹರಿಯು, ಬಹಿಃ ಕಾಲರೂಪನಾಗಿ ಜೀವನನ್ನು ಸೃಷ್ಟಿಗೆ ತರಲು, ಯಾವ ಕಾಲ ಪ್ರಾರಂಭವೋ ಆ ಕಾಲ ಆರಂಭಿಸಿ, ಮುಕ್ತಿಪರಿಯಂತವಾಗಿ ಸಾಧನ ಮಾಡಿಸುವ ಕಾಲ ವಿವರ, ಶ್ವಾಸ ಜಪದಿಂದ ತಿಳಿದು ಶ್ವಾಸಮಾಡಿಸುವ ಹಂಸನಾಮಕ ಹರಿಯು, ಭಾರತೀರಮಣಮುಖ್ಯಪ್ರಾಣಾಂತರ್ಗನಾಗಿ ಜೀವರಿಂದ ಶ್ವಾಸಮಾಡಿಸುವ ಬಗೆ. ತದರ್ಪಣಬಗೆ. ಹಂಸಮಂತ್ರದಲ್ಲಿ ಪೇಳಿದಂತೆ ಅಹರ್ನಿಶಿಯಲ್ಲಿ ಆಗುವ ಹಂಸಮಂತ್ರಗಳನ್ನು ಹರಿಗೆ ಅರ್ಪಿಸಬೇಕು. ಕಾಲದಲ್ಲಿ ದೇಶವೂ, ದೇಶವಿದ್ದಲ್ಲಿ ಕಾಲವೂ ಇರುವುದು. ಅಂದರೆ ದೇಶಕಾಲ ಬಾಧೆಗಳಿಂದ ದೂರು ಮಾಡುವನು. ಶ್ರೀವಿಜಯದಾಸಾರ್ಯರು “ ಪರಮಾಣ್ವಾದ್ವಿಪರಮಾಣು ಮಹಾಕಾಲಾಂತ ಕಾಲಸ್ತೆ। ನಿರುತತತ್ಕಾಲಕ್ರಿಯಪ್ರವರ್ತಕ । ಹರಿಯೆ ತತ್ತತ್ ಶಬ್ದ ವಾಚ್ಯ ಮಂಗಳ ಪುರುಷ। ಇರುತಿಪ್ಪ ಉದಯಕಾಲಸ್ತಮಾನ। ” ವೆಂದು

ಧ್ರುವತಾಳವಲ್ಲಿ ಹೇಳಿದರು. ಮುಂದೆ ಆದಿ ತಾಳದಲ್ಲಿ "ಪುರುಷ ಪುರುಷ ಪ್ರಕೃತಿ ಪ್ರಕೃತಿ ಪ್ರಕೃತಿ ಸರ್ವ | ಪರಂಪರ್ಯದಲ್ಲಿ ವ್ಯಾಪ್ತಿ ಅವ್ಯಾಪ್ತಿಯನ್ನು | ಅರಿದು ಉದಯಸ್ತಮಾನಕಾಲ ಪ್ರವಾಹ ನೋಡಿ | ಪರಶಬ್ದ ಪರಿಯಂತ ವಿಚಾರಿಸಿ ಅಲ್ಲಿದ್ದ ಹರಿಮೂರ್ತಿಗಳ ನೆನೆದು ಧನ್ಯನಾಗಲಿ ಬೇಕು | **ಪರ ಮಾಣುಕಾಲ ದೇಶ ಗುಣಕರ್ಮ ಶುಭವಕ್ಕು |** ದುರಿತರಾಶಿಗಳೆಲ್ಲ ಪರಿಹಾರವೋ || ಎಂದು ಹೇಳುತ್ತಾ ಮುಂದೆ ಜತೆಯಲ್ಲಿ "ಕಾಲಾಧಿಷ್ಠಾನದಲ್ಲಿ ಕಾಲನಾಮಕನಾದ | ಶ್ರೀಲೋಲ ವಿಜಯವಿಠಲನ ಧ್ಯಾನ ಮಾಡು" ಎಂದು ಸೃಷ್ಟಿ ಪ್ರ|| ಸುಳಾದಿ ೧೧ ರಲ್ಲಿ ಹೇಳಿದ್ದಾರೆ. ಮಹಾಕಾಲವು ನಿತ್ಯ, ಅಣು ಕಾಲ ಅನಿತ್ಯ, || "ಅಣುದ್ವಯ ಪರಮಾಣು ಇಂಥಾದೆ ತ್ರಯವಾಗೆ | ತೃಣು ಎನಿಸಿಕೊಂಬುವದು ಇದೆ ತ್ರಸರೇಣು" ಇತ್ಯಾದಿ ಕಾಲವಿಚಾರಕೋಷ್ಟಕ ಸುಳಾದಿ (೯) ರಲ್ಲಿ ವಿವರಿಸಿದ್ದಾರೆ.

ಇಂತಹ ಅಣುಪರಮಾಣು ಆರಂಭಿಸಿ, ತತ್ ತತ್ ಶಬ್ದವಾಚ್ಯನಾಗಿ "ಕಾಲಾಹ್ವಯವಹ ಕಾಲಣುಕಾಲಗ ಕಾಲಾತೀತ ಮಹಕಾಲಜ್ಞ || ಕಾಲ ಪ್ರವರ್ತಕ ಕಾಲನಿವರ್ತಕ ಕಾಲೋತ್ಪಾದಕ ಕಾಲಮೂರ್ತೆ ತವ || ದಾಸೋ ಹಂ || ಎಂಬ ದಾಸರ ವಚನದಂತೆ. ಜ್ಞಾನಿಗಳು ಕಾಲನಾಮ ಹರಿಯ ಧ್ಯಾನ ಉಪಾಸನೆ ಮಾಡಲು, ಶ್ವಾಸರೂಪಿ ಹಂಸ ಮಂತ್ರಗಳೇ ಕಾಲಸೂಚಕ ಗಳೆಂದು ಪ್ರಕಾಶ ಸಂಹಿತಾದಿ ಗ್ರಂಥಗಳಲ್ಲಿ ವಿವರಿಸಿದಂತೆ ಈಗ ಶ್ವಾಸಸಂಧಿ ಯನ್ನು ನಿರೂಪಿಸುತ್ತಾರೆ. ಕಾಲಕೋಷ್ಟಕ ವಿವರ ಸಂಧಿಯ ಸಾರದಲ್ಲಿ ಕೊಟ್ಟಿದೆ. ಮೊದಲು ಇದನ್ನು ಚನ್ನಾಗಿ ಅರಿವುದೆಂದು ವಿನಂತಿ.

**ಪದ್ಯಾರ್ಥ :—** ಭಾರತೀಶನು = ಭಾಪ್ರಕಾಶಮಾನನಾದ ಬಿಂಬರೂಪಿ ಹರಿಯಲ್ಲಿ ಸಂತತ ರತಿಯುಳ್ಳ, ಭಾರತೀ ದೇವಿಯರ ಪತಿಯಾದ ಮುಖ್ಯ ಪ್ರಾಣದೇವರು, ಘಳಿಗೆಯೊಳು ( ಗಳಿಗೆಯೊಳು ) ೬೦ ಪಳಕ್ಕೆ ಒಂದು ಗಳಿಗೆ ಅಂದರೆ ಈಗಿನ ಕಾಲ ಪ್ರಮಾಣ ೨೪ ಮಿನಿಟುಗಳಲ್ಲಿ ೩೬೦ ಸುರು ಜಪಗಳ = ೩೬೦ ಶ್ವಾಸ ಉಚ್ಛ್ವಾಸ ಉಳ್ಳ ಶ್ವಾಸಮಂತ್ರ "ಹಂಸ ಸ್ಸೋಹಂ ಸ್ವಾಹಾ" ಎಂಬ ಹಂಸಮಂತ್ರ ಜಪಗಳನ್ನು, ತಾರಚಿಸುವನು=ಹಂಸನಾಮಕ ಹರಿಯ ಅನುಗ್ರಹದಿಂದ ಬ್ರಹ್ಮದೇವರಕಲ್ಪ ಪರಿಯಂತ ಇದ್ದ, ಸರ್ವಜೀವ ರೊಳಿದ್ದು ಬೇಸರದೆ ತಾನು ರಚಿಸುವನು = ತ್ರಿವಿಧರಾದ ಜೀವರು ೧ ಸತ್ವ

ಜೀವರಲ್ಲಿ ಹಂಸ ಸೋಽಹಂ ಸ್ವಾಹಾ ಎಂತಲೂ, ೨ ತಮೋಜೀವರಲ್ಲಿ ಸೋಽಹಂ ಸ್ವಾಹಾ" ಎಂತಲೂ, ಇತ್ಯಾದಿ ತ್ರಿಬಗೆಯಾಗಿ ಬೇಸರಿಲ್ಲದೆ ಭಗವದಾಜ್ಞೆಯಿಂದ ಮಾಡುವನು. ಹೀಗೆ ಹಂಸಮಂತ್ರ ಜಪಿಸಿ, ಕಾರುಣಿಕ=ಕರುಣಾ ದಯಾವಂತ ಪ್ರಾಣದೇವರು ಅವರವರ ಸಾಧನ, ಪೂರೈಸಿ= ತ್ರಿವಿಧಜೀವರುಗಳ ಸಾಧನ ಮಾಡುವ ಕಾಲ ಕರ್ಮಗುಣದಿ ಪೂರ್ಣಸಾಧನ ಮಾಡಿಸಿ, ಭೂಸ್ವರ್ಗ ನರಕವ= ನಿತ್ಯ ಸಂಸಾರಿಗಳಿಗೆ ಭೂಮಿ, ಸತ್ವ ಜೀವರಿಗೆ ಸ್ವರ್ಗ ಆರಂಭಿಸಿ ವೈಕುಂಠಾಂತ ಮುಕ್ತ ಸ್ಥಾನ, ತಮೋಜೀವರಿಗೆ ನಿತ್ಯನರಕಾದಿ ಅಂಧಃ ತಮಸ್ಸು ಸೇರಿಸುವ = ಆಯಾಸ್ಥಾನಗಳಲ್ಲಿ ಪೊಂದಿಸುವನು. ಶ್ರೀ ವಾಯುದೇವನು ಹರಿಯ ಇಚ್ಛಾಬಲ್ಲ ಕಾರಣ ಸರ್ವಜ್ಞನು = ಸರ್ವಬಲ್ಲವನು ಸಕಲೇಷ್ಟಪ್ರದಾಯಕನು=ಮೋಕ್ಷಾದಿ ಸಕಲ ಪುರುಷಾರ್ಥಕೊಡುವನೆಂದು ಭಾವ.

**ಸೂಚನೆ :**—"ದ್ರೌಪದೀಶಪತಿವಿಠಲರ ವ್ಯಾಖ್ಯಾನ ೧೪ನೇ ಸಂಧಿಯ ವರೆಗೆ ಪೂರ್ತಿ ಸಿಕ್ಕಿದೆ. ಮುಂದೆ ಸಿಕ್ಕಿಲ್ಲ. ಆದರೂ ೧೫ನೇ ಸಂಧಿಗೆ ಪದ್ಯ ೧೧-೧೨-೧೩ ಮೂರು ಪದ್ಯಗಳಿಗೆ ಮಾತ್ರ ೧ ಪತ್ರ ೨ ಪುಟ ದೊರಕಿದೆ. ಇಷ್ಟೇ ಹರಿಯು ದೊರಕಿದಷ್ಟೇ ಪರಮ ಲಾಭ. ೧೫ನೇ ಸಂಧಿ ೧ ಪತ್ರ ದೊರಕಿದೆಂದಮೇಲೆ ಇವರು ಪೂರ್ತಿಯಾಗಿ ಸಂಕ್ಷಿಪ್ತ ಟೀಕಾ ಬರದಿರ ಲಿಕ್ಕೆಬೇಕು. ನಮ್ಮ ದುರ್ದೈವದಿಂದ ಉಪಲಬ್ಧವಾಗಿಲ್ಲ. ಇಂತಹ ಪರಮ ಸೂಕ್ಷ್ಮಜ್ಞಾನಿಗಳ ಟೀಕಾ ಪೂರ್ತಿ ದೊರೆತಿದ್ದರೆ ಜ್ಞಾನಸಾಧನಕ್ಕೆ ಮೇಲ್ತರದ ವಿಚಾರ ಒದಗಿಸುತ್ತಿದ್ದರು. ಶ್ರೀಹರಿ ಚಿತ್ತಾ ಹರಿ ಚಿತ್ತ" ||

**ಭಾವಸೂಚನ :**—(ಜಂಬುಖಂಡಿ ಶ್ರೀ ವಾದಿರಾಜಾಚಾರ್ಯಕೃತ) ಈಗ್ಗೆ ಸಂಕ್ಷೇಪದಿಂದ, ಉಕ್ತಶ್ವಾಸ ವಿಚಾರ ವಿಶೇಷ ಮಾಡಬೇಕಾಗಿ ಶ್ವಾಸಸಂಧಿ ಉಪಕ್ರಮಿಸುತ್ತಾರೆ || ಅದಕ್ಕೆ ಸೂಚನಾ || ಹರೇತಿ || ಮಂಜೂಷಾಯಾಂ ತು|| || ಭಾಮಿನಿ ||

**ತ್ರಿವಿಧಚೇತನದಿದ್ದು ಪವನನು |**
**ಅವಿರತದಿ ಸುಶ್ವಾಸ ಜಪಗಳ |**
**ಹವಸಿಲಿಂದಲಿ ಮಾಡಿ ಮಾಡಿಸಿ ಅವರ ಗತಿ ಪಥವ ||**




**ತವಕದಲಿ ಕಾಣಿಸುವನೆಂತೆನೆ ।**
**ಭವದ ಸಂಕಟ ಲೇಶ ವಂಟಿದೆ ।**
**ಕವಿಭಿರೀಡಿತ ಹರುಷಪಡುತಲಿ ಪೊಳೆವ ಮನಸಿನಲಿ ॥ ೧೫ ॥**

ಭಾರತೀಶೇತಿ ॥ ಸಕಳೇತಿ ॥ "ವಾಯುಸ್ತು ತದನುಜ್ಞಯೇತ್ಯುಕ್ತೇಃ ॥ ೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀ ಗುರುಭ್ಯೋ ನಮಃ ॥ಹರಿಃ॥ ಓಂ॥ "ಶ್ವಾಸರೂಪಃ ಜಪಃ ॥ ಏಕ ವಿಂಶತ್ಸಹಸ್ರಾತ್ಮಾ ಸ ಷಟ್‌ಶತಮಹರ್ನಿಶಮ್ ॥ ಅರ್ಪಣೀಯಃ ಹರೌ ನಿತ್ಯಮ್" ॥ ಇತಿ ಚ ವ್ಯಕ್ತೀಕುರ್ವನ್ ಶ್ವಾಸಾನ್ ಗಣಯನ್ ತತ್ಸಂಧಿಂ ಆರಭತೇ "ಭಾರತೀಶ" ಇತಿ ॥

"ಉಸಿರು" = ಶ್ವಾಸ ॥ "ಶ್ವಾಸ ಸಂಖ್ಯಾಕ್ರಮೇಣೈವ ವರ್ಣಯಾಮೀಶ ತುಷ್ಟಯೇ ॥ ಭಾರತೀರಾಟ್ ಜಯತಿ ಷಷ್ಟ್ಯುತ್ತರ ಶತತ್ರಯಮ್ ॥ ಘಟಿಕಾ ಯಾಮ್ ॥ ೧ ॥

## ಕನ್ನಡಾರ್ಥ

"೨೧೬೦೦ ಶ್ವಾಸರೂಪ ಜಪಗಳನ್ನು ನಿತ್ಯದಲ್ಲಿಯೂ ಶ್ರೀಹರಿಯಲ್ಲಿ ಸಮರ್ಪಿಸತಕ್ಕದ್ದು." ಎಂದು ವಿಶದವಾಗಿ ನಿರೂಪಿಸಲು ಶ್ವಾಸಗಳನ್ನು ಗಣನ ಮಾಡಿ ಹೇಳುತ್ತ ಶ್ವಾಸಸಂಧಿಯನ್ನು ಪ್ರಾರಂಭಿಸುತ್ತಾರೆ. "ಭಾರತೀಶನು" ಎಂಬ ಪದ್ಯದಿಂದ.

"ಉಸಿರು" = ಶ್ವಾಸ. ಪರಮಾತ್ಮನ ಪ್ರೀತಿ ವಿಶೇಷವಾಗಲು—ಶ್ವಾಸ ಸಂಖ್ಯೆಯನ್ನು ಕ್ರಮದಿಂದ ಹೇಳುತ್ತೇನೆ. ಭಾರತೀಪತಿ ಪ್ರಾಣದೇವರು ಘಳಿಗೆ ಯೊಂದರಲ್ಲಿ ೩೬೦ ಶ್ವಾಸಮಂತ್ರ ಜಪಗಳನ್ನು ಮಾಡುತ್ತಾರೆ. ॥ ೧ ॥

**ಅವತರಣಿಕಾ :—** ಹಿಂದಿನ ಪದ್ಯದಲ್ಲಿ ಹಂಸಮಂತ್ರ ವಿವರಿಸಿದಂತೆ (೧) ತಾಸಿಗೆ ೯೦೦ ಜಪಗಳನ್ನು ವಾಯುದೇವನು ಮಾಡಿ ಹರಿಗರ್ಪಿಸುವ ವಿಚಾರ ಪೇಳುತ್ತಾ, ವಾಯುದೇವರು ಮೂಲೇಶನ ಪಾದ ಮೂಲದಲ್ಲಿಯೇ ಇಪ್ಪರೆಂದು ತುತಿಸುತ್ತಾರೆ.

**ತಾಸಿಗೊಂಭೈನೂರು ಶ್ವಾಸೋ।**
**ಚ್ಛ್ವಾಸಗಳ ನಡೆಸುತಲಿ ಚೇತನ।**
**ರಾಶಿಯೊಳು ಹಗಲಿರಳು ಜಾಗ್ರತನಾಗಿ ನಿತ್ಯದಲಿ॥**
**ಈ ಸುಮನಸೋತ್ತಂಸ ಲೇಶಾ।**
**ಯಾಸವಿಲ್ಲದೆ ಪೋಷಿಸುತ ಮೂ।**
**ಲೇಶನಂಘ್ರಿ ಸರೋಜ ಮೂಲದಲಿಪ್ಪ ಕಾಣಿಸದೆ ॥ ೨ ॥**

**ಪದ್ಯಾರ್ಥ:**—ತಾಸಿಗೆ ಒಂಭೈನೂರು = ಒಂದು ತಾಸಿಗೆ ಒಂಭತ್ತು ನೂರು (೯೦೦) ಶಾಸೋಚ್ಛ್ವಾಸಗಳ ನಡೆಸುತಲಿ = ಶ್ವಾಸ = ಕೆಳಗೆ ಬರುವ ಉಸುರು. ಉಚ್ಛ್ವಾಸ = ಮೇಲೆ ಎಳಕೊಳ್ಳುವ ಉಸುರು, ಹೀಗೆ ಶ್ವಾಸಗಳನ್ನು ಮಾಡುತ್ತ (ಜಪಿಸುತ್ತ) ಚೇತನರಾಶಿಯೊಳು ಜೀವಿಗಳಾಗಿಪ್ಪ ಎಂಬತ್ತು ನಾಲ್ಕು ಲಕ್ಷ ಯೋನಿಗಳ ಎಲ್ಲ ಪ್ರಾಣಿಗಳಲ್ಲಿ ಹಗಲಿರಳು ಜಾಗ್ರತನಾಗಿ ನಿತ್ಯದಲಿ = ಹಗಲು - ದಿನ ರಾತ್ರಿಗಳಲ್ಲಿ ಬಿಡದೆ, ಅಂದರೆ ಎಲ್ಲ ಕಾಲ ಎಲ್ಲ ಅವಸ್ಥಾ ಜಾಗ್ರತ ಸ್ವಪ್ನ ಸುಷುಪ್ತಿಕಾಲ (ನಿದ್ರಾಕಾಲ)ದಲ್ಲಿ ಸಹ, ಜಾಗ್ರತ ನಾಗಿ ನಿತ್ಯದಲಿ = ನಿತ್ಯದಲ್ಲಿ ಎಚ್ಚರಿಕೆಯುಳ್ಳವನಾಗಿ, ಈ ಸುಮನೋತ್ತಂಸ = ಈ ಪ್ರಾಣದೇವರು, ಸುಮನಸ + ಉತ್ತಂಸ = ದೇವತೆಗಳಲ್ಲಿ ಶ್ರೇಷ್ಠನು, ಲೇಶಾಯಾಸವಿಲ್ಲದೆ ಪೋಷಿಸುತ = ಕಿಂಚಿತು ಸ್ವಲ್ಪಾದರೂ ಶ್ರಮ ವಿಲ್ಲದೆ, ಹಂಸಮಂತ್ರ ಜಪ ಮಾಡಿ, ಸಕಲರಲ್ಲಿ ಶ್ವಾಸೋಚ್ಛ್ವಾಸಮಾಡಿ, ರಕ್ಷಿ ಸುತ್ತಾ, ಮೂಲೇಶನಂಘ್ರಿ ಮೂಲದಲ್ಲಿಪ್ಪ ಕಾಣಿಸದೆ = ಸ್ಥೂಲಹೃತ್ಕಮಲ ಅಷ್ಟದಳಕಮಲ ನಾಳ (ಬುಡ) ದುರ್ಗಾಭಾಗದಲ್ಲಿಪ್ಪ ಅಷ್ಟಭುಜ ನಾರಾಯಣ ನಿಗೆ ಮೂಲೇಶ ಎಂಬ ಹೆಸರು. ಈ ಮೂಲೇಶನಾದ ಹರಿಯ ಪಾದದಡಿ ಯಲ್ಲಿ ಅಜ್ಞರಿಗೆ ಕಾಣಿಸದೆ ಇರುವನು. ಇದು ಸ್ಥೂಲದೇಹ ವಿಷಯ. ಪವನನ ಪಾದಮೂಲದಲ್ಲಿ ಜೀವ ಅನಿರುದ್ಧ ಲಿಂಗದೇಹಯುಕ್ತನಾಗಿರುವನು. ಇದ ರಂತೆ ಅನಿರುದ್ಧ ಲಿಂಗ, ಸ್ವರೂಪ ದೇಹಗಳಲ್ಲಿಯೂ ಶ್ವಾಸಕಾರ್ಯ ಮಾಡುವನು.

**ಭಾವಸೂಚನೆ:**—ಇರಳೀತಿ=ರಾತ್ರಿಯು, ಯತ್ತ್ರತ್ ಪ್ರಾಗ್ ವಿವೃತಂ ॥ ೧ ॥ ಇದನ್ನು ಮೊದಲಿಗೆ ಹೇಳಿದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಾಸಿಗೆ" ಇತಿ ॥ "ಮುಹೂರ್ತೇ ತು ನವಾತ್ಮಶತಸಂಖ್ಯಯಾ"॥ ಮುಹೂರ್ತಪದಂ ಘಟೀದ್ವಯಪರಮ್ ॥ "ಮುಹೂರ್ತಾತ್ ಸಂಗಂ ಉತ್ಸೃಜ್ಯ" ಇತಿ ಪದವ್ಯಾಖ್ಯಾನೇ "ಶ್ರೀಲೋಲನಾ ನೆನೆದೆರಡು ಘಳಿಗೆಯೊಳಗೊಬ್ಬ" ಇತಿ. ವೈಕುಂಠವರ್ಣನೋಕ್ತೇಃ ॥ "ಪ್ರಾಣಾಗ್ನಯಃ" ಇತಿ ಶ್ರುತೇಃ" ॥ ೨ ॥

## ಕನ್ನಡಾರ್ಥ

ಒಂದು ಮುಹೂರ್ತದಲ್ಲಿ ೯೦೦ ಶ್ವಾಸ ಜಪಗಳನ್ನು ಪೂರೈಸುತ್ತಾರೆ, ಮುಗಿಸುತ್ತಾರೆ. "ಮುಹೂರ್ತ" ವೆಂದರೆ ಎರಡು ಘಳಿಗೆಗಳೆಂದು ಅರ್ಥ. (ಸ್ಥೂಲ ಮಾನದಿಂದ) "ಮುಹೂರ್ತಾತ್ = ಮುಹೂರ್ತದಲ್ಲಿ, ಸಂಗಂ=ಸಹವಾಸವನ್ನು, ಉತ್ಸೃಜ್ಯ=ತೊರೆದು" ಎಂಬ ಅರ್ಥವನ್ನು ವಿವರಿಸುತ್ತ "ಎರಡು ಘಳಿಗೆಗಳಲ್ಲಿ" ಎಂದು ವೈಕುಂಠ ವರ್ಣನೆಯಲ್ಲಿ ಹೇಳಿರುತ್ತಾರೆ.

ತಾಸು ಎಂದರೆ ಎರಡು ಘಳಿಗೆ ಒಂದು ಮುಹೂರ್ತವೆಂದು ಸಾಮಾನ್ಯವಾಗಿ ಅರ್ಥ ಹೇಳಿದ್ದರೂ ಅದು ಸ್ಥೂಲ ಮಾನವೆಂದು ತಿಳಿದು, ತಾಸು ಎಂದರೆ **ಎರಡುವರೆ ಘಳಿಗೆಯ ಮುಹೂರ್ತ ವಿಶೇಷವೆಂದು** ತಿಳಿದರೆ ಹಿಂದಿನ ಪದ್ಯದಲ್ಲಿ ಹೇಳಿದ ಒಂದು ಘಳಿಗೆಯ ಶ್ವಾಸಗಳ ಗಣನೆಗೂ ಈಗ ಈ ಪದ್ಯದಲ್ಲಿ ಹೇಳಿದ ತಾಸಿನ ಶ್ವಾಸಗಳ ಸಂಖ್ಯೆಗೂ ಸರಿಯಾಗಿ ಹೊಂದಿಕೆಯಾಗುತ್ತದೆ. ಇಲ್ಲವಾದರೆ ಅರ್ಧಘಳಿಗೆಯ ಶ್ವಾಸ ಸಂಖ್ಯೆಯು ೧೮೦ ಶ್ವಾಸಗಳು ಕಡಿಮೆಯಾಗಿ ತಾಸಿನ ಶ್ವಾಸಸಂಖ್ಯೆಯು ೭೨೦ ಆಗುತ್ತದೆ. ಆದುದರಿಂದ ೨॥ ಘಳಿಗೆಯ ತಾಸನ್ನು ತಿಳಿದರೆ ಸರಿಹೊಂದುತ್ತದೆ. ॥ ೨ ॥

**ಅವತರಣಿಕಾ :—** ಶ್ರೀ ಪ್ರಾಣದೇವರು ಕಾಲನಾಮಕ ಹಂಸೋಪಾಸನೆ ಹಂಸ ಮಂತ್ರಗಳನ್ನು ಒಂದು ಯಾಮದಿಂದ ಆರಂಭಿಸಿ ೧೨ ತಾಸಿನಲ್ಲಿ ಜಪಿಸುವ ಹಂಸ ಮಂತ್ರಗಳ ಸಂಖ್ಯೆಯನ್ನು ಬೇರೆಬೇರೆ ವಿವರಿಸುತ್ತಾರೆ.

**ಅರಿವುದೊಂದ್ಯಾಮದೊಳು ಶ್ವಾಸಗ ।**
**ಳೆರಡು ಸಾವಿರದೇಳುನೂರನು ।**
**ಶರಸಹಸ್ರದ ಮೇಲೆ ನಾನೂರಹವು ದ್ವಿತಿಯಕ್ಕೆ ॥**

**ಮರಳಿ ಯಾಮತ್ರಯಕೆ ವಸುಸಾ।**
**ವಿರದ ಮೇಲಷ್ನೂರೆಣಿಕೆಯುಲಿ ಹ।**
**ನ್ನೆರಡು ತಾಸಿಗೆ ಹತ್ತುಸಾವಿರದೆಂಟುನೂರಹವು ॥೩॥**

**ಪದ್ಯಾರ್ಥ :—** ಅರಿವುದು = ತಿಳಿವುದು, ಶ್ವಾಸಗಳೆರಡುಸಾವಿರದೇಳು ನೂರು. ಒಂದುಯಾಮವೆಂದರೆ (3) ತಾಸಿಗೆ ಎರಡು ಸಾವಿರದಾಏಳುನೂರು ೨,೭೦೦, ಎರಡನೇ ಯಾಮ ಆರುತಾಸಿಗೆ ಶರ = ಐದು ಸಹಸ್ರನಾನೂರು ೫,೪೦೦ ಮೂರನೇ ಯಾಮ (೯) ತಾಸಿಗೆ ವಸು = ಎಂಟುಸಾವಿರದಾನೂರು, ೮,೧೦೦, ನಾಲ್ಕುಯಾಮ ಹನ್ನೆರಡು ತಾಸಿಗೆ ಅಂದರೆ ಒಂದು ಹಗಲಿಗೆ ೧೦,೮೦೦ ಶ್ವಾಸಜಪಗಳು ಅಹವು = ಆಗುವುವು. ಇದು ಉಸುಬಿನ ಕಣಗಳಂತೆ ಬರಿ ಎಣಿಸುವ ಕ್ರಮ ವ್ಯರ್ಥವಲ್ಲ. ಹಂಸನಾಮಕ ಹರಿಯ ಉಪಾಸನೆ ಧ್ಯಾನಕ್ರಮ, ಜ್ಞಾನಿಗಳಿಂದ ತಿಳಿವುದು.

**ಭಾವಸೂಚನೆ :—** ಅರಿವುದೇತಿ = ತಿಳಿಯತಕ್ಕದ್ದು, ಮರಳಿ = ಮತ್ತು ॥೩॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅರಿವುದು" ಇತಿ ॥ "ಶರ" ಪಂಚ ॥ "ವಸು" ಅಷ್ಟ ॥೩॥

## ಕನ್ನಡಾರ್ಥ

ಮೂರುತಾಸಿಗೊಂದು ಯಾಮದಂತೆ ಒಂದು ಯಾಮಕ್ಕೆ ೨೭೦೦, ಎರಡು ಯಾಮಕ್ಕೆ ೫,೪೦೦, ಮೂರು ಯಾಮಕ್ಕೆ ೮,೧೦೦, ನಾಲ್ಕು ಯಾಮಕ್ಕೆ ೧೦,೮೦೦, ಹೀಗೆ ಶ್ವಾಸಗಳನ್ನು ಜಪಿಸುತ್ತಾನೆ. "ಶರಸಹಸ್ರದ ಮೇಲೆ" ಎಂಬಲ್ಲಿ ಶರವೆಂಬುದು ಜ್ಯೋತಿಷ್ಯಶಾಸ್ತ್ರಕಾರರ ಸಂಖ್ಯಾಸಂಜ್ಞಾಪಕವಾಗಿದೆ. ಶರಗಳು ಐದು ಇರುವದರಿಂದ "ಐದು ಸಹಸ್ರ" ಎಂದು ಅರ್ಥ ತಿಳಿಯಬೇಕು. ಅದರಂತೆ "ವಸು"ಗಳು ಎಂಟು ಇರುವದರಿಂದ ವಸು ಸಾವಿರವೆಂದರೆ ೮,೦೦೦ ಎಂದು ಅರ್ಥ ತಿಳಿಯಬೇಕು ॥೩॥

**ಅವತರಣಿಕಾ :—** ಈ ಪದ್ಯದಲ್ಲಿ ಒಂದು ದಿವಸ ಇಪ್ಪತ್ತುನಾಲ್ಕು ತಾಸಿನಲ್ಲಿ ಪ್ರಾಣದೇವರು ಹಂಸೋಪಾಸನೆ ಮಾಡುವಕ್ರಮ. ಅದರ ಸಂಖ್ಯೆ ಯನ್ನು ವಿವರಿಸುತ್ತಾರೆ.

**ಒಂದುದಿನದೊಳಗನಿಳ ಯಿಪ್ಪ।**
**ತ್ತೊಂದುಸಾವಿರದಾರುನೂರು ಮು।**
**ಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವ॥**
**ನೆಂದು ಪವನನ ಪೊಗಳುತಿರು ಯೆಂ।**
**ದೆಂದು ಮರೆಯದೆ ಈ ಮಹಿಮೆ।**
**ಸಂಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ॥೪॥**

**ಪದ್ಯಾರ್ಥ :**—ಒಂದು ದಿನದೊಳಗನಿಳ = ಒಂದು ದಿನ ಒಂದು ಹಗಲು ೧೨ ತಾಸು ರಾತ್ರಿ ೧೨ ತಾಸು ಕೂಡಿದರೆ ೨೪ ತಾಸಿಗೆ ಒಂದು ದಿನವಾಗುತ್ತದೆ. ಇಂತಹ ಒಂದು ದಿವಸದಲ್ಲಿ, ಅನಿಳ = ಶ್ರೀ ವಾಯುದೇವರು, ಇಪ್ಪತ್ತೊಂದು ಸಾವಿರದಾರುನೂರು = ೨೧,೬೦೦ ಶ್ವಾಸಜಪಗಳನ್ನು, ಮುಕುಂದನಾಜ್ಞದಿ ಮಾಡಿ ಮಾಡಿಸಿ = ಮುಕ್ತಿಪ್ರದಾತನಾದ ಶ್ರೀಹರಿಯ ಅಪ್ಪಣೆಯಂತೆ, ತಾನು ಸ್ವತಃ ಸರ್ವಜೀವರೊಳು ಮಾಡಿ, ಮಾಡಿಸಿ, ಜೀವರು ಅಸ್ವಂತ್ರರು ಅಸಮರ್ಥ ರಾದುದರಿಂದ ಮಾಡಿಸಿ, ಲೋಕಗಳ = ಸಕಲಲೋಕಗಳಲ್ಲಿರುವ ಚೇತನರನ್ನು (ಲೋಕಶಬ್ದವು ಇಲ್ಲಿ ಜೀವಪರ) ಪೊರೆವ = ಸಂರಕ್ಷಿಸುವನು. ಎಂದು ಪವನನ ಪೊಗಳುತಿರು = ಸ್ವರೂಪದೇಹದಿ ಇರತಕ್ಕ ಪವಮಾನಾಭಿಧ ವಾಯುದೇವರನ್ನು ಹೊಗಳುತ್ತ ಕೊಂಡಾಡು, ಸ್ತುತಿಸುತ್ತಲಿರು, ಎಂದೆಂದೂ ಮರೆಯದೇ = ಸರ್ವ ಕಾಲದಲ್ಲಿ ಒಂದು ಲವತ್ರುಟಿಕಾಲವಾದರೂ ಮರೆಯದೇ ಸ್ತೋತ್ರಮಾಡು. ಈ ಮಹಿಮೆ = ಶ್ರೀ ವಾಯುದೇವರ ಹಂಸೋಪಾಸನೆ ಮಾಳ್ಪ ಮಾಹಾತ್ಮ್ಯ, ಸಂಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ = ಇಂದ್ರದೇವರೇ ಮೊದ ಲಾದ ದೇವತೆಗಳಿಗೆ ಇಂಥ ಶಕ್ತಿಯುಂಟೆ ಇಲ್ಲ, ಸರ್ವಕಾಲದಲಿ ನೋಡಲು ಇಂತಹ ಶಕ್ತಿ ಇತರರಿಗೆ ಇಲ್ಲೇ ಇಲ್ಲವೆಂದು ಭಾವ.

**ಭಾವಸೂಚನ :**—ವಂದೇತಿ॥ 'ಸಂಕ್ರಂದನೋ ದುಶ್ಚ್ಯವನಃ ತುರಾಷಾ ಣ್ಮೇಘವಾಹನಃ' ಇತ್ಯಭಿಧಾನಾತ್ ॥

## ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ

ಮೇಲಯತಿ "ಒಂದು" ಇತಿ॥ "ಸಂಕ್ರಂದನಃ" ಇಂದ್ರಃ ॥೪॥

## ಕನ್ನಡಾರ್ಥ

ಘಳಿಗೆಯಿಂದ ಆರಂಭಿಸಿ ೪ ಯಾಮುಗಳಿಗೆ ೧೨ತಾಸಿಗೆ ಆಗುವ ಶ್ವಾಸಗಳ ಸಂಖ್ಯೆಯನ್ನು ಅನುಕ್ರಮವಾಗಿ ತಿಳಿಸಿ, ದಿವಸದ ಎಲ್ಲ ಶ್ವಾಸಗಳ ಸಂಖ್ಯೆಯನ್ನು ಮೇಳನಮಾಡಿ ತಿಳಿಸುತ್ತಾರೆ "ಒಂದು ದಿನದೊಳು" ಎಂಬ ಪದ್ಯದಿಂದ.

"ಸಂಕ್ರಂದನ" ಇಂದ್ರ ॥ ೪ ॥

**ಅವತರಣಿಕಾ:**—ಈ ಪದ್ಯದಲ್ಲಿ ಒಂದುಪಕ್ಷ ಅಂದರೆ ೧೫ ದಿನಗಳಿಗೆ ಆಗುವ ಹಂಸಮಂತ್ರಗಳ ಜಪಸಂಖ್ಯಾ ಹಂಸಮಂತ್ರಾರ್ಥ ಭಗವದ್ರೂಪ ಗುಣೋತ್ಕರ್ಷ ಮತ್ತು ಎರಡು ಪಕ್ಷಗಳಿಂದ ಕೂಡಿದ ೩೦ ದಿನ ಒಂದು ಮಾಸ ದಲ್ಲಿ ಹರಿಯ ಹಂಸಮಂತ್ರ ಸಂಖ್ಯಾವಾಚಕ ಹರಿಯ ಗುಣೋತ್ಕರ್ಷವನ್ನು ವಿವರಿಸುತ್ತಾರೆ.

**ಮೂರುಲಕ್ಷದ ಮೇಲೆ ವಿಂಶತಿ ।**
**ಈರೆರಡು ಸಾವಿರವು ಪಕ್ಷಕೆ ।**
**ಆರುಲಕ್ಷದ ಮೇಲೆ ನಾಲ್ವತ್ತೆಂಟು ಸಾವಿರವು ॥**
**ಮಾರುತನು ಮಾಸಕೆ ಜಪಿಸಿ ಸಂ ।**
**ಸಾರಸಾಗರದಿಂದ ಸುಜನರ ।**
**ಪಾರುಗಾಣಿಸಿ ಸಲಹುವನು ಬಹುಭೋಗಗಳನಿತ್ತು ॥ ೫ ॥**

**ಪದ್ಯಾರ್ಥ :**—ಒಂದು ಪಕ್ಷ ೧೫ ದಿವಸಕ್ಕೆ, ಹಂಸಮಂತ್ರ ಜಪ ಸಂಖ್ಯೆಯು ಮೂರುಲಕ್ಷದ ಮೇಲೆ ವಿಂಶತಿ ಈರೆರಡುಸಾವಿರವು = ಮೂರು ಲಕ್ಷದಾ, ವಿಂಶತಿ=ಇಪ್ಪತ್ತು, ಈರೆರಡು=ನಾಲ್ಕು ನಾಲ್ಕುಸಾವಿರವು ೩೨೪೦೦೦ ಇಷ್ಟು ಸಂಖ್ಯಾಕ ಭಗವದ್ರೂಪ ಹಂಸಗುಣೋತ್ಕರ್ಷಣೆಯು, ಪ್ರಾಣದೇವರು ಅರಿತು ಮಾಡುವರು. ಮಾಸಕೆ = ಒಂದುಮಾಸ ೩೦ ದಿನಕ್ಕೆ, ಆರುಲಕ್ಷದ ಮೇಲೆ ನಾಲ್ವತ್ತೆಂಟುಸಾವಿರವು =೬೪೮೦೦೦, ಶ್ವಾಸಜಪ, ಮಾರುತನು = ಶ್ರೀ ವಾಯುದೇವರು ಜಪಿಸಿ, ಸುಜನರ ಸಂಸಾರಸಾಗರದಿಂದ ಪಾರುಗಾಣಿಸಿ = ಸಜ್ಜನರಾದ ಮುಕ್ತಿಯೋಗ್ಯರನ್ನು ಈ ಸಂಸಾರಸಮುದ್ರದಿಂದ ದಾಟಿಸಿ, ಲಿಂಗ ಭಂಗಮಾಡಿಸಿ, ಬಹುಭೋಗಗಳನಿತ್ತು ಸಲಹುವನು = "ದೀನಂ ದೂನಂ ಅನಾಥಂ ಶರಣಾಗತಂ ಮಾಂ ರಕ್ಷ ರಕ್ಷ" ಎಂದು ಹರಿಯನ್ನು ಪ್ರಾರ್ಥಿಸಿ,

ಮುಕ್ತಿಯೋಗ್ಯರಿಗೆ ಸ್ವರೂಪಾನಂದ ಸುಖವೆಂಬ ಬಹು ಅನಂತಭೋಗ ಸುಖ ಆನಂದವನ್ನು ಕೊಟ್ಟು ಮುಕ್ತಿಯಲ್ಲಿ ಸಹ ವಾಯುವೇ ಬ್ರಹ್ಮರೂಪದಿಂದ ಕಾಪಾಡುವನು.

**ಭಾವಸೂಚನ :**—ಮೂರೇತಿ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮೂರು" ಇತಿ ॥ ೫ ॥

**ಕನ್ನಡಾರ್ಥ**

ಪಕ್ಷಮಾಸಗಳಿಗೆ ಆಗುವ ಶ್ವಾಸಸಂಖ್ಯೆಯನ್ನು ಬೇರೆಬೇರೆಯಾಗಿ ತಿಳಿಸುತ್ತಾರೆ-"ಮೂರುಲಕ್ಷ ದಮೇಲೆ" ಎಂಬ ಪದ್ಯದಿಂದ ॥೫॥

**ಅವತರಣಿಕಾ :**—ಎರಡು ತಿಂಗಳುಗಳಲ್ಲಿ ಆಗುವ ಹಂಸಮಂತ್ರ ಮತ್ತು ಅರ್ಧ ವರುಷವೆಂದರೆ ಒಂದು ಅಯನ ಆರುತಿಂಗಳಲ್ಲಿ ಶ್ರೀ ವಾಯು ದೇವರು ಮಾಡುವ ಹಂಸಮಂತ್ರ ಜಪಸಂಖ್ಯೆಯನ್ನು ವಿವರಿಸುತ್ತಾರೆ.

**ಎರಡು ತಿಂಗಳಿಗಹುದು ಋತು ಭೂ ।**
**ಸುರರು ತಿಳಿವುದು ಶ್ವಾಸಜಪ ಹ ।**
**ನ್ನೆರಡು ಲಕ್ಷದ ಮೇಲೆ ತೊಂಭತ್ತಾರು ಸಹಸ್ರ ॥**
**ಕರೆಸುವದು ಅಯನಾಹ್ವಯದಿ ಅರೆ ।**
**ವರುಷ ಮೂತ್ತೆಂಟು ಲಕ್ಷೋ ।**
**ಪರಿ ತಿಳಿವುದೆಂಭತ್ತು ಯೆಂಟು ಸಹಸ್ರ ಕೋವಿದರು ॥ ೬ ॥**

**ಪದ್ಯಾರ್ಥ :**—ಭೂಸುರರು ತಿಳಿವುದು = ಬ್ರಾಹ್ಮಣರು ಬ್ರಹ್ಮ ಜಿಜ್ಞಾಸಾ ಮಾಡುವವರು ಕಾಲನಾಮಕ ಹರಿಯನ್ನು ತಿಳಿಯುವದು, ಎರಡು ತಿಂಗಳಿಗಹೆದು ಋತು = ಎರಡು ತಿಂಗಳಿಗೆ ಒಂದು ಋತು ಆಗುವುದು, ಈ ಎರಡು ತಿಂಗಳಿಗೆ ಹಂಸಮಂತ್ರ ಜಪವು, ಹನ್ನೆರಡು ಲಕ್ಷದಮೇಲೆ ತೊಂಭತ್ತಾರು ಸಹಸ್ರ = ೧೨,೯೬೦೦೦ ಆಗುತ್ತವೆ. ಕರೆಸುವದು ಅಯನಾಹ್ವಯದಿ ಅರೆವರುಷ = ಒಂದು ಅಯನ = ಆರು ತಿಂಗಳಗಳು ಅರ್ಧ ವರುಷವೆಂದು ಕರೆಸುತ್ತದೆ. ಈ ಆರು ತಿಂಗಳಿಗೆ ಮೂವತ್ತೆಂಟು ಲಕ್ಷೋಪರಿ ತಿಳಿವು

ದೆಂಭತ್ತೆಂಟುಸಹಸ್ರ ಕೋವಿದರು = ಮೂವತ್ತೆಂಟು ಲಕ್ಷಕ್ಕೆ ಉಪರಿ, ಮೇಲೆ ಎಂಭತ್ತೆಂಟುಸಾವಿರ ಹಂಸಮಂತ್ರ ಜಪ ಶ್ರೀ ಪ್ರಾಣದೇವರು ಮಾಡುವರೆಂದು ಕೋವಿದರು = ಜ್ಞಾನಿಗಳು ತಿಳಿಯುವದು. ಶ್ರೀ ಪ್ರಾಣದೇವರೇ ಹಂಸಮಂತ್ರ ಜಪದಲ್ಲಿ, ಹಂಸನಾಮಕ ಹರಿಯ ಗುಣ-ರೂಪ-ಕ್ರಿಯಾ ಧ್ಯಾನಗೈಯ್ಯುವರು. ಎಂದು ತಿಳಿದರೆ ಮಾನವರಿಗೆ ಅದರ ಫಲ.

**ಭಾವಸೂಚನ :**—ಎರಡೇತಿ ॥ ೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಎರಡು" ಇತಿ "ಅರೆ" = ಅರ್ಧಃ ॥ ೬ ॥

## ಕನ್ನಡಾರ್ಥ

ಋತು, ಅಯನ-(ಅರ್ಧವರ್ಷ)ಗಳಲ್ಲಿ ಮಾರುತನು ಮಾಡುವ ಶ್ವಾಸಗಳ ಸಂಖ್ಯೆಗಳನ್ನು ಬೇರೆಬೇರೆಯಾಗಿ ತಿಳಿಸುತ್ತಾರೆ. "ಎರಡು" ಎಂಬ ಪದ್ಯ ದಿಂದ ॥ ೬ ॥

**ಅವತರಣಿಕಾ :**—ಶ್ರೀ ಪ್ರಾಣದೇವರು ಒಂದು ವರ್ಷದಲ್ಲಿ ಹಂಸ ಮಂತ್ರ ಜಪಗಳ ಸಂಖ್ಯಾವಿವರ ಚಿಂತಿಸುವ ಭಕ್ತರ ಪಾಪರಾಶಿಗಳನ್ನು ಪರಿಹರ ಗೈಸುತ್ತಾನೆ. ದೈತ್ಯಾದಿಗಳಲ್ಲಿಯೂ ಇದ್ದು ಶ್ರೀ ಪ್ರಾಣದೇವರು ಸೋಹಂ ಎಂದು ಉಪಾಸನೆಮಾಡುವ ಕ್ರಮುವನ್ನೂ ಈ ಪದ್ಯದಿಂದ ವಿವರಿಸುತ್ತಾರೆ.

**ವರುಷಕಿದರಿಮ್ಮಡಿ ಜಪಂಗಳ ।**
**ಗುರುವರಿಯು ತಾಮಾಡಿ ಮಾಡಿಸಿ ।**
**ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ॥**
**ಸುರ ವಿರೋಧಿಗಳೊಳಗೆ ನೆಲಸಿ ।**
**ದ್ದರವಿದೂರ ತಮೋಧಿಕಾರಿಗ ।**
**ಳಿರವರಿತು ಸೋಹಂ (ಮ್ಮ) ಉಪಾಸನೆ ಮಾಳ್ಪನವರಂತೆ ॥೭॥**

**ಪದ್ಯಾರ್ಥ :**—ವರುಷಕಿದರಿಮ್ಮಡಿ ಜಪಂಗಳ = ಒಂದು ವರ್ಷಕ್ಕೆ ಇದರಿಮ್ಮಡಿ = ಹಿಂದೆ ಪೇಳಿದಂತೆ ಇದರ ಒಂದು ಅಯನಕ್ಕೆ ಆಗುವ ಇಮ್ಮಡಿ=

ಎರಡು ಪಟ್ಟು, ಅಂದರೆ ಅಯನಕ್ಕೆ ೩೮,೮೮೦೦೦ ಇದರ ಎರಡ ಪಟ್ಟ
೩೮,೮೮೦೦೦ ಕೂಡಿಸಿದರೆ
————
೭೭,೭೬೦೦೦ ಎಪ್ಪತ್ತೇಳು ಲಕ್ಷ ಎಪ್ಪತ್ತಾರು ಸಹಸ್ರ ಹಂಸಮಂತ್ರ ಜಪಗಳನ್ನು (ಶ್ವಾಸಗಳನ್ನು) ಗುರುವರ್ಯ= ಅಜ್ಞಾನಾಂಧಕಾರವನ್ನು ಕಳೆದು ಜ್ಞಾನಸವನ್ನೀಯುವುದರಲ್ಲಿ ಶ್ರೇಷ್ಠರಾದ ಶ್ರೀ ವಾಯುದೇವರು ತಾವು ಸ್ವತಃ ಇಷ್ಟು ಶ್ವಾಸ ಜಪಗಳನ್ನು ಮಾಡಿ, ಮಾಡಿಸಿ= ಜೀವರುಗಳಿಂದ ಮಾಡಿಸುತ್ತಾ, ಸಜ್ಜನರಿಗೆ ಶ್ರೀ ಪ್ರಾಣದೇವರೇ ಶ್ವಾಸಮಂತ ಜಪ ಮಾಡಿಸುವನೆಂಬ ಸುಜ್ಞಾನವನ್ನು ಪಾಲಿಸಿ ಆ ಸಜ್ಜನರಿಗೆ, ಚಿಂತನಗೆ, ಧ್ಯಾನಕ್ಕೆ ತಂದು ಉಪಾಸನೆಗೈಸಿ, ಆ ಸಜ್ಜನರಾದ= ಇಂಥ ಸಮೀಚೀನ ಜ್ಞಾನವುಳ್ಳವರ, ದುರಿತಗಳನ್ನು ಪರಿಹರಿಸುವನು = ಪಾಪರಾಶಿಗಳನ್ನು ಪರಿಹಾರ ಮಾಡುವನು. ಅಂದರೆ, ದೇಹ ಕಾಯ ಕ್ಲೇಶಾದಿ, ತಾಪತ್ರಯ ದೂರ ಮಾಡಿ ಲಿಂಗಭಂಗಮಾಡಿ ಮುಕ್ತಿಯನ್ನು ಕೊಡುವನು. ಸುರವಿರೋಧಿಗಳೊಳಗೆ= ದೇವತೆಗಳ ವಿರೋಧಿಗಳು ಶತ್ರುಗಳಾದ ತಮೋಯೋಗ್ಯರಾದ ದೈತ್ಯರಲ್ಲಿ, ಆ ಜೀವರಿಂದ ಸೋಹಂ ಉಪಾಸನೆ ಮಾಡಿಸುವನು. ಆ ದೈತ್ಯಾದಿಗಳಿಗೆ ಸಃ ಅಹಂ= ಅವನೇ ನಾನೆಂಬ ಜ್ಞಾನ (ಜೀವಬ್ರಹ್ಮ ಐಕ್ಯ ಅಜ್ಞಾನವನ್ನು ಕೊಟ್ಟರೂ, ಶ್ರೀ ಪ್ರಾಣದೇವರು ತಾವು "ಸೋಹಂ" ಎಂದರೆ, "ಸಃ ತದಂತರ್ಯಾಮಿಯಾದ ಭಗವಂತನೇ ಅಹಂ ಮದಂತರ್ಯಾಮಿ ಎಂದು ಅಂತರ್ಯಾಮಿ ವಿವಕ್ಷದಿಂದ ಅರ್ಥಮಾಡಬೇಕು. ಶ್ರೀ ಬ್ರಹ್ಮಸೂತ್ರ ಭಾಷ್ಯದಲ್ಲಿ ಪೇಳಿದ್ದಾರೆ.

"ಸೋಹಮಸ್ಮಿ ಸ ಏವಾಹ" ತ್ವದಂತರ್ಯಾಮ್ಯಪೇಕ್ಷಯಾ | ಅಂತರ್ಯಾಮಿಣಮೀಶೇಶಮಪೇಕ್ಷಾಹಂ ತ್ವಮಿತ್ಯಪಿ || ಸರ್ವೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇಪಿ ವಸ್ತುಷ್ವಿತಿ ||

**ಭಾವಸೂಚನ :—**ವರುಷೇತಿ ಇಮ್ಮಡಿ= ದ್ವಿಗುಣಾ || ೭ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವರುಷ" ಇತಿ || "ಇಮ್ಮಡಿ" ಎರಡು ಮಡಿ || "ಸೋಹಮ್" ಇತಿ || "ಸಾರತ್ವಾತ್ ಸಃ || ಅಹೇಯತ್ವಾತ್ ಅಹಂ ನಾಮಾ" ಇತಿ ಬುದ್ಧ್ಯಾ||

ಅತ್ರ ಕೇಚನ ಶಂಕಂತೇ ॥ "ಶತಾಯುರ್ವೈ" ಇತಿ ಸರ್ವಸಮಾನೇ ವಿಷ್ಣು ತೀರ್ಥಜಿತಾಮಿತ್ರಾದೀನಾಂ ಆಸಹಸ್ರಾಬ್ದಂ ಆಕಲ್ಪಂ ಆಕೋಟ್ಯಬ್ದಜೀವನಂ ಕಥಮ್? ॥ ಕಿಂ ಚ ದುಷ್ಕೃತ್ಯಾಂ ಶತಾದರ್ವಾಕ್ ಜೀವನಮ್ ಕಿಂ ಸುಕೃತ್ಯಾ?॥ ಪೂರ್ತಿಃ ಚ ಕಿಂ ನಾಮ ॥ ಅಪಿ ಚ ಪಿಪೀಲಿಕಾದೌ ಕರೋತಿ ವಾ ನ ಚೇತಿ ॥ ತೇಷಾಂ ಯದ್ದಿನೇ ಶ್ವಾಸನಿಃಸರಣಂ ತದಾರಭ್ಯ ಉಕ್ತರೀತ್ಯಾ ಗಣನೇ ಯದ್ದಿನೇ ವರ್ಷಶತಂ ತದಾ ಸಮಾಪ್ತಿಃ ॥ ಸೌರಾಂತರಿತಕಾಲಾಧಿಕ್ಯೇಪಿ ನ ದೋಷಃ ॥ ಅರ್ವಾಕ್ ಜೀವನಂ ತು ಏಕದಿನೇ ಚ ಉಕ್ತಶ್ವಾಸೈಃ ಅಪಿ ಆಧಿಕ್ಯಂ ಚೈತದೇವ। ಪೂರ್ತಿಃ ನಾಮ ಶ್ವಾಸಸಾಮ್ಯಂ ಸರ್ವೇತ್ಯುಕ್ತೇಃ ॥ "ಆಪಿಪೀಲಂ ಕರೋತ್ಯೇವ ॥" ಧೃತಪ್ರಾಣೇಷು ಪಾಂಶು ಹಂಸೋಹಂ ಸಂಚಿಂತಯತಿ ಉಪರತವ್ಯಾಪಾರಃ? (ಇತಿ ಪ್ರಶ್ನಾ ನಿರೂಪಿತಾಃ ಸಾಧಃ) ಇದು ಕೆಲವೆಡೆಗಳಲ್ಲಿ ಇಲ್ಲ. ಅಧಿಕಪಾಠ.

## ಕನ್ನಡಾರ್ಥ

"ಸೋಽಹಂ" ಎಂಬಲ್ಲಿ "ಸಃ" "ಅಹಂ" ಎರಡು ಪದಗಳಿರುತ್ತವೆ. ಸಾರರೂಪ ನಾದುದರಿಂದ ಸರ್ವಶ್ರೇಷ್ಠನಾದುದರಿಂದ "ಸಃ" ಎಂದು ಪರಮಾತ್ಮನಿಗೆ ಕರೆಯುತ್ತಾರೆ. (೧) 'ಅಹಂ' ಎಂಬ ಶಬ್ದ ವಾಚ್ಯರಾದ ಜೀವಾದಿಗಳೆಲ್ಲರಿಗೂ ಅಂತರ್ಯಾಮಿಯಾಗಿರುವದರಿಂದಲೂ (೨) "ತಮೇವೈತಂ ಜಾನಥ" "ಅಮೃತ ಸ್ಯೈಷ ಸೇತುಃ" ಎಂಬ ವಾಕ್ಯಗಳಿಂದ ಮೋಕ್ಷ ಜನಕಜ್ಞಾನ ವಿಷಯನಾದು ದರಿಂದ ಶ್ರೀಹರಿಯನ್ನೇ ಉಪಾಸಿಸತಕ್ಕದ್ದು, ಮಿಕ್ಕವರನ್ನು ಬಿಡಬೇಕು" ಎಂದು ಹೇಳಿದಂತೆ. ಅಹೇಯ ಉಪಾಸ್ಯನಾದುದರಿಂದಲೂ "ಅಹಂ" ಎಂದು ಪರಮಾತ್ಮನಿಗೆ ಕರೆಯುತ್ತಾರೆ. ಈ ದೃಷ್ಟಿಯಿಂದ "ಸಾರನೂ ಅಹೇಯನೂ" ಎಂಬ ಅರ್ಥವಿವಕ್ಷೆಯಿಂದ ವಾಯುದೇವರು "ಸೋಽಹಮ್" ಎಂದು ತಾಮಸ ದಲ್ಲಿ ಉಪಾಸಿಸುತ್ತಾರೆಯೇ ಹೊರತು "ಜೀವಪರಮಾತ್ಮರು ಅಭಿನ್ನರು" ಎಂದು ಉಪಾಸಿಸುವದಿಲ್ಲ.

ವಾಯುದೇವರು ಮಾಡುವ ಶ್ವಾಸಜಪಗಳ ವಿಷಯದಲ್ಲಿ ಕೆಲವರು ಹೀಗೆ ಸಂಶಯಪಡುತ್ತಾರೆ "ಶತಾಯುರ್ವೈ ಪುರುಷಃ" ಎಂದು ಹೇಳಿದಂತೆ ಒಂದು ನೂರುವರ್ಷ ಆಯುಷ್ಯವು ಸರ್ವರಿಗೂ ಸಮಾನವಾಗಿ ಅನ್ವಯಿಸಿದರೆ ಶ್ರೀ ವಿಷ್ಣುತೀರ್ಥ, ಜಿತಾಮಿತ್ರ ಮುಂತಾದ ಮಹಾಮಹರ್ಷಿಗಳು ಸಹಸ್ರ-ಕೋಟಿ-

ಅಬ್ದ-ಕಲ್ಪವರ್ಷಗಳ ಪರ್ಯಂತರ ಜೀವಿಸುವುದು ಹೇಗೆ ಯುಕ್ತವಾಗುತ್ತದೆ? ನೂರು ವರ್ಷಗಳು ಆಗುವುದಕ್ಕಿಂತ ಪೂರ್ವದಲ್ಲಿಯೇ ಮರಣಹೊಂದಿ ಜೀವನ ಮುಗಿಯುವುದಕ್ಕೆ ಪಾಪವು ಕಾರಣವೋ ಹೇಗೆ? ಮತ್ತು ಪುಣ್ಯವು ನೂರು ವರ್ಷದ ಆಯುಷ್ಯಕ್ಕೆ ಕಾರಣವೋ ಹೇಗೆ? ಶತಾರ್ವಾಕ್ ಜೀವಿಗಳು, ಶತಸಂವತ್ಸರದ ಜೀವಿಗಳು. ಇವರುಗಳೆಲ್ಲರಿಗೂ ಶ್ವಾಸಸಂಖ್ಯೆಗಳು ಪೂರ್ತಿಯಾಗುವವೇ? ಹೇಗೆ ಆಗುವವು? ಇರಿವೆ ಮುಂತಾದ ಪ್ರಾಣಿಗಳಲ್ಲಿ ಶ್ವಾಸಜಪಗಳನ್ನು ಮಾಡುವನೋ ಇಲ್ಲವೋ? ಎಂದು ಸಂಶಯಪಡುತ್ತಾರೆ.

ಈ ಸಂಶಯಗಳಿಗೆ ಹೀಗೆ ಉತ್ತರ ದೊರೆಯುತ್ತದೆ. ಯಾವ ದಿವಸದಲ್ಲಿ ವಿಷ್ಣುತೀರ್ಥರಂತಹ ಮಹಾಮಹರ್ಷಿಗಳಿಗೆ ಶ್ವಾಸವು - ಶ್ವಾಸೋಚ್ಛ್ವಾಸವು ಸುರುವಾಗುತ್ತದೆಯೋ ಆ ದಿವಸದಿಂದ ಆರಂಭಿಸಿ ಹಿಂದೆ ಹೇಳಿದಂತೆ ಘಳಿಗೆ ಮುಂತಾದ ಕಾಲಗಳಂತೆ ಶ್ವಾಸಗಳನ್ನು ಗಣನೆ ಮಾಡಿದರೆ ಯಾವ ದಿವಸದಲ್ಲಿ ನೂರುವರ್ಷಗಳಾಗುವವೋ; ಆ ದಿವಸದಲ್ಲಿಯೇ ಅವರ ಶ್ವಾಸವು ಪರಿಸಮಾಪ್ತಿಯಾಗುವುದು. ಪ್ರಚಲಿತ ಸೂರ್ಯವರ್ಷಗಳ ಅಂತರವು ಬಂದರೂ ಸಹ ದೋಷವಿಲ್ಲ. ಶ್ವಾಸನಿರೋಧದಿಂದ ಪ್ರಚಲಿತ ಸೂರ್ಯಗತಿಯಿಂದ ಆದ ವರ್ಷಗಳು ಅಧಿಕವಾಗಿ ಕಳೆದು ಹೋದರೂ, ನಿಜವಾದ ವರ್ಷಗಳ ಎಂದರೆ ಹಿಂದೆ ತೋರಿಸಿದಂತೆ ಘಳಿಗೆ–ಮುಹೂರ್ತ–ಯಾಮ–ದಿವಸ–ಪಕ್ಷ–ಮಾಸ ಋತು–ಅಯನ–ವರ್ಷಗಳ ಅವಧಿಯಂತೆ ವರ್ಷಗಳು ಮುಗಿದಿರುವದಿಲ್ಲ. ಎಷ್ಟು ಶ್ವಾಸಗಳಾಗಿರುವವೋ ಅಷ್ಟೇ ನಿಜವಾದ ವರ್ಷಗಳು ಕಳೆದುಹೋಗಿರುತ್ತವೆ. ಹೀಗೆ ಆ ಮಹಾತ್ಮರ ಯೋಗ ಶಕ್ತಿಗೆ ತಕ್ಕಂತೆ ಅವರವರ ಶ್ವಾಸ ನಿರೋಧವಾಗಿ ಸೂರ್ಯಗತಿಯಿಂದಾಗುವ ವರ್ಷಗಳು ಸಹಸ್ರಾರು ಕಳೆದು ಹೋದರೂ, ಅವರ ಕ್ಲೃಪ್ತವಾದ ಶ್ವಾಸಗಳ ಸಂಖ್ಯೆಯೂ, ಅದಕ್ಕೆ ತಕ್ಕಂತೆ ಅವರ ಆಯುರ್ವರ್ಷಗಳೂ ಉಳಿದೇ ಇರುತ್ತವೆ. ಆದುದರಿಂದ ಅವರಿಗೆ ಈ ಸೂರ್ಯಗತಿಯ ಸಹಸ್ರಾರು ವರ್ಷಗಳ ಜೀವನವು (ಬದುಕುವಿಕೆಯು) ಯುಕ್ತವಾಗುತ್ತದೆ. ನೂರುವರ್ಷಗಳೆಂಬುವ ವಚನಕ್ಕೆ ಸೂರ್ಯಗತಿಯ ನೂರುವರ್ಷಗಳೆಂದು ಅರ್ಥವಲ್ಲ. ಹಿಂದೆ ತೋರಿಸಿದ ರೀತಿಯಲ್ಲಿ ೧೦೦ವರ್ಷಗಳಿಗೆ ಎಷ್ಟು ಶ್ವಾಸಗಳಾಗುವವೋ ಅಷ್ಟು ಶ್ವಾಸಗಳಾಗುವ ವರ್ಷಗಳೆಂದು ಅರ್ಥಮಾಡಿದರೆ ಸರಿಹೊಂದಿ ಶ್ರುತಿವಿರೋಧವು ದೂರವಾಗುತ್ತದೆ.

ನೂರು ವರ್ಷಗಳಿಗೆ ಕಡಿಮೆ ಜೀವನದಲ್ಲಿಯೂ ಸಹ ಇದೇ ಗತಿಯೆಂದು ತಿಳಿಯಬೇಕು. ಆ ಕಡಿಮೆ ವರ್ಷಗಳಲ್ಲಿಯೇ ಕ್ಲೃಪ್ತ ನೂರುವರ್ಷಗಳ ಶ್ವಾಸಸಂಖ್ಯೆಯು ಮುಗಿದು ಹೋಗಿರುವದು. ಅವರ ದೈನಂದಿನ ಶ್ವಾಸಗಳ ಸಂಖ್ಯೆಯು ಕ್ಲೃಪ್ತಶ್ವಾಸಗಳ ಸಂಖ್ಯೆಗಿಂತ ಹೆಚ್ಚಿಗೆ ಇರುತ್ತದೆ.

ಇದಕ್ಕೇ "ಶ್ವಾಸಪೂರ್ತಿ" ಎಂದು ಹೇಳುತ್ತಾರೆ. ಹೀಗೆ "ಸರ್ವರಲ್ಲಿಯೂ ಶ್ವಾಸಗಳು ಸಮವಾಗಿರುತ್ತದೆ" ಎಂದು ಪ್ರಮಾಣಗಳೂ ಇರುತ್ತವೆ.

ಇರುವೆಮುಂತಾದ ಪ್ರಾಣಿಗಳಲ್ಲಿಯೂ ಶ್ವಾಸಜಪಗಳು ಆಗಿಯೇ ಆಗುತ್ತವೆ. ಇರಿವೆಯನ್ನಾರಂಭಿಸಿ ಎಷ್ಟು ಪ್ರಾಣಿಗಳು ಸೃಷ್ಟಿಗೆ ಬಂದ ಚೇತನರು ಇರುತ್ತಾರೋ ಅವರೆಲ್ಲರಲ್ಲಿಯೂ; ಹಿಂದೆ ಹೇಳಿದಂತೆ ಮುಖ್ಯಪ್ರಾಣದೇವರು ಶ್ವಾಸಜಪಗಳನ್ನು ನಡೆಸುತ್ತಾರೆ.

ಕಂಠಗತ ಪ್ರಾಣವುಳ್ಳವರಲ್ಲಿ ಮಂದವಾಗಿ ಎಲ್ಲ ವ್ಯಾಪಾರಗಳಿಂದ ನಿವೃತ್ತರಾಗಿ "ಹಂಸೋಹಂ" ಮೆಲ್ಲಗೆ ಚಿಂತಿಸುತ್ತಿರುತ್ತಾರೆ. ॥ ೭ ॥

**ಅವತರಣಿಕಾ :—** ಸರ್ವರೊಳು ಪ್ರಾಣದೇವರು ಹಂಸಮಂತ್ರಜಪ ಉಪಾಸನೆಯನ್ನು ಮಾಡುತ್ತಿದ್ದರೂ ಈ ಹಂಸಮಂತ್ರಜಪಮರ್ಮವನ್ನು ತಿಳಿಯದೇ ಅನೇಕವಾದ ಮಂತ್ರಜಪವನ್ನು ಮಾಡಿದರೂ ಕಿಂಚಿತ್ ಫಲವಿಲ್ಲವೆಂದು ಹೇಳುತ್ತಾರೆ.

**ಇನಿತುಪಾಸನೆ ಸರ್ವಜೀವರೊ ।**
**ಳನಿಲದೇವನು ಮಾಡುತಿರೆ ಚಿಂ ।**
**ತನೆಯ ಮಾಡದೆ ಕಂಡನೀರೊಳು ಮುಳುಗಿ ನಿತ್ಯದಲಿ ॥**
**ಮನೆಯೊಳಗೆ ಕೃಷ್ಣಾಜಿನಾದ್ಯಾ ।**
**ಸನದಿ ಕುಳಿತು ವಿಶಿಷ್ಟ ಬಹುಸ ।**
**ಜ್ಜನನೆನಿಸಿ ಜಪಮಣಿಗಳೆಣಿಸಿದರೋ ಬೇಸರದೆ ॥ ೮ ॥**

**ಪದ್ಯಾರ್ಥ :—** ಇನಿತುಪಾಸನೆ = ಈಪ್ರಕಾರವಾಗಿ ಪದ್ಯ ೧ ರಿಂದ ಆರಂಭಿಸಿ, ಪದ್ಯ ೭ರವರಿಗೆ ಘಟಿಕಾ, ಯಾಮ, ದಿವಾ, ರಾತ್ರಿ, ಪಕ್ಷ, ಮಾಸ, ಋತು, ಅಯನ, ಅಬ್ದದಲ್ಲಿ (ಆಯಾಕಾಲ ನಾಮಕ ಹರಿಯನ್ನು ಭಜಿಸುವದೆಂದು ಹಿಂದಿನ ಸಂಧಿಯಲ್ಲಿ ಪೇಳಿದಂತೆ, ಶ್ರೀ ಪ್ರಾಣದೇವರು ಈ ಕ್ರಮದಿಂದ

ಮನುಷ್ಯಮಾನ ೧೦೦ ವರ್ಷ ಪರಿಯಂತರವಾಗಿ, ಸರ್ವಜೀವರೊಳು = ತ್ರಿವಿಧ ರಾದ ಎಲ್ಲ ಜೀವರಲ್ಲಿ ಎಂದರೆ ತೃಣಪಿಪೀಲಿಕಾಮಶಕಾದಿ ಬ್ರಹ್ಮಾಂತ ಜೀವರಲ್ಲಿ ಅನಿಲದೇವನು = ಶ್ರೀ ವಾಯುದೇವರು, ಹಂಸಮಂತ್ರ ಜಪವನ್ನು, ಮಾಡು ತಿರೆ = ಮಾಡುತ್ತಿರಲಾಗಿ, ಚಿಂತನೆಯ ಮಾಡದೆ=ಪ್ರಾಣದೇವರು ಮಾಡುವ ಹಂಸರೂಪಿ ಹರಿಯ ಭಗವಂತನ ಗುಣ-ರೂಪ-ನಾಮಕ್ರಿಯಾ, ಉತ್ಕರ್ಷ ಗಳನ್ನು ಗುರುಗಳಿಂದ ತಿಳಿದು, ಮನನ ಧ್ಯಾನಮಾಡದಲೇ ಪ್ರಾಣದೇವರು ಎನ್ನೊಳು ಶ್ವಾಸಜಪ ಮಾಡದಿದ್ದರೆ, ನನ್ನಿಂದ ಇಷ್ಟು ಸಾಧನಗಳಾಗುವದೆಂಬ ದನ್ನು ಮರೆತು, ಕಂಡನೀರೊಳು ಮುಳುಗಿ ನಿತ್ಯದಲ್ಲಿ ಜಲಾಭಿಮಾನಿ ದೇವತೆ ಗಳನ್ನರಿಯದೇ ಬೇಕಾದ ಜಡನೀರಿನಲ್ಲಿ, ಮುಳುಗಿ = ಮುಳುಗಿದರೆ, ಏನು ಫಲವಿಲ್ಲ, ಹೊರಗೆ ಜಡ ನೀರಿನೊಳಗೆ ಮುಳುಗಿ ಮನೆಯೊಳಗೆ ಬಂದು, ಕೃಷ್ಣಾಜಿನಾದ್ಯಾಸನದಿ ಕುಳಿತು = ಚೈಲಾಜಿನಕುಶ ಇತ್ಯಾದಿ ಆಸನದಲ್ಲಿ ಕೂತು ಕೊಂಡು, ವಿಶಿಷ್ಟ = ಬೇರೆಯಾದ, ಬಹು = ಹೆಚ್ಚಿನ, ಸಜ್ಜನನೆನಿಸಿ = ಸಂತಜನರು ಸಾಧುಕರ್ಮ ಬಹಿರಂಗ ತೋರುವನೆಂದೆನಿಸುತ್ತಾ, ಬೇಸರದೇ ಜಪಮಣಿಗಳೆಣಿಸಿದರೇನು = ದಣುವಿಲ್ಲದೇ ಉದಾಸೀನತೆ ಮಾಡದೇ, ಮಂತ್ರಮಂತ್ರಾರ್ಥಗಳನ್ನು ತಿಳಿಯದೇ, ಜಪಸರದಲ್ಲಿ ಇರುವ ಮಣಿಗಳನ್ನು ಎಣಿಸಿದರೆ ಏನೂ ಪ್ರಯೋಜನವಿಲ್ಲ.

**ಭಾವಸೂಚನ:**—ಇನಿತೇತಿ ಇನಿತು ॥ ಇಷ್ಟು ॥ ೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಇನಿತು " ಇತಿ ॥ " ಇನಿತು " ಇಷ್ಟು. ॥ ೮ ॥

## ಕನ್ನಡಾರ್ಥ

ಹೀಗೆ ಇರುವ ಹಂಸ ಮಹಾಮಂತ್ರಗಳ (ಶ್ವಾಸಜಪದ) ಉಪಸಂಹಾರ ಹಾಗೂ ಸಂಕಲ್ಪಗಳನ್ನು ಮಾಡಿ ಮುಖ್ಯಪ್ರಾಣಪತಿ ಹಂಸರೂಪಿ ಪರಮಾತ್ಮ ನನ್ನು ದಿನಾಲು ಧ್ಯಾನಿಸದೇ ಮಾಡುವ ಯಾವದೇ ಜಪವು ವ್ಯರ್ಥವಾಗುವದು. ಆದುದರಿಂದ ಶ್ರೀ ವಾಯುದೇವರ ಹಂಸಮಂತ್ರ ಶ್ವಾಸಜಪಗಳನ್ನು ನಿತ್ಯದಲ್ಲಿ ಸಂಸ್ಮರಿಸುವದು ಮಹಾಮಂತ್ರ ಜಪಗಳಲ್ಲಿ ಮುಖ್ಯವೆಂಬ ತಾತ್ಪರ್ಯದಿಂದ ಹೇಳುತ್ತಾರೆ. " ಇನಿತು " ಎಂಬ ಪದ್ಯವನ್ನು. ॥ ೮ ॥

**ಅವತರಣಿಕಾ :**— ಈ ಸ್ಥೂಲದೇಹಕ್ಕೆ ಉಪಚಯವಾದ ಅನ್ನ, ಉದಕ ಘೃತ, ತದಭಿಮಾನಿಗಳಾರು? ಇವು ಶ್ವಾಸೋಚ್ಛ್ವಾಸಕ್ಕೆ ಕಾರಣ ಹೇಗಾಗುತ್ತವೆ. ಛಾಂದೋಗ್ಯ ಉಪನಿಷತ್ ದಹರ ವಿದ್ಯಾ ರಹಸ್ಯವನ್ನು ಈ ಪದ್ಯದಿಂದ ಉಪದೇಶಿಸುತ್ತಾರೆ.

**ಓದನೋದಕವೆರಡು ತೇಜದೊ ।**
**ಳೈದುವವು ಲಯ ತದಭಿಮಾನಿಗ ।**
**ಳಾದ ಶಿವಪವನರು ರಮಾಧೀನತ್ವ ಐದುವವರು ॥**
**ಈ ದಿವಿಜರೊಡಗೂಡಿ ಶ್ರೀ ಮಧು ।**
**ಸೂದನನ ಐದುವಳು ಯೆಂದರಿ ।**
**ದಾದರದಲನ್ನೋದಕವ ಕೊಡುತುಣುತ ಸುಖಿಸುತಿರು ॥ ೯ ॥**

18224

**ಪದ್ಯಾರ್ಥ :**— ಓದನ = ಅನ್ನ, ಪೃಥ್ವಿ ಅಭಿಮಾನಿ ಶಿವ = ಮಹದೇವರು, ಉದಕವು = ತದಭಿಮಾನಿ, ಪವನ = ಪ್ರಾಣ ವಾಯುದೇವರು, ಎರಡು = ಇವರಿಬ್ಬರು, ತೇಜದೊಳೈದುವವು ಲಯ = ತೇಜ-ಘೃತಾಭಿಮಾನಿಯಾದ ರಮಾಧೀನತ್ವವೈದುವರು. ಶಿವಪವನರು, ರುದ್ರಪ್ರಾಣದೇವರು, ಶ್ರೀ ರಮೆಯರಲ್ಲಿ ಲಯ. ಈ ದಿವಿಜರೊಡಗೂಡಿ = ಶಿವಪವನರೊಡಗೂಡಿ ರಮೆಯು ಶ್ರೀ ಮಧುಸೂದನನ ಐದುವಳು = ಶ್ರೀ ಸಂಪತ್ಕರವಾದ ಜ್ಞಾನಾನಂದದಾಯ ಮುಕ್ತಿಸಂಪತ್ತನ್ನು ಕೊಡುವ, ಮಧುಸೂದನನ ದೈತ್ಯಾದಿಗಳ ಪುಣ್ಯ ಆನಂದವನ್ನು ಹರಣಮಾಡಿ, ದೇವತೆಗಳಿಗೆ ಆನಂದವೀವ ಶ್ರೀಹರಿಯ ಸಾಮೀಪ್ಯ ಪಾಡಲವೈದುವಳು, ಎಂದರಿದು = ಈಪ್ರಕಾರ ತಿಳಿದು, ಆದರದಿ = ಭಕ್ತಿಪುರಸ್ಸರವಾಗಿ, ಅನ್ನೋದಕವ = ಅನ್ನ ಉದಕಗಳನ್ನು, ಕೊಡುತ = ಜ್ಞಾನಿಗಳಿಗೆ ಅನ್ನಪಾನಾದಿಗಳನ್ನು ಕೊಡುತ್ತ, ಸುಖಿಸುತಿರು = ಈ ಸುಜ್ಞಾನದಿಂದ ಆನಂದಪಡುತ್ತಿರು.

**ಭಾವಸೂಚನ :**— ಓದನೇತಿ ॥ ಕಾರ್ಯಸ್ಯ ಕಾರಣೇ ಲಯಃ ಶ್ರೀತಿ ॥ ಐದುವಳೇತಿ ॥ ಅತ್ಯಂತ ಸಾಮೀಪ್ಯಮ್ ॥ ೯ ॥

**ವಿಶೇಷ ಸೂಚನೆ :**— ಪೃಥ್ವಿ ಸ್ಥೂಲಭಾಗ ೧ ಅನ್ನದಿಂದ, ಪುರೀಷ ಮಲ, ೨ ಅನ್ನ ಮಧ್ಯಭಾಗದಿಂದ-ಮಾಂಸ, ೩ ಅನ್ನ ರಸ ಸೂಕ್ಷ್ಮಭಾಗ-ಮನಸಿಗೆ ಉಪಾದಾನಕಾರಣ.

**ಉದಕ** (೧) ಸ್ಥೂಲಭಾಗ–ಮೂತ್ರ, (೨) ಮಧ್ಯಭಾಗ–ರಕ್ತ, (೩) ಸೂಕ್ಷ್ಮಭಾಗ–ವಾಕ್ಯಕ್ಕೆ ಉಪಾದಾನ ಕಾರಣ.

**ಘೃತ** (೧) ಸ್ಥೂಲಭಾಗ ಅಸ್ತಿಗೆ ಕಾರಣ, (೨) ಮಧ್ಯಭಾಗ ರೇತಸ್ಸಿಗೆ ಕಾರಣ; (೩) ಸೂಕ್ಷ್ಮಭಾಗ, ಶ್ವಾಸೋಚ್ಛ್ವಾಸಕ್ಕೆ ಕಾರಣವೆಂದು ಶ್ರೀ ವಿಜಯ ದಾಸರ ಸುಳಾದಿ ಇದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಓದನ" ಇತಿ ॥ "ಓದನ" = ಅನ್ನ ॥ "ಪೃಥಿವ್ಯಧಿಕರಣೇ। ಪೃಥಿವೀ ತತ್ರ ಅನ್ನಶಬ್ದೇನ ಉಚ್ಯತೇ" ॥ ಇತಿ ಭಾಷ್ಯೋಕ್ತೇಃ ॥ ಉಕ್ತವಿವರಣಂ। ಜಡಸ್ಯ ಜಡ ಇತ್ಯೇತಾವತ್ ನ ಇತ್ಯಾಹ* "ತದಿತಿ ॥ ತೇಜದಿ" ರಮಾಯಾಂ "ಪ್ರಾಣಃ ತೇಜಸಿ" ಇತ್ಯುಕ್ತೇಃ ॥ "ತೇಜೋಭಿಧಾಂ ತು ಶ್ರಿಯಮ್" ಇತ್ಯನು ವ್ಯಾಕೃತೌ "ತೇಜಃ ಪರಸ್ಯಾಂ ದೇವತಾಯಾಮ್" ಇತ್ಯುಕ್ತೇಃ "ಮಧು" ಇತಿ ॥ ಏವಂ ಅನ್ನೋದದಾನೇ ಅರ್ಪಿತಂ ಜ್ಞಾನಿನಿ ಹರೌ ಅರ್ಪಿತಂ ಭವತಿ ॥ ೯ ॥

## ಕನ್ನಡಾರ್ಥ

ಪೃಥಿವಿಯಲ್ಲಿರುವದಕ್ಕೂ ಪೃಥಿವಿಯೆಂದು ಹೇಳುತ್ತಾರೆ. ಆದುದರಿಂದ ಓದನ ಶಬ್ದದಿಂದ ಪೃಥಿವೀ ಹಾಗೂ ಅನ್ನವನ್ನು ತೆಗೆದುಕೊಳ್ಳಬೇಕು. "ಅನ್ನ ಶಬ್ದದಿಂದ ಪೃಥ್ವಿಯು ಹೇಳಲ್ಪಡುತ್ತದೆ" ಎಂದು ಭಾಷ್ಯ ವಚನವಿರುತ್ತದೆ. ಈ ವಿವರಣವು "ಜಡಗಳಿಗೇ ಮಾತ್ರವಲ್ಲ" ಎಂದು ಹೇಳುತ್ತಾರೆ. "ತದಭಿ ಮಾನಿ" ಎಂಬ ಪದದಿಂದ. "ತೇಜೋ ಅಭಿಮಾನಿ ರಮಾದೇವಿಯರಲ್ಲಿ ಪ್ರಾಣನು ಲೀನನಾಗುತ್ತಾನೆ" ಎಂದು ಭಾಷ್ಯದಲ್ಲಿ ವಚನವಿರುತ್ತದೆ. "ತೇಜೋ (ರೂಪ ಅಭಿಮಾನಿ) ರಮಾದೇವಿಯರು ಪರದೇವತೆಯಾದ ಪರಮಾತ್ಮನಲ್ಲಿ ಸೇರುತ್ತಾರೆ". ಎಂದು ಅನುವ್ಯಾಖ್ಯಾನ ವಚನವಿರುವದರಿಂದ "ಮಧುಸೂದನ ನನ್ನೈದುವಳು" ಎಂದು ದಾಸರಾಯರು ನಿರೂಪಿಸಿರುತ್ತಾರೆ.

---

*"ಅಪಿ ತು" ಎಂದು ಕೆಲವು ಪುಸ್ತಕಗಳಲ್ಲಿ ಪಾಠವಿದೆ. ಆದರೆ ಇದರಿಂದ ವಾಕ್ಯಪೂರಣವಾಗುವದಿಲ್ಲ. ಕಾರಣ "ಅಪಿ ತು–ಅಭಿಮಾನಿ ದೇವಾನಾಮಪಿ ಇತ್ಯಾಹ "ತದ್" ಇತಿ" ॥ ಎಂದು ಪೂರ್ಣಗೊಳಿಸಬೇಕಾಗುತ್ತದೆ.

ಅನ್ನೋದಕಗಳನ್ನು ಅತಿಥಿ ಅಭ್ಯಾಗತರಿಗೆ ಕೊಡುವಾಗ ಬ್ರಾಹ್ಮಣಾದಿ ಸಂತರ್ಪಣವನ್ನು ಮಾಡುವಾಗ ಈ ರೀತಿಯಾಗಿ ತಿಳಿದು ಅರ್ಪಿಸಿದರೆ ಭೋಜನಾದಿಗಳನ್ನು ಮಾಡಿಸಿದರೆ ಆ ಭೋಜನವು ಶ್ರೀಹರಿಗೆ ಮುಟ್ಟಿ ಅದು ಸಫಲವಾಗುತ್ತದೆ. ಇದೇ ರೀತಿಯಲ್ಲಿ ತಾನು ಭೋಜನ ಮಾಡುವಾಗಲೂ ಅನುಸಂಧಾನಮಾಡಿದರೆ ಶ್ರೀಹರಿಗೆ ಅರ್ಪಿತವಾಗಿ ಅದೂ ಸಫಲವಾಗುತ್ತದೆ. ॥ ೯ ॥

**ಅವತರಣಿಕಾ :—** ಭಗವದ್ಭಕ್ತರು ಸಂತತ ಹರಿಕರ್ತೃತ್ವಾನುಸಂಧಾನರತರು. ಇಂತಹ ತನ್ನವರಾದ ನಿಜಭಕ್ತರು ಕದಾಚಿತು ಶಾಸ್ತ್ರ ಅವಿಹಿತವಾದ ಕೆಟ್ಟಕರ್ಮ ಹರಿಪ್ರೇರಣೆಯಂತೆ ಮಾಡಿದ ಜ್ಞಾನವಂತರ ಕೀಳಕರ್ಮವ ಸ್ವೀಕರಿಸುವನೆಂಬುದು ದೃಷ್ಟಾಂತಪೂರ್ವಕ ಹೇಳುತ್ತಾರೆ. ಈ ಸೂಕ್ಷ್ಮಜ್ಞಾನವು ಹಿಂದಿನ ಪದ್ಯಸಂಬಂಧದಿಂದ ಆಗಬೇಕು.

**ಜಾಲಿತೊಪ್ಪಲಜಾವಿಗಳು ಮೆ ।**
**ದ್ದಾಲಯದಿ ಸ್ವೇಚ್ಛಾನುಸಾರದಿ ।**
**ಪಾಲಗರೆವಂದದಲಿ ಲಕ್ಷ್ಮೀರಮಣ ತನ್ನವರ ॥**
**ಕೀಳ ಕರ್ಮವ ಸ್ವೀಕರಿಸಿ ತ**
**ನ್ನಾಲಯದೊಳಿಟ್ಟವರ ಪೊರೆವ ಕೃ**
**ಪಾಳು ಕಾಮದ ಕೈರವದಳಶ್ಯಾಮ ಶ್ರೀರಾಮ ॥ ೧೦ ॥**

**ಪದ್ಯಾರ್ಥ :—** ಹಿಂದಿನ ಪದ್ಯದಲ್ಲಿ ಆದರದಿಂದ ಅನ್ನ ಉದಕ ಘೃತವನ್ನು ಜ್ಞಾನಿಗೆ ಕೊಡುವದೆಂದು ಹೇಳಿದ್ದಾಗಿದೆ. ತದಭಿಮಾನಿಗಳಾದವರು ರಮಾದ್ವಾರಾ ಶ್ರೀಹರಿಯಲ್ಲಿ ಲಯ ಇಂಥ ಸುಜ್ಞಾನದಿಂದ ಅನ್ನೋದಕ ಕೊಟ್ಟರೂ, ಅದು, ಸ್ಥೂಲ-ಮಧ್ಯಭಾಗದಿಂದ ಅನ್ನದ್ದು, ಪುರೀಷ ಮಲ-ಮಾಂಸ, ಉದಕಸ್ಥೂಲ ಮೂತ್ರ, ಮಧ್ಯ ರಕ್ತ, ಘೃತಸ್ಥೂಲಭಾಗ ಅಸ್ಥಿಗೆ ಕಾರಣ ಮಧ್ಯಭಾಗ ರೇತಸ್ಸಿಗೆ ಕಾರಣವು. ಸೂಕ್ಷ್ಮನೋಡಲಿಕ್ಕೆ ಇವು ಕೀಳವಾದವು. ಸೂಕ್ಷ್ಮಭಾಗ ಅನ್ನ ಮನಸ್ಸಿಗೆ ಉಪಾದಾನ ಕಾರಣ. ಉದಕ ಸೂಕ್ಷ್ಮಭಾಗ ವಾಕ್ಯಕ್ಕೆ ಉಪಾದಾನಕಾರಣ, ಘೃತ ಸೂಕ್ಷ್ಮಭಾಗ ಶ್ವಾಸಕ್ಕೆ ಕಾರಣವಾಗುತ್ತದೆ. ಇದಕ್ಕೆ ದೃಷ್ಟಾಂತ, ಜಾಲಿತೊಪ್ಪಲು = ಜಾಲಿಮುಳ್ಳುಗಿಡದ ತೊಪ್ಪಲು, ಮುಳ್ಳು ಇರುವುದರಲ್ಲೇ ತೊಪ್ಪಲು ಆರಿಸಿಕೊಂಡು, ಅಜ = ಆಡು, ಅವಿ =

ಕುರಿಗಳು ಮೆದ್ದು= ಅಡವಿಯಲ್ಲಿ ತೊಪ್ಪಲು ತಿಂದು, ಆಲಯದಿ= ಮನೆಗೆ ಬಂದು ಪಾಲುಗರೆವಂದದಲಿ=ಹಾಲುಹಿಂಡುವಂತೆ, ಮತ್ತು ಯಥಾ ಗೌಃ ತೃಣ ಧಾನ್ಯಾದಿ ಭುಕ್ತ್ವಾ ಕ್ಷೀರವಹಾ ಭವೇತ್ ॥ ಗೋವು ಹುಲ್ಲುಧಾನ್ಯಾದಿಗಳನ್ನು ಮೆದ್ದು ಹಾಲುಗರೆಯುವಂತೆ, (ಇದು ಏಕದೇಶ ದೃಷ್ಟಾಂತ) ಲಕ್ಷ್ಮೀರಮಣ ತನ್ನವರ = ಶ್ರೀ ಲಕ್ಷ್ಮೀಪತಿಯಾದ ನಾರಾಯಣನು, ತನ್ನವರ = ತನ್ನ ನಿಜ ಭಕ್ತರ, ಕೀಳುಕರ್ಮವ ಸ್ವೀಕರಿಸಿ = ಕೆಟ್ಟಕರ್ಮ ಸ್ವೀಕಾರಮಾಡಿ ಅಂದರೆ, ಮೇಲೆ ವಿವರಿಸಿದಂತೆ ಸ್ಥೂಲ ಮಧ್ಯಭಾಗ ರಸವು ಕೀಳವಾದರೂ, ಕೆಟ್ಟವಾದರೂ ಆರಸವಿಭಾಗದಲ್ಲಿ ತಾನು ಸ್ವಶಕ್ತಿಯಿಂದ ಮಾಡಿ, ಮಲಮೂತ್ರಾದಿ ವಿಸರ್ಜನ ದ್ವಾರಾ, ಮಾಂಸರಕ್ತಾದಿಗಳಿಗೆ ಪುಷ್ಟಿಕೊಟ್ಟು, ಸೂಕ್ಷ್ಮರಸ ವಿಭಾಗದಿಂದ, ಶ್ವಾಸೋಚ್ಛ್ವಾಸದ್ವಾರಾ ವಾಕ್ಯಕ್ಕೆ ಮಾತಾಡಲು ಸ್ತೋತ್ರಮಾಡಲು, ಸಹಾಯ ಕನಾಗಿ, ತನ್ನನ್ನು ಸಮೀಚೀನವಾದ ಮನಸ್ಸಿಗೆ ಉಪಾದಾನಕಾರಣನಾಗಿ ಸ್ವೀಕರಿಸುವನು. ಇಂತಹ ಜ್ಞಾನಿಗಳ ಕೀಳಕರ್ಮವೆ ಹೊರ್ತಾಗಿ ನಮ್ಮಂಥ ಅಜ್ಞರ ಕೀಳಕರ್ಮವಲ್ಲ. ಬಹಿರಂಗದಲ್ಲಿ ಜ್ಞಾನಿಗಳಿಂದ ಕೀಳಕರ್ಮವೇ ಆಗದು. ಕದಾಚಿತು ಆದರೂ, ಆ ಕೆಟ್ಟಕರ್ಮ ಪಾಪವೆನಸದು, ಹರಿಯು ಸ್ವೀಕರಿಸುವನು. ಆ ಕೀಳಕರ್ಮವಾದರೂ ಭಗವತ್ ಸ್ಮೃತಿಯಿಂದ ಆದುದು. ಇದಕ್ಕೆ ಮೇಕೆ, ಕುರಿ, ಗೋದೃಷ್ಟಾಂತ. ಭಗವಂತನ ಇಚ್ಛಾಶಕ್ತಿಗೆ ದೃಷ್ಟಾಂತ. ಇಂತು ತನ್ನವರ ಕೀಳಕರ್ಮ ಸ್ವೀಕರಿಸಿ, ತನ್ನಾಲಯದೊಳಿಟ್ಟು ಪೊರೆವ= ಮುಕ್ತಸ್ಥಾನತ್ರಯದಲ್ಲಿ ಇಟ್ಟು ರಕ್ಷಿಸುವನು. ಏಕಂದರೆ ಶ್ರೀಹರಿಯು ಕೃಪಾಳು = ಪರಮ ಕರುಣಾಳು,, ಕಾಮದ = ಭಕ್ತರು ಬೇಡಿದ ಇಷ್ಟಾರ್ಥವನ್ನು ಕೊಡುವ, ಮುಕ್ತಿಯಲ್ಲಿಯೂ ಸಹ "ಯಂ ಯಂ ಕಾಮಂ ಸ್ಮರನ್" ಮುಕ್ತರು ಬೇಡಿದಿಷ್ಟಾರ್ಥಕೊಡುವ, ಕೈರವದಳಶ್ಯಾಮ = ಕನ್ನೈದಿಲೆಯಂತೆ ಶ್ಯಾಮವರ್ಣ ವಿಶಿಷ್ಟನಾದವ, ಶ್ರೀರಾಮ = ಮುಕ್ತವೈಕುಂಠದಲ್ಲಿ ಅಯೋಧ್ಯಾನಗರಿಯುಂಟು. ಅಲ್ಲಿ ಯೋಗಿಗಳು ಶ್ರೀರಾಮನಲ್ಲೆರಮಣ ಮಾಡಿರುವರೆಂದು, ಶ್ರೀಸ್ವಾದಿ ಗುರು ರಾಜರ, ಶ್ರೀ ವಿಜಯದಾಸರ ಶ್ರೀರಾಮದೇವರ ಸುಳಾದಿ ಮರ್ಮವನ್ನೇ ಇಲ್ಲಿ ರಾಮಶಬ್ದಪ್ರಯೋಗವು ಬಹುಸಾರ್ಥಕ್ಯ.

**ಭಾವಸೂಚನ :—** ಜಾಲೀತಿ ॥ ತದಾಖ್ಯೋ ವೃಕ್ಷಃ ಅಜಾವೀತಿ ॥ ತಜ್ಜಾತೀಯ ಪ್ರಭೇದಃ॥ ಮೆದ್ದುಭಕ್ಷಿಸಿ ॥ ಕೀಳಕರ್ಮ–ಕುತ್ಸಿತಕರ್ಮ ॥ ೧೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಜಾಲಿ " ಇತಿ|| ಅತ್ರ " ಧೇನುಪಾಲ " ಇತಿ ಪೂರ್ವಂ ನಿದರ್ಶನೇ ಅಪಿ " ಯಥಾ ಗೌಃ ತೃಣಧಾನ್ಯಾದಿ ಭುಕ್ತ್ವಾ ಕ್ಷೀರವಹಾ ಭವೇತ್ || ಗವಾದಿ ಭಕ್ಷಿತಂ ವಸ್ತು ಕ್ಷೀರರಕ್ತಾದಿಭೇದತಃ || ಯತ್ ತತ್ ಮಾಯಾಬಲಂ ವಿಷ್ಣೋಃ ಮಹಾಶಕ್ತೇಃ ಮಹಾತ್ಮನಃ" || ಇತಿ ವಿಷ್ಣುರಹಸ್ಯೇ " ಅವಿ " ಮೇಷ " ಕೀಳು " ಕೆಟ್ಟ. ||೧೦||

## ಕನ್ನಡಾರ್ಥ

ಹಿಂದೆ " ಗೋಪಾಲನು ಆಕಳಕಾಯುವವನು " ಎಂದು ದೃಷ್ಟಾಂತವಾಗಿ ಹೇಳಿದ್ದರೂ ಸಹ ಈ ದೃಷ್ಟಾಂತವನ್ನು ತೋರಿಸಿರುವದು "ವಿಷ್ಣುರಹಸ್ಯವನ್ನನುಸರಿಸಲಿ" ಎಂದು ತಿಳಿಯಬೇಕು. " ಗೋವು ತೃಣಧಾನ್ಯಗಳನ್ನು ಮೇಯ್ದು ಹಾಲುಬೆಣ್ಣೆಗಳನ್ನು ಕೊಡುವಂತೆ " ಎಂದು ಒಂದು ನಿದರ್ಶನ. ಗೋವು ಮುಂತಾದವುಗಳು ಮೇಯ್ದ ಆಹಾರವು ಕ್ಷೀರ-ರಕ್ತ ಮುಂತಾದವುಗಳಾಗುವದು ಅಚಿಂತ್ಯಶಕ್ತಿಸಂಪನ್ನನಾರಾಯಣನ ಮಾಯಾ ಇಚ್ಛಾ ಶಕ್ತಿಯ ವಿಲಾಸವೇ ಆಗಿದೆ " ಎಂದು ವಿಷ್ಣುರಹಸ್ಯ ವಚನ. || ೧೦ ||

**ಅವತರಣಿಕಾ :—** ಹಿಂದಿನ ೯-೧೦ ಪದ್ಯ ಅನುಸರಿಸಿರುವ ವಿಷಯವನ್ನೇ ವಿಸ್ತರಗೈಸುತ್ತಾ, ಅನ್ನ ಉದಕ ಘೃತಾದಿಗಳಲ್ಲಿ ಅಭಿಮಾನಿ ದೇವತೆಗಳ ವಿವರ ತದಂತರ್ಗತವಾಯು, ಹರಿರೂಪ ಕಾರ್ಯಗಳನ್ನು ಉಪನಿಷತ್ ವಾಕ್ಯದಂತೆ ವಿವರಿಸುತ್ತಾರೆ.

**ಶಶಿದಿವಾಕರಪಾವಕರೊಳಿಹ |**
**ಅಸಿತಸಿತ ಲೋಹಿತಗಳಲಿ ಶಿವ |**
**ಶ್ವಸನಭಾರ್ಗವಿ ಮೂವರೊಳು ಶ್ರೀಕೃಷ್ಣಹಯವದನ||**
**ವಸುಧಿಪಾರ್ದನು ತ್ರಿವೃತು ಯೆನಿಸೀ |**
**ವಸುಮತಿಯೊಳನ್ನೋದಕಾನಳ |**
**ಪೆಸರಿನಿಂದಲಿ ಸರ್ವಜೀವರ ಸಲಹುವನು ಕರುಣಿ || ೧೧ ||**

**ಪದ್ಯಾರ್ಥ :—** ಶಶಿ = ಚಂದ್ರ ರಾತ್ರಿಗಭಿಮಾನಿ ಚಂದ್ರನು ಸಕಲ ವನಸ್ಪತಿ ಅಭಿವೃದ್ಧಿಗೆ ಕಾರಣನು. ಇಲ್ಲಿ ಶಿವವಾಯ್ವಂತರ್ಗತ ಅಸಿತ =

ಕಪ್ಪುವರ್ಣ ಶ್ರೀ ಕೃಷ್ಣ, ದಿವಾಕರ = ಸೂರ್ಯ ಹಗಲಿಗೆ ಅಭಿಮಾನಿ-ಶ್ವಸನ ವಾಯು, ಅಂತರ್ಗತ ಸಿತ ಬಿಳುಪು ಶ್ರೀಹಯವದನರೂಪ, ಪಾವಕ = ತೇಜ ಘೃತಾಭಿಮಾನಿ ಅಗ್ನಿ, ಮುಖ್ಯರಮಾಲೋಹಿತ = ಕೆಂಪುವರ್ನ ವಿಶಿಷ್ಟ, ವಸುಧಿಪಾರ್ದನ = ರಾಜರುಗಳನ್ನು ಮರ್ದನವಾಡಿದ ಶ್ರೀ ಪರಶುರಾಮನು ಒಬ್ಬನೇ ಆದರೂ ಅನ್ನ ಉದಕ ಘೃತದಲ್ಲಿ, ತ್ರಿವೃತು = ಈ ಮೂರರಲ್ಲಿ ಇರುವ ನಾದ ಕಾರಣ ತ್ರಿವೃತು ಎನಿಸುತ್ತಾನೆ. ವಸುಮತಿಯೊಳು = ಭೂಮಿಯಲ್ಲಿ ಅನ್ನೋದಕಾನಳ ಪೆಸರಿನಿಂದಲಿ ಕರೆಸುತಲಿ = ಅನ್ನ = ಚಂದ್ರಾಂತರ್ಯಾಮಿ ಕೃಷ್ಣ, ಉದಕ = ಸೂರ್ಯಾಂತರ್ಯಾಮಿ ಹಯವದನ-ಅನಳ = ಘೃತತೇಜ ಅಗ್ನ್ಯಂತರ್ಯಾಮಿ ಪರಶುರಾಮ. ಈ ಮೂವರು, ಪೆಸರಿಸಿಂದಲಿ = ಹೆಸರು ನಾಮದಿಂದ ಕರೆಸುತ್ತಾ, ಸರ್ವಜೀವಜೀವರನ್ನು ಸಲಹುವನು = ಅನ್ನೋದ ಕಾದಿಗಳಿಂದ ತೃಪ್ತಿಬಡಿಸಿ ಕಾಪಾಡುವನು. ರಕ್ಷಿಸುವನು ಅಂದರೆ, ಶ್ವಾಸೋ ಚ್ಛ್ವಾಸಕ್ಕೆ ಕಾರಣನಾಗಿ ಸಾಧನಮಾಡಿಸುವನೆಂದು ಅಭಿಪ್ರಾಯ.

**ಭಾವಸೂಚನ** :—ಶಶೀತಿ || ಅಸಿತೇತಿ ತದ್ರೂಪವಿಶಿಷ್ಟತಮೋಗುಣಃ|| ಸಿತ ಶುಕ್ಲವರ್ಣದ ಸತ್ವಗುಣ | ಲೋಹಿತ ರಕ್ತವರ್ಣದ ರಜೋಗುಣ, ಭಾರ್ಗವೀ ರಮಾ, ಶ್ವಸನ ವಾಯು.

ಸೂಚನೆ :—ದ್ರೌಪದೀಶಪತಿ ವಿಠಲರ ವ್ಯಾಖ್ಯಾನ ಪದ್ಯ ೧೧-೧೨-೧೩ ಕ್ಕೆ ಬಹು ಸ್ವಾರಸ್ಯವಾದ ವ್ಯಾಖ್ಯಾನ ೨ ಪತ್ರದೊರೆತದೆ. ದಾಸರು ದೊರಕಿಸಿ ದಷ್ಟು ಕೊಟ್ಟದೆ. ಇವರ ವ್ಯಾಖ್ಯಾನ ಜ್ಞಾನಿಗಳ ಸಮ್ಮತ.

**ದ್ರೌಪದೀಶಪತಿ ವಿಠಲರು** :—ಶಶಿ ದಿವಾಕರ.

| ೧. ಚಂದ್ರ— | ೨. ಸೂರ್ಯ— | ೩. ಅಗ್ನಿ— |
|---|---|---|
| ಅಸಿತ ಕೃಷ್ಣವರ್ಣ ರಾತ್ರಿಗೆ ಅಭಿಮಾನಿ ಯಾದ ಕಾರಣ ಅಂತ ರ್ಗತರೂಪ ಶಿವ-ಚಂದ್ರ ಮೌಳಿತ್ವಾತ್ ವಾಯುಃ ಶ್ರೀಕೃಷ್ಣ. | ಸೂರ್ಯ-ಸಿತ ಬಿಳುಪು ದಿವಾಭಿಮಾನಿತ್ವಾತ್ ವಾಯು. ಹಯವದನ. | ಲೋಹಿತ ಕೆಂಪುವರ್ಣ. ರಮಾ ಅಗ್ನಿಯಲ್ಲಿ ಸ್ತ್ರೀಯರುಗಳು ಅಭಿಮಾನಿ. ವಸುಧಿಪಾರ್ದನ ಪರಶುರಾಮ. |

ತ್ರಿವೃತು ಎನಿಸಿ ಅಂದರೆ, ಅನ್ನದಾಗ ಶ್ರೀಕೃಷ್ಣ, ಉದಕದಾಗ ಹಯ ವದನ, ಅಗ್ನಿವಳಗ ಪರಶುರಾಮ. ಒಂದರೊಳಗೊಂದು ಐಕ್ಯವಾಗೋಣವೇ ತ್ರಿವೃತು ||

೧. ಚಂದ್ರ--ಅನ್ನ ಅನ್ನಾಭಿಮಾನಿ ಚಂದ್ರಯಂತ ಸುಳಾದಿ.

೨. ಸೂರ್ಯ—ಉದಕ ಹ್ಯಾಗಂದರೆ ಕಿರಣಗಳಿಂದ ವೃಷ್ಟಿಬಾಹೋಣ ಸೂರ್ಯಕಿರಣಗಳಂತೆ, ವರುಣ ವಾಯು.

೩. ಅನಳ—ಅಗ್ನಿ = ರಮಾದೇವಿಯರು ಮುಖ್ಯಾಭಿಮಾನಿ. ಅವಾಂತರ ರುದ್ರ.

ಒಂಭತ್ತನೇ ಪದ್ಯಕ್ಕೆ ಅನ್ವಯ ಬರುತ್ತದೆ. ಕ್ರಮ ವ್ಯುತ್ಕ್ರಮ ಯಾಕೆ ಹೇಳಿದರು ಎಂದರೆ, ಪರಾಪರ ವಿಷಯದಲ್ಲಿ "ಆಪೋ ವಾ ಅನ್ನಂ" ಎಂಬ ಸ್ಥಳ ದಲ್ಲಿ ವ್ಯುತ್ಕ್ರಮ ಹೇಳಿದ್ದಾರಾದಕಾರಣ, ಒಂದೊಂದು ತತ್ವದಲ್ಲಿ ರುದ್ರವಾಯು ರಮಾ ಮುಖ್ಯ ಮುಖ್ಯರು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶಶಾಂಕಸ್ಯ ಓಷಧೀಶತ್ವಾತ್ ಸೂರ್ಯಸ್ಯ ಅಬ್ಜನಕತ್ವಾತ್ ತತ್ಸ್ಥಿತಿಂ ವಕ್ತುಂ ಆಹ "ಶಶಿ" ಇತಿ || "ಅಸಿತಂ" ಶಶಿಗತಮ್ || "ವಸುಧಾಧಿಪಾರ್ದನ" ಭಾರ್ಗವಃ || ೧೧ ||

## ಕನ್ನಡಾರ್ಥ

ಚಂದ್ರಮನು ವ್ರೀಹಿ ಮುಂತಾದ ಸಕಲ ವನಸ್ಪತಿಗಳಿಗೆ ಕಾರಣನು; ಸೂರ್ಯನು ಸಮುದ್ರದಿಂದ ಮೇಘಗಳನ್ನು ನಿರ್ಮಿಸಿ ಮಳೆಗೆ ಕಾರಣನಾಗಿರುತ್ತಾನೆ. ಆದುದರಿಂದ ಈ ಸೂರ್ಯ ಚಂದ್ರ ಅಗ್ನಿಗಳಲ್ಲಿರುವ ಪರಮಾತ್ಮನ ರೂಪಗಳ ಅಧಿಷ್ಠಾನವಿರುವದರಿಂದಲೇ ಸೂರ್ಯ ಮುಂತಾದವರಿಂದ ಈ ಕಾರ್ಯಗಳಾಗುವವೆಂದು ತಿಳಿಸುತ್ತಾರೆ "ಶಶಿ ದಿವಾಕರ" ಎಂಬ ಪದ್ಯದಿಂದ. "ಅಸಿತ"–ಕಪ್ಪು–ಕಲಂಕವು ಚಂದ್ರಮನಲ್ಲಿ ಇರುತ್ತದೆ. "ವಸುಧಾಧಿಪಾರ್ದನ ಕ್ಷತ್ರಿಯರನ್ನು ಸಂಹರಿಸಿದ ಪರಶುರಾಮ || ೧೧ ||

**ಅವತರಣಿಕಾ :—** ಪಂಡಿತೋತ್ತಮರಾದರೂ, ಉಪನಿಷದರ್ಥ ಸರಿಯಾಗಿ ತಿಳಿಯದಿದ್ದವರು ಭಗವಂತನಲ್ಲಿ ಭಕ್ತಿ ವಿರಹಿತರು. ಕೇವಲ ಜೀವನೇ ಕರ್ತಾ, ಹರಿಯು ಅಕರ್ತನೆಂದು ತಿಳಿಯುವ ಪಂಡಿತರಿಗೆ ಆಗುವ ಫಲ ದೃಷ್ಟಾಂತಪೂರ್ವಕ ಸಜ್ಜನರಿಗೆ ಎಚ್ಚರಪುಟ್ಟಲು, ಸನ್ಮಾರ್ಗ ಹಿಡಿಸಲು ಪುನಃ ಪುನಃ ಉಪದೇಶಿಸುತ್ತಾರೆ.

**ದೀಪ ಕರದಲಿ ಪಿಡಿದು ಕಾಣದೆ ।**
**ಕೂಪದೊಳು ಬಿದ್ದಂತೆ ವೇದ ಮ ।**
**ಹೋಪನಿಷದಾರ್ಥಗಳ ನಿತ್ಯದಿ ಪೇಳುವವರೆಲ್ಲ ॥**
**ಶ್ರೀ ಪವನಮುಖವಿನುತಮಲ ಸು ।**
**ರೂಪಗಳ ವ್ಯಾಪಾರ ತಿಳಿಯದೆ ।**
**ಪಾಪಪುಣ್ಯಕೆ ಜೀವಕರ್ತೃ ಅಕರ್ತೃ ಹರಿಯೆಂಬ ॥ ೧೨ ॥**

**ಪದ್ಯಾರ್ಥ :—** ದೀಪ ಕರದಲಿ ಪಿಡಿದು = ಒಳ್ಳೇ ಬೆಳಕಾಗುವ ದೀವಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡರಾದರೂ, ಮುಂದಿನ ಮಾರ್ಗ ಕಾಣದೇ ಮುಂದಿನ ಹಾದಿ ನೋಡದೆ, ಕೂಪದೊಳು ಬಿದ್ದಂತೆ = ಹಾಳಭಾವಿಯಲ್ಲಿ ಬಿದ್ದಂತೆಯೇ, ವೇದ ಮಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ = ಸಕಲವೇದಗಳು, ಮಹ ಉಪನಿಷತ್‌ಗಳ–ಸರಿಯಾಗಿ ಅರ್ಥ ತಿಳಿಯದೇ ಬೇಕಾದಷ್ಟು ಆಪಾತತಃ ಅರ್ಥ ಹೇಳುವವರು ಕೈಯಲ್ಲಿ ದೀಪ ಪ್ರಕಾಶಮಾನವಾದ ವೇದಗಳು, ಉಪನಿಷತು ಭಾಷ್ಯಗಳ ನಿಜಾರ್ಥ ತಿಳಿಯದೇ, ಕುರುಡರಂತೆ ಭಾವಿಗೆ ಬಿದ್ದಂತೆ ಆಗುತ್ತದೆ. ಏಕಂದರೆ ಅವರು ಶ್ರೀ ಪವನಮುಖವಿನುತ = ಶ್ರೀ ವಾಯು ರುದ್ರ ಇಂದ್ರಾದಿ ದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ ಶ್ರೀಹರಿಯು, ಅಮಲ=ನಿರ್ದುಷ್ಟವಾದ ಸು-ಸಮೀಚೀನವಾದ ಚಿದಾನಂದಾತ್ಮಕ ರೂಪಗಳು, ವ್ಯಾಪಾರ = ಸತ್ಯಸಂಕಲ್ಪನಾದ ಶ್ರೀಹರಿಯ ಸೃಷ್ಟ್ಯಾದಿ ಅಷ್ಟಕರ್ತೃತ್ವ ವ್ಯಾಪಾರಗಳು, ಲೀಲೆಯನ್ನು ತಿಳಿಯದೇ = ತೇನ ವಿನಾ ತೃಣಮಪಿ ನ ಚಲತಿ, ಬಿಂಬ ಚಲಿಸದಲೇ ಪ್ರತಿಬಿಂಬ ಚಲಿಸನು ಎಂಬುದನ್ನು ತಿಳಿಯದೇ ಪಾಪ ಪುಣ್ಯಕೆ ಜೀವಕರ್ತೃ = ಎಲ್ಲ ಪಾಪ ಪುಣ್ಯ ಕರ್ಮಗಳಿಗೆಲ್ಲ ಜೀವನೆ ಕರ್ತನು, ಜೀವನೇ ಪುಣ್ಯ ಪಾಪಫಲಭಾಗಿಯಾದ ಕಾರಣ ಜೀವನೇ ಕರ್ತಾ ಎಂಬ ಭ್ರಾಂತಿ. ಅಕರ್ತೃ ಹರಿಯೆಂಬ = ಬಿಂಬನು

ಕರ್ತಾನಲ್ಲ. ಏನು ಮಾಡುವ ಪಾಪಪುಣ್ಯಗಳನೇ ಮಾಡುವನೆಂಬನು ಅರ್ಥಮನು ಶ್ರೀ ವಿಜಯರ ಸುಳಾದಿಯಂತೆ ಹರಿಗೆ ಕರ್ತೃತ್ವ ಪೇಳದೆ ಅಹಂ ಕರ್ತೃತ್ವ ಅಭಿಮಾನಿಯು ಶಾಸ್ತ್ರಗಳನ್ನೂ ಪೇಳಿದರೂ ಕೂಪದಲ್ಲೇ ಬಿದ್ದಂತೆ ಸರಿ.

**ಭಾವಸೂಚನ** :—ದೀಪೇತಿ ॥ ೧೨ ॥

**ದ್ರೌಪದೀಶಪತಿ ವಿಠಲರು** :—ದೀಪ ಕರದಲಿ ಪಿಡಿದು ॥ ಉಪನಿಷ ದರ್ಥ ಹೇಳುವವರೆಲ್ಲ ಮುಖ್ಯ ಕರ್ತೃನಾದ ಪರಮಾತ್ಮನ್ನ ತಿಳಿಯದೇ ಜೀವ ಕರ್ತೃತ್ವ ಹೇಳುತ್ತಾರೆ. ಜೀವಕರ್ತೃ ಅಲ್ಲವೇನು ಎಂದರೆ, ಜೀವಾಂತರ್ಗತ ಬಿಂಬ ಚಲಿಸದೇ ಪ್ರತಿಬಿಂಬ ಚಲಿಸೋದಿಲ್ಲವಾದ್ದರಿಂದ ಮುಖ್ಯ ಕರ್ತೃ ಪರ ಮಾತ್ಮ. ಪಾಪ ಪುಣ್ಯದಲ್ಲಿ ಪರಮಾತ್ಮಗೆ ಪುಣ್ಯದಿಂದ ಸುಖವು ಪಾಪದಿಂದ ದುಃಖವು ಇಲ್ಲ. ಯಾಕೆಂದರೆ "ನರಕೇಪಿ ವಸನ್ನೀಶೋ" ಎಂತ ಪ್ರಮಾಣ ಇದ್ದುದರಿಂದ, ಪಾಪ ಪುಣ್ಯ ಎರಡೂ ಪರಮಾತ್ಮಗೆ ಇಲ್ಲ. ಇದು ವಿಹಾರ. ಜೀವರಿಗೆ ಮಾತ್ರ ಅಭಿಮಾನದಿಂದ ಸುಖವೆಂತ ಆಗುತ್ತದೆ. ಇಂಥಾ ಕರ್ತೃತ್ವ ಜೀವನಲ್ಲಿ ಇದ್ದುದರಿಂದ ಉಣಿಸಿದ್ದು ಉಂಬುವಾಗ ಕರ್ತೃಯಂತ ಯಾಕೆ ಹೇಳಬೇಕಂತ ಅಭಿಪ್ರಾಯ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಾಯೇಣ ಶುದ್ಧಃ ನ ಚಕಾಸ್ತಿ ಸಾಧು" "ನ ಪತಂತಿ ಬಂಧನಾಃ" ಇತಿ ಚ ಉಕ್ತೇಃ "ನಾಯಮಾತ್ಮಾ" ಇತಿ ಸೂಕ್ತಂ ಶ್ರೀಹರಿ ಸಮಾರ ಚರಣಾದರಾಭಾವೇ ಅಸ್ಮದುಕ್ತಂ ನಿಪುಣಬುದ್ಧ್ಯಾ ವಿಬುಧಾಯುಃ ಕ್ಷೀಣೇಪಿ ದುರ್ಗಮಮ್ ; ಪಾಂಡಿತ್ಯಂ ಅಪಿ ಅಪ್ರಯೋಜಕಮ್ ಇತಿ ಆಹ–"ದೀಪ" ಇತಿ ॥

## ಕನ್ನಡಾರ್ಥ

"ಶುದ್ಧವಾದ ಪದಾರ್ಥವು ಪ್ರಾಯಿಕವಾಗಿ ಬಹುಶಃ ಅಂದವಾಗಿ ತೋರುವದಿಲ್ಲ; (ಆಪಾತತಃ) ಅಜ್ಞಾನ ಮೋಹಗಳುಳ್ಳವರಿಗೆ ಸರಿಯಾಗಿ ತತ್ವಬೋಧವಾಗುವದಿಲ್ಲ" ಎಂದು ಮುಂತಾಗಿ ಹೇಳಿದಂತೆ, ಹಾಗೂ "ಈ ಪರಮಾತ್ಮನು ಕೇವಲ ಪ್ರವಚನದಿಂದ ದೊರೆಯತಕ್ಕ ವಸ್ತುವಲ್ಲ" ಎಂದು

ಹೇಳಿದಂತೆ ಹರಿವಾಯುಗಳ ಪಾದಾರವಿಂದದಲ್ಲಿ ಭಕ್ತಿಭಾವಗಳಿಲ್ಲದಿದ್ದರೆ, ನಾವು ನಿರೂಪಿಸಿದ ಈ ರಹಸ್ಯ ವಿಷಯುಗಳನ್ನು ದೇವತೆಗಳ ಆಯುಷ್ಯವನ್ನು ಪಡೆದ ಪಂಡಿತವರೇಣ್ಯನೂ ತನ್ನ ನಿಪುಣಮತಿಯಿಂದ ಕೊನೆಯವರೆಗೂ ವಿಚಾರಿಸಿ ದರೂ ಸುಲಭವಾಗಿ ತಿಳಿಯಲಾರನು." ಅವನ ಬರಿಯ ಪಾಂಡಿತ್ಯವು ಈ ವಿಷಯದಲ್ಲಿ ಫಲಕಾರಿಯಾಗುವದಿಲ್ಲ" ಎಂದು ಹೇಳುತ್ತಾರೆ "ದೀಪ" ಎಂಬ ಪದ್ಯದಿಂದ. ॥ ೧೨ ॥

**ಅವತರಣಿಕಾ :—**ಶ್ರೀ ಪ್ರಾಣದೇವರು ವಾಙ್ಮನೋರೂಪದಿಂದ ಹಿಂದೆ ವಿಸ್ತರಿಸಿದಂತೆ ಪಾವಕಾದ್ಯರೊಳು ಇದ್ದು ಹಂಸನಾಮಕ ಹರಿಯ ರೂಪ ಗುಣಗಳನ್ನು ಜಪಿಸಿ ಸದಾ ನಮ್ಮನ್ನು ಸಂತೈಸುವನೆಂದು ಪ್ರಾಣದೇವರ ಮಾಹಾತ್ಮ್ಯೆ ಕೊಂಡಾಡುತ್ತಾರೆ (೧೩–೧ಳ ಪದ್ಯಗಿಳಿಂದ.)

**ಅನಿಳದೇವನು ವಾಙ್ಮನೋಮಯ ।**
**ನೆನಿಸಿ ಪಾವಕ ವರುಣ ಸಂಕ್ರಂ ।**
**ದನ ಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು ॥**
**ನೆನೆನೆನೆದು ಉಚ್ಚರಿಸುತಲಿ ನ ।**
**ಮ್ಮನು ಸದಾ ಸಂತೈಸುವನು ಸ ।**
**ನ್ಮನಿಗಣಾರಾಧಿತ ಪದಾಂಬುಜ ಗೋಜ ಸುರರಾಜ ॥ ೧೩ ॥**

**ಪದ್ಯಾರ್ಥ :—**ಅನಿಳದೇವನು = ಶ್ರೀ ವಾಯುದೇವರು, ವಾಙ್ಮಯ= ವಾಕ್ಕಿನಲ್ಲಿ ನೆಲಸಿದ್ದು–ವಾಕ್ಕಿನಲ್ಲಿ ಅಗ್ನಿ, ಜಿಹ್ವಾದಲ್ಲಿ ವರುಣ ಉಭಯರಲ್ಲಿ ನೆಲಸಿ ಪ್ರವಚನ ಸ್ತೋತ್ರ ಹರಿಯ ಗುಣಗಳ ಕೊಂಡಾಡುವನೆಂದು ವಾಙ್ಮಯು ನೆಂತಲೂ, ಮನೋಮಯುನೆನಿಸಿ = (ಸಂಕ್ರದನ ಮುಖಾದ್ಯರೊಳಿದ್ದು) ಮನಸ್ಸಿ ನಲ್ಲಿ ಇದ್ದು, ಮನೋಭಿಮಾನಿಗಳಾದ ಇಂದ್ರ, ರುದ್ರ, ಗರುಡಾದಿ ದೇವತೆ ಗಳಿಗೆ ಪ್ರೇರಿಸುತ್ತ ಧ್ಯಾನಾಸಕ್ತ ಚೇತಸರನ್ನು ಮಾಡುವನು. ಹೀಗೆ ವಾಙ್ಮಯ ಮನೋಮಯುನೆನಿಸಿ, ಭಗವದ್ರೂಪಗಳನ್ನು = ಹರಿಯೆ ಹಂಸಾದಿ ಭಗವಂತನ ಅನಂತರೂಪ, ಅನಂತ ಜ್ಞಾನಾನಂದಾದಿ ಗುಣ (ಕ್ರಿಯಾದಿಗಳು ಸಹ) ನೆನೆನೆನೆದು ಉಚ್ಚರಿಸುತಲಿ = ಶ್ರೀಹರಿಯ ಗುಣಗಳನ್ನು ಸಂತತ ಚಿಂತಿ ಸುತ್ತಾ ನೆನೆಯುತ್ತಾ, ತಾನು ಹಂಸಮಂತ್ರಗಳನ್ನು ಉಚ್ಚರಿಸುತ್ತ ನಮ್ಮನು ಸದಾ ಸಂತೈಸುವನು = ಸಕಲ ಜೀವರಾಶಿಗಳನ್ನು ಸರ್ವಕಾಲ

ಶ್ವಾಸೋಚ್ಛ್ವಾಸದಿಂದ ಜೀವನವಿತ್ತು, ವಾಕ್ಯದಿಂದ ಸ್ತೋತ್ರ, ಮನಸ್ಸಿನಿಂದ ಧ್ಯಾನಮಾಡುವ ಶಕ್ತಿ ಜೀವರಿಗಿತ್ತು ಕಾಪಾಡುವನು ಸನ್ಮುನಿ ಗಣಾರಾಧಿತ ಪದಾಂಬುಜ = ಸಂತತ ಮನನಶೀಲರಾದ ಲಾತವ್ಯಾದಿ ಋಜಗಳು ಗರುಡಶೇಷಾದಿಗಳು ಸನಕಸನಂದಾದಿ ಮುನಿಗಳು ಸಕಲ ಋಷಿಗಳಿಂದ ಪೂಜೆಗೊಳ್ಳುವ ಪಾದಕಮಲ ಉಳ್ಳವನು, ಗೋಜ = ಪ್ರಕಾಶಮಾನ ಜ್ಞಾನಕಿರಣಗಳಿಂದ ಸುಜ್ಞಾನವು ವಾಯುದೇವರು ಹುಟ್ಟಿಸುವನಾದುದರಿಂದ ಗೋಜನೇನೆಂತಲೂ, ಸುರರಾಜ = ದೇವತೆಗಳಿಗೆಲ್ಲ ಒಡೆಯ ದ್ವಿತೀಯ ಈಶ್ವರನೆಂತಲೂ ಐತರೇಯ ಶ್ರುತಿಪ್ರತಿಪಾದ್ಯ. ಸುರರಾಜನಾದ ಪ್ರಾಣನೇ ನಿನಗೆ ನಮೋ ನಮಃ.

**ಭಾವಸೂಚನ :**—ಅನಿಳೇತಿ॥ ಸಂಕ್ರಂದನ ಇಂದ್ರ–ಭೋಜ (ಪಾಠಾಂತರ) ಶ್ರೇಷ್ಠ ॥ ೧೫ ॥

**ದ್ರೌಪದೀಶಪತಿ ವಿಠಲರು :**—ಅನಿಳದೇವನು ವಾಙ್ಮನೋಮಯ ನೆನಸಿ॥ ವಾಗಭಿಮಾನಿಗಳು ಅಗ್ನಿ ವರುಣ ಇಬ್ಬರು, ಯಾಕಂದರೆ ಜಿಹ್ವಾದಲ್ಲಿ ವರುಣ, ಮುಖದಲ್ಲಿ ಆಹವನೀಯ ಅಗ್ನಿ, ಆದ್ದರಿಂದ ಇಬ್ಬರು ಅಭಿಮಾನಿಗಳು. ಮನೋಭಿಮಾನಿ ರುದ್ರ, ವಾಕ್ಕರ್ಮೇಂದ್ರಿಯಗಳೊಳಗೆ ಮುಖ್ಯ, ಇದರಿಂದ ಪ್ರವಚನ, ಮನೋ ಇಂದ್ರಿಯ ಜ್ಞಾನೇಂದ್ರಿಯಗಳೊಳಗೆ ಮುಖ್ಯ ಇದರಿಂದ ಧ್ಯಾನ. "ಧ್ಯಾನ ಪ್ರವಚನಾಭ್ಯಾಂ ಚ ಯಥಾಯೋಗ್ಯಮುಪಾಸನಂ" ಯೆಂತ ಪ್ರಮಾಣ. ಆದ್ದರಿಂದ ಎರಡು ವಿಧ ಕರ್ಮವು ಮುಖ್ಯಪ್ರಾಣದೇವರು ಮನೋಭಿಮಾನಿಗಳಲ್ಲೂ ವಾಗಭಿಮಾನಿಗಳಲ್ಲೂ ಅಂತರ್ಗತರಾಗಿ ಮಾಡಿಸುತ್ತಾರೆಂದು ಅಭಿಪ್ರಾಯ. ॥ ೧೪ ॥

ಇಂಥ ಜ್ಞಾನಿಗಳಾದ ದ್ರೌಪದೀಶಪತಿ ವಿಠಲರೇ ಪ್ರಾಣದೇವರೇ ಮುಖ್ಯ ಜ್ಞಾನಪ್ರದರು ಎಂದು ಉಪದೇಶಿಸಿ, ಮುಂದಿನ ಸುಜ್ಞಾನಪ್ರದ ಟೀಕಾ ದೊರಕಿಸದೇ, ಎಮ್ಮನ್ನು ಕೈಬಿಟ್ಟಿರಾ ? ಹಾ ಕಷ್ಟ "ಜ್ಞಾನಗೋಸುಗ ಅರಣ್ಯದೊಳಗೆ ಕುಳಿತು ಅಳಬೇಕೆಂಬುವ" ಪ್ರಾಣೇಶದಾಸರ ಉಕ್ತಿ ನೆನಪಿಗೆ ತಂದಿರುತ್ತೀರಿ. ಆಗಲಿ ಮುಂದಿನ ಟೀಕೆ ಎಂಬ ಸುಜ್ಞಾನವನ್ನು ದೊರಕಿಸಿ ಅನುಗ್ರಹಿಸಿರಿ, ಬಳಲಿಸಬೇಡಿರಿ. ಈ ೧೫ನೇ ಸಂಧಿ ೩ ಪದ್ಯದಿಂದ ಪ್ರಾಣದ್ವಾರವೇ ಸುಜ್ಞಾನವಂ ಕರುಣಿಸುವನೆಂಬ ದಾರ್ಢ್ಯ ಜ್ಞಾನವನ್ನು ಕೊಟ್ಟು ಜ್ಞಾನ

ಗೋಸುಗ ಬಳಲುವ ಸಜ್ಜನರನ್ನು ಸಂತೈಸಿರೆಂದು ಪುಳುಕಾಂಕಿತದಿಂದ ನಿಮ್ಮ ಪಾದಪೂಜೆಯನ್ನುಮಾಡಿ ಸಲಹಿರೆಂದು ಪುನಃಪುನಃ ಮೊರೆಹೋಗುವೆ, ಕೃಪೆ ಮಾಡಿರಿ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಅನಿಲ" ಇತಿ ॥ ಪದಾಂಬುಜಸ್ಯ ಭಗವತ್ಪಾದಪದ್ಮಸ್ಯ ॥ ಸಜ್ಜನೇಷು ಪ್ರಕಾಶೇ ಗೋಜಃ ಗೋಭಿಃ ದೀಧಿತಿಭಿಃ ಜಾಯತೇ ಪ್ರಾದುರ್ಭವತಿ ಇತಿ ಸಃ ತಥಾ ॥ "ಅಪವಿಶಾಧ್ವನಿ ಮಾರುವತಃ" ಇತ್ಯುಕ್ತೇಃ ॥ ೧೩ ॥

**ಕನ್ನಡಾರ್ಥ**

"ಸನ್ಮುನಿ ಗಣಾರಾಧಿತ ಪದಾಂಭೋಜ ಗೋಜ" ಎಂಬಲ್ಲಿ "ಸನ್ಮುನಿ ಗಣದಿಂದ ಆರಾಧಿತನಾದ ಹರಿಯ ಪಾದಪದ್ಮದ ಪ್ರಕಾಶವು ಸಜ್ಜನರಲ್ಲಿ ಆಗುವ ದರ ಸಲುವಾಗಿ ಕಾಂತಿಗಳ ರೂಪದಿಂದ ಪ್ರಾದುರ್ಭವಿಸುವವನು'' ಎಂದು ಅರ್ಥ ತಿಳಿಯಬೇಕು. ಸಜ್ಜನರಲ್ಲಿ ಭಗವದ್ವಿಷಯಕವಾದ ತತ್ವಜ್ಞಾನವು ಉದಯಿಸಬೇಕಾದರೆ ಜ್ಞಾನರಶ್ಮಿಗಳಿಂದ ರಾರಾಜಿಸುವ ಸಮೀರ ಸೂರ್ಯನ ಅವತಾರವಾಗಬೇಕು. ಆದುದರಿಂದ "ಸಜ್ಜನರಲ್ಲಿ ತತ್ವಜ್ಞಾನಪ್ರದವಾದ ತನ್ನ ಕಾಂತಿಗಳಿಂದ ಪ್ರಾದುರ್ಭಾವವನ್ನು ಹೊಂದುವನು" ಎಂಬ ಭಾವವನ್ನು ತಿಳಿಯಬೇಕು.

"ಶ್ರೀ ವಾಯುದೇವರ ಅವತಾರ—ಅವರ ಉಪದೇಶಗಳಿಂದಲೇ ನಿಜ ವಾದ ತತ್ವಜ್ಞಾನ ಸಂಸಾರ ವಿಮೋಚನಗಳು; ಮಿಕ್ಕವುಗಳಿಂದ ಆಗುವುದಿಲ್ಲ" ಎಂಬ ವಿಷಯವು "ಅಪವಿಶಾಧ್ವನಿ ಮಾರುವತಃ" ಎಂಬ ಶ್ರುತಿಗೀತಾದಿ ವಾಕ್ಯ ಗಳಲ್ಲಿ ಉಪಪಾದಿತವಾಗಿರುತ್ತದೆ. ॥ ೧೩ ॥

**ಅವತರಣಿಕಾ :—**ಹಿಂದಿನ ಪದ್ಯದಲ್ಲಿ ಶ್ರೀ ಪ್ರಾಣದೇವರ ವಾಙ್ಮನೋ ಮಯ ರೂಪಗಳನ್ನು ವಿವರಿಸಿ ಅಂತಹ ಪ್ರಾಣದೇವರಲ್ಲಿ ನರಸಿಂಹ ಸಂಕರ್ಷಣ ರೂಪದಿಂದ ಇದ್ದು ಕಾರ್ಯಮಾಡಿಸುವನೆಂದು ಛಾಂದೋಗ್ಯ ಉಪನಿಷತ್ ಪ್ರಮೇಯವನ್ನು ಉಪದೇಶಿಸುತ್ತಾರೆ.

**ಪಾದವೆನಿಪವು ವಾಙ್ಮನೋಮಯ ।**
**ಪಾದರೂಪದ್ವಯಗಳೊಳು ಪ್ರ ।**
**ಹ್ಲಾದಪೋಷಕ ಸಂಕರುಷಣಾಹ್ವಯದಿ ನೆಲಸಿದ್ದು ॥**

**ವೇದಶಾಸ್ತ್ರಪುರಾಣಗಳ ಸಂ।**
**ವಾದರೂಪದಿ ಮನನಗೈವುತ।**
**ಮೋದಮಯ ಸುಖವಿತ್ತು ಸಲಹುವ ಸರ್ವಸಜ್ಜನರ ॥ ೧೪ ॥**

**ಪದ್ಯಾರ್ಥ:**—ಪಾದವೆನಿಪವು = ಎರಡು ಪಾದಗಳು ಎನಿಸುವವು, ವಾಙ್ಮನೋಮಯ = ವಾಙ್ಮಯಪಾದ, ಮನೋಮಯ ಪಾದಗಳೆಂದು ವಾಯುದೇವರಿಗೆ ಎರಡು ಪಾದಗಳು. "ಉತ್ತಮಾನಾಂ ಸ್ವರೂಪಂ ತು ಪಾದ ಶಬ್ದೇನ ಭಣ್ಯತೇ" ಎಂಬುವಂತೆ ವಾಯುದೇವರಿಗೆ ಎರಡು ರೂಪಗಳು, (ವಾಕ್ಕಿನಲ್ಲಿ ವಾಮಪಾದ, ಮನಸ್ಸಿನಲ್ಲಿ ಬಲಪಾದ). ಇಂತಹ ರೂಪದ್ವಯದೊಳು = ವಾಯುದೇವರ ಎರಡು ರೂಪಗಳಲ್ಲಿ, ಪ್ರಹ್ಲಾದಪೋಷಕ = ನರಹರಿ ನರಸಿಂಹ ವಾಙ್ಮಯದಲ್ಲಿ, ಸಂಕರುಷಣಾಹ್ವಯ = ಸಂಕರ್ಷಣನಾಮದಿಂದ ಕರೆಸುವ ಶ್ರೀಹರಿಯು ಮನೋಮಯಪಾದದಲ್ಲಿ, ನೆಲಸಿದ್ದು = ಸನ್ನಿಹಿತನಾಗಿದ್ದು, ವೇದ = ಅಪೌರುಷೇಯವಾದ ವೇದ, ತದರ್ಥಬೋಧಕ ಬ್ರಹ್ಮಸೂತ್ರಾದಿ ಭಾಷ್ಯ ಬ್ರಹ್ಮಮೀಮಾಂಸಾಶಾಸ್ತ್ರ, ಪುರಾಣಗಳ = ಪುರುಷಪ್ರಣೀತವಾದ ಶಬ್ದತಃ ಅನಿತ್ಯ ಅರ್ಥತಃ ನಿತ್ಯವಾದ ಅಷ್ಟಾದಶ ಪುರಾಣಗಳು, ಉಪಪುರಾಣಗಳು, ಸಂಹಿತಾದಿ ಗ್ರಂಥಗಳು, ಸಂವಾದರೂಪದಿ ಮನನಗೈಯ್ಯುತ = ತನ್ನ ಉಕ್ತಿಗಳನ್ನೇ ತಾನೇ ಸಂಭಾಷಣರೂಪದಿಂದ ಮನನಗೈಯ್ಯುತ = ತಾನು ಮನನಮಾಡುತ್ತ ವಾಯುವಿಗೂ ಸಂವಾದರೂಪವಿತ್ತು, ಮೋದಮಯ = ತಾನು ಆನಂದಮಯನಾದರೂ, ಸರ್ವಸಜ್ಜನರಿಗೆ = ಸಕಲ ಮುಕ್ತಿಯೋಗ್ಯರಿಗೆ, ಸುಖವಿತ್ತು = ಜ್ಞಾನಾನಂದ ಸುಖವನ್ನು ಕೊಟ್ಟು, ಸಲಹುವನು = ಸಂರಕ್ಷಿಸುವನು, ಕಾಪಾಡುವನು.

**ಭಾವಸೂಚನ:**—ಪಾದವೇತಿ॥ ತತ್‌ಸ್ವರೂಪ ಪ್ರತಿಪಾದಕವಾದ ಪ್ರಯುಕ್ತ, ಪಾದನಾಮಕ ವೇದಶಾಸ್ತ್ರ ಮನನಮಾಡಿಸುತ್ತ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪಾದ" ಇತಿ॥ "ವಾಙ್ಮಯಪಾದಃ, ಮನೋಮಯಪಾದಃ" ಇತಿ ವಾಙ್ಮನಸ್ಥ ವಾಯು ಯಜ್ಞಸ್ಯ ದ್ವೌ ಪಾದೌ ದ್ವೌ ಅಂಶೌ ತತ್ರ ನೃಹರಿಃ ಇತ್ಯರ್ಥಃ ; ಅತಃ ವಾಯುಃ ಯಜ್ಞನಾಮಾ ತತ್ಪಾದೌ ವಾಙ್ಮನಃಸ್ಥಿತೌ ॥

ವಾಙ್ಮನಃಪಾದ ಯಜ್ಞಾಖ್ಯ ಪ್ರತಿಮಃ ವಾಯುರೀರಿತಃ" ॥ ಇತಿ ಛಾಂದೋಗ್ಯೇ ॥ "ಮನನ" ಇತಿ ಗುರುಸ್ಥಃ ಸನ್ ಇತಿ ಶೇಷಃ ॥ ೧೪ ॥

## ಕನ್ನಡಾರ್ಥ

"ಪಾದವೆನಿಪವು" ಎಂಬ ಈ ಪದ್ಯದಲ್ಲಿ ವಾಯು ಯಜ್ಞೋಪಾಸನೆಯನ್ನು ನಿರೂಪಿಸುತ್ತಾರೆ. ಈ ವಿದ್ಯೆಯು "ಏಷ ಹ ವೈ ಯಜ್ಞಃ ಎಂದು ಛಾಂದೋಗ್ಯೋಪನಿಷತ್ತಿನಲ್ಲಿ (ಅಧ್ಯಾಯ ೪, ಖಂಡ ೧೬ರಲ್ಲಿ) ನಿರೂಪಿತವಾಗಿರುತ್ತದೆ.

"ಯನ್" = ಹೋಗುತ್ತ ಸಂಚಾರಗತಿಗಳಿಂದ, "ಜ್ಞ" = ಪವಿತ್ರೀಕರಿಸುವದರಿಂದ "ಯಜ್ಞ"ವೆಂದು ವಾಯುವಿಗೆ ಕರೆಯುತ್ತಾರೆ. ಹೀಗೆ ಸರ್ವಯಜ್ಞಾಭಿಮಾನಿಯೂ,ಯಜ್ಞದಲ್ಲಿ ಸನ್ನಿಹಿತನೂ ಆದುದರಿಂದ ಯಜ್ಞನಾಮಕನಾದ ವಾಯುವಿಗೆ ಎರಡು ಪಾದಗಳು—ಮನಸ್ಸು ಒಂದು ಪಾದ. ವಾಕ್ಕು ಇನ್ನೊಂದು ಪಾದ. ಅಂದರೆ ಯಜ್ಞನಾಮಕನಾದ ವಾಯುವಿನ ಎರಡು ಪಾದಗಳು ಮನಸ್ಸಿನಲ್ಲಿ ಹಾಗೂ ವಾಕ್ಕಿನಲ್ಲಿ ಇರುತ್ತವೆ. ಮನಸ್ಸಿನಲ್ಲಿ ದಕ್ಷಿಣಪಾದ, (ಬಲಪಾದ) ವಾಕ್ಕಿನಲ್ಲಿ ವಾಮಪಾದ, (ಎಡಪಾದ) ಹೀಗೆ ವಿವೇಚಿಸಿ ತಿಳಿಯಬೇಕು. ಹೀಗೆ ವಾಕ್ಕು ಮನಸ್ಸುಗಳಲ್ಲಿರುವ ವಾಯು ಯಜ್ಞದ ಎರಡು ಅಂಶಗಳಲ್ಲಿ ನರಹರಿ ಹಾಗೂ ಸಂಕರ್ಷಣರಿರುತ್ತಾರೆ. ಎಂದು ಅಭಿಪ್ರಾಯ.

"ಗತಿಗಳಿಂದಲೇ ಜಗತ್ತನ್ನು ಪವಿತ್ರಿಸುವದರಿಂದ ಯಜ್ಞವೆಂದು ವಾಯುವಿಗೆ ಹೆಸರು. ಹೀಗೆ ಯಜ್ಞನಾಮಕ ವಾಯುವಿನ ಪಾದಗಳು-ಅಂಶಗಳು ವಾಕ್-ಮನಸ್ಸುಗಳಲ್ಲಿ ಇರುತ್ತವೆ" ಎಂದೂ "ವಾಙ್ಮನಃಪಾದಗಳುಳ್ಳ ಯಜ್ಞವೇ ಪ್ರತಿಮೆಯಾಗಿ ಉಳ್ಳವನು" ಎಂದು ವಾಯುವಿಗೆ ಪ್ರಸಿದ್ಧಿ ಇರುತ್ತದೆ. ಎಂದು ಭಾಷ್ಯದಲ್ಲಿ ನಿರೂಪಿಸಿರುತ್ತಾರೆ. ಗುರುಗಳಲ್ಲಿ ನಿಂತು ಮನನ ವ್ಯಾಪಾರ ಮಾಡಿಸುವನೆಂದು ತಿಳಿಯಬೇಕು. ॥ ೧೪ ॥

**ಅವತರಣಿಕಾ :**—ವಾಯ್ವಂತರ್ಗತ ಶ್ರೀಹರಿಯು ಭಕ್ತರಲ್ಲಿ ಮಾಡುವ ನಿರ್ವ್ಯಾಜ ಕರುಣೆಯು ಎಂಥದೆಂಬುದನ್ನು ಮುಂದಮಾರುತನ ದೃಷ್ಟಾಂತದಿಂದ ವರ್ಣಿಸುತ್ತಾರೆ.

**ಗಂಧವಹ ದಶದಿಶಗಳೊಳಗರ ।**
**ವಿಂದಸೌರಭ ಪಸರಿಸುತ ಘ್ರಾ ।**
**ಣೇಂದ್ರಿಯಗಳಲಿ(ಗಳಿಗೆ) ಸುಖವನೀವುತ ಸಂಚರಿಸುವಂತೆ ॥**
**ಇಂದಿರೇಶನ ಸುಗುಣಗಳ ದೈ ।**
**ನಂದಿನದಿ ತುತಿಸುತನುಮೋದಿಸು ।**
**ತಂಧಬಧಿರಸುಮೂಕನಂತಿರು ಮಂದಜನರೊಡನೆ ॥ ೧೫ ॥**

**ಪದ್ಯಾರ್ಥ :**—ಗಂಧವಹ = ವಾಯು ಮಂದಮಾರುತ, ತಂಗಾಳಿ, ದಶದಿಶಗಳೊಳರವಿಂದ ಸೌರಭ ಪಸರಿಸುತ = ಹತ್ತು ದಿಕ್ಕುಗಳಲ್ಲಿರುವ ಕಮಲ ಪುಷ್ಪಾದಿ ಸುಗಂಧವನ್ನು, ಪಸರಿಸುತ = ಹರಡಿಸುತ್ತ, ಸುಗಂಧವನ್ನು ತಂದೀವುತ್ತ, ಘ್ರಾಣೇಂದ್ರಿಯಗಳಿಗೆ ಸುಖವೀವುತ ಸಂಚರಿಸುವಂತೆ = ನಾಸಿಕೇಂದ್ರಿಯ = ಮೂಗಿಗೆ ಆ ಹೂವುಗಳ ಸುವಾಸನೆಯನ್ನಿತ್ತು, ಆನಂದವನ್ನು ಕೊಡುತ್ತ, ತಂಗಾಳಿ ಮಂದಮಾರುತ ಬೀಸುವಂತೆ, ವಾಯುವಿಗೆ ಪರಿಮಳದಿಂದ ಸ್ವಪ್ರಯೋಜನವಿಲ್ಲದಿದ್ದರೂ, ವಾಯು ತನ್ನ ಸ್ವರೂಪಗುಣವನುಸರಿಸಿ ನಿರ್ವ್ಯಾಜದಿಂದ ಸಕಲ ಪ್ರಾಣಿಗಳಿಗೆ ಹೇಗೆ ಸುಖ ತಂದೀವನೋ, ಅದರಂತೆ ಇಂದಿರೇಶನ ಸುಗುಣಗಳ = ರಮಾಪತಿಯಾದ ಶ್ರೀ ನಾರಾಯಣನ ನಿರ್ವ್ಯಾಜ ಭಕ್ತವಾತ್ಸಲ್ಯ ಮುಂತಾದ ಅನಂತಗುಣಗಳನ್ನು, ದೈನಂದಿನದಿ = ಪ್ರತಿನಿತ್ಯದಲ್ಲಿ ಒಂದರಕ್ಷಣವಾದರೂ ಬಿಡದೇ, ತುತಿಸುತ = ಸ್ತೋತ್ರಮಾಡುತ್ತ, ಮೋದಿಸುತ = ಆನಂದಪಡುತ್ತಲಿರಬೇಕೆಂದು ಉಪದೇಶಿಸುತ್ತಾರೆ. ಮತ್ತು ಈ ಶ್ರೀಹರಿಯ ಅನಿಮಿತ್ತ ಬಂಧುತ್ವವನ್ನು ಮಂದ ಜನರೊಡನೆ ಅಜ್ಞರಿಗೆ = ಇಂದ್ರಿಯ ಲೋಲುಪರಾದ ಜ್ಞಾನಶೂನ್ಯರಿಗೆ ತಿಳಿಯುವುದಿಲ್ಲ. ಕಾರಣ, ನೀನು ಶ್ರೀಹರಿಯ ಗುಣಗಳನ್ನು ವಾಯು ಅನುಗ್ರಹದಿಂದ ಸಂಪಾದಿಸಿದರೂ, ಅಜ್ಞರೆದುರಿಗೆ, ಅಂಧ = ಕುರುಡ ದಾರಿಕಾಣದವ, ಬಧಿರ = ಕಿವುಡ, ಮೂಕ = ಮಾತಾಡಲಿಕ್ಕೆ ಬಾರದವನಂತೆ, ಏನೂ ತಿಳಿಯದವನಂತೆ ಅಜ್ಞರಿಗೆ ತೋರಿಸು.

**ಭಾವಸೂಚನ :**—ಗಂಧವಹೇತಿ ॥ ವಾಯು ॥ ದೈನಂದಿನ = ಪ್ರತಿದಿನ ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಗಂಧ" ಇತಿ ॥ "ಗಂಧವಹ" ವಾಯುಃ ॥ ಅನಿಮಿತ್ತ ಬಂಧುತೋದಾಹರಣಂ। ಇಂದ್ರಿಯ ಸುಖದಾನಂ ಅಜ್ಞೈಃ ನ ಜ್ಞಾಯತೇ* ಅತಃ "ಅಂಧ" ಇತಿ ॥ ಜಡಾಂಧಬಧಿರೇತ್ಯುಕ್ತೇಃ ॥ ೧೫ ॥

## ಕನ್ನಡಾರ್ಥ

"ಗಂಧವಹ" ಎಂದರೆ "ವಾಯು" ಎಂದು ಅರ್ಥ. ಭಗವಂತನು ನಿರ್ವ್ಯಾಜಪ್ರೀತಿಯಿಂದ ಮಾಡುವ ಅಂತಃಕರಣವು-ಅವನ ಅನಿಮಿತ್ತ ಬಂಧುತ್ವವು ಅಜ್ಞರಿಗೆ ಎಷ್ಟು ಹೇಳಿದರೂ ತಿಳಿಯುವದಿಲ್ಲ. "ಇಂದ್ರಿಯಗಳಿಂದ ಪರಮಾತ್ಮನು ಸುಖವನ್ನು ನಮಗೆ ಅನುಗ್ರಹಿಸುತ್ತಾನೆ" ಎಂದು ಹೇಳಿದರೆ ಜ್ಞಾನವಿಲ್ಲದ ಅಹಂಕಾರ ಮಮಕಾರಗಳುಳ್ಳ ಮಂದಮತಿಗಳಿಗೆ ತಿಳಿಯುವದಿಲ್ಲ; ಬುದ್ಧಿಯಲ್ಲಿ ಈ ವಿಷಯವೇ ಸೇರುವದಿಲ್ಲ. ಆದುದರಿಂದ ಅಂತಹ ಮಂದಮತಿಗಳೊಡನೆ ಮೌನದಿಂದ ವರ್ತಿಸಬೇಕು ಎಂದು ತಾತ್ಪರ್ಯ. ॥ ೧೫ ॥

**ಅವತರಣಿಕಾ :—** ಹಿಂದಿನ ಪದ್ಯಗಳಲ್ಲಿ ಹೇಳಿದ ಪ್ರಾಣರೂಪ ಕಾರ್ಯ ತಿಳಿದು, ಶ್ರೀರಮಣನ ಅರಮನೆಯಾದ ವೈಕುಂಠಪುರಕ್ಕೆ ಪಂಚ ದ್ವಾರಗಳಿರುವಂತೆ, ಹೃದಯಾಖ್ಯಮಂದಿರಕ್ಕೆ ೫ ದ್ವಾರಗಳು ಅಲ್ಲಿಪ್ಪ ಪಂಚ ಪ್ರಾಣರು ದ್ವಾರಪಾಲಕರನ್ನೂ, ನಾರಾಯಣಾದಿ ಪಂಚರೂಪಗಳನ್ನೂ ಉಪಾಸಿಸುವ ಕ್ರಮ ಹೇಳುತ್ತಾರೆ.

**ಶ್ರೀರಮಣನರಮನೆಯ ಪೂರ್ವ।**
**ದ್ವಾರದಲ್ಲಿಹ ಸಂಜ್ಞ ಸೂರ್ಯಗ।**
**ಭಾರತೀಪತಿ ಪ್ರಾಣನೊಳಗಿಹ ಲಕುಮಿನರೆಯಣನ**
**(ಲಕ್ಷ್ಮೀನಾರಾಯಣನಾ) ॥**
**ಸೇರಿ ಮನುಜೋತ್ತಮರು ಸರ್ವ।**
**ಶರೀರಗತ ನಾರಾಯಣನ ಅವ।**
**ತಾರಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ॥ ೧೬ ॥**

---

* "ಯಥಾ ಇತಿ" ಎಂದು ಕೆಲವು ಪುಸ್ತಕಗಳಲ್ಲಿ ಪಾಠವಿದೆ. ಅವುಗಳಲ್ಲಿ "ಅತಃ" ಎಂಬ ಪಾಠವಿಲ್ಲ.

**ಪದ್ಯಾರ್ಥ:**— ಶ್ರೀರಮಣನರಮನೆಯ= ಶ್ರೀ=ಸಂಪತ್ಕರಳಾದ ರಮಾದೇವಿಯರಿಗೆ ಸುಖವ ತಂದೀವ ಲಕ್ಷ್ಮೀಪತಿಯಾದ ನಾರಾಯಣನ. ಅರಮನೆ= ರಾಜಭವನವಾದ ವೈಕುಂಠ ಶ್ರೀ-ಭೂ-ದುರ್ಗಾಭಾಗದಂತೆ ನಾಲ್ಕು ದಿಕ್ಕಿಗೆ ಮೂರು ಬಾಗಿಲುಗಳಂತೆ ೪ × ೩ = ೧೨ ಊರ್ಧ್ವದ್ವಾರ ೧ ಹೀಗೆ ೧೩ ದ್ವಾರಗಳಿರುವಂತೆ ಶ್ರೀ ಬಿಂಬರೂಪಿ ಹರಿಯ ಹೃದಯಾಖ್ಯ ಅರಮನೆಯ, ಪೂರ್ವ ದ್ವಾರಗಳಲ್ಲಿ. ೧. ಪ್ರಥಮದ್ವಾರದಲ್ಲಿ ಶ್ರೀ ಭೂ, ೨. ದ್ವಿತೀಯದ್ವಾರದಿ ರವಿನಾಮಕ ಪ್ರಾಣ, ಸಂಜ್ಞಾ ದ್ಯುನಾಮಕ ಭಾರತೀದೇವಿಯರು, ೩. ಮೂರನೇ ದ್ವಾರದಲ್ಲಿ ಜಯವಿಜಯರು ಇರುವರೆಂದು ಶ್ರೀ ಪ್ರಾಣೇಶದಾಸರ ವಚನ. ಈ ಪದ್ಯದಲ್ಲಿ ಹೊರಗಿನ ಬಾಗಿಲು ಮೊದಲುಮಾಡಿ, ಹೊರಗೆ ೧. ಸಂಜ್ಞಾದೇವಿ-ಸೂರ್ಯ. ೨. ಪ್ರಾಣ-ದ್ಯುನಾಮಕ ಭಾರತೀದೇವಿಯರು. ೩. ಒಳಗಿನ ಶ್ರೀಭಾಗದಲ್ಲಿ ಶ್ರೀಭೂ ರೂಪಗಳು ದ್ವಾರಪಾಲಕರಾಗಿಹರು. ಈ ಪೂರ್ವ ದ್ವಾರದಿಂದ ಮನುಜೋತ್ತಮರು ಸೇರಿ = ತೃಣಾದಿ ಮಾನುಷೋತ್ತಮರ ಪರಿಯಂತ ಇವರು, ಸರ್ವಶರೀರಗತ = ಹಿಂದೆ ಸಂಧಿ ೮-೯ರಲ್ಲಿ ಪೇಳಿದಂತೆ ಸರ್ವ ಶರೀರ ಅವಯವಗಳಲ್ಲಿದ್ದ ಭಗವದ್ರೂಪಕ್ರಿಯಾ ಮತ್ತು ಬಹಿರಂಗದಲ್ಲಿ ಕಾಲರೂಪಿ ಹರಿಯಾದ ನಾರಾಯಣನ ಅವತಾರ ರಾಮಕೃಷ್ಣಾದಿ ಅವತಾರಗಳಲ್ಲಿ ಹರಿಯ ಲೀಲಾರೂಪ ಗುಣಕ್ರಿಯಗಳನ್ನು, ತುತಿಸುತ = ತಮ್ಮ ಯೋಗ್ಯತಾನುಗುಣವಾಗಿ ಸ್ತೋತ್ರಮಾಡುತ್ತ, ಮುಕ್ತಿಯಲ್ಲಿ = ಲಿಂಗಭಂಗಾನಂತರ ಮುಕ್ತಿಯಲ್ಲಿ, ಮೋದಿಪರು = ಆನಂದಪಡುವರು. ಶ್ರೀ ಪ್ರಾಣದ್ವಾರವೇ ಶ್ರೀಹರಿ ಸರ್ವಚೇಷ್ಟಕನೆಂಬೊ ಪ್ರಾಣೋಪಾಸಕರಿಗೆ ಇಂಥ ಮುಕ್ತಿ.

**ಭಾವಸೂಚನ:**—ಶ್ರೀರಮಣೇತಿ ‖ ಸೂರ್ಯಗ= ಸೂರ್ಯಗತ ‖೧೬‖

**ವಿಶೇಷ ಸೂಚನೆ:**—ಉಕ್ತಂ ಚ ಪಂಚರಾತ್ರಾಗಮೇ ‖ ಪ್ರಾಣಾಭಿಮಾನೀ ಚಕ್ಷುಶ್ಚ ಸೂರ್ಯ ಏವ ಉದಾಹೃತಃ ‖ ತೇಜೋನ್ನಾದ್ಯಭಿಮಾನೀ ಚ ಪ್ರಾಗ್‌ದ್ವಾರಾಧಿಪತಿಃ ಹರೇರಿತಿ ‖ ಸೂರ್ಯಪ್ರಸಾದಾತ್ತು ನರಾಃ ಪೂರ್ವ ದ್ವಾರೇಣ ಕೇಶವಂ ಪ್ರಾಪ್ನುವಂತೀತಿ ಛಾಂದೋಗ್ಯಭಾಷ್ಯೋಕ್ತೇಃ ‖

ಮತ್ತು ಇದೇ ಅರ್ಥವನ್ನೇ ಶ್ರೀ **ಪ್ರಾಣೇಶದಾಸಾರ್ಯರು**
ಹೃದಯಮಂದಿರ ವಿವರ ಈ ಪರಿಯಲಿಂ ತಿಳಿದು ।
ಮಧುವೈರಿ ಪೂಜಿಮಾಳ್ಪದು ಸುಜನರು ‖ ಪಲ್ಲ ‖

ಉದಯದಲಿ ಮೂರು ಬಾಗಿಲು ಪ್ರಥಮದಲಿ ರಮಾ।
ಅದರ ತರುವಾಯ ರವಿನಾಮಪ್ರಾಣಾ ॥
ಪದುಮಾಕ್ಷ್ನೆ ಭಾರತಿ ದ್ಯುನಾಮದಿಂದಿಹಳಿಲ್ಲಿ ।
ತುದಿಯ ಬಾಗಿಲಿಗೆ ಜಯವಿಜಯರೂ ॥ ೧ ॥

## ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ

ಅಥ ಕಾಂಚನ ಹಾರ್ದ್ರೋಪಾಸನಾಂ ಬ್ರೂತೇ "ಶ್ರೀರಮಣಿ" ಇತಿ ॥ "ಅರಮನಿ"-ಹೃದಯ । ಓಂ ತಸ್ಯ ಹ ವಾ ಏತಸ್ಯ ಹೃದಯಸ್ಯ ಪಂಚ ದೇವ ಸುಕ್ಷಯಃ ॥ ಸ ಯೋಽಸ್ಯ ಪ್ರಾಙ್(ಕ್) ಸುಕ್ಷಿಃ ಸ ಪ್ರಾಣಃ ತಚ್ಚಕ್ಷುಃ ॥ ಸ ಆದಿತ್ಯಃ ॥ ತತ್ತೇಜಃ ಅನ್ನಾದ್ಯಮ್ ಇತ್ಯುಪಾಸೀತ ॥ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ ॥

ಪ್ರಾಣಾಭಿಮಾನೀ ಚಕ್ಷುಶ್ಚ ಸೂರ್ಯ ಏವ ಹ್ಯುದಾಹೃತಃ । ತೇಜೋ ನ್ನಾದ್ಯಭಿಮಾನೀ ಚ ಪ್ರಾಗ್ದ್ವಾರಾಧಿಪತಿಃ ಹರೇಃ ॥ ೧೬ ॥

## ಕನ್ನಡಾರ್ಥ

ಹೃದಯದಲ್ಲಿ ಮಾಡಬೇಕಾದ ಶ್ರೇಷ್ಠವಾದ ಉಪಾಸನೆಯನ್ನು ಇನ್ನು ಮೇಲೆ ನಿರೂಪಿಸುತ್ತಾರೆ. "ಶ್ರೀರಮಣಿ" ಇತಿ ॥ "ಅರಮನೆ" ಎಂದರೆ ಹೃದಯರೂಪ ಗೃಹವೆಂದು ತಿಳಿಯಬೇಕು. ಛಾಂದೋಗ್ಯೋಪನಿಷತ್ತು ಹಾಗೂ ಭಾಷ್ಯಗಳಲ್ಲಿ (ಅ. ೩. ಖ. ೧೩) ಈ ವಿಷಯವು ಹೀಗೆ ನಿರೂಪಿತ ವಾಗಿರುತ್ತದೆ. "ಭಗವಂತನಿಂದ ಅಧಿಷ್ಠಿತವಾದ (ವಾಸಿಸಲ್ಪಟ್ಟ) ಈ ಹೃದಯ ಮಂದಿರಕ್ಕೆ ಐದು ದೇವ ಹೊರಗೆ ಬರುವ ಮಾರ್ಗಗಳು ಇರುತ್ತವೆ. ಹೃದ ಯದ ಪೂರ್ವದ್ವಾರಕ್ಕೆ ಪ್ರಾಣವಾಯ್ವ(ಜಡವಾಯು)ಭಿಮಾನಿಯಾದ ಹಾಗೂ ಚಕ್ಷು(ಕಣ್ಣು)ರಭಿಮಾನಿಯಾದ ಸೂರ್ಯನು ಅಧಿಪತಿಯು. ಈ ಪ್ರಾಣ ವಾಯು-ಚಕ್ಷುಸ್ಸುಗಳಿಗಭಿಮಾನಿಯಾದ ಸೂರ್ಯನನ್ನು ತೇಜ ಅನ್ನಾದಿಗಳಿಗೆ ಅಭಿಮಾನಿಯೆಂದು ಉಪಾಸಿಸಿದರೆ-ತಿಳಿದರೆ ತೇಜಸ್ವಿಯೂ, ಅನ್ನಭೋಗಿಯೂ ಆಗುತ್ತಾನೆ." ಭಾಷ್ಯದಲ್ಲಿ "ಶ್ವಾಸರೂಪವಾದ ಜಡವಾಯು ವೃತ್ತಿರೂಪವಾದ ಪ್ರಾಣಕ್ಕೆ ಅಭಿಮಾನಿಯೂ, ಚಕ್ಷುರಭಿಮಾನಿಯೂ ಸೂರ್ಯನೊಬ್ಬನೇ ಆಗಿರು ತ್ತಾನೆ. ಅವನು ತೇಜ-ಅನ್ನ ಮುಂತಾದವುಗಳ ಅಭಿಮಾನಿಯೂ ಆಗಿರು ತ್ತಾನೆ." ಮತ್ತು ಹರಿಯ ಹೃದಯಗೃಹದ ಪೂರ್ವದ್ವಾರಪಾಲಕನಾಗಿರು ತ್ತಾನೆ" ಎಂದು ಹೇಳಲ್ಪಟ್ಟಿರುತ್ತದೆ. ॥ ೧೬ ॥



ಊರ್ಧ್ವದ್ವಾರ.

**ಬ್ರಹ್ಮಾಂಡ ಪಿಂಡಾಂಡದ ಸಮನ್ವಯ ವಿವರ:**

೧೪ ಲೋಕಗಳ ವಿಚಾರ, ಅಲ್ಲಿಲ್ಲ ದೇವತೆಗಳು ಸಪ್ತ ಕಮಲಗತ ರೂಪಗಳು, ವೈಕುಂಠಾದಿ ತ್ರಿಧಾಮ. ಹೃನ್ಮಂದಿರ ತ್ರಯೋದಶ ದ್ವಾರಯುಕ್ತ, ದ್ವಾರಪಾಲಕಾದಿ ಶತಸ್ತಂಭ ಮಂಟಪದ ರಥ. ಅಗ್ರೇಶ

೧. ಇದರಲ್ಲಿ ಪೂರ್ವದ್ವಾರ ಮೂರು ದ್ವಾರಗಳು. ೨. ಮೇಲೆ ಊರ್ಧ್ವದ್ವಾರ ಒಂದು ಕಾಣುತ್ತದೆ.

**ಪೂರ್ವದ್ವಾರ ದ್ವಾರಪಾಲಕರು**

**ಅವತರಣಿಕಾ:**—ಇನ್ನು ವೈಕುಂಠಪುರಿಯ ದಕ್ಷಿಣದ್ವಾರದಲ್ಲಿರುವ ದ್ವಾರಪಾಲಕರನ್ನು ಸೇವಿಸುತ್ತ ಸಮಸ್ತ ಪಿತೃಗಣ ಮುಕ್ತಿಯಲ್ಲಿ ಆನಂದಪಡು ವಂತೆ ಹರಿಯ ಹೃದಯಾಖ್ಯ ಪಟ್ಟಣ ದಕ್ಷಿಣದ್ವಾರದಲ್ಲಿಯೂ ಚಿಂತಿಸಿ, ಉಪಾ ಸನೆಯ ಕ್ರಮವನ್ನು ಉಪದೇಶಿಸುತ್ತಾರೆ.

**ಪ್ರಣವಪ್ರತಿಪಾದ್ಯನ ಪುರದ ದ।**
**ಕ್ಷಿಣಕವಾಟದಲಿಪ್ಪ ಶಶಿರೋ।**
**ಹಿಣಿಗತ ವ್ಯಾನಸ್ಥ ಕೃತಿ ಪ್ರದ್ಯುಮ್ನರೂಪವನು॥**
**ಗುಣಗಳನು ಸಂಸ್ತುತಿಸುತಲಿ ಪಿತೃ।**
**ಗಣ ಗದಾಧರನತಿವಿಮಲ ಪ।**
**ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು ॥೧೭॥**

**ಪದ್ಯಾರ್ಥ:**—ಪ್ರಣವ ಪ್ರತಿಪಾದ್ಯನ ಪುರದ = ಓಂಕಾರದಿಂದ ಸ್ತುತ್ಯ ನಾದ ಶ್ರೀಹರಿಯ ವೈಕುಂಠನಗರದ, ದಕ್ಷಿಣಕವಾಟದಲಿಪ್ಪ = ದಕ್ಷಿಣ ದಿಕ್ಕಿಗೆ ಇರುವ ಬಾಗಿಲು ದ್ವಾರಗಳಲ್ಲಿರುವ, ಪ್ರಥಮದ್ವಾರಶ್ರೀಭೂಶಶಿರೋಹಿಣಿಗತ ವ್ಯಾನಸ್ಥ = ಚಂದ್ರಗತ ಚಂದ್ರನಾಮಕವ್ಯಾನ, ರೋಹಿಣಿಗತ, ದಿಗ್‌ನಾಮಕ ಭಾರತೀ ದೇವಿಯರು ಎರಡನೇ ದ್ವಾರದಲ್ಲಿ ಇರುವರು. ೩ನೇ ಬಾಗಿಲಲ್ಲಿ ಬಲ ಪ್ರಬಲರು. ಈ ಪ್ರಕಾರ ದಿಙ್ನಾಮಕ ಭಾರತೀ ಚಂದ್ರನಾಮಕ ವ್ಯಾನ ನಾಮಕದ್ವಾರಾ, ಪಿತೃಗಣ = ಸಮಸ್ತ ಪಿತೃಗಣದವರು, ಕೃತಿ ಪ್ರದ್ಯುಮ್ನ = ಕೃತಿನಾಮಕ ಶ್ರೀ ಲಕ್ಷ್ಮೀದೇವಿಯ ಪತಿ ಪ್ರದ್ಯುಮ್ನನ ರೂಪವನ್ನೂ, ಗುಣ ಗಳನ್ನೂ, ಗದಾಧರ = ಗಯಾಗದಾಧರನೆಂದು ಸಾಮಾನ್ಯ ಅರ್ಥ:—"ಗದಾಂ ಧಾರಯತೀತಿ ಗದಾಧರಃ॥ ಅಥವಾ॥ "ಗದ್ಯಂತೇ ಸ್ತೂಯಂತೇ, ಗದಂತಿ ಸ್ತುವಂತಿ ಇತಿ ವಾ॥ ಪಿತೃಗಣಗಳಿಂದ ಸ್ತೋತ್ರಮಾಡಿಸಿಕೊಳ್ಳುವವನ, ವಿಮಲ= ನಿರ್ದುಷ್ಟವಾದ ಎಂದೂ ನಾಶವಾಗದೇ ನಿರಂತರ ಶ್ರೀಭಾಗದ, ಪಟ್ಟಣದೊಳಗೆ= ವೈಕುಂಠಾದಿ ತ್ರಿಧಾಮದಂತೆ ಜೀವನಸ್ವರೂಪ ಹೃದಯಾಖ್ಯ ನಗರದಲ್ಲಿ, ಸ್ವೇಚ್ಛಾನುಸಾರದಿ ಸಂಚರಿಸುತಿಹರು = ಸ್ವ = ಸ್ವತಂತ್ರನಾಮಕ ಪ್ರದ್ಯುಮ್ನ ರೂಪಿ ಹರಿಯ ಇಚ್ಛಾ ಸಂಕಲ್ಪಾನುಸಾರ, ಪಿತೃಗಳು ದಕ್ಷಿಣದ್ವಾರಗತ ವ್ಯಾನ

ದ್ವಾರಾ ಪ್ರವೇಶಗೈದು ಶ್ರೀಹರಿಯ ಅಧೀನರಾಗಿ ಮುಕ್ತಿಯಲ್ಲಿ ಸಂಚಾರ ಮಾಡುವರು.

**ಭಾವಸೂಚನ** :-- ಪ್ರಣವಪ್ರತಿಪಾದ್ಯ = ಓಂಕಾರವಾಚ್ಯ ॥ ೧೭ ॥

**ವಿಶೇಷ ಸೂಚನೆ:**—ದಕ್ಷಿಣಾಧಿಪತಿಃ ಸೋಮೋ ವ್ಯಾನಃ ಶ್ರೋತ್ರಾಭಿಮಾನವಾನಿತಿ ॥ ಪ್ರಾಪ್ನುವಂತ್ಯಥ ಸೋಮಸ್ಯ ಪ್ರಸಾದಾತ್ ಪಿತರಸ್ತಥಾ॥ ದ್ವಾರೇಣ ದಕ್ಷಿಣೇನೈವೇತಿ ಛಾಂದೋಗ್ಯಭಾಷ್ಯೇ ॥

ಇದರ ಅರ್ಥವೇ **ಶ್ರೀ ಪ್ರಾಣೇಶದಾಸರು** ಹೇಳಿದ್ದಾರೆ.

ಯಮದಿಶಿಗೆ ಮೂರುಕದ ಮೊದಲು ಶ್ರೀ ಎರಡರೊಳು ॥ ತಿಮಿಪಾಖ್ಯ ವ್ಯಾನದಿಜ್ಞಾಮಭಾರತೀ ॥ ಅಮಲ ಬಲಪ್ರಬಲ ಮೂರನೇ ದ್ವಾರಕಿಹರು, ಪಶ್ಚಿಮದ್ವಾರ ಮೂರೊಳಿಹರ ಪೇಳ್ವೇ ॥ ೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಣವ" ಇತಿ ॥ "ಅಥ ಯೋಽಸ್ಯ ದಕ್ಷಿಣಃ ಸುಷಿಃ ಸ ವ್ಯಾನಃ; ತತ್ ಶ್ರೋತ್ರಂ; ಸ ಚಂದ್ರಮಾಃ ॥ ತದೇತತ್ "ಶ್ರೀಶ್ಚ ಯಶಶ್ಚ" ಇತ್ಯುಪಾಸೀತ॥ ಶ್ರೀಮಾನ್ ಯಶಸ್ವೀ ಭವತಿ ಯ ಏವಂ ವೇದ" ॥

"ದಕ್ಷಿಣಾಧಿಪತಿಃ ಸೋಮಃ ವ್ಯಾನಃ ಶ್ರೋತ್ರಾಭಿಮಾನವಾನ್ । ಯಶೋಲಾವಣ್ಯರೂಪಶ್ಚ ಪಶ್ಚಿಮದ್ವಾರಪಃ ತಥಾ ॥ ಓಂ (ಇದಂ) ಬರ್ಹಿಃ ಸೋಮಪೇಯಾಯ ಯಾಹಿ ವಹಂತು ತ್ವಾ ಹರಯಃ ಮದ್ಯಂ ಚ ಮಾಂಗೂಷ ಮಚ್ಛಾತವಸಂ ಮದಾಯ ॥ ಓಂ ॥ ಗದ್ಯಂತೇ ಸ್ತೂಯಂತೇ ಗದಂತಿ ಸ್ತುವಂತಿ ಇತಿ ವಾ ಸ್ವಪಿತರಃ ತೈಃ ಧ್ರಿಯತೇ ಉಹ್ಯತೇ ಇತಿ ಗದಾಧರಃ ॥ ೧೭ ॥

## ಕನ್ನಡಾರ್ಥ

ಈ ಹೃದಯದ ದಕ್ಷಿಣದ್ವಾರಕ್ಕೆ ವ್ಯಾನ ವಾಯ್ವಭಿಮಾನಿ ಶ್ರೋತ್ರಾಭಿಮಾನಿ ಚಂದ್ರನು ಅಧಿಪತಿಯು. ಅವನನ್ನು ಲಾವಣ್ಯರೂಪನೂ, ದಿಗಂತ ವ್ಯಾಪ್ತ ಕೀರ್ತಿವಂತನೂ ಎಂದು ಉಪಾಸಿಸಿದರೆ ಕೀರ್ತಿ ಲಾವಣ್ಯಗಳು ಸಿಗುತ್ತವೆ.



ದಕ್ಷಿಣದ್ವಾರ ದ್ವಾರಪಾಲಕರು.

"ಗದಾಧರಃ"—ಇದು ಸಹಸ್ರನಾಮಾಂತರ್ಗತವಾದುದು. "ಸ್ತೋತ್ರಗಳನ್ನು ಮಾಡಿಸಿಕೊಳ್ಳುವವರು ಅಥವಾ ಸ್ತೋತ್ರಮಾಡುವವರು" ಎಂದು "ಗದ" ಶಬ್ದಕ್ಕೆ "ಪಿತೃಗಳು" ಎಂದು ಅರ್ಥ. ಅವರುಗಳಿಂದ ಧರಿಸಲ್ಪಡುವವನು; "ಸ್ತೋತ್ರ ಮಾಡುವವರ ಅಶ್ವಗಳಿಂದ ಹೋಗತಕ್ಕವನು'' ಎಂದು ಬೃಹತೀಮಂತ್ರ ಸಂಸೂಚಿತವಾದ ಅರ್ಥ. || ೧೭ ||

**ಅವತರಣಿಕಾ :**—ಇನ್ನು ವೈಕುಂಠ ಪಶ್ಚಿಮದ್ವಾರದಿಂದ ಸಮಸ್ತ ಋಷಿಗಣವು ಅಗ್ನಿನಾಮವ್ಯಾನ ಪ್ರಸಾದಹೊಂದಿ ಪಶ್ಚಿಮದ್ವಾರದಿ ಪ್ರವೇಶ ಮಾಡಿ ಸಂಕರುಷಣರೂಪಿ ಹರಿಯನ್ನು ಹೃತ್ಕಮಲದಲ್ಲಿ ಧ್ಯಾನಿಸುತ್ತಿರುವರೆಂದು ಉಪದೇಶಗೈಯ್ಯುತ್ತಾರೆ.

**ಅಮಿತ ವಿಕ್ರಮನಾಲಯದ ಪ |**
**ಶ್ಚಿಮಕವಾಟದಿ ಸತಿಸಹಿತ ಸಂ |**
**ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ||**
**ಸುಮನಸಾಸ್ಯನೊಳಿಪ್ಪಪಾನಗ |**
**ದಮನ ಸಂಕರುಷಣನ ನಿಜ ಹೃ |**
**ತ್ಕಮಲದೊಳು ಧೇನಿಸುವ ಋಷಿಗಣವೈದಿ ಸುಖಿಸುವರು ||೧೮||**

**ಪದ್ಯಾರ್ಥ:**—ಅಮಿತವಿಕ್ರಮ="ಅಮಿತಾಃ ಅಪರಿಚ್ಛಿನ್ನಾಃ ವಿಕ್ರಮಾಃ ಪಾದವಿಕ್ಷೇಪಾಃ ಅಸ್ಯೇತ್ಯಮಿತವಿಕ್ರಮಃ" (ಎಂದು ವಿದ್ಯಾಧಿರಾಜೀಯ) ಅಪರಿಮಿತ ಸಾಮರ್ಥ್ಯವುಳ್ಳವನು. ಈತನ ಸಾಮರ್ಥ್ಯಕ್ಕೆ ಎಂದೂ ವಿಚ್ಛೇದವಿಲ್ಲ, ಚಿಕ್ಕವಟು ವಾಮನನು ತನ್ನ ಪಾದವಿಕ್ಷೇಪ ಮೂರು ಲೋಕವನ್ನು ವ್ಯಾಪಿಸಿದ ಮಹಾ ಸಮರ್ಥ, = ಇಂತಹ ಪರಮಾತ್ಮನ ಆಲಯದ = ವೈಕುಂಠಾದಿ ತ್ರಿಸ್ಥಾನದಂತೆ ಹೃದಯಾಲಯದ, ಪಶ್ಚಿಮಕವಾಟದಿ=ಪಶ್ಚಿಮ ದಿಕ್ಕಿಗೇ ಇರುವ ದ್ವಾರಗಳಲ್ಲಿ, ಮೊದಲನೇ ದ್ವಾರವಲ್ಲಿ ಶ್ರೀಭೂ, ಎರಡನೇ ದ್ವಾರ, ಸುಮನಸಾಸ್ಯ = ಅಗ್ನಿಯಲ್ಲಿ ಅಗ್ನಿನಾಮಕನಾಗಿರುವ ಅಪಾನನಾಮಕವಾಯು ಅಪಾನಗ = ಅಪಾನನಾಮಕ ವಾಯುದೇವರು, ಸತಿಸಹಿತರಾಗಿ, ಸಂಭ್ರಮದಿ ಭಗವದ್ಗುಣಗಳನೆ ಪೊಗಳುತ್ತ ಮೋದಿಸುವ = ಆನಂದಪಡುತ್ತಲಿರುವ ಅಪಾನ ನಾಮಕ ವಾಯ್ವಂತರ್ಯಾಮಿ, ದಮನ = "ದುಷ್ಟಾನ್ ದಮಯತೀತಿ

ನಿಗೃಹ್ಣಾತೀತಿ ದಮನಃ" (ವಿದ್ಯಾಧಿರಾಜೀಯ) ದುಷ್ಟರನ್ನು ನಿಗ್ರಹಮಾಡು ತ್ತಾನಾದುದರಿಂದ ದಮನನೆಂದು, ಸಂಕರುಷಣನ = ಸಂಕರ್ಷಣ = "ಸಂಹಾರ ಕಾಲೇ ಯುಗಪತ್ ಪ್ರಜಾಃ ಕರ್ಷತೀತಿ ಸಂಕರ್ಷಣಃ" ಪ್ರಳಯಕಾಲದಲ್ಲಿ ಬಿಡದೇ ಒಂದೇ ರೀತಿಯಾಗಿ ಪ್ರಜಾ ಜೀವಿಗಳನ್ನು ಆಕರ್ಷಣಮಾಡಿ ಪ್ರಳಯ ಹೊಂದಿಸುತ್ತಾನಾದುದರಿಂದ ಸಂಕರ್ಷಣನನ್ನು, ಋಷಿಗಣವೈದಿ = ಪ್ರವೇಶಿಸಿ, ನಿಜಹೃತ್ಕಮಲದೊಳು = ತಮ್ಮ ಹೃದಯಕಮಲದಲ್ಲಿ ಧ್ಯಾನಮಾಡುತ್ತ ಸುಖ ಪಡುವರು.

**ಭಾವಸೂಚನ :—** ಅಮಿತೇತಿ ॥ ಅಪರಿಮಿತ ಸಾಮರ್ಥ್ಯ ॥ ಸುಮನ ಸಾಸ್ಯ ಅಗ್ನಿ ॥ ದುಷ್ಟರಿಗೆ ದಮನ । "ಮರೀಚಿರ್ದಮನ" ಇತ್ಯುಕ್ತೇಃ ॥

**ವಿಶೇಷಸೂಚನೆ :—** ಪಂಚರಾತ್ರಾಗಮಪ್ರಮಾಣ ॥ "ಯಶೋ ಲಾವಣ್ಯರೂಪಶ್ಚ ಪಶ್ಚಿಮದ್ವಾರಪಸ್ತಥಾ ವಾಗಪಾನಾತ್ಮಕೋ ವಹ್ನಿಃ ಬ್ರಹ್ಮ ತೇಜೋನ್ನದೇವತೇತಿ ॥ ಅಗ್ನಿಪ್ರಸಾದಾದೃಷಯ ಇತಿ ॥ ಛಾಂದೋಗ್ಯೇ.

## ಶ್ರೀಪ್ರಾಣೇಶ ವಿಠಲರು

ಪಶ್ಚಿಮದ್ವಾರಮೂರೊಳಹರ ಪೇಳ್ವೆ ॥ ೨ ॥ ಪ್ರಥಮಾದ್ವಿತಿಯದಲಿ ಶಿಖಿನಾಮಕಪಾನ। ಪೃಥಿವಿನಾಮಕ ಭಾರತೀ ಕುಮುದ ಕುಮುದಾಕ್ಷರೂ"—

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಮಿತ ವಿಕ್ರಮ" ಇತಿ ॥ ಓಂ ಉತೋಪಮಾನಾಂ ಪ್ರಥಮೋ ನಿಷೀದಸಿ ಸೋಮ ಕಾಮಂ ಹಿ ತೇ ಮನಃ ॥ ಆವೃಷಸ್ವ ಪುರೂವಸೋ ಸುತಸ್ಯೇಂದ್ರಾಂಧಸಃ ವಿದ್ಮಾಹಿ ತ್ವಾ ॥ ಓಂ ॥ ಅಮಿತಾಃ ವಿಕ್ರಮಾಃ ಶಕ್ತಯಃ ಯಸ್ಯ ಸಃ ತಥೋಕ್ತಃ ॥

"ಅಥ ಯೋಽಸ್ಯ ಪ್ರತ್ಯಙ್ ಸುಷಿಃ ಸೋಽಪಾನಃ ಸೋ ವಾಕ್ ಸೋಽಗ್ನಿಃ। ತದೇದತ್ ಬ್ರಹ್ಮವರ್ಚಸಮನ್ನಾದ್ಯ ಮುಪಾಸೀತ॥ ಬ್ರಹ್ಮವರ್ಚಸ್ವ್ಯನ್ನಾದೋ ಭವತಿ ಯ ಏವಂ ವೇದ"॥ "ಪಶ್ಚಿಮದ್ವಾರಪ: ತಥಾ ॥ ವಾಗಪಾನಾತ್ಮಕೋ ವಹ್ನಿಃ ಬ್ರಹ್ಮತೇಜೋನ್ನದೇವತಾ ॥"

ದಮಃ ಓಂ ಏವಾ ಹ್ಯಸ್ಯ ಸೂನೃತಾ ವಿರಪ್ಶೀ ಗೋಮತೀ ಮಹೀ ಪಕ್ವಾಶಾಖಾ ನ ದಾಶುಷೇ। ಯೇವಾಹಿತೇ ವಿಭೂತಯಃ ವಾತಯಃ ॥ ಓಂ ಕಲ್ಪಶಾಖೇವ (ಖೀವ) ಭಕ್ತಾಭೀಷ್ಟದತ್ವಾತ್ ದಮಃ ॥ ೧೮ ॥

## ಕನ್ನಡಾರ್ಥ

**"ಅಮಿತ ವಿಕ್ರಮ"** ಇದು ವಿಷ್ಣು ಸಹಸ್ರನಾಮಾಂತರ್ಗತವಾದುದು "ಅಂಸಖ್ಯಗಳಾದ ಅನಂತಗಳಾದ ಶಕ್ತಿಗಳುಳ್ಳವನು" ಎಂದು ಬೃಹತೀ ಮಂತ್ರಾನುಗುಣವಾದ ಅರ್ಥ.

ಈ ಹೃದಯಮಂದಿರದ ಪಶ್ಚಿಮದ್ವಾರಕ್ಕೆ ಅಪಾನವಾಯ್ವಭಿಮಾನಿ ವಾಗಿಂದ್ರಿಯಾಭಿಮಾನಿ ಅಗ್ನಿಯು ಅಧಿಪತಿಯು. ಈ ಅಗ್ನಿಯನ್ನು ಬ್ರಹ್ಮ ವರ್ಚಸ್ಸು ಹಾಗೂ ಅನ್ನಾದ್ಯಭಿಮಾನಿ ಎಂದು ಉಪಾಸಿಸಬೇಕು. ಇದನ್ನು ತಿಳಿದವನು ಬ್ರಹ್ಮವರ್ಚಸ್ವಿಯೂ, ಅನ್ನವುಳ್ಳವನೂ ಆಗುತ್ತಾನೆ.

**"ದಮ"** ಇದೂ ವಿಷ್ಣು ಸಹಸ್ರನಾಮಾಂತರ್ಗತವೇ. "ಕಲ್ಪವೃಕ್ಷದಂತೆ ಭಕ್ತರುಗಳಿಗೆ ಅಭೀಷ್ಟಗಳನ್ನು ಕೊಡುವದರಿಂದ "ದಮ" ಎಂದು ಹೇಳಿಸಿ ಕೊಳ್ಳುತ್ತಾನೆ" ಎಂಬುದಾಗಿ ಬೃಹತೀಮಂತ್ರಾಭಿಪ್ರೇತವಾದ ಅರ್ಥ ॥ ೧೮ ॥

**ಅವತರಣಿಕಾ :**— ವೈಕುಂಠಪುರದ ಉತ್ತರದ್ವಾರದಿಂದ ಸಮಸ್ತ ಗಂಧರ್ವರು, ಇಂದ್ರನಾಮಕವಾಯುದ್ವಾರಾ ಪ್ರವೇಶಿಸಿ ಅನಿರುದ್ಧ ದೇವನನ್ನು ಉಪಾಸಿಸುತ್ತಾರೆಂದು ಹೇಳುತ್ತಾರೆ.

**ಸ್ವರಮಣನ ಗುಣರೂಪಸಪ್ತ ।**
**ಸ್ವರಗಳಿಂದಲಿ ಪಾಡುತಿಹ ತುಂ ।**
**ಬರನೆ ಮೊದಲಾದಖಿಳಗಂಧರ್ವರು ರಮಾಪತಿಯ ॥**
**ಪುರದ ಉತ್ತರಬಾಗಿಲಾಧಿಪ ।**
**ಸುರಪಶಚಿಗಸಮಾನ ವಾಯುಗ ।**
**ಹರಿನ್ಮಣಿನಿಭ ಶಾಂತಿಪತಿ ಅನಿರುದ್ಧನೈದುವರು ॥ ೧೯ ॥**

**ಪದ್ಯಾರ್ಥ :**—ಸ್ವರಮಣನ = ತನ್ನ ವಿಜ್ಞಾನಮಯ ಶ್ರೀರೂಪದಲ್ಲೇ ಆನಂದಮಯ ಪುರುಷನು ರಮಿಸಿ ಆನಂದಪಡುವನಾದುದರಿಂದ ಸ್ವರಮಣ

ಶನ್ನಲ್ಲೇ ತಾನು ರಮಣಮಾಡುವ ಹರಿಯ, ಗುಣರೂಪ = ಆನಂದೋತ್ಕರ್ಷ ವಾದ ಜ್ಞಾನಾದಿಗುಣಗಳನ್ನು, ಹರಿಯರೂಪ ಕಾಂತಿಲಾವಣ್ಯಗಳನ್ನು, ಸಪ್ತ ಸ್ವರಗಳಿಂದಲಿ ಪಾಡುತಿಹ = ಸ.ರಿ.ಗ.ಮ.ಪ.ದ.ನಿ. ಇದು ಸಾಮಾನ್ಯ ಅರ್ಥ ದ್ಯೋತಕಕ್ಕೆ, ವೇದಸ್ವರಗಳು ಉದಾತ್ತ, ಅನುದಾತ್ತನಿಚಯ, ಸ್ವರಿತ ಮುಂತಾದ ಏಳು ಸಪ್ತಸಾಮವೇದಗಳಿಂದ ನಾನಾ ವಿಧವಾದ ರಾಗತಾಳಲಯಗಳಲ್ಲಿ ಗಾನ ಮಾಡುತ್ತಿರುವ ತುಂಬುರನೆ ಮೊದಲಾದ ಅಖಿಳಗಂಧರ್ವರು=ಗಂಧರ್ವಶ್ರೇಷ್ಠ ನಾದ ತುಂಬರನೇ ಮೊದಲಾಗಿ ಎಲ್ಲ ಗಂಧರ್ವರು (ಗಾನಮಾಡುವರು) ರಮಾ ಪತಿಯ=ಶ್ರೀಲಕ್ಷ್ಮಿಗೆ ಒಡೆಯನಾದ ಶ್ರೀಹರಿಯಪುರದ ಉತ್ತರಬಾಗಿಲಾಧಿಪ= ವೈಕುಂಠಪುರಕ್ಕೆ ಉತ್ತರಕ್ಕೆ ಇರುವ ದ್ವಾರಗಳಲ್ಲಿ ನಿಯಾಮಕರೂ ದ್ವಾರ ಪಾಲಕರಾಗಿರುವ, ೧ನೇ ದ್ವಾರ ಶ್ರೀಭೂ, ೨ನೇ ದ್ವಾರದಿ, ಸುರಪ = ಇಂದ್ರ ತತ್ಪತ್ನಿ ಶಚಿಗ = ಶಚಿದೇವಿಯಲ್ಲಿರುವ ವಿದ್ಯುನ್ನಾಮಕ ಭಾರತಿ. ಇಂದ್ರ ನಾಮಕ ಸಮಾನವಾಯುಗ=ಸಮಾನನಾಮಕವಾಯುವಿನಲ್ಲಿರುವ, ಹರಿನ್ಮಣಿ ನಿಭ=ಹರಿನೀಲಮಣಿಯಂತೆ ಕಾಂತಿಯುಳ್ಳ, ಶಾಂತಿಪತಿ ಅನಿರುದ್ಧನೈದುವರು= ಶ್ರೀಲಕ್ಷ್ಮೀರೂಪಳಾದ ಶಾಂತಾದೇವಿಗೆ ಒಡೆಯನಾದ ಅನಿರುದ್ಧ="ನ ಕೇನಾಪಿ ಕ್ವಾಪಿ ರುದ್ಧ್ಯತ ಇತ್ಯನಿರುದ್ಧಃ|| ಅನಿಭಿಃ ಪ್ರಯತ್ನವದ್ಭಿಃ ಮುಖ್ಯಪ್ರಾಣದಾಸ್ಯೈ ರ್ವಾ ರುದ್ಧ ಇತಿ ವಾ ಅನಿರುದ್ಧಃ"|| ಇಂತಹ ಅನಿರುದ್ಧನಾಮಕಹರಿಯನ್ನು ಗಂಧರ್ವರು ಹೊಂದುವರೆಂದು ಹೇಳುತ್ತಾರೆ.

**ಭಾವಸೂಚನ :**—ಸ್ವರಮಣೇತಿ || ಗ || ಇದ್ದವ ||೧೯ ||

ವಿಶೇಷ **ಸೂಚನೆ :**—ಉಕ್ತಂ ಚ ಪಂಚರಾತ್ರಾಗಮೇ || ಉತ್ತರ ದ್ವಾರಪಸ್ತ್ವಿಂದ್ರಃ ಸಮಾನ ಮನ ಆತ್ಮಕ ಇತಿ|| ಗಂಧರ್ವಾ ಉತ್ತರೇಣೇಂದ್ರ ಸಂಶ್ರಯಾದಿತಿ ಛಾಂದೋಗ್ಯೇ ||

**ಸ್ವಾಣೇಶ ವಿಠಲರು**

ಉತ್ತರಕೆ ಮೂರು ದ್ವಾರಗಳು| ಸತತದಲಿ ನೆಲಸಿಹರ ಪೆಸರು ಕೇಳಿ ||೩||

ಒಂದರೊಳು ಶ್ರೀದ್ವಿತಿಯಸುರಪನಾಮುಸಮಾನ। ಇಂದುಮುಖಿ ಭಾರತಿಯು ವಿದ್ಯುನ್ನಾಮ್ನಿ। ನಂದನು ಸುನಂದ ಮೂರನೇ ಬಾಗಿಲಲ್ಲಿಹ್ಯರು||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವರಮಣ" ಇತಿ || "ಅಥ ಯೋಽಯಂ ಉದಙ್ ಸುಷಿಃ ತತ್ಸಮಾನಃ ಪರ್ಜನ್ಯಃ ತನ್ಮನಃ ತದೇತತ್ ಕೀರ್ತಿಶ್ಚೇತ್ಯುಪಾಸೀತ ಕೀರ್ತಿಮಾನ್ ಪುಷ್ಟಿಮಾನ್ ಭವತಿ ಯ ಏವಂ ವೇದ" ||

"ಉತ್ತರದ್ವಾರಪಸ್ತ್ವಿಂದ್ರಃ ಸಮಾನಮನಆತ್ಮಕಃ || ಕೀರ್ತ್ಯೈಶ್ವರ್ಯಾತ್ಮಕಃ ನಿತ್ಯಮ್ || ೧೯ ||

### ಕನ್ನಡಾರ್ಥ

ಭಗವದಧಿಷ್ಠಿತವಾದ ಈ ಹೃದಯಮಂದಿರದ ಉತ್ತರದ್ವಾರಾಧಿಪತಿಯು—ಸಮಾನವಾಯ್ವಭಿಮಾನಿ – ಮನೋಭಿಮಾನಿ ಪರ್ಜನ್ಯನಾಮಕ ಇಂದ್ರನು. ಈ ಉತ್ತರದ್ವಾರಪಾಲಕನಾದ ಇಂದ್ರನನ್ನು ಕೀರ್ತಿ ಐಶ್ವರ್ಯಾಭಿಮಾನಿಯೆಂದು ಉಪಾಸಿಸಬೇಕು. ಅಂದರೆ ಕೀರ್ತಿ ಐಶ್ವರ್ಯಗಳು ಲಭಿಸುವುವು (ಹೀಗೆ ತಿಳಿಯುವನಿಗೆ) ಎಂದು ಛಾಂದೋಗ್ಯಭಾಷ್ಯಗಳ ಅರ್ಥ || ೧೯ ||

ಅವತರಣಿಕಾ :—ವೈಕುಂಠಲೋಕದಲ್ಲಿ, ಶ್ರೀರಮಣನ ಅರಮನೆಗೆ ಊರ್ಧ್ವದಲ್ಲಿ ಒಂದೇ ದ್ವಾರವಿರುವದು. ಗರುಡ ಶೇಷ ಇಂದ್ರಾದಿಗಳು ಮೊದಲುಮಾಡಿ ಪುಷ್ಕರಾಂತ ಸಮಸ್ತ ತತ್ವದೇವತೆಗಳು ಕಲಾಭಿಮಾನಿಗಳು. ಊರ್ಧ್ವದ್ವಾರಪಾಲಕ ಆಕಾಶನಾಮಕರಮೆಯನ್ನು, ಭಾರತೀ ಉದಾನವಾಯು ದ್ವಾರಾ ಹೊಂದಿ, ವಾಸುದೇವನಾಮಕ ಹರಿಯನ್ನು ನೋಡುತ್ತ ಆನಂದ ಹೊಂದುವರೆಂದು ಉಪದೇಶಿಸುತ್ತಾರೆ.

**ಗರುಡಶೇಷಮರೇಂದ್ರಮುಖ ಪು |**
**ಷ್ಕರನೆ ಕಡೆಯಾಗಿಪ್ಪಖಿಳ ನಿ |**
**ರ್ಜರರು ಊರ್ಧ್ವದ್ವಾರಗತಭಾರತಿ ಉದಾನನೊಳು ||**
**ಮೆರೆವ ಮಾಯಾವಾಸುದೇವನ |**
**ಪರಮ ಮಂಗಳಪದಯುಗಳವಂ |**
**ದಿಪರನೈದಿ ಸದಾ ಮುಕುಂದನ ನೋಡಿ ಸುಖಿಸುವರು || ೨೦ ||**

**ಪದ್ಯಾರ್ಥ :—**ಗರುಡ = ಪಕ್ಷಿರಾಜನಾದ ಗರುಡದೇವರು, **ಶೇಷ** = ಶೇಷದೇವರು, ಅಮರೇಂದ್ರಮುಖ = ಇಂದ್ರಾದಿಸಮಸ್ತ ತತ್ವಾಭಿಮಾನಿ ದೇವತೆಗಳು, ಮತ್ತು ಅತಾತ್ವಿಕರಾದ ತತ್ವಕಲಾಭಿಮಾನಿಯಾದ ದೇವತೆಗಳಲ್ಲಿ ಪುಷ್ಕರನೆ ಕಡೆಯಾಗಿಪ್ಪ = ಸುಕರ್ಮನಿವೇದನಮಾಳ್ಪ ಪುಷ್ಕರನಾಮಕ ಅವರ ದೇವನವರೆಗೆ, ಅಖಿಲನಿರ್ಜರರು = ಎಲ್ಲ ದೇವತೆಗಳು, ಊರ್ಧ್ವದ್ವಾರಗತ = ಮೇಲ್ಭಾಗದಲ್ಲಿ ಇರುವ ಒಂದೇ ದ್ವಾರದಲ್ಲಿರುವ, ಭಾರತಿ ಉದಾನನೊಳು = ವಾಙ್ನಾಮಕ ಭಾರತೀ ದೇವೇರು, ಉದಾನನಾಮಕ ವಾಯುದೇವರಲ್ಲಿ, ಮೆರವ ಮಾಯಾವಾಸುದೇವನ = ಪ್ರಕಾಶಮಾನವಾಗಿರುವ ಆಕಾಶನಾಮಕ ರಮೆಯೇ ಮಾಯಾದೇವಿ ಶ್ರೀವಾಸುದೇವನ ಪತ್ನಿ ದ್ವಾರಾ ವಾಸುದೇವ ನಾಮಕ ಪರಮಾತ್ಮನ, ಪರಮಮಂಗಳ ಅವಯವಗಳ ಮಂದಿರವನೈದಿ = ಉತ್ತಮವಾದ, ಸಚ್ಚಿದಾನಂದರೂಪಿ ಮಂಗಳಪ್ರದನಾದ, ಚಿನ್ಮಯಶರೀರ ತತ್ ಅವಯವ ಅಂಗಗಳನ್ನು ಹೊಂದಿ ಅಂದರೆ ತತ್ವಾಭಿಮಾನಿಸುರರಿಗೆ ಅಂಗ ಸಾಯುಜ್ಯಮುಕ್ತಿ, ವಾಯುಗೆ ಮುಕ್ತಿಯಲ್ಲಿ ಬ್ರಹ್ಮಗೆ ಸರ್ವಾಂಗಸಾಯುಜ್ಯ ಸಾರ್ಷ್ಟ್ಯವೆಂಬ ಮುಕ್ತಿ ಇವುಗಳನ್ನುಹೊಂದಿ, ಸದಾ=ಮುಕ್ತಿಯಲ್ಲಿ ನಿತ್ಯಬಿಡದೆ, ಮುಕುಂದನ = ಮೋಕ್ಷ ಪ್ರದಾತೃನಾದ ವಾಸುದೇವನನ್ನೇ ನೋಡಿ ಸುಖಿ ಸುವರು = ನೋಡುತ್ತ ಆನಂದಪಡುತ್ತಲಿರುವರು. ಶ್ರೀಪ್ರಾಣದ್ವಾರಾ ಶ್ರೀ ಹರಿಯ ಉಪಾಸಕರಿಗೆ ಪಂಚವಿಧವಾದ ಮುಕ್ತಿ ಎಂದು ಅಭಿಪ್ರಾಯ.

**ಭಾವಸೂಚನ :—**ಗರುಡೇತಿ ॥ ಮುಖ = ಮೊದಲಾದ, ನಿರ್ಜರ = ದೇವತೆಗಳು ॥ ೨೦ ॥

**ವಿಶೇಷ ಸೂಚನೆ :—**ಉಕ್ತಂ ಚ ಪಂಚರಾತ್ರಾಗಮೇ ॥ "ಕೀರ್ತ್ಯೈರ್ಶ್ವರ್ಯಾತ್ಮಕೋ ನಿತ್ಯಮೂರ್ಧ್ವದ್ವಾರಪ ಏವ ಚ । ಪ್ರಧಾನವಾಯುರಾಕಾಶಃ ಸಾರ್ವಜ್ಞಾದುನ್ನತೇಸ್ತಥಾ ॥ ಉದಾನ ಊರ್ಜಿತತ್ವಾತ್ಸಃ ಓತಪೂರ್ಣ ತ್ವತೋ ಮಹಃ । ಪರಸ್ಯ ಬ್ರಹ್ಮಣಸ್ತ್ವೇತೇ ಪುರುಷಾಃ ಪಂಚ ಕೀರ್ತಿತಾಃ ॥ ದ್ವಾರಪಾ ಹೃದಯೇ ಚೈವ ವಿಷ್ಣುಲೋಕೇ ಚ ಸರ್ವದಾ । ಅಂತಶ್ಚ ದ್ವಾರಪಾ ಹ್ಯೇತೇ ಜಯಾದ್ಯಾ ಬಾಹ್ಯತಃ ಸ್ಮೃತಾಃ ॥ ಇತಿ. ಪೃಥ್ವೀತಿನಾಮಿಕಾ ಶ್ರೀಸ್ತು ದ್ಯೌರ್ದಿಶೋ ವಿದ್ಯುದೇವ ಚ ॥ ವಾಯುಪತ್ನೀ ಸಮುದ್ದಿಷ್ಟಾ ಕ್ಷತ್ರದ್ವಾರಾ

ಧಿಪಾಶ್ಚ ತಾಃ । ಅಧಿತಿಷ್ಠಂತಿ ತೇ ಸರ್ವೇ ನಾರಾಯಣಮನಾಮಯಮಿತಿ ॥
ಛಾಂದೋಗ್ಯ ಭಾಷ್ಯೇ ॥

ಶಿವಾದ್ಯಾ ವಾಯುಮಾಶ್ರಿತ್ಯ ಯಾಂತ್ಯೂರ್ಧ್ವೇಣ ಹರಿಂ ಸುರಾ ಇತಿ॥

## ಪ್ರಾಣೇಶವಿಠಲರು

ಒಂದುಕದ ಮೇಲುಭಾಗದಲಿಹದು ॥ ೪ ॥ ಅಲ್ಲಿ ಆಕಾಶ ನಾಮಕಳು ಲಕ್ಷ್ಮಿ ಉದಾನ । ಚಲ್ವಿ ಭಾರತಿಯು ವಾಙ್ನಾಮದಲಿಹಳು॥ ಎಂದು ಪಂಚದ್ವಾರಗತರೂಪಗಳನ್ನು ವಿವರಿಸಿದ್ದಾರೆ.

**ಸೂಚನೆ:**—ಊರ್ಧ್ವದ್ವಾರ ಚಿತ್ರವು ಪೂರ್ವದ್ವಾರ ಚಿತ್ರದ ಮೇಲು ಭಾಗದಲ್ಲೇ ಇದೆ. ಅಲ್ಲೆಯೆ ಚಿತ್ರಿಸಿದದ್ದು ಕೊಟ್ಟಿದೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಗರುಡ " ಇತಿ ॥ " ಅಥ ಯೋಸ್ಯೋರ್ಧ್ವಃ ಸುಷಿಃ ಸ ಉದಾನಃ ಸ ವಾಯುಃ ಸ ಆಕಾಶಃ ತದೇತದೋಜಶ್ಚ ಮಹಶ್ಚೇತ್ಯುಪಾಸೀತ ಓಜಸ್ವೀ ಮಹಸ್ವಾನ್ ಭವತಿ ಯ ಏವಂ ವೇದ॥ ತೇ ವಾ ಏತೇ ಪಂಚ ಬ್ರಹ್ಮ ಪುರುಷಾಃ"॥ ಇತಿ॥ " ಊರ್ಧ್ವದ್ವಾರಪ ಏವ ಚ। ಪ್ರಧಾನವಾಯುರಾಕಾಶಃ ಸಾರ್ವಜ್ಞಾತ್ ಉನ್ನತೇಃ ತಥಾ ॥ ಉದಾನಂ ಊರ್ಜಿತತ್ವಾತ್ ಸಃ ಓಜಃ ಪೂರ್ಣತ್ವತೋ ಮಹಃ। ಪರಸ್ಯ ಬ್ರಹ್ಮಣಸ್ತ್ವೇತೇ ಪುರುಷಾಃ ಪಂಚ ಕೀರ್ತಿತಾಃ ॥ ದ್ವಾರಪಾಃ ಹೃದಯೇ ಚೈವ । " ಏವಮೇತಾನ್ ಉಪಾಸ್ಯೈವ ತದ್ಗುಣಾಂಶಾಂಶಭಾಗ್ ಭವೇತ್ ॥ ವಿಷ್ಣುಲೋಕಂ ತಥಾ ಗಚ್ಛೇತ್ ಭವೇದಪಿ ಸುಸಂತತಿಃ " ॥ ಇತಿ ಛಾಂದೋಗ್ಯಂ ಪಂಚದ್ವಾರಪಬೋಧಕಂ ಆತ್ಮಪಂಚಪದ್ಯೇಷು ನಿಬಬಂಧ ಪರಲೋಕಬಂಧುಃ ಬಂಧುಕುಲಲಲಾಮಃ ॥ ॥ ೨೦ ॥

## ಕನ್ನಡಾರ್ಥ

ಈ ಹೃದಯ ಮಂದಿರದ ಊರ್ಧ್ವದ್ವಾರಪಾಲಕನು ಉದಾನನೆಂಬ ಮುಖ್ಯವಾಯುವು. ಅವನು ಉದಾನನಾ ... ಭಿಮಾನಿ. ಹಾಗೂ ಸರ್ವಜ್ಞನಾ

ಮುದರಿಂದ ಆಕಾಶಸಾನುಕನು. ಈ ಊರ್ಧ್ವದ್ವಾರಪಾಲಕನಾದ ಮುಖ್ಯ ವಾಯುವನ್ನು ಊರ್ಜಿತ, (ಓಜ) ಪೂರ್ಣ (ಮಹ) ಎಂದು ಉಪಾಸಿಸ ಬೇಕು. ಹೀಗೆ ತಿಳಿದವನು, ಊರ್ಜಿತನೂ, ಪೂರ್ತಿಯುಳ್ಳವನೂ ಆಗುತ್ತಾನೆ.

ಹೃದಯಸ್ಥ ಪರಮಾತ್ಮನ ದ್ವಾರಪಾಲಕರು ಈ ಹೃದಯಕ್ಕಷ್ಟೇ ಅಲ್ಲ; ಸ್ವರ್ಗಲೋಕಕ್ಕೂ ವಿಷ್ಣುವಿನ ವೈಕುಂಠಲೋಕಕ್ಕೂ ದ್ವಾರಪಾಲಕರಾಗಿರು ತ್ತಾರೆ. "ಜಯವಿಜಯ ಮುಂತಾದವರು ಬಹಿದ್ವಾರಪಾಲಕರು. ಸೂರ್ಯ ಮುಂತಾದವರು ಅಂತರ್ದ್ವಾರಪಾಲಕರು" ಎಂದು ಸೂಕ್ಷ್ಮ ತಿಳಿಯಬೇಕು ಎಂದು ಛಾಂದೋಗ್ಯಭಾಷ್ಯಗಳಲ್ಲಿ ನಿರೂಪಿತವಾದ ರಹಸ್ಯವನ್ನು ಈ ಐದು ಪದ್ಯಗಳಲ್ಲಿ ನಿರೂಪಿಸಿರುತ್ತಾರೆ. (ಸಂಗ್ರಹಿಸಿ) ವೈಷ್ಣವದಾಸರಲ್ಲಿ ಶ್ರೇಷ್ಠರಾದ ಈ ದಾಸರಾಯರ ಪರಲೋಕಬಂಧುಭಾವವನ್ನು ಎಷ್ಟು ಸ್ಮರಿಸಿದರೂ ಸಾಲದು. ॥ ೨೦ ॥

**ಅವತರಣಿಕಾ :**—ಹಿಂದೆ ೧೬ನೇ ಪದ್ಯವಾರಂಭಿಸಿ, ೨೧ನೇ ಪದ್ಯದ ವರೆಗೆ ಪೂರ್ವ–ದಕ್ಷಿಣ–ಪಶ್ಚಿಮ–ಉತ್ತರ–ಊರ್ಧ್ವಗತವಾದ ಐದು ದ್ವಾರ ಗಳಿಂದ ಪ್ರಾಣೋಪಾಸನಾದ್ವಾರಾ, ಮುಕ್ತಿಹೊಂದುವರಲ್ಲಿ ಪಂಚವಿಧವಾಗಿ ರುವವರ ತಾರತಮ್ಯ ತಿಳಿದು ಉಪಾಸನೆಮಾಡುವರಿಗೆ ಸಂಸಾರಕಡಲಿನಿಂದ ದಾಟಿಸಿ ಮುಕ್ತಿಯನ್ನು ಕೊಡುವನೆಂದು, ಫಲಶ್ರುತಿ ಹೇಳುತ್ತಾರೆ.

**ದ್ವಾರಪಂಚಕಪಾಲರೊಳಗಿಹ (ರೋಳಿಹ) ।**
**ಭಾರತೀಪ್ರಾಣಾಂತರಾತ್ಮಕ ।**
**ಮಾರಮಣಸ್ವರೂಪ ತತ್ತದ್ದ್ವಾರದಲಿ ಬಪ್ಪ ॥**
**ಮೂರೆರಡು ವಿಧ ಮುಕ್ತಿಯೋಗ್ಯರ ।**
**ತಾರತಮ್ಯವನರಿತವರ ಕಂ ।**
**ಸಾರಿ ಸಂಸಾರಾಬ್ಧಿ ದಾಟಿಸಿ ಮುಕ್ತರನ ಮಾಳ್ಪ ॥ ೨೧ ॥**

**ಪದ್ಯಾರ್ಥ :**— ದ್ವಾರಪಂಚಕಪಾಲರೊಳಗಿಹ = ಹಿಂದಿನ ೧೬ನೇ ಪದ್ಯ ಆರಂಭಿಸಿ ಪೂರ್ವ–ದಕ್ಷಿಣ–ಪಶ್ಚಿಮ–ಊರ್ಧ್ವ ಐದು ದ್ವಾರಗಳಲ್ಲಿ ದ್ವಾರ ಪಾಲಕನಾಗಿ ಮುಖ್ಯವಾಯು ಭಾರತೀಸಹಿತನಾಗಿ ಪಂಚಪ್ರಾಣರೂಪಗಳ ಭಾರತೀಪ್ರಾಣಾಂತರಾತ್ಮಕ = ಭಾರತೀದೇವಿ ಪ್ರಾಣದೇವರ ಅಂತರ್ಗತನಾದ

ಮಾರಮಣನೈರೂಪ=ವಾಸುದೇವ, ನಾರಾಯಣ, ಪ್ರದ್ಯುಮ್ನ, ಸಂಕರ್ಷಣ, ಅನಿರುದ್ಧ,ಊರ್ಧ್ವ, ಪೂರ್ವ, ದಕ್ಷಿಣ, ಪಶ್ಚಿಮ,ಉತ್ತರ,ತತ್ತದ್ದ್ವಾರದಲ್ಲಿ ಇಪ್ಪ ಮೂರ್ತಿಗಳನ್ನು ಹೊಂದಲು, ತತ್ತದ್ದ್ವಾರದಲಿ ಬಪ್ಪ= ಆಯಾದ್ದ್ವಾರಗಳಿಂದ ಬರುವ, ಮೂರೆರಡುವಿಧ ಮುಕ್ತಿಯೋಗ್ಯರ=ಐದು ವಿಧವಾದ ಮುಕ್ತಿಯೋಗ್ಯರ, ತಾರತಮ್ಯವನರಿತವರ = ಅವರವರ ಆನಂದ, ಸ್ವರೂಪ, ಗುಣ, ಜ್ಞಾನಬಲಾದಿಗಳ ವಿಧ ತಾರಮ್ಯ = ತರತಮಭಾವವನ್ನು ತಿಳಿದು, ಹೀಗೆ ಉಪಾಸನೆ ನಿತ್ಯ ತಮ್ಮ ಹೃದಯಮಂಟಪದಲ್ಲಿ ಧ್ಯಾನಗೈಯ್ಯುವರನ್ನು, ಕಂಸಾರಿ = ಕಂಸನಾಮಕ ದೈತ್ಯನನ್ನು ಸಂಹಾರಮಾಡಿದ ಶ್ರೀಕೃಷ್ಣ ಸಮಸ್ತ ಪಾಪಗಳನ್ನು ಪರಿಹರಿಸಿ, ಸಂಸಾರಾಬ್ಧಿ ದಾಟಿಸಿ = ಸಂಸಾರ ಸಮುದ್ರವನ್ನು ದಾಟಿಸಿ, ಲಿಂಗಭಂಗಗೈಸಿ, ಮುಕ್ತರನಮಾಳ್ಪ, = ಅನಿಷ್ಟಪರಿಹಾರಕ ಇಷ್ಟ ಪ್ರಾಪ್ತಿರೂಪ ಸ್ವರೂಪಾನಂದಾವಿರ್ಭಾವಮುಕ್ತಿಯನ್ನು ಕೊಡುವನು. ಇದೇ ಪ್ರಾಣಾಂತರ್ಯಾಮಿ ಹರಿಯ ಧ್ಯಾನೋಪಾಸನೆಯ ಮುಖ್ಯ ಫಲ.

**ಭಾವಸೂಚನ :**—ದ್ವಾರೇತಿ || **ಮಾರಮಣ** = ರಮಾಪತಿ ||

ಬಪ್ಪ=ಬರುವ || ಮೂರೆರಡು || ೩ × ೨ = ೬ ವಿಧ || ಕರ್ಮಜರನ್ನ ದೇವತೆಗಳೊಳಗೆ ಸೇರಿಸಿ ಆರುಮಂದಿ ಮುಕ್ತಿಯೋಗ್ಯರೆಂತ ಶಾಂಡಿಲ್ಯರು ಹೇಳಿದ್ದಾರೆ. ೧. ಅರಸರು, ೨. ಮನುಷ್ಯೋತ್ತಮರು, ೩. ಗಂಧರ್ವರು, ೪. ದೇವತೆಗಳು, ೫. ಚಿರಪಿತರು—೬ ಆಜಾನಜಾಃ || ತದುಕ್ತಂ ವಾಯುಪುರಾಣೇ. ಕ್ಷಿತಿಪಾ ಮನಷ್ಯಗಂಧರ್ವಾಃ ದೇವಾಶ್ಚ ಪಿತರಶ್ಚಿರಾಃ | ಆಜಾನಜಾ ಮುಕ್ತಿ ಯೋಗ್ಯಾಃ ಕರ್ಮಜಾ ದೇವಗಾಃ ಸ್ಮೃತಾಃ|| ಇತಿ. ಮೂರೆರಡು ವಿಧ ಮುಕ್ತಿ|| ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಸಾರ್ಷ್ಟಿ ಎಂತ ಪಂಚವಿಧ ಮುಕ್ತಿ ಎಂದು ಗುರುರಾಜೀಯ ವೈಕುಂಠ ವರ್ಣನೆ || ೨೧ ||

**ಸೂಚನೆ**—ಕರ್ಮಜ ದೇವತೆಗಳ ಸಾಧನ ಕಲ್ಪವ್ಯತ್ಯಾಸ, ಆನಂದ ತಾರತಮ್ಯದಲ್ಲಿ ಕಡಿಮೆ ಆದ ಕಾರಣ ಕರ್ಮಜ ದೇವತೆಗಳ ಗುಂಪನ್ನು ಬೇರೆ ದೇವತೆಗಳಲ್ಲಿ ಹೇಳಿದ್ದಾರೆ. ಅನಂತ ವಿಧ ತಾರತಮ್ಯ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದ್ವಾರ" ಇತಿ || "ಐ" ಐದು. "ಬಪ್ಪ"–ಬರುವ || ೨೧ ||

## ಕನ್ನಡಾರ್ಥ

ಈ ಹೃದಯಸ್ಥ ಹರಿಯ ದ್ವಾರಪಾಲಕರಲ್ಲಿರುವ ಭಾರತೀ ಹಾಗೂ ಪ್ರಾಣದೇವರ ಐದೈದು ರೂಪಗಳನ್ನೂ, ಅಲ್ಲಿರುವ ಶ್ರೀ ಲಕ್ಷ್ಮೀನಾರಾಯಣರ ರೂಪಗಳನ್ನೂ ದಿನಾಲು ಚಿಂತಿಸಿ ಧ್ಯಾನೋಪಾಸನೆಯ ಮಾಡುವವನಿಗೆ ಫಲವನ್ನು ನಿರೂಪಿಸುತ್ತಾರೆ—ಈ ಪದ್ಯದಿಂದ. ॥ ೨೧ ॥

**ಅವತರಣಿಕಾ :**—ಬಹಿರಂಗ ದಂಭಾಚಾರ ಕರ್ಮವನ್ನು ಬಿಡಿರಿ. ಶ್ರೀ ಮನ್ವಶಾಸ್ತ್ರವು ಮುಕ್ತಿಯಲ್ಲಿ ಆನಂದವೀವದು. ಪ್ರಾಣದೇವರ ಹಂಸೋಪಾಸನೆ ಮರ್ಮವನ್ನರಿಯದೇ ಕುತರ್ಕಗಳಿಂದ ದುರ್ಮಾರ್ಗಿಗಳಾಗಬೇಡಿರಿ ಎಂದು, ಬೆಳಗಿದ ಹೂಜೆಯ ದೃಷ್ಟಾಂತದಿಂದ ಸಾಧಕರಾದ ಸಜ್ಜನರನ್ನು ಪುನಃ ಪುನಃ ಎಚ್ಚರಗೊಳಿಸುತ್ತಾರೆ.

**ಬೆಳಗಿಧೂಜೆಯಲಿ ನೋಳ್ಪರಿಗೆ ಥಳ ।**
**ಥಳಿಸುತಲಿ ಕಂಗೊಳಿಸುವಂದದಿ ।**
**ತೊಳೆದು ದೇಹವ ನಾಮಮುದ್ರೆಗಳಿಂದಲಂಕರಿಸಿ ॥**

**ಒಲಿಸಿ ನಿತ್ಯ ಕುತರ್ಕ ಯುಕ್ತಿಗ ।**
**ಳಲವಬೋಧರ ಶಾಸ್ತ್ರ ಮರ್ಮವ ।**
**ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು ॥ ೨೨ ॥**

**ಪದ್ಯಾರ್ಥ :**—ಬೆಳಗಿದ ಹೂಜೆಯು = ಹೂಜೆಯ ಮುಖ ಸಣ್ಣದಾಗಿರುವುದು. ಅದರ ಒಳಗಿನ ಹೊಲಸ ತಿಕ್ಕಿ ತೆಗೆಯಲು ಕೈ ಹಿಡಿಸುವದಿಲ್ಲ. ಒಳಗೆ ಹೂಜಿಯಲ್ಲಿ ಮಲಿನವಿದ್ದರೂ, ಮೇಲೆ ಮಾತ್ರ ಆ ಹೂಜೆಯನ್ನು ಬೆಳಗಿ=ಉಜ್ಜಿ ತಿಕ್ಕಿದರೆ, ನೋಳ್ಪರಿಗೆ=ಆ ಹೂಜೆಯನ್ನು ಮೇಲೆ ಮಾತ್ರ ನೋಡುವವರಿಗೆ, ಥಳಥಳಿಸುತಲಿ=ಒಳ್ಳೇ ಸ್ವಚ್ಛವಾಗಿ ಹೊಳೆದು ಪ್ರಕಾಶಮಾನವಾಗಿ, ಕಂಗೊಳಿಸುವಂದದಿ=ಕಣ್ಣಿಗೆ ತೋರುವಂತೆ, ಬರಿ ದಂಭಾಚಾರದಿಂದ ದೇಹವನ್ನು ತೊಳೆದು = ಸ್ನಾನದ ವಿಚಾರ ಮರ್ಮವನ್ನರಿಯದೇ ಮೈಯನ್ನು ಝುಳಝುಳ ತೊಳೆದು, (ತೊಳೆದು ಈ ಶಬ್ದ ಪಶುಗಳ ಮೈ ತೊಳೆಯುವದಕ್ಕೆ ಪ್ರಯೋಗಿಸುತ್ತಾರೆ) ದಾಸರಾಯರು. ಪಶುಪ್ರಾಯರಾದ ನರರು

ದೇಹ ತೊಳೆದು, ನಾಮಮುದ್ರೆಗಳಿಂದ ಅಲಂಕರಿಸಿ=ಬಹಿರಂಗದಲ್ಲಿ ತೋರು ವರಿಗೆ ವೈಷ್ಣವಾಭಾಸಕ ಚಿಹ್ನೆಗಳಿಂದ ಢಾಳವಾಗಿ ದ್ವಾದಶನಾಮ, ಪಂಚ ಮುದ್ರೆಗಳನ್ನು ಧರಿಸಿ ಶೋಭಿಸುವರು. ಆದರೆ ಒಳಗೆ ಮನಸ್ಸಿನಲ್ಲಿ ಹೂಜೆಯು ಒಳಗಿರುವ ಮನೋವ್ಯಾಲಿಗೆ ಕಳಿಯದೇ, ಸದ್ಗುರುಗಳಿಂದ ಉಪದೇಶ ಹೊಂದದೇ, ಒಲಿಸಿ ನಿತ್ಯಕುತರ್ಕ ಯುಕ್ತಿಗಳ=ನಿತ್ಯದಲ್ಲಿ ಬಿಡದೇ ಪದೇಪದೇ ಕು=ಕೆಟ್ಟದಾದ, ತರ್ಕಗಳು=ಮನಸ್ಸಿಗೆ ಬಂದಂತೆ ಊಹಾಪೋಹಗಳನ್ನು ಮಾಡುತ್ತ, ಕುಯುಕ್ತಿಗಳನ್ನೇ ಹೇಳುತ್ತ, ನಿಶ್ಚಯವಾದ ಜ್ಞಾನವಿಲ್ಲದೇ, ಅಲವಬೋಧ=ಬಹುಬೋಧರು, ಪೂರ್ಣಜ್ಞಾನವುಳ್ಳ ಸರ್ವಜ್ಞರಾದ ಮಧ್ವರ ಶಾಸ್ತ್ರ ಮರ್ಮವ ತಿಳಿಯದಿಹ ನರ=ಮಧ್ವಾಚಾರ್ಯರ ಸಚ್ಛಾಸ್ತ್ರದ ಗುಟ್ಟನ್ನು ತಿಳಿ ಯದಲೇ ಇರುವ ಮನುಜನು, ಬರಿದೆ ಇದರೊಳು ಶಂಕಿಸಿದರೇನು ?=ಬರಿದೆ= ಏನೂ ತಿಳಿಯದೇ ವ್ಯರ್ಥವಾಗಿ ಶೂನ್ಯವಾದಿಗಳಂತೆ ಈ ಮಧ್ವಶಾಸ್ತ್ರದ ಉಪ ನಿಷತ್ ರಹಸ್ಯಗಳಲ್ಲಿ ಸಂಶಯಪಟ್ಟರೇನಾಗುವದು. ಅಂತರಂಗ ಮಲ ಕಳೆದು ಶುದ್ಧರಾಗದೇ ಇರಬೇಡಿರಿ. ಸುಜ್ಞಾನ ಸಂಪಾದಿಸಿರಿ. ಎಂದು ಪದೇ ಪದೇ ಎಚ್ಚರ ಕೊಡುತ್ತಾರೆ. "ಮೋಕ್ಷಸ್ಯ ಕಾರಣಂ ಸಾಕ್ಷಾತ್ ತತ್ತ್ವಜ್ಞಾನಂ ಖಗೇಶ್ವರ"—ಎಂಬ ಶ್ರೀಕೃಷ್ಣನ ವಾಕ್ಯವನ್ನು ನೆನಪಿಗೆ ತಂದೀವ ಕರುಣಾಳು ದಾಸಾರ್ಯರ ಅನುಗ್ರಹವು ಸಜ್ಜನರಲ್ಲಿ ನಿತ್ಯ ಇದೆಂಬುದು ಮರೆಯಲಾಗದು.

**ಭಾವಸೂಚನ :**—ಬೆಳಗೀತಿ ॥ ಬರಿದೆ=ವ್ಯರ್ಥ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ತದೇತತ್ ಸರ್ವಂ ಗುಹ್ಯರೀತಿಂ ಅವಿಜ್ಞಾಯ ಅಹರಹಃ ದುಸ್ತರ್ಕ ಗೋಚರವಿಚಾರಕಲಿಲಾಂತಃಕರಣಾಃ ಅವಿದಿತಗುರುಸಂಪ್ರದಾಯಾಃ ಪದ ವಿಕ್ಷೇಪಕಾಃ ಕುತರ್ಕದಾವದಗ್ಧಾಃ ಅತ್ರ ಮಹಾಮೃತಾಂಬೋಸಾ ಯುಧೇಚ್ಛಂ ವಿಚಾರಸ್ನಾನಂ ಇಚ್ಛಂತಿ ಚೇತ್ ನಾರ್ಹತಾ ಭವತಾಮ್ ಪ್ಲ್ವ ಲೋದಸ್ನಾಯಿನಾಂ ತತ್ಪಾಯಿನಾಮ್ । ಯತ್ರ ನಾಸ್ತಿ ಪದನ್ಯಾಸಃ ನಂ ತತ್ ಪ್ರಾಪ್ಯಮ್ ॥ ಅವಿದ್ವಾನ್ ತೇನ ಚ ಪಥಾ ಪ್ರತಿಷ್ಠಮಾನಃ ಸೋನ್ಮತ್ತ ಇತಿ ಪೀಯೂಷಕಲ್ಪವಾಣ್ಯಾ ಸುಧಾಗತಯಾ ದೂರೀಕಾರ್ಯಾಃ ನೋಃ ಕಾರ್ಯಾಃ ಇತ್ಯತ್ರ ಪ್ರಯಾಗಸಿಕತಾಕ್ತ ವಾರಾಣಸೀ ಪಾತ್ರವಿಶೇಷ ನಿದರ್ಶನ ಮಾಹ—"ಬೆಳಗಿ" ಇತಿ ॥ ೨೨ ॥

## ಕನ್ನಡಾರ್ಥ

ರಹಸ್ಯಮಯವಾದ ಸಮಸ್ತ ಪ್ರಮೇಯವನ್ನು ತಿಳಿಯದೇ ಇದ್ದ ಹಗಲು ರಾತ್ರಿ ಕುತರ್ಕ ವಿಚಾರದಿಂದ ಕಲುಷಿತಾಂತಃಕರಣರೂ, ಗುರು ಸಂಪ್ರದಾಯವನ್ನರಿಯದವರೂ, ವೇದವಿಚ್ಛೇದಕರೂ ಆದ ಕೆಲವರು ಈ ಜ್ಞಾನಾಮೃತಸಾಗರದಲ್ಲಿ ಸ್ವೈರವಾದ ಸ್ನಾನವಿಚಾರ ವಿಹಾರವನ್ನು ಬಯಸಬಹುದು. ಆದರೆ ಅವರಿಗೆ ಗುಂಡಿಯ ನೀರಿನಲ್ಲಿ ಮಿಂದು ಅದನ್ನೇ ಕುಡಿಯುವವರಿಗೆ ಈ ಸಾಗರದಲ್ಲಿ ಅರ್ಹತೆಯಿಲ್ಲ. ಎಂದು ಉತ್ತರಿಸುತ್ತೇವೆ. ಆ ಮಾರ್ಗದಲ್ಲಿ ಹೆಜ್ಜೆಯನ್ನಿಡದವನಿಗೆ ಸ್ನಾನವು ಹೇಗೆ ಸಿಗುವದು? ಅಜ್ಞಾನಿಯು ಅದೇ ಮಾರ್ಗದಿಂದಲೇ ನಡೆಯುವವನು" ಎಂದು ಅಮೃತ ಸದೃಶವಾದ ಸುಧಾಗತ ವಾಕ್ಯಗಳಿಂದ ಅವರನ್ನು ಅಂಗೀಕರಿಸದೇ ನಿರಾಕರಿಸಬೇಕು. ಈ ವಿಷಯದಲ್ಲಿ ಪ್ರಯಾಗದ ಮಳಲಿನಿಂದ ಉಜ್ಜಲ್ಪಟ್ಟ ಕಾಶೀಕೊಡದ ದೃಷ್ಟಾಂತವನ್ನು ಹೇಳುತ್ತಾರೆ—"ಬೆಳಗಿ" ಎಂಬ ಪದ್ಯದಿಂದ. ‖ ೨೨ ‖

**ಅವತರಣಿಕಾ**:—ಹಿಂದೆ ಹೇಳಿದಂತೆ ನಾರಾಯಣಾದಿ ಪಂಚರೂಪಗಳಲ್ಲದೇ ಹಂಸ, ಉದ್ಗೀಥ, ಹರಿ, ಹಯವದನ, ಕೃಷ್ಣಾದಿ ಅನಂತ ಅವತಾರಗಳು, ಮೂಲರೂಪಿ ಪದ್ಮನಾಭನಲ್ಲಿ ಸದಾಸಂಶ್ಲೇಷ ಐಕ್ಯದಿಂದ, ಇರುವ ಅನಂತ ರೂಪಗಳೇ ಜೀವರ ಚಿದ್ ಹೃದಯದಲ್ಲಿ ಇರುತ್ತವೆಂದು ಸಮುದ್ರ ತೆರೆ ದೃಷ್ಟಾಂತದಿಂದ ಹೇಳುತ್ತಾರೆ.

**ಉದಧಿಯೊಳು ಊರ್ಮಿಗಳು ತೋರ್ಪಂ ।**
**ದದಲಿ ಹಂಸೋದ್ಗೀಥ ಹರಿಹಯ ।**
**ವದನ ಕೃಷ್ಣಾದ್ಯಮಿತ ಅವತಾರಗಳು ನಿತ್ಯದಲಿ ‖**
**ಪದುಮನಾಭನೊಳಿರುತಿಹವು ಸ ।**
**ರ್ವದ ಸಮಸ್ತ ಪ್ರಾಣಿಗಳ ಚಿ ।**
**ದ್ಧೃದಯಗತ ರೂಪಗಳು ಅವ್ಯವಧಾನದಲಿ ಬಿಡದೆ ‖ ೨೩ ‖**




**ಪದ್ಯಾರ್ಥ**:—ಉದಧಿಯೊಳು = ಸಮುದ್ರದಲ್ಲಿ, ಊರ್ಮಿಗಳು = ತೆರೆಗಳು ಯುಗಪತ್ ಒಂದರಿಂದೊಂದು, ತೋರ್ಪದಂದದಲಿ=ತೆರೆಗಳು ಬರುತ್ತ

ಬರುತ್ತ ಸಾಲಾಗಿ ತೋರುವಂತೆ, ಪದ್ಮನಾಭನೊಳು=ಮೂಲರೂಪಿ ಪದ್ಮನಾಭ ಪುರುಷರೂಪಿ ಸಮುದ್ರ ಸದೃಶನಾದ ಹರಿಯಲ್ಲಿ ತೆರೆಗಳಂತೆ, ಹಂಸೋದ್ಗೀಥ ಹರಿಹಯವದನಕೃಷ್ಣಾದಿ=ಹಂಸ, ಉದ್ಗೀಥ, ಹಯವಕ್ತ್ರ, ಕೃಷ್ಣನೇ ಮೊದಲಾದ ಅಮಿತ ಅವತಾರಗಳು=ಅನಂತಾನಂತ ಅವತಾರಗಳು, ನಿತ್ಯದಲಿ = ನಿರಂತರ, ಸಂಶ್ಲೇಷದಿಂದ ಇರುತಿಹವು. ಸಮುದ್ರಕ್ಕೂ ಸಮುದ್ರ ತೆರೆಗಳಿಗೂ ಹೇಗೆ ಭೇದವಿಲ್ಲವೋ, ಮೂಲರೂಪ ಹರಿಗೆ ಅವತಾರ ಅನಂತಗಳಿಗೆ ಕಿಂಚಿತ್ತಾದರೂ ಭೇದವಿಲ್ಲ. ಈ ಅನಂತ ಭಗವದ್ರೂಪಗಳು, ಸಮಸ್ತ ಪ್ರಾಣಿಗಳ=ಸಕಲ ಚೇತನರಾದ ಜೀವಿಗಳ, ಚಿದ್‌ಹೃದಯಗತ ರೂಪಗಳು=ಜೀವ ಚಿತ್‌ಸ್ವರೂಪ ಗಳು, ಅವ್ಯವಧಾನ=ಅವಕಾಶ ಕೊಡದೆ ಅಂದರೆ ಸದಾ ಬಿಡದೆ ಇರುತ್ತವೆಂದು ಬೋಧಿಸುತ್ತಾರೆ.

**ಭಾವಸೂಚನೆ:** — ॥ ಉದಧೀತಿ ॥ ಊರ್ಮಿ=ತೆರೆ ॥ ಉದ್ಗೀಥ= ಉತ್ಕೃಷ್ಟತ್ವೇನಜ್ಞಾತಿ ॥ ೨೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಉದಧಿ" ಇತಿ ॥ "ಊರ್ಮಿ" ತೆರೆ. "ಸಶ್ಲೇಷ ಏವ" ಇತ್ಯುಕ್ತೇಃ ॥ ॥ ೨೩ ॥

## ಕನ್ನಡಾರ್ಥ

ಸಮುದ್ರ ತರಂಗಗಳಂತೆ ಮೂಲರೂಪಗಳಿಂದ ಅವತಾರರೂಪಗಳು ಪ್ರಾದುರ್ಭವಿಸುವವು; ಅವುಗಳಿಗೆ ಪರಸ್ಪರ ಭೇದವಿಲ್ಲ ಎಂದು ತಿಳಿಸುತ್ತಾರೆ. "ಉದಧಿಯೊಳು" ಎಂಬ ಪದ್ಯದಿಂದ. ॥ ೨೩ ॥

**ಅವತರಣಿಕಾ:**—ಪರಮಾತ್ಮನು ಅನಂತಾನಂತ ರೂಪಗಳಿಂದ ಜೀವರ ಚಿದ್ ಹೃದಯದಲ್ಲಿ ತಾನು ಇದ್ದರೂ, ಜಗದೀಶನು ತನ್ನ ಉದರದಲ್ಲಿ ಸಮಸ್ತ ಪ್ರಾಣಿಗಳನ್ನು ಧರಿಸಿರುವನಲ್ಲದೇ ಹರಿಯು ತನ್ನ ನಾಮಗಳನ್ನು ಜೀವರಿಗೆ ದಾನಮಾಡಿದ ಕಾರಣ, ಸಕಲ ಜಗತ್ತು ಶ್ರೀಹರಿಗೆ ಪ್ರತಿಬಿಂಬ ವೆಂದು ಕರೆಸುತ್ತದೆಂದು ಶರಧಿ ಉಪಮೆಯಿಂದ ಹೇಳುತ್ತಾರೆ.

**ಶರಧಿಯೊಳು ಮಕರಾದಿಜೀವರು ।**
**ಇರಳು ಹಗಲೇಕಪ್ರಕಾರದಿ ।**
**ಚರಿಸುತನುಮೋದಿಸುತ ಇಪ್ಪಂದದಿ ಜಗತ್ರಯವು ॥**
**ಇರುತಿಹದು ಜಗದೀಶನುದರದಿ ।**
**ಕರಸುವದು ಪ್ರತಿಬಿಂಬನಾಮದಿ ।**
**ಧರಿಸಿಹದು ಹರಿನಾಮರೂಪಂಗಳನು ಅನವರತ ॥೨೪॥**

**ಪದ್ಯಾರ್ಥ :—** "ಶರಧಿಯೊಳು=ಸಮುದ್ರದಲ್ಲಿ, ಮಕರಾದಿ ಜೀವರು= ಮೊಸಳೆ, ಮೀನು ತಿಮಿ, ತಿಮಿಂಗಿಲ ಅನೇಕ ಜಲಚರ ಪ್ರಾಣಿಗಳು, ಚರಿಸುತ ಅನುಮೋದಿಸುತ = ಇ ರು ತ್ತ ಸಂತೋಷಪಡುತ್ತ ವಿಹಾರ ಮಾಡುತ್ತ, ಇಪ್ಪಂದದಿ=ಇರುವಂತೇ, ಜಗತ್ರಯವು=ತ್ರಿವಿಧರಾದ ಸಮಸ್ತ ಪ್ರಾಣಿಗಳು, ಜಗದೀಶನುದರದಿ ಇರುತಿಹದು=ಜಗತ್ತಿಗೆ ಸ್ವಾಮಿಯಾದ, ಶ್ರೀಹರಿಯ ಉದರದಿ ಸಮಸ್ತ ಪ್ರಾಣಿವರ್ಗವು ಸಮೂಹವಾಚಕ. ಇರುತ್ತಿರುವದು, ಇರುವದಲ್ಲದೇ ಕರೆಸುವದು ಪ್ರತಿಬಿಂಬನಾಮದಿ=ಬಿಂಬನಾದ ಶ್ರೀಹರಿಗೆ, ಪ್ರತಿಬಿಂಬವೆಂದು ಕರೆಸುತ್ತದೆ. ಶ್ರೀಹರಿಯ ಅಗಾಧ ಮಹಿಮೆ ಹೇಳುತ್ತಾರೆ. ಸಮಸ್ತಚಿದ್ ಹೃದಯದಲ್ಲಿ ಬಿಂಬರೂಪನಾಗಿ ಸಮಸ್ತ ಜೀವರಿಗೆ ಇರುವಿಕೆಯ ಅಸ್ತಿತ್ವ ತಂದುಕೊಡುತ್ತಾನಲ್ಲದೆ ತನ್ನಂತೆ ಕಿಂಚಿತ್ ಚಿತ್ ಪ್ರಕಾಶ ತನ್ನ ಅಧೀನದಲ್ಲಿಟ್ಟುಕೊಂಡಿರುವನಾದ ಜೀವರೆಲ್ಲ ಶ್ರೀಹರಿಗೆ ಪ್ರತಿ ಬಿಂಬರು (೧೪ನೇ ಸಂಧಿಯಲ್ಲಿ ವಿಸ್ತಾರ ವಿವರಿಸಿದೆ) ಪ್ರತಿಬಿಂಬರಾಗಿ ಹರಿಯ ಅಧೀನರಾಗಿರುವರಲ್ಲದೇ, ಹರಿನಾಮ ರೂಪಂಗಳನು ಅನವರತ ಧರಿಸಿಹದು॥ ಶ್ರೀಹರಿಯು, ಜೀವರಸ್ವರೂಪಯೋಗ್ಯತೆಯಂತೆ ಅವರವರಿಗೆ ರೂಪಚಲುವಿಕೆ ಸುಂದರತ್ವ, ನಾಮ = ಸಕಲ ನಾಮವೂ ಸಕಲ ರೂಪವೂ ಹರಿಯವಾದರೂ, ಜೀವರಧಿಕಾರಾನುಸಾರವಾಗಿ ನಾಮರೂಪಕ್ರಿಯೆಗಳು ಅನ್ನಾದಿ ೧೬ ಪ್ರಕಾರ ತನ್ನ ಸ್ವಶಕ್ತಿಯನ್ನು ದಾನಮಾಡಿರುವನು.

**ಭಾವಸೂಚನ:—**ಶರಧೀತಿ॥ ಸಮುದ್ರ॥ ಮಕರ॥ ಮೊಸಳೆ ॥೨೪॥

**ವ್ಯಾಸದಾಸ ಸಿದ್ಧಾಂತ ಕೌಮುದೀ**

"ಶರಧಿ" ಇತಿ॥ ಸರ್ವೇಷಾಂ ಹರಿಣಾ ಸ್ವನಾಮದಾನಂ ಉಭಯತ್ರ ಪ್ರಸಿದ್ಧಪಾದಭಾಷ್ಯೇ ಸ್ಪಷ್ಟಮ್ ॥ ೨೪ ॥

## ಕನ್ನಡಾರ್ಥ

" ಧರಿಸಿಹುದು ಹರಿನಾಮರೂಪಂಗಳನು ಅನವರತ " ಎಂಬ ಪದ್ಯದ ಕೊನೆಯ ಪಾದದಲ್ಲಿ ಶ್ರೀಹರಿನಾಮಗಳು ಜೀವಾದಿಗಳಿಗೆ ಬಂದವೆಂದು ತಿಳಿಸಿರುತ್ತಾರೆ. ಸರ್ವರಿಗೂ ಶ್ರೀಹರಿಯು ತನ್ನಲ್ಲಿಯೇ ಮುಖ್ಯವಾಗಿ ವಾಚಕವಾಗಿರುವ ಶಬ್ದಗಳಲ್ಲಿ ಕೆಲವು ಶಬ್ದಗಳನ್ನು ಅಮುಖ್ಯ ವೃತ್ತಿಯಿಂದ ವ್ಯವಹಾರದಲ್ಲಿ ಬಳಸಲು ಜೀವಾದಿಗಳೆಲ್ಲರಿಗೂ ಕೊಟ್ಟಿರುತ್ತಾನೆ. ಎಂಬ ಸಂಗತಿಯನ್ನು ಉಭಯತ್ರ ಪಸಿದ್ಧ ನಾಮಪಾದದಲ್ಲಿ ಭಾಷ್ಯದಲ್ಲಿ ಸ್ಪಷ್ಟಪಡಿಸಲಾಗಿರುತ್ತದೆ.

"ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ|| ಪಾದಾತ್ ಅನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ||" ಇತಿ ಸ್ಕಾಂದೇ

" ಚತುರ್ಮುಖಃ ಶತಾನಂದೋ ಬ್ರಹ್ಮಣಃ ಪದ್ಮಭೂಃ ಇತಿ|| ಉಗ್ರೋ ಭಸ್ಮಧರೋ ನಗ್ನಃ ಕಪಾಲೀತಿ ಶಿವಸ್ಯ ಚ | ವಿಶೇಷನಾಮಾನಿ ದದೌ ಸ್ವಕೀಯಾನ್ಯಪಿ ಕೇಶವಃ " ಇತಿ ಚ ಬ್ರಾಹ್ಮೇ ||

" ರಾಜನು ತನ್ನಂತಃ ಪುರವನ್ನು ಉಳಿದು ಮಿಕ್ಕವುಗಳನ್ನು ತನ್ನ ಸೇವಕರಿಗೆ ಕೊಡುವಂತೆ ಭಗವಾನ್ ಪುರುಷೋತ್ತಮನು ನಾರಾಯಣ ಮುಂತಾದ ನಾಮಗಳನ್ನು ಬಿಟ್ಟು ಕೆಲವು ನಾಮಗಳನ್ನು ರುದ್ರಾದಿಗಳಿಗೆ ಕೊಟ್ಟನು " ಬ್ರಹ್ಮನಿಗೆ " ಚತುರ್ಮುಖ, ಶತಾನಂದ ಪದ್ಮಭೂ" ಎಂದೂ ರುದ್ರನಿಗೆ "ಉಗ್ರ ಭಸ್ಮಧರ ನಗ್ನ " (ದಿಗಂಬರ) ಎಂದೂ ತನ್ನವೇ ಆದ ವಿಶೇಷ ನಾಮಗಳನ್ನು ವಿಷ್ಣುವು ಕೊಟ್ಟನು? ಎಂದು ಭಾಷ್ಯಾರ್ಥ || ೨೪ ||

**ಅವತರಿಣಿಕಾ:—** ಸರ್ವಜೀವರನ್ನು ಉದರದಿ ಧರಿಸಿದ್ದಲ್ಲದೇ ತಾನೂ ಅವರಲ್ಲಿದ್ದು, ಸರ್ವಸಾರ ಶುಭ ಸ್ವಾಖ್ಯರಸಗಳನ್ನು ಭುಂಜಿಸಿ ಜೀವರಿಗೆ ತಕ್ಕ ರಸಗಳನ್ನು ಉಣಿಸುವನೆಂದು ಗರ್ಭಿಣೀ ಸ್ತ್ರೀವೃಷ್ಟಾಂತದಿಂದ ಉಪದೇಶಿಸುತ್ತಾರೆ.

**ಜನನಿ ಸೌಖ್ಯಪದಾರ್ಥಗಳು ಭೋ |**
**ಜನವ ಮಾಡಲು ಗರ್ಭಗತ ಶಿಶು |**
**ದಿನದಿನದಿ ಅಭಿವೃದ್ಧಿಯೈದುವ ತೆರದಿ ಜೀವರಿಗೆ ||**

**ವನಜನಾಭನು ಸರ್ವರಸ ಉಂ।**
**ಡುಣಿಸಿ ಸಂರಕ್ಷಿಸುವ ಜಾಹ್ನವಿ।**
**ಜನಕ ಜನ್ಮಾದ್ಯಖಿಳದೋಷವಿದೂರ ಗಂಭೀರ ॥೨೫॥**

**ಪದ್ಯಾರ್ಥ:—** ಜನನಿ ಸೌಷ್ಠಪದಾರ್ಥಗಳು=ಗರ್ಭದಲ್ಲಿ ಶಿಶುವಿನಧರಿಸಿದ ತಾಯಿಯು, ಸೌಷ್ಠ=ರುಚಿಕರ ಪುಷ್ಟಿಕರವಾದ ರಸವತ್ತಾದ ಪದಾರ್ಥಗಳನ್ನು=ವಸ್ತುಗಳನ್ನು, ಭೋಜನವ ಮಾಡಲು=ಊಟಮಾಡಿದರೆ, ಗರ್ಭಗತ ಶಿಶು ದಿನದಿನದಿ ಅಭಿವೃದ್ಧಿ ಐದುವ ತೆರದಿ=ತಾಯಿಯ ಹೊಟ್ಟೆಯಲ್ಲಿರತಕ್ಕ ಶಿಶು=ಮಗು ಕೂಸು, ನಿತ್ಯನಿತ್ಯದಲ್ಲಿ, ಗರ್ಭನಾಳದಿಂದ •ರಸವು ಕೂಸಿಗೆ ಪುಷ್ಟಿನಾಡಿ, ದಿನೇದಿನೇ ಗರ್ಭವು ಬೆಳೆಯುವಂತೇ, ವನಜನಾಭನು=ಕಮಲವೇ ಹೊಕ್ಕಳಾಗಿರುವ ಪದ್ಮನಾಭ ರೂಪಿಹರಿಯು, ಸರ್ವರಸ ಉಂಡು=ತಾನು ಸಕಲ ಪದಾರ್ಥಗಳಲ್ಲಿಪ್ಪ ಸಕಲ ಸ್ವಾಖ್ಯರಸವನ್ನು ಸ್ವೀಕರಿಸಿ ತೃಪ್ತಿಐದಿ ಜೀವರಿಗೆ ಉಣಿಸಿ=ಜೀವರಿಗೆ ತಕ್ಕ ಅವರವರ ರಸಭೋಜನಮಾಡಿಸಿ ಸಂರಕ್ಷಿಸುವ=ಸಂತತ ಕಾಪಾಡುವ ಸಲಹುವನು. ಸರ್ವಸಾರ ಭೋಕ್ತನಾದರೂ, ನಿರ್ದುಷ್ಟನೂ, ಪಾಪಲೇಶವಿಲ್ಲದವನೂ ಎಂತ ಹೇಳಲು, ಜಾಹ್ನವಿಜನಕ=ಜಹ್ನು ಋಷಿಯಿಂದ ಉದಯಿಸಿದ ಗಂಗೆ, ಪಾಪ ದೂರಳು ಪಾಪ ನಾಶಕಳು. ಈ ಜಾಹ್ನವಿ ಗಂಗೆಯನ್ನು ಪಡೆದ ಶ್ರೀಹರಿಗೆ ಘಾಪಲೇಶವೆತ್ತಣದು? ಜನ್ಮಾದ್ಯಖಿಳ ದೋಷ ವಿದೂರ=ಜನನ ಮರಣಾದಿ ಸಕಲ ದೋಷವಿಲ್ಲದವನು, ಪಾಪ ವಿದೂರನು ಗಂಭೀರ=ನೆಲೆ ನಿಲುಕದ ಆಳವಾದ ಪ್ರೌಢ ಸ್ವಮಹಿಮ ತನ್ನನು ತಾನೆ ಬಲ್ಲನು.

**ಭಾವಸೂಚನ :—** ಜನನೀತಿ ॥ ೨೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**“ ಜನನಿ ” ಇತಿ ॥ ೨೫ ॥**

## ಕನ್ನಡಾರ್ಥ

ಗರ್ಭಗತ ಶಿಶುವಿಗೆ ಸಂಗೋಪನಾಭಿವೃದ್ಧಿಗಳು ಜನನಿಯಿಂದ ಆಗುವಂತೆ ಸರ್ವರಿಗೂ ಪರಮಾತ್ಮನಿಂದ ಪೋಷಣೆಯಾಗುವದೆಂದು ತಿಳಿಸುತ್ತಾರೆ “ ಜನನಿ ” ಎಂಬ ಪದ್ಯದಿಂದ. ॥ ೨೫ ॥

**ಅವತರಣಿಕಾ :**—ಅನಿಮಿತ್ತ ಬಂಧುವಾದ ಶ್ರೀಹರಿಯನ್ನು, ಯಾವ ಆಶಾ ಫಲಾಪೇಕ್ಷೆ ಇಲ್ಲದೇ ನಿರಪೇಕ್ಷ ಬುದ್ಧಿಯಿಂದ ಸ್ವಾಮಿ ನೀನು ಈಶ ನಾನು ದಾಸನೆಂದು ಉಪಾಸನೆಗೈಯ್ಯುವದೆಂದು ಪುನಃ ಪುನಃ ಎಚ್ಚರಿಸುತ್ತಾರೆ.

**ಆಶೆಗೊಳಗಾದವನು ಜನರಿಗೆ ।**
**ದಾಸನೆನಿಸುವ ಆಶೆಯೆನು ನಿಜ ।**
**ದಾಸಗೈದಿಹ ಪುಂ (ಪೂಂ) ಸಗೆಲ್ಲರು ದಾಸರೆನಿಸುವರು ॥**
**ಶ್ರೀಶನಂಘ್ರಿ ಸರೋಜಯುಗಳ ನಿ।**
**ರಾಶೆಯಿಂದಲಿ ಭಜಿಸೆ ಒಲಿದು ರ।**
**ಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರಿ ॥೨೬॥**

**ಭಾವಸೂಚನ :**—

**ಪ್ರಮಾಣ :** — ಆಶಾಯಾಃ ಯೇ ದಾಸಾಃ ತೇ ದಾಸಾಃ ಸರ್ವಲೋಕಸ್ಯ । ಆಶಾ ದಾಸೀ ಯೇಷಾಂ ತೇಷಾಂ ದಾಸಾಯತೇ ಲೋಕಃ ॥ ೧ ॥
(ಮೂಲಪ್ರತಿ)

**ಪದ್ಯಾರ್ಥ :**—ಆ ಶೆ ಗೊ ಳ ಗಾ ದ ವ ನು = ಲೋಕದಲ್ಲಿ ಉದರಂಭರಣಾರ್ಥವಾಗಿ ದುರಾಶಾಮಾಡುವನು, ಜನರಿಗೆ ಲೋಕದಲ್ಲಿದ್ದ ಶ್ರೀಮಾತ್ರ ಕೊಡಗೈ ದಾನಶೌಂಡರಿಗೆ, ದಾಸನೆನಿಸುವ = ಅವರಿಗೆಲ್ಲ ಸೇವಕನಾಗಿ ಅವರ ಮರ್ಜಿ ಸಂಪಾದಿಸಲು ದಾಸ ಸೇವಕನೆನಿಸುತ್ತಾನೆ. ಆದರೆ ಆಶೆಯನು ನಿಜ ದಾಸಗೈದಿಹ=ಇಂಥ ಲೋಕದ ದುರಾಶೆಯನ್ನು ತ್ಯಜಿಸಿ, ಆಸೆಯನ್ನೇ ನಿಜ ದಾಸಗೈದಿಹ=ನಿರಾಶಾದಿಂದ ಕಾಮ ವರ್ಜಿತನಾಗಿ ಆ ಕೆಟ್ಟ ಆಶೆ=ಅಪೇಕ್ಷಗಳೆಂಬ ಕಾಮ ಆಶೆಯನ್ನೇ ನಿಜದಾಸಗೈದ=ತನ್ನ ವಶದಲ್ಲಿಟ್ಟು ಆಶಾವಿವರ್ಜಿತ ಪೂಂಸಗೆ=ಪುರುಷಗೆ, ಎಲ್ಲರು = ಲೋಕದ ಜನರೆಲ್ಲರೂ, ದಾಸರು = ಸೇವಕರೆನಿಸುವರು. (ಇದಕ್ಕೆ ಪುರಂದರದಾಸರೇ ಸಾಕ್ಷಿ) ಇಂತು ನಿರಪೇಕ್ಷದಿಂದ ಶ್ರೀಶನಂಘ್ರಿ ಸರೋಜಯುಗಳ=ಶ್ರೀದಃ ಶ್ರೀಶ ಎಂಬುವಂತೆ ಶ್ರೀಶಃ="ಶ್ರಿಯಃ ಈಶಃ ಶ್ರೀಶಃ" ಶ್ರಿಯಿ ಶೇತ ಇತಿ ಶ್ರೀಶಃ ॥ ಲಕ್ಷ್ಮೀಪತಿಯ ಪಾದಕಮಲಗಳನ್ನು ಯಾವ ಫಲಾಪೇಕ್ಷೆ ಇಲ್ಲದೆ ಭಜಿಸಲು, ಭಜಿಸುವ ಭಕ್ತನಿಗೆ ಒಲಿದು, ಕರುಣಾ ಸಮುದ್ರನಾದ ಹರಿಯು, ಲಕ್ಷ್ಮೀಸಹಿತನಾಗಿ ಭಕ್ತನ ವಶನಾಗುವ ||| ೨೬ |||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆಶೆ" ಇತಿ ॥ "ಆಶಾಯಾಃ ದಾಸಾಃ ಯೇ" ॥ಇತ್ಯರ್ಥಂ ವಕ್ತಿ॥ "ತನ್ನನ್ನೇ "ಇತಿ ॥ " ದಾಸ್ಯತ್ಯಾತ್ಮಾನಮಪ್ಯಜಃ " ಇತ್ಯುಕ್ತೇಃ ॥ ೨೬ ॥

## ಕನ್ನಡಾರ್ಥ

"ಆಶಾಯಾಃ ಯೇ ದಾಸಾಃ " ಎಂಬ ಸುಭಾಷಿತ ಶ್ಲೋಕದ ಅರ್ಥ ವನ್ನೇ ಇಲ್ಲಿ ನಿರೂಪಿಸಿರುತ್ತಾರೆ. ಭಕ್ತಿಯಿಂದ ತನ್ನಲ್ಲಿ ಮನಸ್ಸನ್ನು ಇತ್ತವರಿಗೆ ಪರಮಾತ್ಮನು ತನ್ನ ಸ್ವರೂಪಭೂತವೈಕುಂಠಾದಿ ಲೋಕಗಳನ್ನು ಸಹ ಕೊಡುವನು " ಎಂದು ವಚನವಿರುವದರಿಂದ " ತನ್ನನ್ನೇ " ಎಂದು ಹೇಳಿರುತ್ತಾರೆ. || ೨೬ ||

**ಅವತರಣಿಕಾ:**—ಶ್ರೀಹರಿಯು ಅನಂತಗುಣ ಪೂರ್ಣನಿರಲು ಜೀವರು ಆತನ ಉಪಾಸನ ಮಾಡುವ ಬಗೆ ಹೇಗೆ? ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು || ಆತ್ಮೋಪಾಸನೆ ಪ್ರಾರಂಭಿಸಿ ಯೋಗ್ಯತೆಯಂತೆ ಒಂದೊಂದೆ ಗುಣ ಉಪಾಸನ ಮಾಡುವದೆಂದು ದೃಷ್ಟಾಂತ ಹೇಳುತ್ತಾರೆ.

**ದ್ಯುನದಿ ಆದ್ಯಂತವನು ಕಾಣದ ।**
**ಮನುಜನೇಕತ್ರದಲಿ ತಾಮ |**
**ಜ್ಜನವ ಗೈಯೆ ಸಮಸ್ತದೋಷದಿ ಮುಕ್ತನಹ ತೆರದಿ ॥**
**ಅನಘನಮಲಾನಂತನಂತಸು ।**
**ಗುಣಗಳೊಳಗೊಂದೇ ಗುಣೋಪಾ ।**
**ಸನೆಯ ಗೈವ ಮಹಾತ್ಮ ಧನ್ಯ ಕೃತಾರ್ಥನೆನಿಸುವನು ॥೨೭॥**

**ಪದ್ಯಾರ್ಥ :**—ದ್ಯುನದಿ=ಆಕಾಶ ಗಂಗೆಯು, ಆದ್ಯಂತವನು ಕಾಣದೆ= ಇದು ಆದಿ ಇದು ಅಂತ್ಯ, ಅಂದರೆ ಗಂಗೆಯ ಉತ್ಪತ್ತಿ, ಮತ್ತು ಸಮುದ್ರಗಾಮಿತ್ವವಾದ ಅಂತ್ಯ ಕಾಣದ=ನೋಡದ, ಮನುಜನೇಕತ್ರದಲ್ಲಿ=ಮಹಾಪ್ರವಾಹವಾದ ಗಂಗಾ ನದಿಯಲ್ಲಿ ಏಕ ದೇಶದಲ್ಲಿ, ಒಂದು ಭಾಗ ಪ್ರವಾಹ ಒಂದೆಡೆಯಲ್ಲಿ, ತಾಮಜ್ಜನವಗೈಯೆ=ಗಂಗಾಪರಮಪಾವನಿಯ ಮಾಹತ್ಮ್ಯೆಯನ್ನರಿದು, ಶಾಸ್ತ್ರ ವಿಧಾನ ಪೂರ್ವಕವಾಗಿ ತಾನು ಮಜ್ಜನವಗೈಯೆ=ಬಿಂಬಗೆ ಅಭಿಷೇಕ

ವೆಂಬ ಸ್ನಾನಸಂಕಲ್ಪ ಅನುಸಂಧಾನದಿಂದ ಸ್ನಾನಮಾಡಲು, ಮುಕ್ತನಹತೆ ರದಿ=ಸಮಸ್ತ ಪಾಪಗಳಿಂದ ಬಿಡುಗಡೆಹೊಂದಿ ಸುಜ್ಞಾನದಿಂದ ವಾಯುದ್ವಾರಾ ಮೋಕ್ಷವನ್ನು ಹೊಂದುವಂತೆಯೇ, ಅನಘ=ಪಾಪಲೇಪವಿಲ್ಲದ ಪಾಪ ದೂರನಾದ ಗಂಗಾಜನಕನಾದ ಹರಿಯು, ಅಮಲ ಅನಂತನಂತ=ನಿರ್ದುಷ್ಟ ವಾದ ಜ್ಞಾನಾನಂದಾತ್ಮಕಾದಿ ಅಪರಿಮಿತ ಸಂಖ್ಯಾರಹಿತ ಸುಗುಣ ಗಳೊಂದೇ = ಸು = ಸಮೀಚೀನವಾದ ಮಹಿಮಾ ಉತ್ಕರ್ಷವಾದ ಅನಂತ ಗುಣದಲ್ಲಿ ಒಂದೇ ಗುಣದಲ್ಲಿ ಅನಂತ ಗುಣಗಳು ಅಡಗಿವೆಂಬ ಮಾಹಾತ್ಮ್ಯೆ ಜ್ಞಾನ ಪೂರ್ವಕ ಗುಣೋಪಾಸನೆ = ಆತ್ಮಾದಿ ಒಂದೇ ಗುಣ ಉಪಾಸನೆ ಮರ್ಮವನ್ನು ಗುರುಗಳಿಂದರಿತು, ಧ್ಯಾನೋಪಾಸನೆ, ಗೈವನು=ಮಾಡು ವವನು, ಮಹಾತ್ಮ=ಶ್ರೇಷ್ಠ ವ್ಯಕ್ತಿ, ವಿಭೂತಿ ಪುರುಷ ಭಗವದನುಗ್ರಹಕ್ಕೆ ಪಾತ್ರ, ಧನ್ಯ = ಪುಣ್ಯವಂತ, ಕೃತಾರ್ಥ = ಕೃತಕೃತ್ಯ ಜಯಶಾಲಿಯೆಂದು ಎನಿಸುವನು.

**ಭಾವಸೂಚನೆ:**—" ದ್ಯುನದಿ = ಗಂಗಾ ॥ ವಂದೇತಿ " ಕಥಮಯ ಥಾಭವತಿ ಭುವಿ ದತ್ತಪದಾಸಿ ನೃಣಾಮಿತಿ ಶ್ರುತಿ ಗೀತಾ ॥ ೨೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ದ್ಯುನದಿ " ಇತಿ॥ ಗೈಯೆ=ಮಾಡಲು ॥ ೨೭ ॥

## ಕನ್ನಡಾರ್ಥ

ಭಗವಂತನ ಅನಂತಾನಂತ ಗುಣಗಳಲ್ಲಿ ಒಂದು ಗುಣವನ್ನು ಅದನ್ನು ತನ್ನ ಯೋಗ್ಯತೆಗೆ ಅನುಸಾರವಾಗಿ ಉಪಾಸಿಸಿದರೂ ಆಭಕ್ತನು ಕೃತಾರ್ಥ ನಾಗುವನೆಂಬಲ್ಲಿ ಭಾಗೀರಥೀ ಸ್ನಾನದ ದೃಷ್ಟಾಂತವನ್ನು ಹೇಳುತ್ತಾರೆ. " ದ್ಯುನದಿ " ಎಂಬ ಪದ್ಯದಿಂದ. ॥ ೨೭ ॥

**ಅವತರಣಿಕಾ:**—ಪಂಚರೂಪಿ ಪರಮಾತ್ಮನು ಸರ್ವಜಗತ್ತಿನಲ್ಲಿ ವ್ಯಾಪಿಸಿ ಸರ್ವರನ್ನು ಪೊರೆವನೆಂದು, ವಸ್ತ್ರಗತ ರೂಪಗಳಿಗೆ ಈ ರೂಪಗಳು ಅತ್ಯಂತ ಅಭೇದವೆಂದು ಶ್ರುತ್ಯರ್ಥ ಪ್ರತಿಪಾದಿಸುತ್ತಾರೆ.

**ವಾಸುದೇವನು ಕರೆಸುವನು ಕಾ**
**ರ್ಪಾಸ ನಾಮದಿ ಸಂಕರುಷಣನು ।**
**ವಾಸವಾಗಿಹ ತೂಲದೊಳು ತಂತುಗನು ಪ್ರದ್ಯುಮ್ನ ॥**

**ವಾಸರೂಪನಿರುದ್ಧ ದೇವನು ।**
**ಭೂಷಣನು ತಾನಾಗಿ ತೋರ್ಪಪ ।**
**ರೇಶನಾರಾಯಣನು ಸರ್ವದ ಮಾನ್ಯ ಮಾಧವನು**
**(ಮಾನದನು) ॥ ೨೮ ॥**

**ಪದ್ಯಾರ್ಥ :**—ವಾಸುದೇವನು ಕರೆಸುವನು ಕಾರ್ಪಾಸನಾಮದಿ= ವಾಸುದೇವ = ವಾಸನಾಸೂತೇರ್ದೇವನಾದ್ವಾಸುದೇವೋ ವಾಸಾತ್ ದ್ಯುತೇಃ ಛಾದನಾತ್ ಕ್ರೀಡನಾಚ್ಚ॥ ಬಲದಾತೃತ್ವಾದ್ರಾವತೋ ವರ್ತನಾಚ್ಚ ತಂ ವಾಸು ದೇವಂ ಪ್ರವದಂತಿ ವೇದಾಃ ಇತಿ ॥ ಸೌಕರಾಯಣಶ್ರುತೌ ॥ "ವಾಸನಾದ್ವಾಸು ದೇವೋಸಿ ವಾಸಿತಂ ತೇ ಜಗತ್ರಯಂ" (ವಿದ್ಯಾಧಿ ರಾಜೀಯ) ಎಂಬುವಂತೆ ವಸ್ತ್ರಕ್ಕೆ ಮೂಲ ಕಾರಣವಾದ, ಕಾರ್ಪಾಸ=(ಬೀಜ ಇದ್ದ) ಹತ್ತಿಯಲ್ಲಿದ್ದು ಕಾರ್ಪಾಸವೆಂಬ ಹೆಸರಿನಿಂದ ಕರೆಸುವನು, ಈ ಹತ್ತಿ ಅರೆದು ಕಾಳು ತೆಗೆದರೆ ಅರಳೆಯಾಗುವದು. ತೂಲದೊಳು=ಈ ಅರಳೆಯಲ್ಲಿ, ಸಂಕರ್ಷಣ ನಾಮಕ ಹರಿಯು=ಸಮ್ಯಕ್ ಕರ್ಷಯತೀತಿ ಸಂಕರ್ಷಣಃ=ಪಾಪಿಗಳನ್ನು ಪೀಡಿಸುವವ ನಿಗೆ, ಭಕ್ತರನ್ನು ಸಮೀಪಕ್ಕೆಳೆದುಕೊಳ್ಳುವವನಿಗೆ ಸಂಕರುಷಣಃ, ಅಥವಾ ಬುದ್ಧ ರೂಪೇಣಾಪಿ ದೇವಾನ್ ಸಂಜ್ಞಾನಂ ಸಂಕರ್ಷಯತೀತಿ ಸಂಕರ್ಷಣಃ। ಷ ಚಾಸೌ ಣಶ್ಚ ಸುಖರೂಪಶ್ಚೇತಿ ಸಂಕರುಷಣನು ಅರಳೆಯಲ್ಲಿ ತೂಲ ನಾಮಕ ನಾಗಿರುವನು. ತಂತುಗನು ಪ್ರದ್ಯುಮ್ನ=ಅರಳೆಯಿಂದಾಗುವ ಎಳೆಗಳಲ್ಲಿ **ಪ್ರದ್ಯುಮ್ನ**=ಸೂರ್ಯಾದೇಃ ಪ್ರಕೃಷ್ಟಪ್ರಕಾಶೋ ಯಸ್ಮಾತ್ ಸ ಪ್ರದ್ಯುಮ್ನಃ, ಸೂರ್ಯಾದಿಗಳಿಗೆ ಪ್ರಕೃಷ್ಟ ಒಳ್ಳೇ ತೇಜೋಮಯವಾದ ಪ್ರಕಾಶವು ಯಾರಿಂದ ಆಗುತ್ತದೆಯೋ, ಅಥವಾ ಪ್ರಕೃಷ್ಟ ಕಾಂತಿ, ಪ್ರಕೃಷ್ಟದ್ಯುಮ್ನಂ ದ್ರವಿಣಂ ಯಸ್ಯೇತಿ=ವಿಶೇಷಾಕಾರವಾದ ದ್ರವ್ಯ (ನಾನಾರ್ಥವಾಗುತ್ತದೆ.) ಉಳ್ಳವ ಅಥವಾ ಪ್ರಕೃಷ್ಟ ಬಲಮಸ್ಯ=ಮಹಾ ಬಲವುಳ್ಳ ಪ್ರದ್ಯುಮ್ನನು, ತಂತುಗಳಲ್ಲಿ ಇರುವನು, ವಾಸ=ವಸ್ತ್ರದಲ್ಲಿ ವಸ್ತ್ರರೂಪನು. ಅನಿರುದ್ಧನಾಮಕ ಹರಿಯು ಇರುವನು. ಪಂಚರೂಪಿ ಹರಿಯು ವಸ್ತ್ರದಲ್ಲಿದ್ದಂತೆ ಜಗತ್ತಿನಲ್ಲಿ ಓತಪ್ರೋತನಾಗಿರುವ, **ಅನಿರುದ್ಧಃ**=ನ ನಿರುದ್ಧೋ ಅನಿರುದ್ಧಃ ಯಾರಿಂದಲೂ ನಿರೋಧವಿಲ್ಲದವನು, ಅಥವಾ ಅನಿಭಿಃ ಪ್ರಾಣಿಭಿ ರುಧ್ಯತ ಇತಿ ಅನಿರುದ್ಧಃ,

ಪ್ರಾಣಿಗಳಾದ ತನ್ನ ಭಕ್ತರುಗಳ ಭಕ್ತಿಪಾಶದಿಂದ ಕಟ್ಟಿಸಿಕೊಳ್ಳುವನಾದುದರಿಂದ ಅನಿರುದ್ಧಃ. ಅಥವಾ ಚತುರ್ಮುಖೇನ ನಿರುಧ್ಯತೇ ಇತ್ಯನಿರುದ್ಧಃ॥ ತನಗಾರು ನಿರೋಧ ಮಾಡದವರಿರದೇ ಸ್ವತಂತ್ರನಾದಾಗ್ಯೂ ಬ್ರಹ್ಮಾದಿ ಭಕ್ತರ ಭಕ್ತಿಪಾಶದಿಂದ ಕಟ್ಟಿಸಿಕೊಳ್ಳುವವನಿಗೆ ಅನಿರುದ್ಧನೆಂತ ಹೆಸರು. ವಾಸ ವಸ್ತ್ರದಲ್ಲಿ ಅನಿರುದ್ಧನು. ಪರೇಶ ನಾರಾಯಣನು=ಪರ ಉತ್ತಮಳಾದ ಲಕ್ಷ್ಮಿಗೆ ಈಶನಾದ, ನಾರಾಯಣನು= ೧. "ಸಚ್ಚಿದಾನಂದ ಆತ್ಮಾಖ್ಯೋ ನಾರಾಯಣ ಇತೀರಿತಃ" ೨. ಯಚ್ಚ ಕಿಂ ಚ ಜಗತ್ ಸರ್ವಂ ದೃಶ್ಯತೇ ಶ್ರೂಯತೇಪಿ ವಾ। ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತ ಇತಿ ಶ್ರುತಿಃ" (ವಿದ್ಯಾಧಿರಾಜರು) ೩. ದೋಷರಹಿತವಾದ ವೇದ ಪ್ರತಿಪಾದ್ಯನು. ೪. ನಾರಂ ಜ್ಞಾನಂ=ಜ್ಞಾನಕ್ಕಾಶ್ರಯನು. ೫. ನರಸಂಬಂಧಿ ನಾರಂ ಜಲಂ ಆಶ್ರಯಂ ವಾ॥ ನಿರ್ದೋಷ ಜ್ಞಾನಾನಂದಮಯನಾದ ಪ್ರಳಯ ಜಲಧಿವಾಸಿಯೂ, ಮುಕ್ತಾಶ್ರಯನೂ, (ಹೀಗೆ ನಾರಾಯಣ ಶಬ್ದಕ್ಕೆ ನೂರಾರು ಅರ್ಥಗಳಿವೆ. ಗುರುಗಳಿಂದ ತಿಳಿಯುವದು) ವಸ್ತ್ರಕ್ಕೆ ಭೂಷಣನಾಗಿ ತೋರ್ಪ, ತನ್ನ ರೂಪಗಳಾದ ವಸ್ತ್ರ ತಾನೆ (ವಸ್ತ್ರ ತಂತುಗಳಂತೆ ಅನ್ವಿತ) ಧರಿಸಿ ಉಟ್ಟುಕೊಂಡು ಭೂಷಣ "ಭೂಶಯೋ ಭೂಷಣೋ ಭೂತಿಃ" ವಿಷ್ಣು ಸಹಸ್ರನಾಮ ವಚನಾತ್, ಸರ್ವಲೋಕಾನಾಂ ಭೂಷಯನ್ ಭೂಷಣಃ=ಸರ್ವ ಲೋಕಗಳಿಗೆ ಅಲಂಕಾರಯುಕ್ತವಾದವನು. ಈ ನಾರಾಯಣನು ತನ್ನ ಪಂಚರೂಪಾತ್ಮಕ ವ್ಯೂಹ ವಸ್ತ್ರದಿಂದ ಅಲಂಕಾರಯುಕ್ತನಾಗಿ ಲೋಕರಿಗೆ ಭೂಷಣನಾಗಿ ಇರುವನು. ಸರ್ವದ=ಸದಾ ಕಾಲದಲ್ಲಿ, ಮಾನ್ಯ ಮಾನದನು="ಅಮಾನಿರ್ಮಾನದೋ ಮಾನ್ಯೋ" (ವಿ. ಸ. ನಾಮ) ಮಾನ್ಯಃ=ಸರ್ವೇಶ್ವರತ್ವೇನ ಸರ್ವೈಃ ಪೂಜನೀಯತ್ವಾತ್ ಮಾನ್ಯಃ॥ ಮಾನದ=ಮಾನಮಹಂಕಾರಂ ಸತ್ಕಾರಂ ವಾ ಯಥಾಸಂಭವಂ ದದಾತೀತೀ ದ್ಯತೀತಿ ವಾ ಮಾನದಃ॥ (ವಿದ್ಯಾಧಿ ರಾಜೀಯ) ಸರ್ವೇಶ್ವರತ್ವದಿಂದ ಸರ್ವರಿಂದ ಪೂಜೆಗೊಳ್ಳುವನು ಮಾನ್ಯ, ಅಹಂಕಾರವನ್ನೂ, ಸತ್ಕಾರವನ್ನೂ ಜೀವನ ಯೋಗ್ಯತೆ ಕಾಲ ದೇಶಾನುಗುಣವಾಗಿ ಕೊಡುವನು ಮಾನದನೆಂದು ಕರೆಸಿಕೊಳ್ಳುತ್ತಾನೆ. ಮಾಧವ=ರಮಾ ಒಡೆಯ.

**ಭಾವಸೂಚನ :—** ವಾಸುದೇವೇತಿ॥ ಕಾರ್ಪಾಸ=ಹತ್ತಿ, ತೂಲವು=ವಿನಾ ಹತ್ತಿ॥ ಮಾನ್ಯೇತಿ॥ ಅಮಾನಿ ರ್ಮಾನದೋ ಮಾನ್ಯ ಇತ್ಯುಕ್ತೇಃ॥ ೨೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾಸುದೇವನಂ" ಇತಿ ॥ "ಕಾರ್ಪಾಸ"-ಹತ್ತಿ ॥ "ತೂಲ"-ಸಮಿಾಕೃತ ಹತ್ತೀ ॥ "ವಾಸ"-ವಸ್ತ್ರ ॥ "ಆಚ್ಛಾದನಾತ್ ವಸ್ತ್ರನಾಮಾ" ಇತಿ ವಿಷ್ಣು ರಹಸ್ಯೇ ॥ "ನಾರಾಯಣಸ್ಯ ವಸ್ತ್ರಾತ್ಮಾ ಚತೂರೂಪೋ ಜನಾರ್ದನಃ" ಇತಿ ಚ ॥ ೨೮ ॥

### ಕನ್ನಡಾರ್ಥ

ವಸ್ತ್ರಗಳಲ್ಲಿ ಇರುವ ಭಗವದ್ರೂಪಗಳನ್ನು ತಿಳಿಸುತ್ತಾರೆ. "ವಾಸು ದೇವನು" ಎಂಬ ಪದ್ಯದಿಂದ.

"ಕಾರ್ಪಾಸ"=ಕಸ ತೆಗೆಯದ ಹತ್ತಿ. "ತೂಲ"=ಕಾಳ ಕಸವನ್ನು ಕಳೆದು ಸ್ವಚ್ಛವಾಗಿ ಹಿಂಜಿಸಿದ ಹತ್ತಿ. "ವಾಸ"=ಅರಿವೆ. ವಿಷ್ಣು ರಹಸ್ಯದಲ್ಲಿ "ಶರೀರ ವನ್ನು ಆಚ್ಛಾದಿಸು (ಹೊದಿಸು) ವದರಿಂದ ವಸ್ತ್ರವೆಂದು ಕರೆಯುತ್ತಾರೆ. ನಾರಾಯಣ ರೂಪಕ್ಕೆ ವಾಸುದೇವ-ಸಂಕರ್ಷಣ-ಪ್ರದ್ಯುಮ್ನಾನಿರುದ್ಧ ರೂಪ ಗಳಿಂದ ಹರಿಯೇ ವಸ್ತ್ರ ರೂಪನಾಗಿರುತ್ತಾನೆ" ಎಂದು ಉಕ್ತವಾಗಿರುತ್ತದೆ. ॥ ೨೮ ॥

**ಅವತರಣಿಕಾ :**—ಶ್ರೀಹರಿಯು ವಸ್ತ್ರದಲ್ಲಿ ತಾನೊಬ್ಬನಲ್ಲ. ದೇಶ ಕಾಲಗಳಿಂದ ಸಮಳಾದ ಲಕ್ಷ್ಮಿಯಿಂದ ಒಡಗೂಡಿ ವಸ್ತ್ರಗಳಲ್ಲಿರುವಂತೆ ನಾರಾಯಣನು, ತಾನು ನಾಲ್ಕು ರೂಪಗಳಿಂದ ರಮೆಯಿಂದ ಜಗತ್ತಿನಲ್ಲಿ ವ್ಯಾಪಿಸಿರುವನು. ಈ ಜಗತ್ತಿನಲ್ಲಿ ವ್ಯಾಪಿಸಿರುವದನ್ನು ತಿಳಿದು ದ್ವಂದ್ವಾತೀತ ನಾಗಿ ಸದಾ ಶ್ರೀಹರಿಯನ್ನು ಅರ್ಚಿಸೆಂದು ಹೇಳುತ್ತ ಈ ಸಂಧಿಯನ್ನು ಮುಗಿ ಸುತ್ತಾರೆ.

**ಲಲನೆಯಿಂದೊಡಗೂಡಿ ಚೈಲಗ।**
**ಳೊಳಗೆ ಓತಪ್ರೋತರೂಪದಿ।**
**ನೆಲಸಿಹನು ಚತುರಾತ್ಮಕ ಜಗನ್ನಾಥವಿಟ್ಠಲನು॥**
**(ಚ) ಛಳಿ ಬಿಸಲು ಮಳಿ ಗಾಳಿಯಿಂದರ।**
**ಘಳಿಗಿ ಬಿಡದಲೆ ಕಾವನೆಂದರಿ।**
**ದಿಳೆಯೊಳರ್ಚಿಸುತಿರು ಸದಾ ಸರ್ವಾಂತರಾತ್ಮಕನ ॥ ೨೯ ॥**

**ಪದ್ಯಾರ್ಥ :**—ಲಲನೆಯಿಂದೊಡಗೂಡಿ= ಶ್ರೀ ರಮಾರೂಪ ಲಕ್ಷ್ಮೀ ದೇವಿಯಾದ ಹೆಂಡತಿಯ ನಾಲ್ಕು ರೂಪಗಳಿಂದ ಕೂಡಿಕೊಂಡು, ಅಂದರೆ ದೇಶ ಕಾಲದಿಂದ ಸಮಳಾಗಿರುವ ತನ್ನ ಪತ್ನಿಯಿಂದ ಕೂಡಿಕೊಂಡು, ಚೈಲಗಳೊಳಗೆ=ವಸ್ತ್ರಗಳಲ್ಲಿ, ಓತಪ್ರೋತರೂಪದಿ=ಉದ್ದ ಅಗಲ ನೇಯ್ದು ಅಡ್ಡ ಉದ್ದ ಎಳೆಗಳು ಇದ್ದಂತೆ ಜಗತ್ತಿನಲ್ಲಿ ಶ್ರೀ ರಮೆ ಭಗವಂತನು ಅಪ್ರತಿಘರಾಗಿ ನೆಲಸಿಹರು= ಇರುವರು ವ್ಯಾಪಿಸಿರುವರು. ಚತುರಾತ್ಮಕ=ನಾರಾಯಣೋದ್ಭೂತ ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವ ಈ ನಾಲ್ಕು ರೂಪಾತ್ಮಕ, ಈ ಹೆಸರಿನಿಂದ ಕೂಡಿಕೊಂಡು, ಜಗನ್ನಾಥವಿಠಲನು=ಜಗತ್ತಿಗೆ ಒಡೆಯ ಸ್ವಾಮಿಯಾದ ಜಗತ್ತಿನಲ್ಲಿ ವ್ಯಾಪಿಸಿರುವನೆಂದು ದಾರ್ಢ್ಯಜ್ಞಾನದಿಂದ ತಿಳಿದು, ಛಳಿ ಬಿಸಿಲು ಮಳೆ ಗಾಳಿಯಿಂ=ಶೀತ, ಉಷ್ಣ, ಮಳೆ ವರ್ಷ–ಗಾಳಿಯಿಂದ ಅರಘಳಿಗಿ ಬಿಡದಲೆ=ಒಂದು ಅರಕ್ಷಣವಾದರೂ ಜೀವರಿಂದ ಅಗಲದಲೇ ಅಂತರಂಗ ಬಹಿರಂಗದಲ್ಲಿದ್ದು, ಕಾವ=ಸಂರಕ್ಷಿಸುವನೆಂದು, ಇಳೆಯೊಳು ಅರ್ಚಿಸು ಸದಾ ಸರ್ವಾಂತರಾತ್ಮಕನ=ಈ ಭೂಮಿಯಲ್ಲಿರುವ, ವ್ಯಾಪ್ಯ ವ್ಯಾಪಕ ರೂಪಗಳನ್ನು ತಿಳಿದು, ನಿರಂತರದಲ್ಲಿಯೂ ಹೊರಗೆ ಓತಪ್ರೋತನಾಗಿ ವ್ಯಾಪಿಸಿದಂತೆ ಕಾಲ ನಾಮಕನು ಸರ್ವರಂತರ ಹೃದಯದ ಗುಹಾ ನಿವಾಸಿ. ಅಂತರಾತ್ಮನಾದ ಬಿಂಬರೂಪಿ ಹರಿಯಲ್ಲಿ ಸಮನ್ವಯಗೈದು ಧ್ಯಾನೋಪಾಸನೆ ದ್ವಾರಾ ಪೂಜಾ ಮಾಡುತ್ತಿರು, ಎಂದು ಉಪದೇಶಗೈದು ಶ್ವಾಸ ಸಂಧಿಯನ್ನು ದಾಸಾರ್ಯರು ಕೃಷ್ಣನಿಗೆ ಅರ್ಪಿಸಿದಂತೆ ಮಂದನಿಂದ ಮಂದಬೋಧಿನಿಯಾದ ಪದ್ಯಾರ್ಥ ಭಾವವನ್ನು ದಾಸರೇ ನಿಂತು ಬರೆಸಿದರೆಂಬ ಅನುಭವದಿಂದ ದಾಸರ ಹೃತ್ಕುಮುದ ಹಂಸನಾಮಕ ಹರಿಗೆ ಅರ್ಪಿತವಾಗಿ ದಾಸರು ಅನುಗ್ರಹಿಸಲೆಂದು ಪ್ರಾರ್ಥನೆ.

**ಭಾವಸೂಚನ :**—ಲಲನೇತಿ ॥ ಚೈಲ=ವಸ್ತ್ರ ॥ ಇತಿ ಭಾವಸೂಚನೆ ಶ್ವಾಸ ಸಂಧಿ ಸಮಾಪ್ತ ॥ ಶ್ರೀ ಮಧ್ವೇಶಾರ್ಪಿತವು. "ಪಂಚರೂಪಿ ಪರಮಾತ್ಮನು ತಾ ಷಟ್ । ಪಂಚರೂಪದಿ ಪೊರೆವ । ಪಂಚಜ್ಞಾನ ಕರ್ಮೇಂದ್ರಿಯಜನ್ಯದ್ವಿಪಂಚಪಾತಕ ತರಿವ ॥ ಸಂಚಿತ ಆಗಾಮಿಗಳ ಅಪರಾಧವ ಮುಂಚಿನವರಿಗೀವ । ವಾಂಛಿತಪ್ರದ ಜಗನ್ನಾಥವಿಠ್ಠಲನು । ಮಿಂಚಿನಂದದಿ ಪೊಳೆವ (ಜ. ವಿ.) ॥ ೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—"ಲಲನೆ" ಇತಿ || ಲಲನೆ=ರಮಾ || ೨೯ ||

ಇತಿ ಶ್ರೀಮದ್ ಹರಿಕಥಾಮೃತಸಾರವ್ಯಾಖ್ಯಾಯಾಂ
ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಶ್ವಾಸಸಂಧಿಃ ಸಮಾಪ್ತಃ || ಶ್ರೀರಸ್ತು ||

## ಕನ್ನಡಾರ್ಥ

ಶ್ವಾಸಸಂಧಿಯನ್ನು ಕೊನೆಗಾಣಿಸುತ್ತಾರೆ—"ಲಲನೆಯಿಂದೊಡಗೂಡಿ" ಎಂಬ ಪದ್ಯದಿಂದ.

ರಮಾಪತಿ ಜಗನ್ನಾಥವಿಠ್ಠಲನು ವಸ್ತ್ರಗಳಲ್ಲಿ ಹತ್ತಿ ಹಂಜಿ ನೂಲು ಅರಿವೆ ಹೀಗೆ ಇವುಗಳಲ್ಲಿ ನಾಲ್ಕು ರೂಪದಿಂದ ಓತಪ್ರೋತನಾಗಿ ವ್ಯಾಪಿಸಿದ್ದು ಚಳಿ-ಮಳೆ-ಗಾಳಿಗಳಿಂದ ನಮ್ಮನ್ನು ಸಂರಕ್ಷಿಸುತ್ತ ಇರುವನಾದುದರಿಂದ ವಸ್ತ್ರದಲ್ಲಿರುವ ಈ ೪ ಭಗವದ್ರೂಪಗಳನ್ನೂ-ನಾರಾಯಣ ರೂಪವನ್ನೂ ಸದಾ ಸ್ಮರಿಸಬೇಕು" ಎಂದು ಉಪಸಂಹಾರ ಪದ್ಯದ ಭಾವ. ||೨೯||

ಇಲ್ಲಿಗೆ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ ೧೫ನೆಯ ಶ್ವಾಸಸಂಧಿಯು ಮುಗಿದುದು.

|| ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ||

ಅಂತು ಸಂಧಿ ೧೫ಕ್ಕೆ ಪದ್ಯ ೪೭೩ಕ್ಕೆ ಶ್ವಾಸ ಸಂಧಿ ಸಮಾಪ್ತ.
|| ಮಂಗಳಮಾಹ ಶ್ರೀಗುರು ಮಧ್ವೇಶಃ ಶ್ರೀ ಕೃಷ್ಣಾರ್ಪಣಮಸ್ತು ||

---

ಶ್ರೀ ಗುರುರಾಜೋ ವಿಜಯತೇ

## ೧೬ನೆಯ ಸ್ವಗತ ಸ್ವಾತಂತ್ರ್ಯ ಸಂಧಿ

# ಮುಂದಿನ ಸಂಧಿಗಳ ಕ್ರಮ ವಿವೇಚನೆ

ಇಲ್ಲಿಯವರೆಗೆ ಶ್ರೀ ಹರಿಕಥಾಮೃತಸಾರ ಪೂರ್ವಜ ಜ್ಞಾನಿಗಳು ಬರೆದ ಮೂಲಪ್ರತಿಯ ಮೇಲಿಂದ ೧೫ ಸಂಧಿಗಳ ಕ್ರಮ ಸಂಧಿಗಳ ಸಂಬಂಧ ವಿವೇಚಿಸಲಾಯಿತು.

ಈ ಮಹಾಗ್ರಂಥವು ದಾಸವರ್ಯರು ರಚಿಸಿ ಸುಮಾರು (೧೮೦) ವರ್ಷಗಳಾದವು. ಶ್ರೀಮಜ್ಜಗನ್ನಾಥದಾಸಾರ್ಯ ಸಾಕ್ಷಾತ್ ಶಿಷ್ಯರೂ, ಅಪರೋಕ್ಷ ಜ್ಞಾನಿಗಳೂ ಆದ ಶ್ರೀ ಪ್ರಾಣೇಶವಿಠಲರು ಲಿಂಗಸೂಗೂರು, ಮತ್ತು ಶ್ರೀ ಕಂಪಿಲಿದಾಸರು (ಕುಂಟೋಜಿದಾಸರು,) ಶ್ರೀಗುರು ಶ್ರೀಶವಿಠಲರು ಸ್ವಂತ ಬರೆದ ಶುದ್ಧಪ್ರತಿಗಳು. ಈ ಎರಡೇ ಮೂಲಪ್ರತಿಗಳಲ್ಲಿ ಸಂಧಿಕ್ರಮ ಸರಿಯಾಗಿವೆ. ಈ ಸಂಧಿಯ ಕ್ರಮದಂತೆ ಶ್ರೀ ತಾಮ್ರಪರಣಿ ಆಚಾರ್ಯರು ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಕಾರರಾದ ಜ್ಞಾನಿಗಳು ಟೀಕಾ ರಚಿಸಿದ್ದಾರೆ. ಶುದ್ಧವಾದ ಸಂಪ್ರದಾಯ ಅಪರೋಕ್ಷಿಗಳ ಪರಂಪರೆ ಶುದ್ಧಪ್ರತಿ ಇವು.

ಇತ್ತೀಚಿನ ಜನರು ೬೦-೭೦ ವರ್ಷ ಕೆಳಗೆ ಒಂದೆರಡು ಪ್ರತಿಗಳು ೧೬ ಸಂಧಿಯಿಂದ ತಮ್ಮ ಮನಬಂದಂತೆ ಬರೆದ (೧) ಹಳೆ ಪ್ರತಿಯೂ ದೊರೆತದೆ. ಪದ್ಯಗಳೂ ಕೆಲವು ತಪ್ಪು ಇವೆ. ಹೀಗ್ಯಾಕೆ ವಿಷಮವಾಗಿ ಸಂಧಿಗಳ ಕ್ರಮ ಬರೆದರೋ ಗೊತ್ತಾಗದು. ಈ ಪ್ರತಿಯಂತೆಯೇ ಹಿಂದೆ ಈ ೫೦ ವರ್ಷಗಳಲ್ಲಿ ೧೨-೧೪ ಕಡೆ ಅಚ್ಚಾದ ಮೂಲ ಹರಿಕಥಾಮೃತಸಾರ ಮತ್ತು ೩-೪ ಟೀಕಾಗಳಲ್ಲಿ ಸಂಧಿವಿವೇಚನೆ ಬಹು ಹೆಚ್ಚು ಕಡಿಮೆ ಇದೆ. ಸಂಧಿಗಳ ಸಂಬಂಧವೇ ಒಂದಕ್ಕೊಂದು ಹತ್ತುವದೇ ಇಲ್ಲ, ಪರಸ್ಪರ ವಿರೋಧವಾಗಿದೆ. ಇದಕ್ಕೆ ಕಾರಣವೇನಂದರೆ, ಕಾಲಾನುಸಾರವಾಗಿ ಕ್ರಮೇಣ ಜನಿಸಿದ ಜೀವಿಗಳ ಜ್ಞಾನ ಖಿಲವಾಗಿಯೂ, ಸರಿಯಾದ ಮಾರ್ಗ ತೋರುವ ಗುರುಗಳು ದೊರಕದೇ, ಸರಿಯಾದ ಅರ್ಥ ಗೊತ್ತಾಗದೇ ಮೂಲ ಪದ್ಯಗಳಲ್ಲಿಯೇ ೭೦೦-೮೦೦ ಕಡೆ ತಿದ್ದಿದ್ದಾರೆ. ಬಹು ಶೋಚನೀಯವಾಗಿದೆ, ಕಾಲನಾಮಕನ ಇಚ್ಛೆ.

ಇದಲ್ಲದೇ ಪೂರ್ವಜ ಸುಜ್ಞಾನಿಗಳಾದ "ಭೀಮೇಶವಿಠ್ಠಲ ದಾಸಾರ್ಯರು, ಶ್ರೀ ದಾಸಾರ್ಯರ ಶಿಷ್ಯಪರಂಪರೆಯವರು. "ಸಂಧಿಮಾಲಾಸಂಧಿ" ಎಂದು ಸಂಧಿಕ್ರಮದ ಒಂದು ಸಂಧಿ ಫಲಶ್ರುತಿ ರೂಪವಾಗಿ ರಚಿಸಿದ್ದಾರೆ ಅಪರೋಕ್ಷಜ್ಞಾನಿಗಳಾದ ಶ್ರೀ ಪ್ರಾಣೇಶವಿಠಲರ ಪ್ರತಿಗೂ, ಶ್ರೀ ಕುಂಟೋಜಿ ದಾಸರು ಸ್ವಂತ ಬರೆದ ಪ್ರತಿಗಳಲ್ಲಿದ್ದ ಸಂಧಿಯಂತೆ ಸಂಧಿಮಾಲಾ ಸಂಧಿಯೂ ಇದೆ.

ಈ ಎರಡೂ ಪ್ರತಿಗಳಂತೆ ಒಬ್ಬ ಪುರಾತನರು ಶ್ರೀ ಪುರುಷೋತ್ತಮರಾಯರು ಬರೆದ ಹಳೇ ಗ್ರಂಥವೂ ಇರುವದಲ್ಲದೇ ಶ್ರೀ ಪ್ರಾಣೇಶವಿಠಲರ ದಾಸಾರ್ಯರ ಶಿಷ್ಯಪರಂಪರೆ (೪-೬) ಶಿಷ್ಯರ ವಂಶಸ್ಥರಲ್ಲಿಯೂ, ಮೇಲ್ಕಂಡ ದಾಸ ಸಂಪ್ರದಾಯ ಪದ್ಧತಿಯಂತೆ ಶುದ್ಧ ಪ್ರತಿಗಳಿವೆ.

ಇನ್ನೆಲ್ಲ ಕಾರಣದಿಂದ ವಿವೇಚಿಸಿ, ಶ್ರೀ ವಿಜಯದಾಸಾರ್ಯರ ಉಪಾಸನೆ ಸುಳಾದಿಗಳ ಮಾರ್ಗಾನುಸರಿಸಿ, ಪೂರ್ವಜರು ಬರೆದ ಗ್ರಂಥವು ಪರಿಶುದ್ಧವಾದುದೆಂದು ನಿಶ್ಚೈಸಿ, ಶ್ರೀ ಹರಿಕಥಾಮೃತಸಾರ ಸಂಗ್ರಹವೂ, ಮೂಲ ಹರಿಕಥಾಮೃತಸಾರವೂ ಹಿಂದೆ ನಮ್ಮ ಮಂಡಲದಿಂದ ಪ್ರಕಟವಾಗಿವೆ.

ಈಗಲೂ ಅದರಂತೆಯೇ ಶ್ರೀ ಪ್ರಾಣೇಶವಿಠಲರ, ಗುರು ಶ್ರೀಶವಿಠಲರ ಹಸ್ತಪ್ರತಿಯಂತೇ ಶುದ್ಧವಾದ ಸರಿಯಾದ ಸಂಧಿಕ್ರಮಕ್ಕೆ ಟೀಕಾಕಾರರ ಅನುಮತಿಯೂ ದೊರೆತದೆ. ಕೆಳಗಿನಂತೆ ಮುಂದೆ ೧೬ನೇ ಸಂಧಿಯಿಂದ ಕ್ರಮವಾಗಿ ಕೊಡಲಾಗಿದೆ.




೧೬ನೇದು ಸ್ವಗತ ಸ್ವಾತಂತ್ರ್ಯ ಸಂಧಿ.
೧೭ನೇದು ದತ್ತ ಸ್ವಾತಂತ್ರ್ಯ ಸಂಧಿ.
೧೮ನೇದು ಬಿಂಬಾಪರೋಕ್ಷ ಸಂಧಿ.
೧೯ನೇದು ಗುಣ ತಾರತಮ್ಯ ಸಂಧಿ (ಅವರೋಹಣ ಕ್ರಮ.)
೨೦ನೇದು (ಸ್ಥಾವರಾದಿಗಳಿಂದ) ಆರೋಹಣ ತಾರತಮ್ಯ ಸಂಧಿ.
೨೧ನೇದು ಕರ್ಮವಿಮೋಚನ ಸಂಧಿ.
೨೨ನೇದು ಭಕ್ತಾಪರಾಧ ಸಹಿಷ್ಣು ಸಂಧಿ.
೨೩ನೇದು ಬ್ರಹತ್ತಾರತಮ್ಯ ಸಂಧಿ (ಅಂಶ ಆವೇಶಾವತಾರ.)
೨೪ನೇದು ಕಲ್ಪಸಾಧನ ಸಂಧಿ.

೨೫ನೇದು ಕ್ರೀಡಾ ವಿಲಾಸ ಸಂಧಿ (ಸರ್ವ ಸ್ವಾತಂತ್ರ್ಯ.)
೨೬ನೇದು ಅವರೋಹಣ ತಾರತಮ್ಯ ಸಂಧಿ.
೨೭ನೇದು ಅನುಕ್ರಮಣಿಕಾ ತಾರತಮ್ಯ ಸಂಧಿ.
೨೮ನೇದು ಗಣಪತಿ ಸ್ತೋತ್ರ ಸಂಧಿ.
೨೯ನೇದು ಅಣು ತಾರತಮ್ಯ ಸಂಧಿ.
೩೦ನೇದು ದೈತ್ಯ ತಾರತಮ್ಯ ಸಂಧಿ.
೩೧ನೇದು ನೈವೇದ್ಯಪ್ರಕರಣ ಸಂಧಿ.
೩೨ನೇದು ಕಕ್ಷಾತಾರತಮ್ಯ ಸಂಧಿ (ದೇವತಾ ತಾರತಮ್ಯ.)



ಈ ಪ್ರಕಾರ ಸಂಧಿಗಳ ಕ್ರಮವಿದ್ದಂತೆ ಇವುಗಳ ಪರಸ್ಪರ ಸಂಬಂಧ ಶ್ರೀ ವಿಜಯದಾಸಾರ್ಯರ ಸುಳಾದಿಗಳು, ಇತರ ಪ್ರಮಾಣಾನುಸಾರ ಹಿರಿಯರ ವಚನದಂತೆ ವಿವರಿಸುತ್ತದೆ. ಜ್ಞಾನಿಗಳು ವಿಚಾರಿಸಿ ಪಠಿಸಿ ಆನಂದ ಪಡುವುದು.

|| ಶ್ರೀ ಗುರುರಾಜೋ ವಿಜಯತೇ ||

## ಸಂಕ್ಷಿಪ್ತ ೧೬-೧೭ ಸಂಧಿಯ ಸಾರ ಭಾವಸೂಚನೆ

ಈ ೧೬ನೆಯ ಸ್ವಗತ ಸ್ವಾತಂತ್ರ್ಯಸಂಧಿ.
೧೭ನೆಯ ದತ್ತ ಸ್ವಾತಂತ್ರ್ಯಸಂಧಿ.
೨೫ನೆಯ ಸರ್ವ ಸ್ವಾತಂತ್ರ್ಯಸಂಧಿ.

ಕ್ರೀಡಾವಿಲಾಸ ಸಂಧಿಗಳ ಸಾರರೂಪವಾದ, ತ್ರಿವಿಧ ಜೀವ ಕರ್ತೃತ್ವ ವಿಚಾರ ಮುಂದೆ ವಿಶದವಾಗಿ ಮಾಡುತ್ತದೆ. ಇಲ್ಲಿ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರು ಸ್ವಗತ ಸ್ವಾತಂತ್ರ್ಯ ೧೬ನೇ ಸಂಧಿಯ ಭಾವ ಸೂಚನೆಯ ೧ನೇ ಪದ್ಯದ ಅಡಿ ಜೀವ ಕರ್ತೃತ್ವತ್ರಯ, ೧. ಸ್ವಗತ, ೨. ದತ್ತ, ೩. ಸರ್ವ ಸ್ವಾತಂತ್ರ್ಯ ತ್ರಿವಿಧ ಜೀವಕರ್ತೃತ್ವತ್ರಯ ಸಂಕ್ಷಿಪ್ತವಾಗಿ ಬರೆದಿರುವರು. ಅದನ್ನೇ ಸಂಧಿ ೧೬-೧೭ ಸಂಧಿಗಳ ಸಾರರೂಪವಾದುದು, ಮಹಾ ಶಾಸ್ತ್ರಾರ್ಥದಿಂದ ಪೂರಿತವಾದುದನ್ನು ಇಲ್ಲಿ ಕೊಡಲಾಗಿದೆ.

## ಭಾವಸೂಚನೆ ಸ್ವಗತದತ್ತ ಸ್ವಾತಂತ್ರ್ಯ ವಿಚಾರ

ಶ್ರೀ ದಾಸರಾಯರು ಈ ಸಂಧಿಯಲ್ಲಿ ಶ್ರೀ ಜಗನ್ನಾಥ ಜೀವರಿಗೋಸ್ಕರ ಸ್ವಾತಂತ್ರ್ಯವನ್ನು ಕೊಟ್ಟ ಕ್ರಮ ಸವಿಸ್ತರ ಹೇಳುತ್ತಾರೆ. ಇಲ್ಲಿ ಬಹು ವಿವಾದ ವಿದೆ. ಮುಖ್ಯ ಶ್ರೀಹರಿ ವಾಯುಮತ ಶ್ರೀ ಗುರುರಾಜ ಪುರಂದರದಾಸ ಪ್ರಮುಖರ ಮತವೂ ಅವಿರುದ್ಧಗಳೇ ಸರಿ. ಆದಮೇಲೆ ವಿರುದ್ಧವಾಗಿ ತೋರಿ ವಿವಾದ ಭೂಮಿಗಳಾಗಲಿಕ್ಕೆ ಬೀಜವೇನಂದರೆ "ಮಮ ಮಾಯಾ ದುರ ತ್ಯಯಾ" "ಅಹೋ ವಿಮೋಹಿತಾ ವಿಶ್ವಸೃಜಾಮಧೀಶ್ವರಾಃ॥ ಅಹೋ ದುರ ತ್ಯಯಾ ಮಾಯಾ ಮಾಯಿನಾಮಪಿ ಮೋಹಿನೀ॥ ತನ್ಮಾಯಯಾ ದುರ್ಜರ ಯೇತಿ" ಗೀತಾಗ್ರೇಯ ಭಾಗವತ ಪರಿಸ್ತುತ ಶ್ರೀ ಮನೋರಮಾಯಾಂ॥ ಪರಿ ಮುಷ್ಟದೃಷ್ಟಿಗಳಾದವರು ಏನು ಜ್ಞಾನಿಗಳಾದರೂ, ಸರ್ವವೂ ವಿರುದ್ಧಾರ್ಥ ಯಂತ ಹೇಳುತ್ತಾರೆ. ಗ್ರಂಥ ಮಾಡುವರು ಸರ್ವರಿಗೂ ಏಕಪ್ರಕಾರವೇ ತೋರುವ ಹಾಗೆ ಯಾಕೆ ರಚಿಸಿಲ್ಲ ಎಂದರೆ, ಅವರು ಶ್ರೀ ಕಾಂತಾಮಲಗುಣ ಗಣ ಪ್ರತಿಪಾದನೋತ್ಸುಕರಾದ ಪ್ರಯುಕ್ತ ಹಾಗೆ ಹೇಳಿದರೂ ವೇದದಂತೆಯೆ ಉಕ್ತಂ ಚ ಭರತೀ ಭಾರತೀ ಚ ತಮೋರುವೃತ್ತಿಭಿ ರೂಢಜವೇತೇ॥ ದಾವ ದಾವ ವಾಕ್ಯದಿಂದ ಹ್ಯಾಗೆ ಹ್ಯಾಗೆ ಅವರಿಗೆ ವಿರೋಧಸ್ಫುರಣ, ಇದರಲ್ಲೇ ಸರ್ವ ಸಮ್ಮತ ಸಿದ್ಧಾಂತ ಹೇಗಂದರೆ

**ಅಥ ಪೂರ್ವಪಕ್ಷಃ** ॥ ಕೇಚನ ಈಶ್ವರ ಏವ ಕರ್ತಾ। ದತ್ತ ಕರ್ತೃತ್ವಮಪಿ ನಾಭ್ಯುಪಯಂತಿ॥

ಈಶ್ವರ ಏವಕರ್ತಾ ಜೀವಸ್ತು ಅಕರ್ತಾ॥ ಏತತ್‌ಪಕ್ಷೇ ಸಾಧಕಂ॥ "ನಾನ್ಯತೋಸ್ತಿ ಕರ್ತಾ ನಾನ್ಯದತೋಸ್ತಿ ಕರ್ತ್ರಿತಿ ಶ್ರುತಿಃ"॥ ಕರ್ತಾ ಚ ಸರ್ವಗತಃ ಸುಖದುಃಖಯೋರ್ಹೀತಿ ಭಗವತ್ಪಾದೋಕ್ತಿಃ॥ ತೇ। "ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ॥ ದ್ವಿಕೃತ್ವಃ ಪಠಿತಃ ಕರ್ತಾ ತಸ್ಮಾತ್ಪುರುಷೋ ಪ್ಯಸ್ಯ ವಶ್ಯ ಇತಿ ಚ। ಸೂತ್ರಕಾರಾಚಾರ್ಯವಚನೋದ್ಗಾರಃ ಸಜ್ಜನೈ ರುಪೇಕ್ಷಣೀಯಃ॥ ಇತಿ ದೂಷಣಮ್॥

೨—ಅನ್ಯೇ ತು ಏತದುಪರೀಮಾಮಾತಿಷ್ಠಂತೇ ತರ್ಹಿ ಜಗನ್ನಾಥ ದಾಸವರ್ಯಾಸ್ತ್ವಿತ್ಥಮೂಚುಃ॥ "ಈಶಿತವ್ಯ ಲೋಕೇಶರು ಎಲ್ಲರು ಶ್ವಾಸ

ಬಿಡುವ ಶಕ್ತಿ ಲೇಶಿಲ್ಲೆಂಬುದು" ಫಲವಿದು ಬಾಳ್ವುದಕೆ । ಇತಿ । ಅತಃ ಕಥಮಿತಿ ಚೇತ್ ನ ॥

ಯದ್ವಿದ್ಯಮಾನಮಪಿ ಪರತಂತ್ರಕಾರ್ಯೋನ್ಮುಖಂ ತದ್ವಿದ್ಯಮಾನಮಪ್ಯಸದೇವೇತಿ, ಸೌಧನ್ಯಾಯಾನುಸಾರೇಣ ತತ್ಪದೋಪಪತ್ತೇರಿತಿ ದೋಷಃ ॥೧॥ ಪರೇ ತು ಓಂ ವಿಹಾರೋಪದೇಶಾತ್ ಓಂ॥ "ಸ್ತ್ರೀಭಿರ್ವಾ ಪುರುಷೈರ್ವಾಜ್ಞಾತಿಭಿರ್ವಾಜ್ಞಾತಿಭಿರ್ವೇತಿ ಶ್ರುತೇಃ" । ಪುನಃ "ಓಂ ಪರಾ ತು ತಚ್ಛ್ರುತೇಃ ಓಂ" ಸಾ ಕರ್ತೃತ್ವ ಶಕ್ತಿಃ ಪರಾ ದೇವೀತಿ ಭಾಷ್ಯ ಸತ್ವಾತ್ ಜೀವಃ ಮುಖ್ಯಕರ್ತಾ ರಮಾಭರ್ತಾರಂ ಪಯೋಂಬುಧೌ ವಿಹರ್ತಾರಮಾಹುಃ । ಅಪರೇ ತು ಇಮ ಏವ ಸಮೀಚೀನ ಪ್ರವಕ್ತಾರ ಇತ್ಯಾಸ್ಥಿಷತ॥ ತಥಾ ಚ ಕರ್ತೃತ್ವಂ ಸ್ವತಂತ್ರವೃತ್ತಿರಚನೇತ್ಯುಕ್ತತ್ವಾತ್ ಸ್ವತಂತ್ರ ಪ್ರವೃತ್ತಿತ್ವರೂಪಂ ಸ್ವಾತಂತ್ರ್ಯಂ ತತ್ಕಾರ್ಯಕೃತೌ ಶಕ್ತಿಃ ಸ್ವಾತಂತ್ರ್ಯಂ ಹಿ ಪರಂ ಸ್ಮೃತಮಿತಿ। ವಿಷ್ಣು ರಹಸ್ಯಾನುಸಾರೇಣ ಕರ್ಮಕರಣ ಶಕ್ತಿರೂಪಂ ಹರಿಣಾ ಶತ್ರುಹಾರಿಣಾ ಜೀವಾಯ ದತ್ತ ಮಿತ್ಯುಕ್ತಂ ಭವತಿ ॥ ತಚ್ಚಾಸಮಂಜಸಮ್ ॥ "ಸ್ವಾತಂತ್ರ್ಯಂ ಯೋ ಮಮ ಗುಣಃ ಇತಿ ವ್ಯಾಪ್ತರಹಸ್ಯೋಕ್ತ ಪ್ರನಾಡ್ಯಾ ತಸ್ಯ ಗುಣತ್ವಾತ್ ತಸ್ಯ ಶುಭ ಧರ್ಮಸ್ಯ ಚ ಗುಣಿನಾ ದೇನಮಣಿನಾ ಹರಿಣಾತ್ಯಂತಾಭೇದಃ। "ನೇಹ ನಾನಾಸ್ತಿ ಏಕಧೈವಾನುದ್ರಷ್ಟವ್ಯಂ ಮೃತ್ಯೋಃ ಸ ಮೃತ್ಯುಮಾಪ್ನೋತಿ ॥ ಯ ಇಹ ನಾನೇವ ಪಶ್ಯತಿ । ಯಥೋದಕಂ ದುರ್ಗೇ ವೃಷ್ಟಂ ಧರ್ಮಾನ್ ಪರ್ವತೇಷು ವಿಧಾವತಿ ಏವಂ ಪಶ್ಯಂಸ್ತಾನೇವಾನುವಿಧಾವತಿ ॥ ಪರ್ವತೇಷು ದುರ್ಗೇ ಪರ್ವತಾಗ್ರೇ ವೃಷ್ಟಂ ಯಥಾಧೋ ವಿಧಾವತಿ, ಏವಂ ಪ್ರಥಕ್ ದೃಷ್ಟಾನ್ ಧರ್ಮಾನ್ ಅನ್ವೇವ ತದನಂತರಮೇವಾಂಧಂತಮಸಿ ಧಾವತಿ ॥ "ಭೇದೇನ ದರ್ಶನಾದ್ವಾಪಿ ಭೇದೋಭೇದೇನ ದರ್ಶನಾತ್॥ ವಿಷ್ಣೋರ್ಗುಣಾನಾಂ ರೂಪಾಣಾಂ ತದಂಗಾದೀನಾಂ ಸುಖಾದೀನಾಂ॥ ತಥಾ ದರ್ಶನಕಾಲಾತ್ತು ಕ್ಷಿಪ್ರಮೇವ ತಮೋ ವ್ರಜೇತ್ ॥" ಏತಚ್ಛ್ರುತಿಶ್ರೀಬ್ರಹದ್ಭಾಷ್ಯ ತದುದಾಹೃತ ಬ್ರಹ್ಮಾಂಡ ಪುರಾಣಸಾರೇಣ ಸಿದ್ಧೋಕ್ತಾಃ ॥ ಕಥಮಿತಿ ಚ ಚೋದಯಂತಿ ॥ ದೂಷಣಂ ॥ ಅನ್ಯೇ ತು ಏತನ್ಮತಮೇವಾಂಧಾನುಗತಾಂಧ ಇವಾನುತಿಷ್ಠಂತಃ ॥ ಗುಣಗುಣಿನೋರೈಕ್ಯಾದಯಮೇವಾಸ್ಮಾಕಂ ಪಂಥಾ ಇತಿ ಸಂಗಿರಂತೇ ॥ ತದಪಿ ಚಿಂತ್ಯಂ ಉಕ್ತ

ವಾಕ್ಯ ವಿರೋಧಾತ್ ‖ ತರ್ಹಿ ವಯಂ ಸರ್ವೇಽಪ್ಯನುಪಾಸಿತಮಹಾಚರಣಾಃ ಭವಂತೋ ಭವದೀಯಾಃ ಯೇ ಜಗನ್ನಾಥದಾಸರಾಜಾ ತೇಷಾಂ ಕೋಽಯಂ ರಾದ್ಧಾಂತಃ ‖ ತತ್ಕೃತಾಸ್ಮದೀಯೋದಾಹೃತಶ್ಚಾಸೇತಿಪದ್ಯಸ್ಯ ಕೋಽರ್ಥಃ ‖ ಇತಿ ಚೇದುಚ್ಯತೇ । ಅಥಾವಿಪ್ರತಿಪನ್ನಃ ಸಿದ್ಧಾಂತಃ ‖ ಬ್ರಹ್ಮಾಂತಾ ಗುರವ ಇತ್ಯುಕ್ತೇಃ ಯೇ ಚಾನ್ಯೇಽಸ್ಮದ್ವಿಧಾ ಇತಿ ವಚನಾನ್ಮಮ ಪಾಮರಸ್ಯಾಽತೀವ ಮುಗ್ಧಸ್ಯ ವಚನಂ ಶೃಣ್ವಂತು ಮಮ ಗುರವಃ ಸರ್ವೇಽಹಂ ಸಾಷ್ಟಾಂಗಂ ನತೋಽಸ್ಮೀತ್ಯರ್ಥಯೇ ಭವತಃ ಕೃಪಾಳೂನ್ ಮಹತಃ ‖ ಅಜ್ಞಾನಾದ್ವಾ ಪ್ರಮಾದಾದ್ವಾ ಯತ್ರ ಮೇ ಕರ್ಮ ಚಾಪಲಂ ‖ ತದ್ಭಕ್ತಕರುಣಾಸಿಂಧುಃ ತತ್ಸಾಮ್ಯತು ಗುರುರ್ಮನೋತಿ ‖

ಶ್ರೀಹರಿಃ ಪ್ರಕಟಿತಕರ್ತೃತ್ವ ಶಕ್ತಿರ್ಭೂತ್ವಾ ಜೀವೇಷು ಪ್ರವಿಶ್ಯ ಸ್ವಯಂ ಕರ್ಮಾಣಿ ಕೃತ್ವಾ ಮುಖ್ಯಪ್ರಾಣಾಂತರ್ಯಾಮೀ ಭೂತ್ವಾ ತಾತ್ವಿಕೈರ್ಕಾರಯಿತ್ವಾ ಜಡೇನಾಕೃತ್ವಾ ಜೀವೇ ಕಾರಯತಿ ‖ ತಥಾ ಚ ಸ್ವಾತಂತ್ರ್ಯದಾನಂ ನಾಮ ತದ್ರೂಪೇಣ ಜೀವಪ್ರವೇಶಃ ‖ ತಥಾ ಚ ಸ್ವದಾನಮೇವ ತದ್ದಾನಮಿತಿ ಫಲಿತಮ್ ‖ "ವಿಷ್ಣುರ್ವಾಯುಂ ಪುರಸ್ಕೃತ್ಯ ಸರ್ವೇಷ್ವೇತೇಷು ಸಂಚರನ್ ‖ ಕರೋತಿ ಕಾರಯತ್ಯದ್ಧಾ ಜಗತ್ಕಾರ್ಯಮತಂದ್ರಿತಃ" ‖

ಜಗದ್ವ್ಯಾಪ್ತನಾದ ಪರಮಾತ್ಮ ಮಗನಾದ ವಾಯುರಾಜನನ್ನ ಮುಂದ ಮಾಡಿ ಸರ್ವತಾತ್ವಿಕರಲ್ಲಿ ನಿಂತು ಸಂಚರಿಸುತ್ತ ತಾ ಪದಾರ್ಥರಾಶಿಯನ್ನು ಸೂರ್ಯನ ಬಲಗಣ್ಣಿನಲಿ ನಿಂತು ನೋಡಿ ನೋಡಿಸಿ ಜೀವನಿಂದ ನೋಡಿಸುತ್ತಾನೆ. ಇದೇ ರೀತಿ ಸರ್ವವೆಂತ ಈ ಶಾಂಡಿಲ್ಯ ವಚನಾರ್ಥ ‖

"ಸರ್ವವಸ್ತುಷು ಯಾ ಶಕ್ತಿಃ ಸಾ ಮದೀಯೈವ ನಾನ್ಯಥಾ ‖ ಮಯೈವ ದತ್ತಂ ಸ್ವಾತಂತ್ರ್ಯಂ ಕೇವಲೇಷ್ವಪಿ ಕರ್ಮಸು ‖ ತಾವನ್ಮಾತ್ರೇಣ ಸಮ್ಮುಗ್ಧಾಃ ಸ್ವಾತಂತ್ರ್ಯಂ ಮನ್ಯತೇ ನಿಜಂ ‖ ಸ್ವಾತಂತ್ರ್ಯೇಽಪಹೃತೇ ಪಶ್ಚಾಜ್ಜಾನಂತಿ ಪರತಂತ್ರತಾಮ್ ‖ ಜ್ಞಾನಿನೋಽಪಿ ಹಿ ಮನ್ಯಂತೇ ಮನ್ಮಾಯಾಮುಪ್ತಚೇತನಾಃ ‖ ಸ್ವಾತಂತ್ರ್ಯಂ ಸ್ವಶರೀರಾದೌ ಕಿಮೇಮಂ ಜ್ಞಾನವರ್ಜಿತಮ್" ‖

ಎಲೋ ಬ್ರಹ್ಮನೇ ಸರ್ವ ಪದಾರ್ಥಗತ ಕರ್ಮಕರಣಾದಿ ಶಕ್ತಿ ನನ್ನದು. ಸಂದೇಹ ಬೇಡ, ನಾನು ಜೀವನಲ್ಲೆ? ನನ್ನ ಶಕ್ತಿ ಪ್ರಕಟಿಸಿ ಜಡದಿಂದ ಮಾಡಿ.

ಸದೇ ಇವನಂದ ಮಾಡಿಸಿದರೆ ಅಷ್ಟರಿಂದೆನ್ನ ಮಾಯಾಮೋಹಿತನಾಗಿ ನಾನೇ ಸ್ವತಂತ್ರಯೆಂತ ಸ್ವಾಧೀನತ್ವ ಬುದ್ಧಿವಾನನಾಗುವ. "ಪಶ್ಯೇತ್ಪಾಕ ವಿಪ ರ್ಯಾಸಂ" ಅಂದ ಹಾಗೆ ನಾನು ಶಕ್ತಿ ಪ್ರಕಟಿಸದೇ ಇರಲು ಅವ (ಜೀವ) ಉಪಕ್ರಮಿಸಿದ ಕಾರ್ಯ ಕೆಡಲು ಪರತಂತ್ರಯೆಂತ ತಿಳಿದು ಮಹಾಜ್ಞಾನಿ ಯಾದರೂ, ಸ್ವಶರೀರಾದಿ ಸ್ಪಂದನದಲ್ಲಿ ನಾನೇ ಸ್ವತಂತ್ರ ಎಂಬವನು. ಅಜ್ಞಾನಿ ಪಾಡೇನಂತ ವಿಷ್ಣು ರಹಸ್ಯ ತಾತ್ಪರ್ಯ. ಹೇ ಸ್ವಾಮಿಾ ಜೀವರಲ್ಲೀ ನಿಂತು ನೀನೆ ಶ್ವಾಸ ಉಚ್ಛ್ವಾಸವೂ ಬಿಡಸುತ್ತೀಯೋ? ನಮಗೇನು ಶಕ್ತಿ ಇಲ್ಲೀ ಎಂತ "ಜಾನಂತೋಪಿ ವಿಶೇಷಾರ್ಥಮಿತಿ", ಸರ್ವಾಧಿಕಾರಿ ಬೋಧ ನಾರ್ಥ ಪ್ರಶ್ನೆ ಮಾಡಲು ಉತ್ತರ ಹೇಳುತ್ತಾನೆ. ಮಗನೇ ನೀನು ಹೇಳಿದ ಹಾಗೆಯೇ ಎಂದೂ "ತ್ವಾಮಾರಭ್ಯ ತೃಣಂ ಯಾವಜ್ಜಗತ್ಸ್ಥಾವರಜಂಗಮಮ್॥ ಮಮ ಶಕ್ತಿಂ ವಿನಾ ಬ್ರಹ್ಮನ್ ಸ್ಪಂದಿತುಂ ನೈವ ಶಕ್ನುತೇ"॥ ಎಂತ ಶ್ರೀ ಹಯ ಗ್ರೀವದೇವರು ಅಂದರು. ಈ ಪ್ರಮೇಯದಲ್ಲಿ ಏಕತ್ರಿಂಶಾಧ್ಯಾಯ ಬ್ರಹ್ಮ ಕಾಂಡದಲ್ಲಿ ಶ್ರೀ ವಾಯುದೇವರು ಸತ್ಯಜಿತಗೆ ಹೇಳಿದ ಈ ಗಹನಪ್ರಮೇಯ ಸಪ್ರಮಾಣಿಕವಾಗಿ,॥ "ಜೀವಸ್ಯೈವಂ ಕರ್ತೃತಾಹ್ಯಸ್ತಿ ದೇವೇನ ವಿಷ್ಣುವತ್ತದ ಧೀನತ್ವಮಸ್ತಿ॥ ಅತ್ರಾಪಿ ವಕ್ಷ್ಯೇ ತವ ಯುಕ್ತಿಂ ಮಹಾತ್ಮನ್ ಅಹರಹಃ ಸಂಧ್ಯಾ ಮುಪಾಸೀತೇತಿ ನಿತ್ಯಮ್" ॥ ೧ ॥ ಇತ್ಯಾದಿ ಶ್ರುತ್ಯಾ। ವಿಹಿತಂ ಕರ್ಮಜಾತಂ ತದ್ವರ್ಣಸಾದಾಶ್ರಮಸ್ಯೋಚಿತಂ ಚ। ತತ್ತತ್ ಸರ್ವಂ ಕಾರ್ಯಮೇವಂ ಹಿ ಪುಂಸಾಂ ನಿಷಿದ್ಧಂ ಹಿ ತ್ಯಾಜ್ಯಮೇವಾತಿಯತ್ನಾತ್ ॥ ೨ ॥ ಯದ್ಯಪ್ಯೇವಂ ಕರ್ತೃತಾ ಚಾಸ್ತಿ ವಿಷ್ಣೋಃ ತಥಾಪೀಯಂ ಕರ್ತೃತಾ ನಾನ್ಯಧೀನಾ। ಜೀವಃ ಸದಾ ಹೀಶ್ವರಾಧೀನಕರ್ತಾ ವಿಧೇರ್ನಿಷೇಧಸ್ಯ ಚ ಗೋಚರತ್ವಾತ್ ॥ ೩ ॥ ಜೀವಸ್ಯ ಕರ್ತೃತ್ವಮನೇನ ಪ್ರಾಪ್ತಂ ಹರೇರಧೀನಂ ಚ ಕಥಂ ಬ್ರವೀಷಿ। ತತ್ರಾಪಿ ವಕ್ಷ್ಯೇ ಶೃಣು ಧರ್ಮಂ ಪರಾತ್ಮನ್ ಜೀವಃ ಸದಾ ಹೀಶ್ವರಪ್ರೇರ ಣಾಯಾಃ ॥ ೪ ॥ ಅಧೀನಯತ್ನೋಽಪ್ಯಧಿಕಾರಿಣಾಂ ತು ಅತಃ ಪರಾಧೀನತಾ ಕರ್ತೃತಾಸ್ತಿ॥ ಅತೋನ್ಯಥಾ ತ್ವಂ ಯದಿ ಮನ್ಯಸೇ ಚ ವಿಧೇರ್ನಿಷೇಧ್ಯಸ್ಯ ಕೋ ವದಸ್ವ ॥೫॥ ಅತಸ್ತಯೋರ್ವಿಷಯತ್ವಂ ಸ್ಥಿರಂ ಚ ಸ್ಯಾದ್ವಾ ಹರೇರ್ವಿಷಯ ತ್ವಂ ಚ ವಾ ಸ್ಯಾತ್। ಅತಃ ಪರಾಧೀನತಾ ಕರ್ತೃತಾಸ್ತಿ ಜೀವಸ್ಯ ನಿತ್ಯಮಿತಿ ಜಾನೀಹಿ ಧರ್ಮಮ್ ॥೬॥ ಪ್ರತ್ಯಕ್ಷಸಿದ್ಧೇನ ಚ ಕರ್ಮಣೈವ ಸದಾನುಮಾ ಪ್ರೇರಣಾ

ಕೇಶವಸ್ಯ । ನಾಂಗೀಕರೋಷಿ ಪ್ರೇರಣಾಂ ಕೇಶವಸ್ಯ ಹ್ಯಕಾರಣಾದೇವ ಭವೇಜ್ಜ್ಞಾ।ಕಾರ್ಯಮ್॥೭॥ ತದಾ ತಜ್ಜ್ಞಾನೀಯಾದ್ವಿಹಿತಂ ಚೈವ ಕರ್ಮ ಸದಾ ಕುರ್ವನ್ ವಿಷ್ಣುನಾ ಪ್ರೇರಿತೋಽಹಂ॥ ತೇನೈವ ವಿಷ್ಣೋಃ ಗತಿಮಾಪ್ನೋತಿ ಸಮ್ಯಗಜ್ಞಾನಜೀವಃ ಕಾರಣಂ ನೈವಮೇವ ॥೮॥ ಮತ್ವಾ ಚೇತ್ಥಂ ಕರ್ಮಜಾತಂ ಹಿ ಹಿತ್ವಾ ಜೀವಸ್ಯ ಮತ್ವಾ ಕರ್ತೃತಾ ನಾಸ್ತಿ ಚೇತಿ॥ ನಿರಯಾದಿರೂಪಾಂ ತಾಮಸೀಂ ವೈ ಗತಿಂ ಚ ಪ್ರಯಾತ್ಯೇವಂ ನಾತ್ರ ವಿಚಾರ್ಯಮಸ್ತಿ ॥೯॥ ವಿಷ್ಣೋರ್ವಶತ್ವಂ ಜೀವಸಂಘಸ್ಯ ನಿತ್ಯಂ ಜ್ಞಾತವ್ಯಮೇವಂ ನರಕಾದ್ಭೀರುಣಾ ಚ॥ ಜೀವಸ್ಥಿತಾ ಕರ್ತೃತಾ ಸರ್ವದೇವೇ ಕರೋಮಿ ನಿತ್ಯಂ ಹ್ಯನುಭವಾಸಿದ್ಧಮೇವ॥೧೦॥ ಪ್ರತ್ಯಕ್ಷಸಿದ್ಧೋಽಪ್ಯತ ಏವೇತಿ ಧರ್ಮಃ ಈಶಾಧೀನತ್ವೇ ಹ್ಯಾಗಮಂ ತ್ವಂ ಶೃಣುಷ್ವ॥ ನಾನ್ಯೋಽಸ್ತಿ ಕರ್ತಾ ಸ ಹಿ ಸರ್ವಸ್ಯ ಕರ್ತಾ ಇತ್ಯಾಗಮಾನಾಮೀಶ್ವರಾಧೀನತಾ ಸ್ಯಾತ್ ॥೧೧॥ ವಿಮತಂ ಸರ್ವೇ ಈಶ್ವರಾಧೀನಮೇವ ಸದಾ ಜನ್ಯತ್ವಾದ್ಭೃತ್ಯವಚ್ಚೈವ ರಾಜ್ಞಃ॥ ಸರ್ವಸ್ಯ ವಿಶ್ವಸ್ಯ ಹರೇರ್ವಶತ್ವಂ ಲಿಂಗಾನುಮಾ ಪ್ರಮಿತಂ ಸರ್ವದಾಪಿ ॥೧೨॥ ಪ್ರತ್ಯಕ್ಷಸಿದ್ಧಂ ಜೀವಕರ್ತೃತ್ವಮೇವ ಹೇತುದ್ವಯಂ ನೈವ ಹೇಯಂ ಕದಾಪಿ॥ ಏವಂ ವಿವೇಕೀ ಸರ್ವದೈವಂ ವಿಜಾನನ್ ಕಾರ್ಯಾಃ ಕ್ರಿಯಾಃ ಕುರುತೇ ವೈ ತಥೈವ॥೧೩॥ ಕಾರ್ಯಕ್ಷಮಂ ಕರ್ಮಣಾಂ ಪ್ರೇರಕಂ—ವಿಷ್ಣುಂ ವಿಜಾನನ್ ಸರ್ವದಾ ವಿಷ್ಣು ಬುದ್ಧ್ಯಾ॥ ಏತಾದೃಶೋಽಸೌ ಹ್ಯಧಿಕಾರೀ ಸದೈವ ಭವೇತ್ಪ್ರಮಾಣತ್ರಿತಯಾನುಗಾಮಿತಿ॥೧೪॥

ಎಲೋ ಸತ್ಯಜಿತನೆ ಯದ್ಯಪಿ ಹರಿಯೇ ಸ್ವತಂತ್ರ ಆದರೂ ನಿನ್ನುದ್ಧರಿಸೋದಕ್ಕ, ಮತ್ತೂ ಸಂಧ್ಯಾದಿ ಪ್ರತಿಪಾದಕ ವೇದ ಸಾರ್ಥಕ್ಯ ಹೊಂದೋದಕ್ಕ ಜಡಮಪೇಕ್ಷ ಕರ್ತೃತ್ವ ಇಟ್ಟಾರ. ದೇವರಂತ ತಿಳಿಬೇಕಪ್ಪಾ ಯಂತುಪಕ್ರಮಿಸಿ ಸಪ್ರಮಾಣವಾಗಿ ಆತನ್ನ ಒಡಂಬಡಿಸಿದ್ದಾರೆ. ನಮ್ಮ ಗುರು ಪವಮಾನರು ಎಂಬ ಇದರ ಹೃದಯ ॥

"ಕರ್ತಾ ಕಾರಯಿತಾ ವಿಷ್ಣುಃ ಭೋಕ್ತಾ ಭೋಜಯಿತಾ ತಥಾ॥ ಶಿಕ್ಷಕಃ ಶಿಕ್ಷಣೀಯಶ್ಚ ಸ್ರಷ್ಟಾ ಸೃಜ್ಯಃ ಸ ಏವ ತತ್॥ ಎಲೋ ನಾರದರೇ ನೀವು ನನ್ನನ್ನು ಹರಿ ವಿಮುಖರನ್ನ ಶಿಕ್ಷಿಸುತ್ತೀರಿಯೆಂತ ಕೇಳಿದರೆಲ್ಲಾ ಅದು ನನ್ನ ಕರ್ನ ಕಠೋರವಾಯ್ತು. ನಾನೆಷ್ಟರವ ಸ್ವಾಮಿ. ಶ್ರೀಹರಿಯ ಚರಣ ವಿಮುಖರಾದ

ಕಲಿಮುಖ ದಾನವರನ್ನೆಲ್ಲ ನನ್ನ ಅಧಿಷ್ಠಾನದಲ್ಲಿ ಇದ್ದು ಶಿಕ್ಷಿಸುತ್ತಾನೆ. ಆತನೇ ಜನರಿಂದ ಅನುಚಿತನಾಗಿ ಪಾಪ ತಾನೇ ಅಲ್ಲೆ ಮಾಡಿ ತಾತ್ವಿಕರಿಂದೂ ಮಾಡಿಸಿ, ತಾನೆ ಮೊದಲ ಸ್ವಯೋಗ್ಯಾಪ್ರಾಕೃತರಸ ಉಂಡುಣಿಸಿ, ಇವವನ್ನ ಶಿಕ್ಷಾಮಾಡಿ, ಶಿಕ್ಷಕನಲ್ಲಿದ್ದು, ಹೊಡೆಸಿಕೊಂಬುವವನಲ್ಲೇ ಇದ್ದು, ಸುಖದ ಹಾಗೆ ದುಃಖವನ್ನ ಸಾಮರ್ಥ್ಯವೈಶೇಷ್ಯದಿಂದುಣದೇ, ಜೀವರನ್ನುಣಸುತ್ತ ಸ್ರಷ್ಟೃಗತನಾಗಿ ತದ್ವಾಚ್ಯನಾಗಿ, ಸೃಜ್ಯಗತನಾಗಿ ತನ್ನಾಮಕನಾಗುತ್ತಾನೆಂದು, ಉತ್ತರಖಂಡಾಗ್ನೇಯದಲ್ಲಿ ಸಭಾದಲ್ಲೆ ಕುಳಿತ ಯಮಧರ್ಮರಾಜರು ದೇವ ಋಷಿಗಳಾದ ನಾರದರನ್ನು ಕುರಿತುಪದೇಶಮಾಡಿದರು. ಅಂತ ಉಕ್ತಂ ಸೂಕ್ತಮಿತಿ ಸಂಕ್ಷೇಪಃ ॥

ಇತಿ ದತ್ತಸ್ವಾತಂತ್ರ್ಯ ವಿಚಾರಃ ಸಮಾಪ್ತಃ

॥ ಶ್ರೀ ಕೃಷ್ಣಾರ್ಪಣಮಸ್ತು ॥

ಈ ಮಹಾರ್ಥ ತಿಳಿಯದೇ ಭ್ರಮಸಬಾರದೆಂತ ದಾಸರು ಕ್ಲೇಶಾನಂದೇತಿ ಈ ಪದ್ಯ ವ್ಯಾಖ್ಯಾನಮಾಡಲಿಕ್ಕೆ ಈ ದತ್ತಸ್ವಾತಂತ್ರ್ಯಸಂಧಿ ಪ್ರಾರಂಭಿಸೋ ದಕ್ಕೆ ಸೂಚನ॥ (ಇತಿ ಭಾವಸೂಚನ)

॥ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

ಇಲ್ಲಿಗೆ ಭಾವಸೂಚನೆಕಾರರ ಅಭಿಪ್ರಾಯ ಮುಗಿಯಿತು.

ಮುಂದೆ ಈ ೧೬ನೆಯ ಸ್ವಗತ ಸ್ವಾತಂತ್ರ್ಯಸಂಧಿಯಸಾರ ಬಿನ್ನೈಸುತ್ತದೆ.

ಜ್ಞಾನಿಗಳಾದ ಶ್ರೀ ದಾಸವರ್ಯರು "ಸ್ವಗತ ಸ್ವಾತಂತ್ರ್ಯಗುಣವ ಹರಿ ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟದ ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ" ಎಂದು ಶ್ರೀವಿಷ್ಣು ರಹಸ್ಯೋಕ್ತವಾದ ಗೋಪ್ಯವನ್ನು ಈ ಸಂಧಿಯಲ್ಲಿ ವಿವೇಚಿಸಿರುವರು. ಪ್ರಕಟವಾದ ಹಲವು ಗ್ರಂಥಗಳಲ್ಲಿ (೧೬)ನೇ ಸಂಧಿ ದತ್ತ ಸ್ವಾತಂತ್ರ್ಯ ಹೇಳಿ ೧೭ನೇ ಸಂಧಿಯಲ್ಲಿ ಸ್ವಾತಂತ್ರ್ಯ ಸಂಧಿ ಅಚ್ಚಾಗಿರುವದು. ಮೊದಲಿಗೆ ಸರ್ವತಂತ್ರ ಸ್ವತಂತ್ರನಾದ ದೇವರಲ್ಲಿಪ್ಪ (ಸ್ವಗತ) ಸ್ವಾತಂತ್ರ್ಯ ವೇನು ? ಸೃಷ್ಟಿಸ್ಥಿತ್ಯಾದಿ ಬ್ರಹ್ಮಾಂಡಕಾರ್ಯದಲ್ಲಿ ಅಸ್ವಾತಂತ್ರ್ಯವನ್ನು ಯಾವ ಪ್ರಕಾರ ಜೀವರಧಿಕಾರಾನುಸಾರ ಯಾರಲ್ಲಿ ಹೇಗೆ ಎಂಥೆಂಥ ಗುಣಸ್ವಾತಂತ್ರ್ಯ ದಿಂದ ವಿಹಾರ ಮಾಡುವನು, ಎಂಬುದನ್ನ ಹೇಳಿದ್ದಾರೆ. ದೇವರು ರಾಜಾಧಿ

ರಾಜ, ಪರಮ ಸರ್ವೋತ್ತಮನಾದ ವಿಷ್ಣು ಮುಖ್ಯ ಸ್ವತಂತ್ರನು, ಮಾಯಾ ತರುಣಿ ಶ್ರೀ ಲಕ್ಷ್ಮೀ ದೇಶಕಾಲಗಳಲ್ಲಿ ಹರಿಗೆ ಸಮಳೆನಿಸಿ ಶ್ರೀ ಹರಿಯು ವಕ್ಷ ಸ್ಥಳದಲ್ಲಿ ವಾಸವಾಗಿಹಳು. ಬ್ರಹ್ಮಾಂಡವಾದ ಮಹಾರಾಜ್ಯಕ್ಕೆ, ರಾಜಾಧಿ ರಾಜ, ತನ್ನ ರಾಜ್ಯದಲ್ಲಿ ಬ್ರಹ್ಮವಾಯು ಉಭಯರನ್ನು ಸಚಿವ ಮಂತ್ರಿಗಳ ನ್ನಾಗಿ ಮಾಡಿರುವನು. ಇದರಿಂದ ಸರ್ವಕರ್ಮಗಳನ್ನು ಪ್ರೇರಿಸಿ ಪ್ರಾಣ ಪ್ರಿಯರಾದ ಗರುಡ, ಶೇಷ, ರುದ್ರಾದಿಗಳಿಂದ ಅಹಂಕಾರ ತತ್ವದಲ್ಲಿ ಇಂದ್ರಿಯ ಗಳಲ್ಲಿ ಕ್ರಮವಾಗಿ ತತ್ವಾಧಿಪತ್ಯ ಇಂದ್ರಾದಿ ದೇವತೆಗಳಿಗಿತ್ತಿಹನು.

ಅಲ್ಲದೆ ಈ ದೇವತೆಗಳಂತೆ ನಿತ್ಯದಿ ಕಲಿ ಮೊದಲಾದ ದೈತ್ಯರು, ಅಹಂ ಕಾರತತ್ವ ಪರಿಯಂತ ಸಕಲಪ್ರಾಣಿಗಳ ಸ್ಥೂಲ ದೇಹದಲ್ಲಿ ತೋದಕರು ತಾವಾಗಿ ಪಾಪ ವ್ಯಾಪಾರಗಳನ್ನು ಮಾಡುವವರು, ಬ್ರಹ್ಮದೇವರಂತೆ ಒಬ್ಬನೇ ಕಲಿಯು, ಬ್ರಹ್ಮಾಂಡದಿ ಮಾತ್ರ ಅಹಂಕಾರಾಧಿಪನಾಗಿ ಇರುವನು. ಮಹತ್ತತ್ವದಲ್ಲಿ ಕಲಿಯ ಪ್ರವೇಶ ಅವನ ವ್ಯಾಪಾರವಿಲ್ಲ, ಕ್ರೋಧಿ ದೈತ್ಯರಾದ ಮಧು, ಕೈಟಭ ಶಂಬರನೇ ಮೊದಲಾದ ದೈತ್ಯರು ಮನಸ್ಸಿಗೆ ಸ್ವಾಮಿ ಎನಿಸುವರು. ಈ ದೇವತೆಗಳಂತೆ ನಿತ್ಯದಿ ದೇವತೆಗಳ ನಾಮದಿಂದಲೇ ಯಾವತ್ತು ಸ್ಥೂಲೇಂ ದ್ರಿಯಗಳಲ್ಲಿ ವ್ಯಾಪಾರ ಮಾಡುವರು. ಇವರ ವ್ಯಾಪಾರವೂ ಸಹ ಶ್ರೀ ಪ್ರಾಣದೇವರು ಶ್ರೀ ಹರಿಯಾಧೀನ.

ಈ ಪ್ರಕಾರ ಪುಣ್ಯಕೃತ್ಯಗಳಿಗೆ ದೇವತೆಗಳು, ಪಾಪಕೃತ್ಯಗಳಿಗೆ ದೈತ್ಯರು ವ್ಯಾಪಾರ ಮಾಡುವರೆಂದಮೇಲೆ ಅವರು ಸ್ವತಂತ್ರರೆ ಎಂದರೆ ದೇವ ದೈತ್ಯ ರಾದವರಲ್ಲಿ ಒಬ್ಬರೂ ಸ್ವತಂತ್ರರಲ್ಲ. ಶ್ರೀ ರಮೆಯು ನಿತ್ಯಾವಿಯೋಗಿನಿ ಯಾದರೂ ಅಸ್ವತಂತ್ರಳೆಂದಮೇಲೆ ಇವರಿಗೆಲ್ಲಿಂದ ಸ್ವಾತಂತ್ರ್ಯ. ಆದರೆ ರಾಜನು ತನ್ನ ಸೇವಕರ ಅಧಿಕಾರಾನುಸಾರ ಅವರ ಸೇವಾನುಗುಣವಾಗಿ ಫಲ=ಸಂಬಳವನ್ನು ಕೊಡುವಂತೆ ಮಹಾರಾಜಾಧಿರಾಜನಾದ ಹರಿಯು, **ತನ್ನ ಸ್ವಾಭಾವ "ಸ್ವಾತಂತ್ರ್ಯಗುಣ"** ಗುಣವನ್ನು ವಿಭಾಗ ಮಾಡಿಕೊಟ್ಟನೆಂದು ಹೇಳಿದ್ದಾರೆ.

ಜೀವರು ದೇವರಿಗೆ ಭಿನ್ನಾಂಶರು ಅಲ್ಪಜ್ಞರು. ಅಲ್ಪಶಕ್ತಿಯುಳ್ಳವರಲ್ಲಿ "ತನ್ನ ಸ್ವಭಾವ" ಸ್ವಾತಂತ್ರ್ಯ ಗುಣವ ಹೇಗೆ ವಿಭಾಗಮಾಡಿಕೊಟ್ಟ, **ತನ್ನ ಶ್ರೀ ಹರಿಯು ಸ್ವಭಾವ** ಸ್ವಾತಂತ್ರ್ಯ ಗುಣವೇನು? ಅದನ್ನು ಜೀವರಿಗೆ

ಕೊಟ್ಟ ಬಗೆ ಹೇಗೆಂಬುವ ವಿಚಾರಾಂಶ ಮುಖ್ಯವಾಗಿದೆ. "ಸ್ವತಂತ್ರೋಪಿ ಹರಿಃ ಸೃಷ್ಟ್ವಾ ಸ್ವಸ್ವಾತಂತ್ರ್ಯಮನೇಕಧಾ। ವಿಭಜ್ಯಾದಾನ್ನೃಪ ಇವ ಸರ್ವ ಕಾರ್ಯೇಷು ಲೀಲಯೇತಿ" । ಸ್ವಸ್ವಾತಂತ್ರ್ಯಚತುರ್ಥಾಂಶಂ ದಶಧಾ ವ್ಯಭಜದ್ಧರಿಃ ॥ ಎಂಬುವಂತೆ ಶ್ರೀಹರಿಯು ಅಗಣಿತ ಸ್ವಾತಂತ್ರ್ಯವುಳ್ಳಾತನು. ಒಂದು ಬ್ರಹ್ಮಾಂಡಕಾರ್ಯ ನಡೆಸಲು ಎಷ್ಟು ಸ್ವಾತಂತ್ರ್ಯ ಬೇಕೋ ಅಷ್ಟೇ ಗುಣ ಶಕ್ತಿ ಪ್ರಕಟಮಾಡುವನು. ತನ್ನ ಪೂರ್ಣಶಕ್ತಿಯನ್ನು ಪ್ರಕಟಿಸುವದಿಲ್ಲ. ಜೀವರ ಯೋಗ್ಯತೆ ದೇಶ ಕಾಲ ಅನುಸರಿಸಿ, ಸೃಷ್ಟಿ ಪ್ರಾರಂಭದಲ್ಲಿಯೇ ತನ್ನ ಸ್ವರೂಪ ಭೂತ ಅಗಣಿತ ಸ್ವಾತಂತ್ರ್ಯದಲ್ಲಿ ವಿಭಾಗ ಮಾಡಿದ್ದು ಅಚ್ಚರವೇ? ಹರಿಯ ಗುಣಗಳಿಗೆ ಅಭೇದ ಒಂದು ಪೂರ್ಣ ಶಕ್ತಿಯು, ಅಂಶದಲ್ಲಿಯೂ ಪೂರ್ಣ ಶಕ್ತಿ ಇದ್ದಮೇಲೆ ವಿಭಾಗ ಗೈಸಿದ ಸ್ವತಂತ್ರ ಗುಣದಲ್ಲಿ ಲೇಶಾಂಶ ವಾದರೂ ಪ ರ ಮಾ ತ್ಮ ನ ಶಕ್ತಿ ಕಡಿಮೆಯಾಗಿಲ್ಲವಾದರೂ, ಸತ್ಯಸಂಕಲ್ಪ ಸರ್ವಜ್ಞನಾದ ಹರಿಯು, ಬ್ರಹ್ಮಾಂಡ ಯಂತ್ರವನ್ನು ನಡೆಸಲು ಇಷ್ಟೇ (೫-೧೦-೨೦-೧೦೦ ಹಾರಸ್ ಪವರ) ಶಕ್ತಿಯುಕ್ತ ಯಂತ್ರಗಳಿಂದ, ಲೋಕ ದಲ್ಲಿ ಹೇಗೆ ದೃಷ್ಟವಾಗಿದೆಯೊ, ಬ್ರಹ್ಮಾಂಡ ತದ್ಗತ ಜೀವರ, ಯೋಗ್ಯತೆ ಶಕ್ತಿ ಪ್ರಕಟಿಸುವದಕ್ಕೆ ಅಷ್ಟಷ್ಟೆ ಶಕ್ತಿ ವ್ಯಕ್ತಮಾಡಿದ್ದಾನೆ. "ಭ್ರಾಮಯನ್ ಸರ್ವ ಭೂತಾನಿ ಯಂತ್ರಾರೂಢಾನಿ ಮಾಯಯಾ" ಎಂಬುವಂತೆ ಅಗಣಿತ ಶಕ್ತ ನಾದರೂ, ಯಂತ್ರ (ಮಿಷನ್) ಯೋಗ್ಯತೆಯಂತೆ ಅಷ್ಟೇ ಶಕ್ತಿ ಹೊರಗೆಡುವನು.

ಹಿಂದಿನ ಭಾರತ ವೈಭವವು ಗತವೈಭವವೇ ಆಯಿತು. ಕಾಲ ನಿಯಾಮಕನೇ ನಿನ್ನಿಚ್ಛೆ ಸ್ವಾಮಿ. ೨೪ ಜಡತತ್ವಗಳನ್ನು ಪಂಚಭೌತಿಕ ಗಳನ್ನು ಅರಿತು ತಮ್ಮ ಸ್ವಾಧೀನದಲ್ಲಿರಿಸಿ, ಜಡತತ್ವಗಳಿಗೆ ನಿಯಾಮಕರಾದ ತತ್ವಾಭಿಮಾನಿ ದೇವತೆಗಳನ್ನು ಒಲಿಸಿ, ತಂತ್ರ, ಯಂತ್ರ, ಮಂತ್ರಗಳನ್ನು ಸಿದ್ಧಿಗೆ ತಂದು ತತ್ಕಾರ್ಯ ಪ್ರವರ್ತಕರಾಗಿ ಅನೇಕ ವೈಭವಗಳನ್ನು ಅನುಭವಿ ಸಿದ, ಭಾರತವು ಮಂತ್ರ ಯಂತ್ರ, ತಂತ್ರ ಕಲೆಗಳಿಂದ ಕುಗ್ಗಿ, ದೈತ್ಯಬಡಿಗನಾದ ಮಯಾಸುರನ, ಜಡಶಕ್ತಿಯ ವ್ಯಾಮೋಹಕ್ಕೆ ಸಿಕ್ಕಿದೆ. ಈ ಶಕ್ತಿಪ್ರೇರಕನಾದರೂ, ಮಹಾಯಂತ್ರಜ್ಞನಾದ ಹರೇ ಆ ಯಂತ್ರಗಳಲ್ಲಿಯೂ ಸಹ ನಿನ್ನ ಶಕ್ತಿ ಮರೆಯ ದಂತೆ ಜೋಡಿಸು, ಪ್ರೇರಿಸು, ನೋಡಿಸು, ತಿಳಿಯಿಸು, ಅನುಭೋಗದಲ್ಲಿ ಹರಿಸು.

ಗಾಳಿ, ನೀರು, ತೇಜಸ್ಸಿನ ಶಕ್ತಿಯಿಂದ ನಡೆಯುವ, ಎಷ್ಟೋ ಸಾವಿರಾರು ತರದ ಯಂತ್ರಗಳು ಅವುಗಳ ಕಾರ್ಯಪ್ರವರ್ತಕ ಶಕ್ತಿ ತೋರುವವು. ಮಾದರಿಗಾಗಿ ಒಂದೇ ಒಂದು ವಿದ್ಯುಚ್ಛಕ್ತಿ ಯಂತ್ರದ ಉದಾಹರಣೆ ತೆಗೆದುಕೊಳ್ಳೋಣ "ಆಲಯದೊಳಗಿಪ್ಪ ದೀಪ ಜ್ವಾಲೆವೃತ್ತಿಗಳನುಸರಿಸಿ | ಜನರಾಲಿಗಳಿಗೊಪ್ಪುವ ತೆರದಿ ಹರಿ ತೋರ್ಪ ಸರ್ವತ್ರ" ಶ್ರೀ ದಾಸರಾಯರು ದೀಪ ಬತ್ತಿಗಳ ಉದಾಹರಣೆ ತೆಗೆದುಕೊಂಡಿದ್ದಾರೆಂದಮೇಲೆ ಅವರೇ ಮಾರ್ಗದರ್ಶಿಗಳು. ನಮಗೆ ಇನ್ನೊಂದು ಟೀಕಾ ಬೇಕಿಲ್ಲ, ಅವರ ಸ್ವವಚನ ಗ್ರಂಥಕ್ಕೆ ಪೂರ್ವೋತ್ತರ ಪ್ರಸಂಗಾನುಸಾರ ಟೀಕೆ, ಕಂಡುಹಿಡಿಯುವದು ಜಾಣ್ಮೆ, ಅವರ ಪ್ರಸಾದ ಮುಖ್ಯ ಅವರಂದಂತೆ ದೀಪ ಜ್ವಾಲೆಗಳಂತೆ,

### ವಿದ್ಯುತ ಪ್ರಕಾಶಯಂತ್ರವನ್ನು

ಒಳ್ಳೇ ಸೂಕ್ಷ್ಮ ವಿಚಾರದಿಂದ ನೋಡಿದರೆ ೫-೧೦-೧೫ ೨೫=ಹಾರಸಪವರ ಯಂತ್ರಗಳ ಶಕ್ತಿಯಂತೆ, ಮೂಲ ವಿದ್ಯುತ್‌ಶಕ್ತಿ ತಾಮ್ರದಲ್ಲಿ ಅಡಕವಾಗಿದೆ. ಅದನ್ನು ಕಾರಬನ್ ಸ್ಟಿಕ್, (ಕಾಡಿಗೆ ದಪ್ಪಾದ ಗಟ್ಟಿಯಾದ ಒಡೆ) ದಿಂದ ತಿಕ್ಕಲು, ಏನರಜಿ, ವಿದ್ಯುತ್ತೇಜ ಹೊರಬೀಳುತ್ತದೆ. ಆ, ಏನರಜಿ ವಿದ್ಯುತ್ತೇಜ ತಾಮ್ರ ತಂತಿಗಳದ್ವಾರಾ "ಮೇನಸ್ವಿಚಗೆ" ತಂದು ವಿದ್ಯುತ್ ಶಕ್ತಿ ೧ ಅಳಿಯುವ ಯಂತ್ರ ಒಂದು, (ಸ್ವಾಧೀನದಲ್ಲಿಟ್ಟು ಅಳೆಯುವದು) ಮತ್ತು ಹೋಲ್ಟಮಿಾಟರ್" ತೇಜ ತೋರಿಸುವದು. ಮತ್ತು "ಏನಿಪಿಯರ್ ಮಿಾಟರ್" Anpere Maeter ತೇಜ ಎಷ್ಟು ಪ್ರಮಾಣ ಶಕ್ತಿಯಿಂದು ಕೆಲಸ ಮಾಡುತ್ತದೆಂದು ತೋರಿಸಲು, ಮುಂದೆ ಕರೆಂಟ ಪಾಸಮಾಡಿ ರೆಗ್ಯೂಲೇಟ್‌ರ, ಹೋಲ್ಟಮಿಾಟರ್, ಸಹಾಯದಂತೆ) ಕರೆಂಟ ಪಾಸಾಗುತ್ತ (ಬಲಬು ಶಕ್ತಿ ೫-೧೦ ೧೫-೧೦೦ ಮುಂತಾದ ಕ್ಯಾಂಡಲ ಪವರದಂತೆ) ಬಲಬಿಗೆ ಬರಲು ಪ್ರಕಾಶವಾಗುತ್ತದೆ. ಮೇನ್‌ಸ್ವಿಚ್ ರೆಗ್ಯೂಲೇಟರ ಕೂಡಿಸುವಂಥ ಹೋಗಿಬರುವ ವಿದ್ಯುತ್ ಸಂಧಿ (ಈ ವಿದ್ಯುತ್ ಶಕ್ತಿಪ್ರದರ್ಶನ ೧೦-ಲ ಕಡೆ ನೋಡಿ ಮನನಮಾಡಿದ್ದದೆ) ಈ ಜಡವಿದ್ಯುತ್ ಪ್ರಕಾಶ ಶಕ್ತಿ ಚೇತನರಾಧೀನ- ಈ ವಿದ್ಯುತ್‌ಶಕ್ತಿಯ ವಿಭಾಗದಂತೆ ಶ್ರೀಹರಿಯು ಅನಂತ ಸ್ವಾತಂತ್ರ್ಯ ಗುಣವುಳ್ಳವನಾದರೂ ಆದಿ ಸೃಷ್ಟಿಯಲ್ಲಿ ವಿದ್ಯುತ್ ಶಕ್ತಿಯಂತೇ ತನ್ನ ಸ್ವಾತಂತ್ರ್ಯ

ಗುಣಗಳನ್ನು ಹಂಚಿ ಹಾಕಿದ್ದಾನೆ. ಸ್ವಾಮಿ ತನ್ನ ಶಕ್ತಿಗೆ ತಾನೆ ಸಹಾಯಕ, ತನ್ನ ನವಶಕ್ತಿಗಳನ್ನು ಪ್ರಕಟಗೈಸುವನು ೧. ಯಂತ್ರಗತ ತಾಮ್ರ, ೨. ಕಾರಬನ್, ೩. ಘರ್ಷಣೆ, ೪. ತಾಮ್ರನಾಳ, ೫. ಮೇನ್‌ಸ್ವಿಚ್, ೬. ರೆಗ್ಯುಲೇಟರ್, ೭. ಹೋಲ್ಟ ಮೀಟರ್, ೮. ಏನಿಪಿಯರ್ ಮೀಟರ್, ೯. ಕರೆಂಟ ಪಾಸಾಗಿ ಬಲಬಿಗೆ ಬರುವದು ಹೀಗೆ ೯ ಶಕ್ತಿಗಳು, ಭಗವಂತನ ನವಶಕ್ತಿಗಳು ಹೇಗೆ ಒಂದಕ್ಕೊಂದು ಸಂಬಂಧವಿದೆ ಎಂಬುದನ್ನು ಗುರುಗಳಿಂದ ತಿಳಿಯಬೇಕು.

ತಾರತಮ್ಯ ಸುಳಾದಿ (೧೩) ಅಶೂನ್ಯನಾಮಕ ಪೂರ್ಣಬ್ರಹ್ಮ ಈ ಸುಳಾದಿಯಲ್ಲಿ ಶ್ರೀ ವಿಜಯದಾಸಾರ್ಯರು ತ್ರಿವಿಡಿ ತಾಳದಲ್ಲಿ "ಅನಂತಾನಂತ ಗುಣ ಸ್ವಾತಂತ್ರ್ಯಾತ್ಮಕ ಏನೆಂಬೆ ಸೃಷ್ಟಿಯ ಪ್ರಾರಂಭದಿ | **ಜ್ಞಾನಮಯ ವಾದ ಅಭಿನ್ನಭಾಗದಿಂದ |** ಅನಂತಾತ್ಮಕ ಗುಣವೇ ಹತ್ತು | ಆನಂದ ತೆಗೆದು, ಚತುರ ಭಾಗವನ್ನೇ ಮಾಡಿ, ಎಂದು ಹೇಳಿದ್ದಾರೆ. ಅದಕ್ಕೆ ಶ್ರೀ ಜಗನ್ನಾಥ ದಾಸರಾಯರು **ಸ್ವಗತಸ್ವಾತಂತ್ರ್ಯ ಗುಣವ ಹರಿ ತೆಗೆದು** ಬ್ರಹ್ಮಾದ್ಯರಿಗೆ ಕೊಟ್ಟ, ಅಗಣಿತ ಸ್ವಾತಂತ್ರ್ಯ ನಾಲ್ಕುಬಗೆ ವಿಭಾಗ ಮಾಡಿ, ಅದರೊಳಗೆ ೧ ಒಂದು ಭಾಗ ತೆಗೆದು ೧೦ ಭಾಗ ಮಾಡಿ, ಪಾದರೆ ಪಂಚ (೪|||·) ಪ್ರಾಣನಲಿ, ಮತ್ತು ಸಪಾದೈದುಗುಣ (೫|·) ಚತುರ್ಮುಖನಲ್ಲಿ, ಹೀಗೆ (೧೦)

೨ನೇ ಭಾಗದಲ್ಲಿ ೧೦ ಪ್ರಕಾರ ವಿಭಾಗಗೈಸಿ ೨ ಸದಾಶಿವಾದಿಗಳಲ್ಲಿ ೧|| ಇಂದ್ರಕಾಮರಲ್ಲಿ ೧ ಇಂದ್ರಿಯಾಭಿಮಾನಿ ದೇವತಾಗಳಲ್ಲಿ, ೧ ಒಂದು ಯಾವ ಜ್ಜೀವರೊಳಗೊಂದು. ೪|| ಕಲ್ಯಾದಿ ದೈತ್ಯ ಸಮೂಹಕೆ ಹೀಗೆ ೧೦ ಗುಣ ಸ್ವಾತಂತ್ರ್ಯ ವಿಭಾಗಗೈಸಿದ ೩ನೇ ೪ನೇ ಭಾಗ ಎರಡೂ ಭಾಗಗಳನ್ನು ಕೂಡಿಸಿ. ಅದರಲ್ಲಿ ಮೂರು ಭಾಗಮಾಡಿ ೧ ಭಾಗ ಸ್ವಾತಂತ್ರ್ಯ ಇಂದಿರೆಗೆ, ಉಳಿದ ೨ ಭಾಗವನ್ನು ಜಾಣನಾದ ಹರಿಯು, ಜಾಣ್ಮೆಯಿಂದ ೨ ಭಾಗವನ್ನು ಪುನಃ ಜಗತ್ಸರ್ಜನಾದಿ ಅವತಾರಾದಿ ಗೋಸುಗ ತನ್ನಲ್ಲೆ ಇಟ್ಟುಕೊಂಡನು, ಮುಂದೆ–

ಆದಿತಾಳದಲ್ಲಿ

"ಜಿತಶರೀರಳಾದ ತನ್ನ ಸತಿ ಲಕುಮಿಗೆ ವೊಂದು ಭಾಗ ಹಿತದಿಂದ ಪಾಲಿಸಿದ, ಪ್ರತಿ ಪ್ರತಿಸಪಿಗೆ ಅಚ್ಯುತದೇವ **ಸ್ವರೂಪಾಂಶ ಸ್ವಾಕೃತಿ ಸ್ವಕೃತಿ**

ಬದ್ಧರಿಗೆ ಕೊಡುತಲಿಪ್ಪ ಸ್ವತಂತ್ರ। ಚತುರನಾಗಿ ಸರ್ವ ಜೀವಗತನಾಗಿ ತತ್ಕಾಲ। ಗತಿಯಂತೆ ಚೇಷ್ಟೆ ಮಾಡಿಸಿ। ಮತಿಕೊಡುವ ಪಾಪಪುಣ್ಯಕೆ। ತುತಿಪೆ ಕೇಳು ಉಳಿದ ಭಾಗದಿ ಕ್ಷಿತಿಯೊಳಗೆ ಅವತಾರಾವೇಶ। ಚತುರಾಸ್ಯ ಮಾರುತ ಸರಸ್ವತಿ ಶ್ರದ್ಧಾಗರುಡಾದಿ ಕಾಮದೇ। ವತಸಮುದಾಯ। ದಿತಿಜ ಬಳಗ ಮನುಜೋತ್ತುಮ ಸರ್ವ। ಇತರ ಜೀವಕ್ಕತತು ಉಳಿದ ಭಾಗದಿಂದ। ರತಿ ಪತಿ ಪಿತ ವ್ಯಾಪಾರಮಾಡುವ। ಸತತ ತುರ್ಯಾ ಜೀವ ನಾಮಕ ॥ ೫ ॥

ಜತೆಯಲ್ಲಿ

ದತ್ತಸ್ವಾತಂತ್ರ್ಯವೆಂಬೋದಿದೆ ಜೀವರಿಗೆ ಸತ್ಯ ಸಂಕಲ್ಪ ವಿಜಯವಿಠಲ ನಿಂದ ॥ ೬ ॥

ಎಂದು ವಿಸ್ತರಿಸಿ ದತ್ತಸ್ವಾತಂತ್ರ್ಯ ಹರಿಯ ಸ್ವಗತ ರೂಪಗಳನ್ನು ಜೀವರಲ್ಲಿ ಯೋಗ್ಯತೆಯಂತೆ ಇಟ್ಟನು. ಹೀಗೆ ತನ್ನ ಸ್ವಾತಂತ್ರ್ಯ ಗುಣವ ಬ್ರಹ್ಮಾದಿ ದೇವತೆಗಳಿಗೆ, ಕಲಿ ಮುಖ್ಯರಾದ ದೈತ್ಯ ದಾನವರ ಸಂತತಿಗೆ ಅವರಧಿಕಾರಾನುಸಾರವಾಗಿ ಪುಣ್ಯ ಪಾಪಗಳನ್ನು ಕೊಡುವನು. ಅಸ್ವತಂತ್ರರು ಅಲ್ಪಶಕ್ತಿಯುಳ್ಳವರೂ, ಪುಣ್ಯ ಪಾಪಗಳನ್ನು ಉಣ್ಣಲರಿಯದವರಿಗೆ ತನ್ನ ಸ್ವಾತಂತ್ರ್ಯಗುಣದಿಂದ ಉಣಗಲಿಸಿದನು. ಹೀಗೆ ಲಿಂಗ ಉಪಚಯ ಸ್ವಸ್ವೇದೋರೂಪಳಾದ ರಮೆಯದ್ವಾರ ಚೇತನನಾದ ಜೀವನಿಗೂ, ಅಚೇತನ ವಾದ ಲಿಂಗಕ್ಕೂ ತನ್ನ ಸ್ವಾತಂತ್ರ್ಯ ಗುಣದಿಂದ ಸಂಬಂಧಗೈಸಿದ ಅಘಟಿತ ಮಹಿಮನು. ಪ್ರಕೃತಿ ಸ್ವಾತಂತ್ರ್ಯ ಗುಣಗಳಿಲ್ಲ, ತನ್ನ ಸ್ವಾತಂತ್ರ್ಯ ಗುಣ ಗಳಿಂದಲೇ ಜೋಡಿಸುವ ಮುಂದೆ ಈ ಸ್ವಾತಂತ್ರ್ಯ ಗುಣಗಳೇ ಅನೇಕ ವಿಧ ವಾಗಿ ಗೈಸಿ, ಅದರಲ್ಲಿ ಲೇಶಾಂಶ ಜನಕೀವನು. ಅದು ಹೇಗಂದರೆ, ಹರಿಯು ತಿಲಜವೃತ್ತಿ, ದೀಪಜ್ವಾಲೆ ಬತ್ತಿಯಂತೆ ದೀಪ ಪ್ರಕಾಶ, ಜೀವರಧಿಕಾರ ಅನು ಸರಿಸಿ ಪುಣ್ಯ ಪಾಪಗಳ ಮಾಡಿಸುವ, ಈ ಕಾರಣ ಶ್ರೀಹರಿ ಸರ್ವಕರ್ತನೆಂದು ತಿಳಿದು "ಇಂದ್ರಿಯಗಳಿಂ ಮಾಳ್ಪ ಕರ್ಮದ್ವಂದಗಳ ತನಗರ್ಪಿಸಲು। ಗೋವಿಂದ ಪುಣ್ಯವಕೊಂಡು ಪಾಪವ ಭಸ್ಮವನೆ ಮಾಳ್ಪ॥ ಇಂದಿರೇಶನು ಭಕ್ತ ಜನರನು। ನಿಂದಿಸುವ ರೊಳಗಿಪ್ಪ ಪುಣ್ಯಗತಂದು ತನ್ನವಗೀವ ಪಾಪಗಳವರಿಗುಣಿಸುವನು ॥೮॥ ಮತ್ತೆ ಹೊತ್ತು ಹೊತ್ತಿಗೆ ಪಾಪಕರ್ಮ ಪ್ರವರ್ತಕರ ನಿಂದಿಸದೆ। ತನ

ಗಿಂದುತ್ತುಮರ ಗುಣ ಕರ್ಮಗಳ ಕೊಂಡಾಡದಲೆ ಇಪ್ಪ॥ ಮರ್ತ್ಯರಿಗೆ ಗೋ ಬ್ರಾಹ್ಮಣ ಸ್ತ್ರೀ। ಹತ್ಯ ಮೊದಲಾದಖಿಳ ದೋಷಗ। ಳಿತ್ತಪನು ಸಂದೇಹ ಬಡಸಲ್ಲಖಿಳ ಶಾಸ್ತ್ರಮತ ॥೯॥ ಕತ್ತಲೆ ಸೂರ್ಯ, ಒಂದೆಡೆ ಇರಬಲ್ಲವೇ ಪರ್ವತಕೆ ಛಳಿ ಬಿಸಿಲು ಅಂಜಿಕೆ ಹೇಗಿಲ್ಲವೋ? ಅದರಂತೆ ಅನಂತಾನಂತ ಜೀವರೊಳಿದ್ದು ಲಕುಮಿ ರಮಣ ವ್ಯಾಪಾರಗಳ ಮಾಡುವನು ನಿರ್ಲಿಪ್ತನು, ಸರೋವರದಲ್ಲಿ ಕಮಲಪತ್ರವಿದ್ದಂತೆಯೇ, ಅಂಬುಜೋದ್ಭವ=ಬ್ರಹ್ಮ ಮೊದ ಲಾದ ದೇವತೆಗಳಲ್ಲಿ ಪುಣ್ಯ ವಿಭಾಗ ಗೈವನು. ಕಲಿ ಶಂಬರಾದಿ ದೈತ್ಯ ಸಮೂ ಹಕೆ, ಪಾಪವಿಭಾಗ ಗೈಸುವನು. ಮಹಾ ಸಮುದ್ರೋದಕವನ್ನು ಅಣು= ಚಿಕ್ಕ ಕೊಡ, ಮಹಾಘಟ, ದೊಡ್ಡ ಕೊಡಗಳು ಎಷ್ಟು ಹಿಡಿಯುತ್ತವೋ ಅವು ಗಳ ಇಂಬು ಅರಿತು, ಪ್ರತಿಬಿಂಬರಾದ ಜೀವರಲ್ಲಿ ತಾನಿದ್ದು ಯೋಗ್ಯತೆಯಂತೆ ಫಲವೀವನು. ದಾಸರು ಏನು ಕರುಣಾಳುಗಳು ಎನ್ನ ಸ್ವಬುದ್ಧಿಯಿಂದ ಪೇಳ್ದು ದಲ್ಲ. ವಿಷ್ಣು ರಹಸ್ಯದಲ್ಲಿ ಇಂದ್ರದ್ಯುಮ್ನ ಮಹಾರಾಜನಿಗೆ ಭೃಗುಋಷಿಗಳು ಹೇಳಿದ್ದು ಜ್ಞಾನಿಗಳಾದವರು, ಮತ್ಸರವನ್ನು ಬಿಟ್ಟು ನಿತ್ಯ ಆದರದಿಂದ ಕೇಳಿರಿ. ಇದರಲ್ಲಿ ಏನಾದರೂ ಅನುಚಿತ ಉಕ್ತಿಗಳಿದ್ದರೂ, ಗಣನೆ ಮಾಡಬೇಡಿರಿ, ಎಂದು ವಿದ್ವಜ್ಜನಕೆ ವಿನಯದಿಂದ ವಿಜ್ಞಾಪನೆಯ ಮಾಡುವೆವೆಂದು ಸ್ತೋತ್ತುಮರನ್ನು ಕುರಿತು ಬಿನ್ನೈಸಿರುವರು.

ಹೇ ಮಹಾರಾಜಾಧಿರಾಜ, ಸ್ವತಂತ್ರ ಪುರುಷನೇ ನಿನಗೆ ಇತರ ಯಾವು ದರಿಂದ ಭಯವಪ್ಪಾ. ಸ್ವತಂತ್ರನಾದ ಕಾರಣ ಸಕಲ ಜಗತ್ತಿಗೆ ಈಶ=ವಿಶ್ವೇಶ, ಬ್ರಹ್ಮಜನಕನೇ ಸೋದರಮಾವನನ್ನು ಕೊಲ್ಲಿದವನಾದರೂ, ನೀನು ಸ್ವತಂತ್ರನು ನಿನಗೆ ಪಾಪವೆತ್ತಣದೋ? ಭೂತಭಾವನ=ಭೂತಾನಿ ಭಾವಯತಿ, ಉದ ಯತಿ, ವರ್ಧಯತಿ, ಪ್ರಾಪಯತೀತಿ ವಾ ಭೂತಭಾವನ, ಅನಂತ ಭಾಸ್ಕರರ ತೇಜವುಳ್ಳ ಹರಿಯೇ ಗೌತುಮರ ಪತ್ನಿಯಾದ ಅಹಲ್ಯಾದೇವಿ ಜಡ ತುಲ್ಯವಾದ ಶಿಲೆಯಾಗಿ ಬಿದ್ದವಳನ್ನು ರಾಮಚಂದ್ರನೇ ಪಾದಸ್ಪರುಶದಿಂದ ಶಾಪವಿಮೋ ಚನೆಮಾಡಿ ನಿಜರೂಪಯ್ಯೆದಿಸಿ ಪತಿಯಿಂದ ಕೂಡಿಸಿದ ಅನಾಥರಕ್ಷಕಾ, ಆಪ ದ್ಬಾಂಧವ, ಗುರುತಮ, "ಹರಿರೇವ ಪರೋ ಹರಿರೇವ ಗುರುಃ ಮಧ್ವವಲ್ಲಭ, ಮಧ್ವೇಶನಾದ ಸ್ವಾತಂತ್ರ್ಯಾದ್ಯಖಿಳ, ಸದ್ಗುಣಪೂರ್ಣನಾದ ಜಗನ್ನಾಥ ವಿಠ ಲನೇ ಎಂದು ನಂಬಿದ ಭಕ್ತರನ್ನು ಕರ್ಮದಿಂದ ಬಿಡುಗಡೆಮಾಡಿ ಪೊರೆವನು.

ಇಂತು ತನ್ನ ಸ್ವಾತಂತ್ರ್ಯ ಗುಣಗಳನ್ನು ಬ್ರಹ್ಮಾಂಡದಳಿಗೆ ತಕ್ಕವು ಪ್ರಕೃತಿ ದ್ವಾರಾ ಪ್ರವೇಶಗೈಸಿ ಅವರವರ ಯೋಗ್ಯತೆಯಂತೆ ಸಾಧನ ಮಾಡಿಸುವ.

ಒಂದು ೧೦ ಕ್ಯಾಂಡಲ್ ಪವರ್ ಬಲಬಿನಲ್ಲಿ ೨೦ ಕ್ಯಾಂಡಲ್ ಪವರ್ ಶಕ್ತಿ ಬಿಟ್ಟರೆ ಹೇಗೆ ಆ ಬಲಬ ಒಡೆದುಹೋಗುವದೋ ಅದರಂತೆ ಯಾರ ಯಾರ ಸ್ವಭಾವ ಯೋಗ್ಯತೆ ಗುಣ ಧರ್ಮಗಳನ್ನನುಸರಿಸಿ, ತಾನು ಜೀವರ ಚಿದಿಂದ್ರಿಯದಲ್ಲಿ ತನ್ನ ಸ್ವಕಳೆ ರೂಪ ಸ್ವರೂಪ ಶಕ್ತಿ ಇಟ್ಟು ಪ್ರಕಾಶಿಸುತ್ತಾ ಪ್ರೇರಿಸುತ್ತಾ, ಜಡವಾದ ಲಿಂಗ ಪ್ರಕೃತಿಯ ಮೊದಲುಮಾಡಿ, ಸ್ಥೂಲ ಶರೀರ ಪರಿಯಂತ, ಸಮ್ಮಿಶ್ರದಿಂದ ತಾನೇ ಕಾರ್ಯಮಾಡಿಸುವನು. ವಿದ್ಯುತ್ ಮೇನ್ ಸ್ವಿಚ್ಚಿನಂತೆ ಎಲ್ಲ ಪ್ರಮಾಣ ಅಳತೆ ತೂಕ ಶಕ್ತಿಯನ್ನು ತನ್ನ ವಶದಲ್ಲಿಟ್ಟು, ಚಿತ್ಪ್ರಕೃತಿಯ ದ್ವಾರಾ ಸ್ವ ಶಕ್ತಿಯನ್ನು ಪ್ರಮಾಣಾಂತರದಿಂದ ಅಳಿದು ಚನ್ನಾಗಿ ಪರೀಕ್ಷಿಸುತ್ತ, ಮುಂದೆ ಆಯಾ ಜೀವರ ಸ್ವಭಾವ ಯೋಗ್ಯತೆಯಂತೆ ಅಷ್ಟೇ ಶಕ್ತಿ ಪ್ರೇರಿಸಿ ವ್ಯಕ್ತಮಾಡುವ ಶ್ರೀಹರಿಯ ಸ್ವಗತ ಸ್ವತಂತ್ರ ಸ್ವರೂಪಾಂಶ ಕಳೆ ರೂಪ, ಗುಣಕ್ರಿಯೆ ಇದೆಂದು ತಿಳಿಯುವದೇ ದಾಸರಿಗೆ ಸಮ್ಮತವಾದುದು. ಈಶನು ಪ್ರೇರಿಸಿ ಬರೆಸಿದುದು.

(೧) ಲೋಕದಿ ರಾಜಾ, ತನ್ನ ವಿಹಾರಕ್ಕೆ ಯೋಗ್ಯವಾದ ಶಕ್ತಿ; ಮರ್ಯಾದೆ.

(೨) ತನ್ನರಾಜ್ಞಿಯರಿಗೆ ಯೋಗ್ಯವಾದ ಮರ್ಯಾದೆ, ಶಕ್ತಿ.

(೩) ತನ್ನ ಸಚಿವರಾದ ಮಂತ್ರಿ ಮಂಡಲಕ್ಕೆ ತಕ್ಕ ಮರ್ಯಾದಾ, ಶಕ್ತಿ.

(೪) ಇತರ ಪ್ರಜೆಗಳಿಗೆ ಮರ್ಯಾದೆ ನಿಯಮ ಕಟ್ಟಳೆಯಿತ್ತು ನಡಿಸುವನೋ ಅದರಂತೆ ಮಹಾರಾಜಾಧಿರಾಜನಾದ ಶ್ರೀಹರಿಯು, ತನ್ನ ನಾಲ್ಕು ವಿಧ ಸ್ವಾತಂತ್ರ್ಯವಿಟ್ಟು ಕಾಪಾಡುವನು.

॥ ಶ್ರೀಗುರು ಮಧ್ವೇಶಾರ್ಪಣಮಸ್ತು ॥

## ೧೬—ಸ್ವಗತ ಸ್ವಾತಂತ್ರ್ಯ ಸಂಧಿ

ಶ್ರೀ ರಾಘವೇಂದ್ರ ಗುರು ಶ್ರೀ ವರದೇಂದ್ರ ಗುರು

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿಂದನಾದರದಿ ಕೇಳುವುದು ॥ ಪಲ್ಲ ॥

**ಸಂಧಿಸೂಚನೆ :**—ಸ್ವಗತ ಸ್ವಾತಂತ್ರ್ಯ ಗುಣವ ಹರಿ ।
ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟದ ।
ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನಕ್ಷಿತಿಪನಿಗೆ ॥

**ಪರಮ ವಿಷ್ಣು ಸ್ವತಂತ್ರ ಮಾಯಾ ।**
**ತರುಣಿ ವಕ್ಷಸ್ಥಳ ನಿವಾಸಿನಿ ।**
**ಸರಸಿಜೋದ್ಭವ ಪ್ರಾಣಶರ್ವರು ಸಚಿವರೆನಿಸುವರು ॥**
**ಸರುವ ಕರ್ಮಗಳಲ್ಲಿ ತತ್ಕ್ರಿಯೆ ।**
**ರುರಗ ಭೂಷಣಹಂಕೃತಿತ್ರಯೆ ।**
**ಕರೆಸುವಮರೇಂದ್ರಾರ್ಕ ಮುಖರಿಂದ್ರಿಯಪರೆನಿಸುವರು ॥ ೧ ॥**

**ಅವತರಣಿಕಾ :**—ಹಿಂದಿನ ಸಂಧಿಗಳಲ್ಲಿ ಪ್ರಕೃತಿ, ತದ್ಗತ ನಾಡಿ, ವೇದ-ಜೀವ-ಕಾಲ ದೇಶ ನಿತ್ಯವಾದ ವಸ್ತುಗಳಲ್ಲಿ ಶ್ರೀಹರಿಯು ಬಿಂಬನಾಗಿರುವ ಬಗೆ ಸ್ವ ಇಚ್ಛೆಯಿಂದ ಪ್ರಕೃತಿದ್ವಾರಾ, ಜೀವರ ಗುಣ ಧರ್ಮವನು ಮೊನೆಮಾಡಿ ದೇಶ ಕಾಲದಿಂದ ಜೀವರನ್ನು ಬದ್ಧಮಾಡುವ ಬಗೆ, ಅಲ್ಲಲ್ಲಿಪ್ಪ ಹರಿಯ ನಾನಾ ಶಕ್ತಿ ವ್ಯಕ್ತತೆ ಧಾರಣ ಧ್ಯಾನದಿಂದ ತದ್ಗುಣ ಉಪಾಸನಾಕ್ರಮದಿಂದ ಸಾಧನ ದ್ವಾರಾ ಬಂಧಮೋಚಕನಾಗುವನೆಂದು ವಿಶದೀಕರಿಸಿದ್ದಾರೆ. ಆದರೆ, ಚಿದಾನಂದ ಜೀವನಿಗೆ ಇವೆಲ್ಲವೇಕೆಂದರೆ ಶ್ರೀಹರಿ ಇಚ್ಛೆಯಿಂದ ಅನಾದಿ ಅನಿತ್ಯವಾದ ತ್ರಿಗುಣ ಲಿಂಗದೇಹವು "ಅನಾದಿ ಕರ್ಮಣಾ ಬದ್ಧಾ ಜೀವಾ ಏವ ಹಿ ಸರ್ವಶಃ ॥ ಪ್ರಾರಬ್ಧಂ ಕರ್ಮಭುಂಜಾನಾಃ ಪುನಃ ಕರ್ಮಾಣಿ ಕುರ್ವತೇ ॥೧॥ ವಿಷ್ಣು ರಹಸ್ಯ ವಚನದಂತೆ "ಅನಾದಿ ಕರ್ಮವೆಂಬೋದೊಂದು ನೇಮನಮಾಡಿ" ಶ್ರೀ ವಿಜಯದಾಸರ ವಚನ. ಇಂತು ಅನಾದಿ ಕರ್ಮದಿಂದ ಜೀವರು ಬದ್ಧರು. ಈ ಕರ್ಮವು ಅನಾದಿಯಾದರೂ ಜಡವು. ಇದಕ್ಕೆ ಸ್ವತಂತ್ರದಿಂದ ಬಂಧಕ ಶಕ್ತಿ ಇಲ್ಲ. ಕರ್ಮಕ್ಕೂ ಹರಿಬಿಂಬ "ಕರ್ಮ ಕರ್ಮ ಕೃತ । ಕರ್ಮ ಕೃತಾಗಮ । ಕರ್ಮ ಫಲಪ್ರದ ಕರ್ಮಜಿತಾ ॥ ಕರ್ಮಬಂಧ ಮಹಕರ್ಮ ವಿಮೋಚಕ । ಕರ್ಮನಿಗ್ರಹ ವಿಕರ್ಮನಾಶ ತವ ॥ ೪ ॥ ದಾಸೋಹಂ" ಎಂದು ದಾಸರ ವಚನ.

ಇಂತಹ ಕರ್ಮಸ್ವರೂಪನೂ, ಕರ್ಮಶಬ್ದವಾಚ್ಯನೂ, ಕರ್ಮದಲ್ಲಿ ತಾನೇ ನಿಂತು ಕರ್ಮವನು ಮಾಡಿಸುವನು, ಅಲ್ಲದೇ ವೇದ ವಿಹಿತವಾದ ಸಕಲ

ಕರ್ಮಗಳಲ್ಲಿ ಪ್ರೇರಕನಾಗಿ ವಿಹಿತ ಕರ್ಮಗಳನ್ನು ಯೋಗ್ಯತೆ ಅನುಸಾರಿಯಾಗಿ ಮಾಡಿಸಿ ಭಕ್ತರಿಂದ ಅರ್ಪಿಸಿದ ಕರ್ಮವನ್ನು ಸ್ವೀಕರಿಸಿ, ತ್ರಿವಿಧರಿಗೆ ಕರ್ಮ ಫಲವನ್ನು ಕೊಡುವನು. ಆದರೂ ತಾನು ಕರ್ಮದಿಂದ ಜಿತನಾದವ, ಗೆದ್ದವ, ಕರ್ಮದಲ್ಲಿದ್ದು ಕರ್ಮ ಮಾಡಿಸಿದರೂ, ಸ್ವತಂತ್ರನಾದ ಹರಿಗೆ ಕರ್ಮಲೇಪ ವಿಲ್ಲ. ಜೀವರನ್ನು ತ್ರಿಗುಣ ಸಂಬಂಧ ಕರ್ಮದಿಂದ ಬಂಧನ ಮಾಡುವನು. ಹಿಂದಿನ ಸಂಧಿಗಳಲ್ಲಿ ವಿವರಿಸಿದಂತೆ ಸಂಚಿತಾಗಾಮಿ ಕರ್ಮನಾಶ ಪ್ರಾರಬ್ಧ ಅನುಭೋಕ್ತ್ರವ್ಯದಿಂದ ಮೋಚಕನೂ, ಕರ್ಮವು ಜಡವಾದರೂ ಅದಕ್ಕೆ ಸ್ವಾತಂತ್ರ್ಯವೇನಾದರೂ ಉಂಟೇ? ಕರ್ಮದಿಂದಲೇ ಮಹಾ ಅನರ್ಥ ಕಾರಣವಾದರೂ, ಆ ಕರ್ಮಗಳಿಗೆಲ್ಲ ನಿಗ್ರಹ = ತನ್ನ ವಶದಲ್ಲಿಟ್ಟು ಶಾಸನ ಮಾಡುವವನು, ವಿಕರ್ಮ = ಭಕ್ತರ ಪಾಪಕರ್ಮ ನಾಶಮಾಡುವವ ನೆಂದು, ಕರ್ಮಸ್ವರೂಪ ಕರ್ಮಬಂಧ ವಿಚಾರ ಹೇಳಿದ್ದಾರೆ. ಅಲ್ಪಜ್ಞ— ಜೀವನು ಪರಾಧೀನ, ಜೀವರಿಂದಾಗುವ ಕರ್ಮ ಹೇಗೆ? ಜೀವರು ಅಲ್ಪ ಶಕ್ತಿಗರು, ಅಸ್ವತಂತ್ರರು. ಜೀವರಲ್ಲಿ ತನ್ನ ಕಿಂಚಿತ್ ಸ್ವಾತಂತ್ರ್ಯ ಶಕ್ತಿ ಇತ್ತು ಆ ಶಕ್ತಿದ್ವಾರಾ ಕರ್ಮ ಉಣಗಲಿಸಿದನೆಂಬೋ ದಾಸರ ಶಾಸ್ತ್ರಾರ್ಥ. ನಿರ್ಣ ಯಾನುಸಾರ, ಶ್ರೀಹರಿಯು ತನ್ನ ಸ್ವರೂಪ ಅನಂತ ಶಕ್ತಿಯಲ್ಲಿ ಲೇಶಾಂಶ ವನು ಜನಕಿತ್ತನು ಎಂಬುದನ್ನು ಈ ಸ್ವಗತ ಸ್ವಾತಂತ್ರ್ಯ ದಾನ ಸಂಧಿಯಲ್ಲಿ ತನ್ನ ಸ್ವಾಂಶಕಲೆ ಎಂದರೆ ತನ್ನ ಗುಣ ರೂಪಗಳಿಂದ ಅಭಿನ್ನನಾದುದರಿಂದ ಜೀವರ ಸ್ವರೂಪದಲ್ಲಿ ಸೃಷ್ಟಿ ಪ್ರಾರಂಭದಲ್ಲಿ ತನ್ನ ಸ್ವರೂಪ ಸ್ವಾತಂತ್ರ್ಯ ಗುಣಗಳನ್ನು ಇತ್ತು ಸೃಷ್ಟ್ಯಾದಿ ವ್ಯಾಪಾರ ನಡಿಸುವನೆಂದು, ಇಂದ್ರದ್ಯುಮ್ನ ರಾಜನಿಗೆ ಭೃಗುಋಷಿಗಳು ೩೦ನೇ ಅಧ್ಯಾಯ ವಿಷ್ಣು ರಹಸ್ಯದಲ್ಲಿ ಹೇಳಿದುದನ್ನೇ ನಾವು ಹೇಳುತ್ತೇವೆಂದು ದಾಸರಾಯರು ಪ್ರತಿಜ್ಞಾಮಾಡಿ ಹೇಳಿದ್ದಾರೆ. ಪದ್ಯಾರ್ಥ ದಲ್ಲಿ ಅಷ್ಟರಮಟ್ಟಿಗೆ ವಿಚಾರಿಸಿದೆ. ಸ್ವಗತ ಸ್ವಾತಂತ್ರ್ಯ. ದತ್ತ ಸ್ವಾತಂತ್ರ್ಯ ಸರ್ವ ಸ್ವಾತಂತ್ರ್ಯವೇನು? ಜೀವನಲ್ಲಿರುವ ಕರ್ತೃತ್ವ ಶಕ್ತಿ ಎಂಥದು ಇತ್ಯಾದಿ ಶಾಸ್ತ್ರಾರ್ಥ ವಿಚಾರವನ್ನು ವಿಶದವಾದ ಪ್ರಮಾಣ ಸುಳಾದಿಗಳೊಂದಿಗೆ (೧೬-೧೭-೨೫ ಸಂಧಿ) ಸಾರ ದತ್ತ ಕರ್ತೃತ್ವ ವಿಚಾರದಲ್ಲಿ ಬೇರೆ ವಿವರಿಸುತ್ತದೆ, ಮನನ ಮಾಡುವುದು.

**ಪದ್ಯಾರ್ಥ :**—ಪರಮ=ಪರಳಾದ ರಮೆಗೆ ಉತ್ತಮ, ಅಥವಾ ಪರಮ= ಅನನ್ಯಾಧೀನ ಸಂವಿದಾತ್ಮಕಯಾ ಪರಮ ॥ ವಿಷ್ಣುಃ=ವ್ಯಾಪಕತ್ವಾದ್ವಿಷ್ಣುಃ ।

ವಿಶಿಷ್ಟ ಚೇಷ್ಟಾ ಬಲಶಾಲಿತ್ವಾದ್ವಿಷ್ಣುಃ (ವಿದ್ಯಾಧಿರಾಜೀಯ) ಸಕಲ ಜಗತ್ತಿನಲ್ಲಿ ವ್ಯಾಪಿಸಿದವನಾದುದರಿಂದ ವಿಷ್ಣುಃ, ಸಕಲ ಜಡ ಜೀವ ಜಗತ್ತಿಗೆ ಚೇಷ್ಟಾಪ್ರದನು ಬಲಶಾಲಿಯಾದುದರಿಂದ ವಿಷ್ಣುಃ ಶ್ರೀಹರಿಃ ಸರ್ವೋತ್ತಮ, ಸ್ವತಂತ್ರ=ಚತುರವಿಧ ನಾಶರಹಿತನೂ, ದೋಷದೂರನೂ, ಪರಾಪೇಕ್ಷ ಇಲ್ಲದೇ ಸರ್ವದಾ ತನ್ನ ಅಧೀನದಲ್ಲೇ ತಾನಿರುವನು. ಮಾಯಾ=ವಾಸುದೇವನ ಪತ್ನಿ ಮಾಯಾ ಚಿತ್ರಕೃತಿ ರಮಾದೇವಿ, ತರುಣಿ=ಸತಿ, ವಕ್ಷಸ್ಥಳ ನಿವಾಸಿನಿ=ಸದಾ ಪರಮಾತ್ಮ ಬಲಭಾಗ ಉರ ಹೃದಯದಲ್ಲಿ ಹರಿಯಾಜ್ಞೆಯಿಂದ ಇರುವಳು, ದೇಶ ಕಾಲದಿಂದ ಸಮಳು, ಸರಸಿಜೋದ್ಭವ=ಕಮಲದಲ್ಲಿ ಪುಟ್ಟಿದ ಚತುರ್ಮುಖ ಬ್ರಹ್ಮ, ಪ್ರಾಣ=ಸರ್ವಚೇಷ್ಟಾಪ್ರದನಾದ ವಾಯುದೇವರು, ಈರ್ವರು=ಇಬ್ಬರು, ಸಚಿವರೆನಿಸುವರು=ಮಂತ್ರಿಗಳೆಂದು ಕರೆಸುತ್ತಾರೆ. ಅಂದರೆ ಈ ಜಗತ್ತಿನ ಸೃಷ್ಟಿಸ್ಥಿತ್ಯಾದಿ ವ್ಯಾಪಾರಕ್ಕೆ ಪರಮ ಸ್ವತಂತ್ರನಾದ ವಿಷ್ಣುವೆ ರಾಜ, ಚಿತ್ರಕೃತಿ ಮಾಯಾ ರಾಜಪತ್ನಿ, ಬ್ರಹ್ಮ ವಾಯುಗಳು ರಾಜ್ಯಾಡಳಿತ ಸರ್ವ ಕರ್ಮಗಳನ್ನು ಸಾಗಿಸಲು ಮಂತ್ರಿಗಳೆಂದು ನಿಯಮ. ತತ್ಪ್ರಿಯ=ಆಗ ಭಗವಂತನಿಗೆ-ಬ್ರಹ್ಮ ವಾಯುಗಳಿಗೆ ಪ್ರಿಯರಾದ, ಉರಗಭೂಷಣ=ಹಾವೇ ಅಲಂಕಾರವಾಗಿವುಳ್ಳ, ಮಹರುದ್ರದೇವರು ಅಹಂಕೃತಿತ್ರಯ=ವೈಕಾರಿಕ ತೈಜಸ-ತಾಮಸ ಭೇದದಿಂದ, ಅಹಂಕಾರ ತತ್ವಾಭಿಮಾನಿ ಅಮರೇಂದ್ರಾರ್ಕಮುಖರು=ದೇವತೆಗಳಿಗೆ ಶ್ರೇಷ್ಠ ಇಂದ್ರ ಸೂರ್ಯಾದಿ ಮುಖ್ಯ ದೇವತೆಗಳೆಲ್ಲರೂ, ಇಂದ್ರಿಯಪರೆಂದು ಕರೆಸುವರು=ಇಂದ್ರಿಯಾಭಿಮಾನಿ ದೇವತೆಗಳೆಂದು ಕರೆಸುತ್ತಾರೆ.

**ಭಾವಸೂಚನ** :—ಈಗ್ಗೆ ದಾಸೋತ್ತಮರು, ಶ್ರೀಹರಿಯು ಕರ್ಮ ಮಾಡಲಿಕ್ಕೆ ಸ್ವಸ್ವಾತಂತ್ರ್ಯ ದಾನಕ್ರಮ, ಇತಿಹಾಸ ಮುಖದಿಂದ ಹೇಳಲಿಕ್ಕೆ ಸ್ವಗತ ಸ್ವಾತಂತ್ರ್ಯ ಸಂಧಿಗೆ ಸೂಚನ.

ಹರೀತಿ ॥ ಮಂಜೂಷಾಯಾಂ ಚ ॥ **ಭಾಮಿನಿ** ॥

ಸ್ವಗತ ಸ್ವಾತಂತ್ರ್ಯಯ ಸುಲಕ್ಷಣ ।
ವಗೆಯ ವಿವರಿಸಿ ಮರಳೆ ತೋರ್ಪರು ।
ಜಗದ ಜೀವಸ್ವತಂತ್ರ ಇತ್ತದು ಸದ್ದುಪಾಯದಲಿ ॥
ಹಗರಣೆನದಲೆ ಸ್ವೀಕರಿಸೆ ನಾ ।

ಲ್ಮೊಗನ ಅಯ್ಯನು ಮೆಚ್ಚಿ ಇವನಸು।
ತಗಿವಿಗಿದ್ದು ಮುದ್ದಾಡಿ ತಾಯಂತೊದಗಿ ಪಾಲಿಪನು ॥ ೧೬ ॥

ಸ್ವಗತೇತಿ। ಪೇಳಿದನು। ಭೃಗುಮುನಿಗಳು ಇಂದ್ರದ್ಯುಮ್ನ ಮಹಾರಾಜಗೆ ಶ್ರೀ ವಿಷ್ಣು ರಹಸ್ಯ ಪೂರ್ವಾರ್ಧದಲ್ಲಿ ತ್ರಿಂಶಾಧ್ಯಾಯದಲ್ಲಿ ಈ ಸ್ವಗತ ಸ್ವಾತಂತ್ರ್ಯದಾನ ಕ್ರಮ ಹೇಳಿದ ಪ್ರಯುಕ್ತ ಆದೇ ನಾವು ಹೇಳುತ್ತೇವೆಯಂತ ಅರ್ಥ :—

ಪರಮ ಇತಿ। ಸ್ವತಂತ್ರೇತಿ। ತದುಕ್ತಂ।
ಸ್ವತಂತ್ರಃ ಪರಮೋ ವಿಷ್ಣುರ್ಮಾಯಾ ತಸ್ಯಾಂಗ ಸಂಗಿನೀ ॥
ಬ್ರಹ್ಮಾ ಪ್ರಾಣಶ್ಚ ಸಚಿವೌ ಸರ್ವಕರ್ಮಸು ತತ್ಪ್ರಿಯೌ ॥ ೧ ॥
ತ್ರಿವಿಧಾಹಂಕೃತಿಃ ಸಾಕ್ಷಾದ್ರುದ್ರೋಽಪಿ ಸಚಿವಃ ಸ್ಮೃತಃ ॥
ಮನಸೋಧಿಪತಿಃ ಶಕ್ರೋಽರ್ಕಾದ್ಯಾ ಇಂದ್ರಿಯ ದೇವತಾಃ ॥ ೨ ॥
ಇತಿ

**(ವಿಷ್ಣು ರಹಸ್ಯದಂತೆಯೇ ದಾಸರ ಪದ್ಯವಿರುವುದು)**

**ಭಾವಸೂಚನೆಕಾರರು**—ವಿಷ್ಣು ರಹಸ್ಯ ೩೦ನೇ ಅಧ್ಯಾಯ ಎಲ್ಲ (೧೮) ಶ್ಲೋಕಗಳನ್ನು ಆಯಾ ಪದ್ಯಗಳಡಿಯಲ್ಲಿ ಪ್ರಮಾಣವಾಗಿ ಕೊಟ್ಟು ಮಹದುಪಕಾರ ಮಾಡಿದ್ದಾರೆ.

ನನು ಜೀವಾನಾಂ ಕರ್ತೃತ್ವೇ ಸರ್ವಂ ಉಪಪದ್ಯತೇ ॥ ತದೇವ ನಾಸ್ತಿ ॥ "ನಾನ್ಯೋಽತೋಽಸ್ತಿ ಕರ್ತಾ" ಇತಿ ಶ್ರುತೇಃ ॥ ಚೇತನಸ್ಯ ದಾರುಯೋಷಾ-ತೌಲ್ಯೋಕ್ತೇಃ ಚ ॥ "ಕರ್ತಾ ಹಿ ಸರ್ವಜಗತಃ" ಇತಿ ಶಿಷ್ಟೋಕ್ತೇಶ್ಚ ॥ ಅತಃ ಇದಂ ಉಪಾಸನಾದ್ಯಂ (ಉಪಾಸ್ತ್ಯಾದ್ಯಂ) ಕಥಂ ನ ದುರ್ನಿರೂಪಮ್ ? ಇತಿ ಚೇತ್ ನ ॥ ತಥಾ ಸತಿ. ಬಹುಪ್ರಮಾಣೋಪಪ್ಲವಃ ಸ್ಯಾತ್ ॥ ತಥಾ ಹಿ—"ಕರ್ತಾ ತಸ್ಮಾತ್ ಸ ಪೂರುಷಃ" ಇತಿ. ಕರ್ತೃತ್ವಂ ಯುಕ್ತ್ಯಾ ಸಮರ್ಥಿತಮ್– ಬ್ರಹ್ಮಕಾಂಡೇ ತೃತೀಯಾಂಶೇ ಗಾರುಡೇ ತ್ರಿಂಶಾಧ್ಯಾಯೇ "ಸತ್ಯಜಿತ್" ಶಬ್ದಪ್ರವೃತ್ತಿ ವರ್ಣನಪರೋಕ್ತಿ ಸಂಘೈಃ ॥ ವಾಯುನಾ ಸತ್ಯಜಿತಂ ಪ್ರತಿ. "ಜೀವಸ್ಯ ಅಪಿ ಕರ್ತೃತಾ ಹ್ಯಸ್ತಿ ॥ ದೇವೇತ್ಯಾದಿಭಿಃ ಬಹುಭಿಃ ಪದ್ಯೈಃ ಸಮರ್ಥಿತಾ ಜೀವಕರ್ತೃತಾ ॥ ನ ಚ ತೇಷಾಂ ಮೋಹಕತಾ ॥

ಸರ್ವಸ್ಯ ಶಬ್ದಜಾತಸ್ಯ" ಇತಿ. ನಿರ್ಣಯಃಕರ್ತಾಪನ್ನ-ಕರ್ತಾ, ವಿಹಾರ, ಉಪಾದಾನ, ಉಪಲಬ್ಧಿ, ವ್ಯಪದೇಶ, ಶಕ್ತಿ, ಸಮಾಧಿ, ಯಥಾ ಚ ಪರಾತ್ತು ಸೂತ್ರೈಃ ಅಪಿ ಶಾಸ್ತ್ರಾವೈಯರ್ಥ್ಯಾಯ ಸಮರ್ಥಿತಾ ಚ ಸಾ || ತರ್ಹಿ ಕಥಂ ಏಕವಾಕ್ಯತಾ ? "ಏತದೇವಮ್" ಇತಿ ತತ್ರೈವ ಕೃತತ್ವಾತ್ ||

ತದಭಿಪ್ರಾಯಶ್ಚ ರತ್ನಮಾಲಾಟೀಕಾಯಾಂ ಉದಾಹೃತಃ || ತಥಾ ಹಿ.

"ವಿಧ್ಯವಿಷಯೇಭ್ಯಃ ಈಶಮುಕ್ತಜಡೇಭ್ಯಃ ವ್ಯಾವೃತ್ತಸ್ಯ ಸ್ವಸಂಬಂಧಿ ತಯಾ ವಿಧಿಜ್ಞಾನ-ತಜ್ಜನ್ಯಾಯಾಃ ಫಲಸಾಧನೇಚ್ಛಾಯಾಃ ತದನುಕೂಲ ಪ್ರಯತ್ನಸ್ಯ ಚ ಜೀವೇ ಅನುಭವಸಿದ್ಧತ್ವಾತ್, ತಸ್ಯ ಚ ಜ್ಞಾನಾದೇಃ ಈಶ್ವ ರಾಧೀನತ್ವಸ್ಯ ಪ್ರತಿಸ್ಮೃತೀತಿಹಾಸ ಪುರಾಣಾದಿ ಸಿದ್ಧತ್ವಾತ್, ಈಶ್ವರಃ ಶಾಸ್ತ್ರಾವೈಯರ್ಥ್ಯಾಯ ವೈಷಮ್ಯಾದಿದೋಷ ಪರಿಹಾರಾಯ ಚ ಅನಾದಿ ಯೋಗ್ಯತಾ ಕರ್ಮಾಪೇಕ್ಷಯೈವ ಜೀವಂ ಪ್ರೇರ್ಯ, ವಿಧ್ಯಾದಿ ಪದ ಶಾಸ್ತ್ರೇಣ ವಿಹಿತಕರ್ತವ್ಯತಾದೌ ಕರ್ತವ್ಯತಾಜ್ಞಾನಂ ಉತ್ಪಾದ್ಯ, ಇಚ್ಛಾ ಮಪಿ ಜನಯಿತ್ವಾ, ಕ್ರಿಯಾನಿಷ್ಪತ್ತ್ಯನುಗುಣಂ ಪ್ರಯತ್ನಂ ಸಂಪಾದ್ಯ ಸ್ವಯಂ ಚ ತದಂತಃ (ಗತಃ) ಕುರ್ವನ್ ಕರ್ತೃತ್ವ ಶಕ್ತಿನಿಯಮನ ಪೂರ್ವಕಂ ದಾರು ಯೋಷಾಸ್ಥಾನೀಯೇನಾಪಿ ಜೀವೇನ ಕರ್ಮ ಕಾರಯತಿ. ಇತ್ಯೇವಂ ಈಶ್ವ ರಸ್ಯ ಸ್ವಾತಂತ್ರ್ಯೇಣ ಕರ್ತೃತ್ವಮ್ || **ಜೀವಸ್ಯ ಕ್ರಿಯಾ ಸ್ವಾತಂತ್ರ್ಯಾ ಭಾವೇಪಿ ಜ್ಞಾನೇಚ್ಛಾಪ್ರಯತ್ನ ಪೂರ್ವಕ ಕೃತಿಮತ್ವರೂಪಂ** ದಾರುಯೋಷಾದಿಷು ಅವಿದ್ಯಮಾನಂ ಅನುಭವಸಿದ್ಧಂ ಅಮುಖ್ಯಂ ಕರ್ತೃತ್ವಂ ಅಸ್ತಿ "ಇತ್ಯಂಗೀಕಾರ್ಯಮ್" ಇತಿ ||

ಪಂಚದಶಾಧ್ಯಾಯೇ ಶಾಂಡಿಲ್ಯತತ್ವೇ ಚ–"ಕರ್ಮ ಕುರ್ಯಾತ್ ಸದಾ ವಿದ್ವಾನ್ ಕರ್ತೃತಾಂ ಸ್ವಾಂ ವಿಹಾಯ ಚ | ಕರ್ತಾ ಕಾರಯಿತಾ ವಿಷ್ಣುಃ ಪ್ರೇರಕಃ ಸಾಕ್ಷಿಚೇತನಃ || ಕರ್ಮಣಾಂ ಫಲದಃ ಭೋಕ್ತಾ ಸ್ಥಿತಃ ಕರ್ಮಣ್ಯ ಕರ್ಮಣಿ" | ಏವಂ ಜ್ಞಾತ್ವಾ ಸದಾ ಕುರ್ವನ್ ನ ಸ ಲಿಪ್ಯತಿ ಕರ್ಮಣಾ || ಯಥಾಽದಾಯ ಶಿಶುಂ ಮಾತಾ ಪಾಯಯಿತ್ವಾ ಸ್ವಯಂ ಸ್ತನಮ್ (ನೌ) || ಪರಿಪಾತಿ ತಥಾ ವಿಷ್ಣುಃ ದಾತಾ ಕಾರಯಿತಾ ಸ್ವಯಮ್ || ಕರ್ತಾಹಮಿತಿ ಮತ್ವಾಽಯಂ ಜೀವಃ ಸಂಸರತಿ ಧ್ರುವಮ್ | ಕರ್ತುಮಿಚ್ಛುಃ ಸ್ವಯಂ ವಿಷ್ಣುಃ ಕರ್ತಾ ಕಾರಯಿತಾ ಸದಾ || ಸ್ವಯಂ ಗಂತುಮಶಕ್ತಸ್ಯ ಪಾತು

ವಿಂಚ್ಛೋಃ ಸ್ತನಂ ಶಿಶೋಃ || ಕರ್ತೃತ್ವಂ ಮಾತುರೇವ ಸ್ಯಾತ್ ತದಧೀನಂ ತದಾಽಶ್ರಯಮ್ || ಪಿಪೀಲಿಕಾಂತಾಃ" ಇತ್ಯಾದಿನಾ ಸ್ವಾತಂತ್ರ್ಯಂ ಪ್ರತಿ ಜ್ಞಾಯ,-ಪ್ರತಿ ಬಿಂಬಕ್ರಿಯಾಯಾಃ ಬಿಂಬಕ್ರಿಯಾನು ಸ್ಯೂತತಾ "ಯದಾ ಸ್ನಾತಿ. ತದಾ ಸ್ನಾತಿ." "ಯದಾ ವಕ್ತಿ ತದೈವ ಸಃ "ಯದಾ ಜಿಘ್ರತಿ ದೇವೇಶಃ" "ಯದಾ ಗಚ್ಛತಿ-ವಾ ದೇವಃ" "ಶೃಣೋತಿ ಚ ಯದಾ ಬ್ರಹ್ಮ", "ಯದೈವ ಸ್ಪೃಶತೇ," "ಕಿಮತ್ರ ಬಹುನೋಕ್ತೇನ ನಾಕೃತಂ ಕ್ರಿಯತೇ ಜನೈಃ || ಏವಂ ಕರ್ತರಿ ದೇವೇಶೇ ಕರ್ತಾಹಂ ಇತಿ ಮನ್ಯತೇ || ತೇನ ಸಂಸರತೇ ಜೀವಃ ದುಃಖೀ ಜನ್ಮಸು ಜನ್ಮಸು || ಏವಂ ವಿದ್ವಾನ್ ವಿನೀತಃ ಸನ್ ನಿಸ್ಪೃಹಶ್ಚ ಫಲೇಷು ಚ|| ಅನುಧ್ಯಾಯನ್ ಸದಾ ವಿಷ್ಣೋಃ ಸ್ವಾತಂತ್ರ್ಯಂ ಸರ್ವಕರ್ತೃ ತಾಮ್ || ಫಲದತ್ವಂ ತದೀಶತ್ವಂ ಕುರ್ಯಾತ್ ಕರ್ಮವಿಚಕ್ಷಣಃ" ||ಇತಿ||

ನನು "ಜೀವಸ್ಯ ಕರ್ತೃತ್ವಂ ನ" ಇತಿ. ಪೂರ್ವಪಕ್ಷೇ ಪರಸ್ಯೈವ ಮುಖ್ಯ ಕರ್ತೃತ್ವಂ ಸ್ವೀಕೃತ್ಯ ಅಧೀನ ಕರ್ತೃತ್ವಾಭ್ಯುಪಗಮೇ, ವೃಶ್ಚಿಕಭಿಯಾ ಪಲಾಯಮಾನಸ್ಯ ಆಶೀವಿಷಮುಖೇ ನಿಪಾತಃ || ಕರ್ತೃತ್ವಂ-ಕೃತಿಸ್ವಾತಂ ತ್ರ್ಯಮ್ || "ಸ್ವತಂತ್ರಃ ಕರ್ತಾ" ಇತಿ. ಪಾಣಿನಿಸ್ಮರಣಾತ್ || "ತತ್ರತ್ಯಕರ್ಮ ಕೃತೌ ಶಕ್ತಿಃ ಸ್ವಾತಂತ್ರ್ಯಮ್" ಇತ್ಯುಕ್ತೇಶ್ಚ || ಏತಚ್ಚ ಜೀವೇಭ್ಯಃ ದತ್ತಂ ಅಪಹೃತಂ ಚ ಕದಾಚಿತ್ ಶ್ರೂಯತೇ "ಮಯ್ಯೈವ ದತ್ತಂ ಸ್ವಾತಂತ್ರ್ಯಮ್" ಇತಿ, ಸ್ವಾತಂತ್ರ್ಯೇಽಪಹೃತೇ ಪಶ್ಚಾತ್" ಇತಿ || **ಸ್ವಾತಂತ್ರ್ಯಸ್ಯ ಹರಿ ಗುಣತಾ ಚ "ಸ್ವಾತಂತ್ರ್ಯಂ ಯೋ ಮಮ ಗುಣಃ" ಇತಿ ||** ಸ್ವಾತಂತ್ರ್ಯೈಕ್ಯಾತ್ಯ ಅವಸೀಯತೇ || ನ ಹಿ ತಸ್ಯ ದಾನಂ ಯುಜ್ಯತೇ || "ಸ್ವಃ ಸ್ವಂ ದದಾತಿ." ಇತ್ಯದರ್ಶನಾತ್ || ಮಮ ಗುಣಃ ಮದೀಯಃ ಭಿನ್ನಃ ಇತಿ ಕೇಚಿತ್ || ತನ್ಮಂದಮ್ || ತೃತೀಯಪದ್ಯೇ ಸ್ವಭಾವಪದವಿಶೇಷಿತ ತ್ವೋಕ್ತೇಃ || ಸ್ವಸ್ಯ ಭಾವಃ ಧರ್ಮಃ ಸ್ವಾಖ್ಯಃ ಇತಿ. ಚ. ಅಭೇದವ್ಯುತ್ಪತ್ತೇಃ ಸೂಚನಾತ್ || ಅತಃ ಕಥಮೇತತ್ ? ಇತಿ ಚೇತ್.

## ಅತ್ರ ಬ್ರೂಮಃ

ಅತ್ರ ಯಥಾ ಪ್ರತೀಯತೇ ದಾನಮ್ ತತ್ರ ತತ್ರ ರಮಣಂ ಚ ಇತಿ || ತದುಭಯಾನ್ಯಥಾನುಪಪತ್ತ್ಯಾ ಸ್ವಾತಂತ್ರ್ಯದಾನಂ ನಾಮ ವ್ಯಕ್ತ ಕರ್ಮಕೃತಿ

ಶಕ್ತೀನಾಂ ರೂಪಾಣಾಮೇವ ದಾನಮ್ ॥ ನಾನ್ಯಥಾ ॥ "ದತ್ತೋ ಮಯಾಹ ಮಿತಿ. ಯದ್ ಭಗವಾನ್" ಇತ್ಯತ್ರೈವ ಉಪಪನ್ನಂ ಚ ॥ ದಾನಂ ದೀಯ ಮಾನಂ ಚ ವ್ಯಕ್ತಿವಿಶೇಷೇಷು ಸಂಖ್ಯಾವದ್ಭಿಃ ಶ್ರೂಯತೇ ವಿಷ್ಣುರಹಸ್ಯೇ ಭೃಗ್ವಿಂದ್ರದ್ಯುಮ್ನ ಸಂವಾದೇ ಸಮಾಸವ್ಯಾಸತಯಾ ಸಂಕ್ಷೇಪ ಶಾಸ್ತ್ರತಃ ವಿದಿತ ಸಂಕ್ಷೇಪನ್ಯಾಯೇನ ಚ । ಅತಃ ಕೃಷ್ಣದ್ವೈಪಾಯನಾನುಯಾಯಿನೋಽಪಿ ಭಿನ್ನನಾಮಭ್ಯಾಂ (ಭ್ಯಃ) ದಾನಮೇವ ವಿವೃಣ್ವಾನಾಃ ತಾವತ್ ಸ್ವಗತ-ಸ್ವಾತಂತ್ರ್ಯಸಂಧಿಂ ಉಪಕ್ರಮಂತೇ—"ಸ್ವಗತ" ಇತಿ ॥

"ಋಚಾಂ ಪದಾನ್ಯುಪಾದಾಯ" ಇತ್ಯುಕ್ತ್ವಾ "ಕುರ್ಮಃ ಸಂವಾದಿತಾ ಮಾತ್ರಮ್" ಇತ್ಯುಕ್ತಂ ಪೂರ್ವಾಚಾರ್ಯ ಸಂಪ್ರದಾಯಮಾಶ್ರಿತ್ಯ, ರಾಜರ್ಷಿ ಸಂವಾದಸ್ಯ ಅತ್ರತ್ಯಪದ್ಯೈಃ ಸಂವಾದಾತ್ ಹಿತೇಚ್ಛುಭಿಃ ಅಪ್ರತ್ಯಯಃ ನ ಕಾರ್ಯಃ ಅತ್ರ ಜಾತು ಚಿತ್ ॥ ತಸ್ಮಾತ್ ತದಪ್ಯುಕ್ತಮ್—"ಪೇಳಿದನು" ಇತಿ ॥

ಏಕವಿಂಶಾಧ್ಯಾಯೇ ವಿಷ್ಣುರಹಸ್ಯೇ 'ಭೃಗುಃ ಉವಾಚ-"ಸ್ವತಂತ್ರಃ "ಪರಮಃ" ಎಂದು ಪಾಠಾಂತರ. ಭಗವಾನ್ ವಿಷ್ಣುಃ ಮಾಯಾ ತಸ್ಯಾಂಗ ಸಂಗಿನೀ ॥ ಬಹಾ ಪ್ರಾಣಶ್ಚ ಸಚಿವೌಸರ್ವಕರ್ಮಸು ತತ್ಪ್ರಿಯೌ ॥ ತ್ರಿವಿಧಾಹಂಕೃತಿಃ ಸಾಕ್ಷಾತ್ ರುದ್ರೋಽಪಿ ಸಚಿವಃ ಸ್ಮೃತಃ ॥ ಮನಸೋಽಧಿಪತಿಃ ಶಕ್ರೋಽರ್ಕಾದ್ಯಾ (ದ್ಯೇ೦) ಇಂದ್ರಿಯದೇವತಾಃ ॥೩॥ ಇತಿ ಪದ್ಯ ದ್ವಯಾರ್ಥಂ ಏಕಪದಾರೂಢಂ ಕರೋತಿ "ಪರಮ" ಇತಿ ॥ ಪ್ರಿಯಪದಂ ಪೂರ್ವಾನ್ವಯಿ ॥ "ಅರಸು"—ಮನಸಿಗೆ ಇತಿ. ಚ ಅನ್ವೇತಿ ॥೧॥

## ಕನ್ನಡಾರ್ಥ

ಜೀವರಿಗೆ ಕರ್ತೃತ್ವವು-ಸ್ವತಃ ಕಾರ್ಯಮಾಡುವ ಸಾಮರ್ಥ್ಯವು ಇದ್ದರೆ ಹಿಂದೆ ಹೇಳಿದುದು ಎಲ್ಲವೂ ಸರಿಹೋಗುತ್ತದೆ. ಆದರೆ ಆಕರ್ತೃತ್ವವೇ ಜೀವರಿಗೆ ಇರುವದಿಲ್ಲ. "ಪರಮಾತ್ಮನೇ ಸರ್ವಕರ್ತಾ, ಅವನನ್ನು ಬಿಟ್ಟು ಬೇರೆ ಯಾರೂ ಕರ್ತರಲ್ಲ." ಎಂದು ಶ್ರುತಿಯು ಸಾರುತ್ತಿದೆ. ಜೀವನನ್ನು ಕಟ್ಟಿಗೆಯ ಗೊಂಬೆ "ಕಿಳ್ಳಿಕ್ಯಾತರಗೊಂಬೆ" ಎಂಬುದಾಗಿ ದಾರುಮಯ (ಕಾಷ್ಠದ) ಬೊಂಬೆಯ ಸಮಾನವೆಂಬುದಾಗಿ ವರ್ಣಿಸಲಾಗಿರುತ್ತದೆ. "ಸಮಸ್ತ ಜಗ

ತ್ರಿಗೆ ಕರ್ತನು ಪರಮಾತ್ಮನೊಬ್ಬನೇ ?" ಎಂದು ಶಿಷ್ಟರೂ ಹೇಳುವರು. ಆದುದರಿಂದ ಈ ಉಪಾಸನ ಮುಂತಾದ ವಿಷಯಗಳನ್ನೂ, ಅವುಗಳ ವಿಧಾನಗಳನ್ನೂ ನಿರೂಪಿಸುವದು ಅನಾವಶ್ಯಕ. ಬೇಡವೇಬೇಡ" ಹಾಗೂ ಅನುಚಿತವಾಗುವದು" ಎಂದು ಸಂಶಯವು ಬರಬಹುದು. ಆದರೆ ಹೀಗೆ ಶಂಕಿಸುವದು ಸರಿಯಲ್ಲ. ಯಾಕಂದರೆ, ಜೀವನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ ಬಹಳ ಪ್ರಮಾಣಗಳಿಂದ ವಿರೋಧವು ಬರುತ್ತದೆ.

ಗರುಡಪುರಾಣ ಬ್ರಹ್ಮಕಾಂಡದಲ್ಲಿ-೩೦ನೆಯ ಅಧ್ಯಾಯದಲ್ಲಿ ಸತ್ಯಜಿತ ರಾಜನಿಗೆ ಉಪದೇಶಮಾಡುವ ಸಂದರ್ಭದಲ್ಲಿ ಜೀವನಿಗೂ ಕರ್ತೃತ್ವವಿರುವದೆಂಬುದಾಗಿ ಬಹಳ ಪದ್ಯಗಳಿಂದ ವಾಯು ದೇವರು ನಿರೂಪಿಸಿರುತ್ತಾರೆ. ಆದುದರಿಂದ **ಜೀವಕರ್ತೃತ್ವವು ಸಿದ್ಧವಾಗಿರುವ ವಿಷಯವಾಗಿದೆ.** ಜೀವಕರ್ತೃತ್ವ ಬೋಧಕವಾದ ವಾಯುವಿನ ವಚನಗಳು ಮೋಹಕ-"ತಾಮಸರನ್ನು ವಂಚಿಸಲು ಹೊರಟಿರುತ್ತವೆ, ಹೊರತು ಸಾತ್ವಿಕರ ನಿಜವಾದ ಜ್ಞಾನಕ್ಕಾಗಿ ಹೊರಟಿಲ್ಲ" ವೆಂದು ಹೇಳಲು ಬರುವಂತಿಲ್ಲ. ಯಾಕಂದರೆ, "ಎಲ್ಲ ವಾಕ್ಯಗಳಿಂದ ಆಗುವ ನಿರ್ಣಯವು ಬ್ರಹ್ಮಸೂತ್ರದ ಆಧಾರದಿಂದಲೇ ಆಗುತ್ತದೆ." ಎಂದು ಹೇಳಿದಂತೆ ನಿರ್ಣಾಯಕಗಳಾಗಿರುವ (ನಿರ್ಣಯವನ್ನು ಹುಟ್ಟಿಸಿಕೊಡುವ)—"ಕರ್ತಾ ಶಾಸ್ತ್ರಾರ್ಥವತ್ವಾತ್, ವಿಹಾರೋಪದೇಶಾತ್ ಉಪಾದಾನಾತ್—ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶ ವಿಪರ್ಯಯಃ, ಶಕ್ತಿ ವಿಪರ್ಯಯಾತ್,...............ಯಥಾ ಚ ತಕ್ಷೋಭಯಥಾ, ಪರಾತ್ತು ತಚ್ಛ್ರುತೇಃ" ॥ ಈ ಸೂತ್ರಗಳಿಂದ ಜೀವಕರ್ತೃತ್ವವು ಸಮರ್ಥಿಸಲ್ಪಟ್ಟಿರುತ್ತದೆ. "ವಿಧಿನಿಷೇಧ ರೂಪಗಳಾದ ಶಾಸ್ತ್ರಗಳಿಗೆ-ಪ್ರಯೋಜನವಿದೆ ; ವ್ಯರ್ಥಗಳಲ್ಲ" ಎಂಬ ವಿಷಯವು ಜೀವರಿಗೆ ಕರ್ತೃತ್ವವನ್ನು (ಪರಾಧೀನ) ಒಪ್ಪಿದರೇ ಸಂಗತವಾಗುತ್ತದೆ.

ಹಾಗಾದರೆ "ಇತರವ್ಯಪದೇಶಾತ್ ಹಿತಾಕರಣಾದಿ ದೋಷಪ್ರಸಕ್ತೇಃ" ಎಂದು ಮುಂತಾಗಿರುವ ಸೂತ್ರಗಳಿಂದ "ಜೀವಕರ್ತೃತ್ವವು ನಿರಾಕರಿಸಲ್ಪಟ್ಟಿರುತ್ತದೆ. ಆದುದರಿಂದ ಇವೆರಡೂ, ಸೂತ್ರಗಳಿಗೆ ವಿರೋಧಬರುವದು" ಎಂದು ಆಕ್ಷೇಪಿಸಬಹುದು, ಆದರೆ, ಇವೆಲ್ಲ ಸೂತ್ರಗಳಿಗೆ ವಿರೋಧವಿರುವದಿಲ್ಲ, ಅವುಗಳಿಗೆ ಏಕವಾಕ್ಯತೆಯು ಇರುವದೆಂಬುದು ಭಾಷ್ಯ ಟೀಕಾಗಳಲ್ಲಿ ಸ್ಪಷ್ಟವಾಗಿ ಆಯಾಸೂತ್ರಗಳ ವ್ಯಾಖ್ಯಾನ ಸಂದರ್ಭಗಳಲ್ಲಿ ವಿವರಿಸಲ್ಪಟ್ಟಿರುತ್ತದೆ.

ಸತ್ತತ್ವರತ್ನಮಾಲೆಯಲ್ಲಿ ಈರೀತಿಯಾಗಿ ಈ ಸೂತ್ರಗಳ ಅಭಿಪ್ರಾಯವು ವರ್ಣಿತವಾಗಿರುತ್ತದೆ.

"ಜಡ-ಮುಕ್ತ-ಪರಮಾತ್ಮ (ಈಶ)ರುಗಳು ವಿಧಿನಿಷೇಧಗಳಿಗೆ ಒಳಪಡುವದಿಲ್ಲ. ಇವರನ್ನುಳಿದು ಜೀವರಿಗೆ ಮಾತ್ರವೇ ವಿಧಿನಿಷೇಧಗಳ ಸಂಬಂಧವಿರುತ್ತದೆ. ಈ ಜೀವರಿಗೆ ಇದು ನಮಗೆ ವಿಹಿತವಾದುದು ; ಇದು ನಮ್ಮ ಕರ್ತವ್ಯ" ಎಂಬ ಜ್ಞಾನವೂ. ಅದರಿಂದ ಆಕರ್ಮದ ಫಲ ಹಾಗೂ ಸಾಧನಗಳ ಬಗ್ಗೆ ಇಚ್ಛೆಗಳೂ, ಫಲೇಚ್ಛೆಗಳನ್ನು ಪೂರೈಸುವ ಪ್ರಯತ್ನ ಮುಂತಾದವುಗಳೂ ಇರುವವು" ಎಂಬುದು ಸರ್ವರ ಅನುಭವಗಳಿಗೆ ತೋರಿಯೇ ತೋರುತ್ತದೆ. **ಹೀಗೆ ಜೀವರಲ್ಲಿ ಅವರವರ ಅನುಭವದಲ್ಲಿ ತೋರಿಬರುವ ಕರ್ತವ್ಯ ಜ್ಞಾನ, ಫಲಸಾಧನ, ಇಚ್ಛಾ ಪ್ರಯತ್ನ ಮುಂತಾದವುಗಳೆಲ್ಲವೂ, ಪರಮಾತ್ಮನ ಅಧೀನವಾಗಿರುತ್ತವೆ" ಎಂಬುದೂ ಶಾಸ್ತ್ರಗಳಿಂದ ಸಿದ್ಧವಾಗಿರುತ್ತದೆ.** ಆದುದರಿಂದ ಈಶ್ವರನು (ಹರಿಯು) ಶಾಸ್ತ್ರಗಳಿಗೆ ಪ್ರಯೋಜನವನ್ನು ತಂದುಕೊಡಲು, (ಶಾಸ್ತ್ರಗಳು ವ್ಯರ್ಥಗಳಾಗಬಾರದೆಂಬ ಇಚ್ಛೆಯಿಂದ) ವೈಷಮ್ಯ ಮುಂತಾದ ದೋಷಗಳನ್ನು ತನ್ನಲ್ಲಿ ಇರುವದಿಲ್ಲವೆಂದು ತಿಳಿಸುವದಕ್ಕೋಸ್ಕರವಾಗಿಯೂ, ಅವರವರ ಅನಾದಿಕಾಲದಿಂದ ಇರುವ ಯೋಗ್ಯತೆ, ಕರ್ಮಗಳನ್ನು ಕೇವಲ ನಿಮಿತ್ತಮಾಡಿ, ಅದರ ಅನುಸಾರವಾಗಿಯೇ ಜೀವರನ್ನು ಪ್ರೇರಿಸುತ್ತಾನೆ. ಹೀಗೆ ಪ್ರೇರಿಸಿ ವಿಧಿಮುಂತಾದವುಗಳನ್ನು ತಿಳಿಸುವ ಶಾಸ್ತ್ರಗಳಿಂದ ವಿಹಿತ ಕರ್ತವ್ಯ ಕರ್ಮಗಳ ಬಗ್ಗೆ "ಇವು ನಮ್ಮ ಕರ್ತವ್ಯ ; ಅವಶ್ಯಮಾಡಬೇಕಾದವುಗಳು !" ಎಂಬ ಜ್ಞಾನವನ್ನೂ ಹುಟ್ಟಿಸುತ್ತಾನೆ. ಅದರಂತೆ ಅದಕ್ಕನುಗುಣವಾದ ಇಚ್ಛೆಯನ್ನೂ ಹುಟ್ಟಿಸಿ ; ಕಾರ್ಯಗಳಾಗುವಂತೆ ಪ್ರಯತ್ನಗಳನ್ನೂ ಒದಗಿಸಿಕೊಡುತ್ತಾನೆ. ಅದರಂತೆ ತಾನೂ (ಈಶ್ವರನೂ) ಜೀವರಲ್ಲಿ ನಿಂತು ಆಯಾ ವ್ಯಾಪಾರಗಳನ್ನು ಮಾಡುತ್ತ, ಜೀವರಲ್ಲಿ ಕರ್ತೃತ್ವ ಶಕ್ತಿಯನ್ನು ನಿಯಮಿಸಿ, ಕಟ್ಟಿಗೆಯ ಬೊಂಬೆಯಂತಿರುತ್ತಿದ್ದರೂ ಆ ಜೀವರಿಂದ ಕರ್ಮಗಳನ್ನು ಮಾಡಿಸುತ್ತಾನೆ. ಹೀಗೆ ಈಶ್ವರನಿಗೆ ಸ್ವತಂತ್ರವಾದ ಕರ್ತೃತ್ವವಿರುತ್ತದೆ. ಜೀವನಿಗೆ ಮಾತ್ರ ಕ್ರಿಯಾ ಸ್ವಾತಂತ್ರ್ಯಗಳಿರದಿದ್ದರೂ ಸಹ ಪರಾಧೀನವಾದ ಜ್ಞಾನ-ಇಚ್ಛಾ-ಪ್ರಯತ್ನಗಳಿಂದ ಕೃತಿಗಳನ್ನು **ಮಾಡುವದೆಂಬ ಬಿಂಬನೆ ಕರ್ತಾ ಕಾರಯಿತಾನೆಂದು ಒಪ್ಪಬೇಕು ;**

ತಾನೇ ಸ್ವತಂತ್ರಕರ್ತನೆಂಬ ಭಾವನೆಯನ್ನು ಬಿಟ್ಟು ಸತ್ಕರ್ಮಗಳನ್ನು ಜ್ಞಾನಿಯು ಸದಾ ಆಚರಿಸಬೇಕು. ಸ್ವತಂತ್ರವಾಗಿ ಮಾಡುವವನೂ ಮಾಡಿಸುವವನೂ, ಸಾಕ್ಷಿಯನಿಸಿಕೊಂಡಿರುವ ಶ್ರೀ ಹರಿಯೊಬ್ಬನೇ ! ಅವನೇ ಪ್ರೇರಕನು. ಆತನೇ ಸತ್ಕರ್ಮಗಳನ್ನು ಮಾಡಿ ಮಾಡಿಸಿ, ಅಲ್ಲಿ ನಿಂತು ಕರ್ಮದ ಸಾರಭೋಕ್ತೃವು. ಫಲದಾಯಕನೂ ಆಗಿರುತ್ತಾನೆ. ಹೀಗೆ ತಿಳಿದು ಕರ್ಮಗಳನ್ನು ಮಾಡುವವನು ಕರ್ಮಗಳಿಂದ ಲಿಪ್ತನಾಗುವದಿಲ್ಲ. ತಾಯಿಯು ಶಿಶುವನ್ನು ಎತ್ತಿಕೊಂಡು, ತಾನೇ ಹಾಲು ಕುಡಿಯಿಸಿ ಸಂರಕ್ಷಿಸುವಂತೆ, ವಿಷ್ಣುವು ಕರ್ಮಗಳನ್ನು ಮಾಡಿಸಿ, ಕರ್ಮಫಲಗಳನ್ನು ಕೊಟ್ಟು, ಜೀವರನ್ನು ಸಂರಕ್ಷಿಸುತ್ತಾನೆ. "ನಾನೇ ಸ್ವತಂತ್ರ ಕರ್ತನು" ಎಂಬ ಅಭಿಮಾನದಿಂದ ಜೀವನು ಸಂಸಾರದಲ್ಲಿ ಶಿಲುಕುತ್ತಾನೆ. ಪರಮಾತ್ಮನು ತನ್ನ ಸಂಕಲ್ಪದಿಂದ ಜೀವರಿಗೆ ಕರ್ಮಗಳನ್ನು ತಾನುಮಾಡಿ ಮಾಡಿಸುತ್ತಾನೆ.

ಸ್ವತಃ ನಡೆಯಲು (ಗತಿಯಲ್ಲಿ) ಅಶಕ್ತನಾದ, ಮೊಲೆಯನ್ನು ಕುಡಿಯ ಬಯಸುವ ಶಿಶುವಿಗಿರುವ ಸ್ತನಪಾನ ಕರ್ತೃತ್ವವು ತಾಯಿಯ ಅಧೀನವಾಗಿ ಇರುವಂತೆ ಪರಮಾತ್ಮನ ಅಧೀನವಾದುದೆ ಎಲ್ಲ ಜೀವರ ಕರ್ಮಕರ್ತೃತ್ವವು;" ಎಂಬುದಾಗಿ, **ಸ್ವಾತಂತ್ರ್ಯವು ಶ್ರೀ ವಿಷ್ಣುವಿನದೇ ಗುಣವೆಂದು ಸಮರ್ಥಿಸಿರುತ್ತಾರೆ.**

ಅದರಂತೆ ಬಾಲರೂಪಿ ಹರಿಯು ಸ್ನಾನವನ್ನು ಮಾಡಿದಾಗ ಜೀವನು (ಪ್ರತಿಬಿಂಬ) ಸ್ನಾನಮಾಡುತ್ತಾನೆ. ಹರಿಯ ಮೂಸುವದು, ಕೇಳುವದು, ನೋಡುವದು, ಅಡ್ಡಾಡುವದು, ಮುಂತಾದವುಗಳನ್ನು ಅನುಸರಿಸಿ ಜೀವನ ಕ್ರಿಯೆಗಳಾಗುವವು. ಹೆಚ್ಚಿಗೆ ಹೇಳುವದೇನು ? ಬಿಂಬರೂಪಿಯು ಮಾಡದಿದ್ದುದನ್ನು ಜನರು ಮಾಡಲಾರರು. ಹೀಗೆ ದೇವೇಶನಾದ ಶ್ರೀ ಹರಿಯು ಸ್ವತಂತ್ರಕರ್ತೃವಿರುವಾಗ **"ನಾನು ಕರ್ತ" ಎಂಬ ದುರಹಂಕಾರದಿಂದ ಜೀವನು ಸಂಸಾರದಲ್ಲಿ ಸಿಲುಕಿ, ಜನ್ಮಜನ್ಮಗಳಲ್ಲಿ ದುಃಖಪಡುತ್ತಾನೆ.** ಆದರೆ ಜ್ಞಾನಿಯು ಮಾತ್ರ ಹೀಗೆ ತಿಳಿದು, ಫಲಗಳಲ್ಲಿ ನಿಸ್ಪೃಹನಾಗಿ, **ಸ್ವಾತಂತ್ರ್ಯವನ್ನೂ, ಮುಖ್ಯ ಕರ್ತೃತ್ವವನ್ನೂ, ಸರ್ವ ಕರ್ಮ ಫಲದಾತೃತ್ವವನ್ನೂ ಶ್ರೀಹರಿಯಲ್ಲಿಯೇ ಧ್ಯಾನಿಸುತ್ತ, ಕರ್ಮಗಳನ್ನಾಚರಿಸುತ್ತಾನೆ."** ಎಂದು ಹೇಳಿ, ಜೀವರ (ಪ್ರತಿಬಿಂಬರ) ಕ್ರಿಯೆಗಳೆಲ್ಲವು ಪರ

ಮಾತ್ಮನ ಕ್ರಿಯೆಗಳು ವ್ಯಾಪಿಸಿ ಓತ ಪ್ರೋತವಾಗಿರುತ್ತವೆ" ಎಂಬುದಾಗಿ, ಶಾಂಡಿಲ್ಯತತ್ವದಲ್ಲಿ ೧೫ ನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿರುತ್ತದೆ.

ಜೀವರಿಗೆ ಕರ್ತೃತ್ವವು ಇರುವದಿಲ್ಲವೆಂದು ಪೂರ್ವಪಕ್ಷವಷ್ಟೇ! ಈ ಪೂರ್ವಪಕ್ಷಕ್ಕೆ ಉತ್ತರ ರೂಪವಾಗಿ ಪರಮಾತ್ಮನೇ ಸ್ವತಂತ್ರನು; ಅವನಿಗೆ ಮುಖ್ಯ ಕರ್ತೃತ್ವವೆಂದೂ, ಜೀವನಿಗೆ ಹರ್ಯಧೀನವಾದ ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುವದೆಂಬ ಪರಾಧೀನ ಕರ್ತೃತ್ವವೆಂದೂ ಒಪ್ಪಿಕೊಂಡದ್ದಾಯಿತು. ಆದರೆ, ಹೀಗೆ ಜೀವರಿಗೆ ಪರಾಧೀನ ಕರ್ತೃತ್ವವನ್ನು ಒಪ್ಪಿದರೆ ಚೇಳಿನಿಂದ ಹೆದರಿ ಓಡುವವನು ತೀಕ್ಷ್ಣ ವಿಷ ಸರ್ಪದ ಮುಖದಲ್ಲಿ ಬಿದ್ದಂತೆ ಆಗುತ್ತದೆ. ಯಾಕಂದರೆ, ಶ್ರುತಿಯಲ್ಲಿ ಸ್ವಾತಂತ್ರ್ಯವಿರುವದೇ ಕರ್ತೃತ್ವವು. ಪಾಣಿನಿಯು-"ಸ್ವತಂತ್ರ ಕರ್ತೃವು" ಎಂದು ನಿರೂಪಿಸಿರುತ್ತಾನೆ. ಆಯಾ ಕರ್ಮಗಳನ್ನು ಮಾಡುವದರಲ್ಲಿರುವ ಶಕ್ತಿಯು ಸ್ವಾತಂತ್ರ್ಯವು. ಹೀಗೆ ಜೀವರಿಗೆ ಈ ಸ್ವಾತಂತ್ರ್ಯವನ್ನು ದಾನಮಾಡಿದನು. ಮತ್ತೆ ಅಪಹರಿಸಿದನು; ಎಂದು ಮುಂತಾಗಿ ಕೆಲವು ಪ್ರಮಾಣಗಳಿಂದ ಹೇಳಲಾಗುತ್ತದೆ. ಆದರೆ ಸ್ವಾತಂತ್ರ್ಯವು **ಪರಮಾತ್ಮನಲ್ಲಿಯೇ ಇರುವ ಅಸಾಧಾರಣ ಗುಣವಾಗಿರುತ್ತದೆ. "ಸ್ವಾತಂತ್ರ್ಯವು ನನ್ನದೇ ಗುಣವಾಗಿರುತ್ತದೆಂದು" ಪರಮಾತ್ಮನ ವಚನಗಳಿಂದಲೇ ಸಿದ್ಧವಾಗಿ ನಿಶ್ಚಿತವಿರುತ್ತದೆ.** ಇಂಥ ತನ್ನದೇ ಆದ ಗುಣವನ್ನು ಇನ್ನೊಬ್ಬರಿಗೆ ಕೊಡುವದೆಂದರೆ ಹೇಗೆ ಸಲ್ಲುತ್ತದೆ. ತನ್ನನ್ನು ತಾನು ದಾನಮಾಡಬಲ್ಲನೇ ಇಲ್ಲ; ಹೀಗೆ ಎಲ್ಲಿಯೂ ಕಂಡುಬರುವದಿಲ್ಲ.

ಇನ್ನು ಕೆಲವರು ಪರಮಾತ್ಮನಿಗೂ, ಪರಮಾತ್ಮನ ಗುಣಗಳಿಗೂ ಭೇದವನ್ನು ಹೇಳಿ, ಈ ಪ್ರಶ್ನವನ್ನು ಬಿಡಿಸಲು ಪ್ರಯತ್ನಿಸುತ್ತಾರೆ. ಆದರೆ ಅದು ಸರಿಯಲ್ಲ. ಯಾಕಂದರೆ-"ಸ್ವಾತಂತ್ರ್ಯವು ಪರಮಾತ್ಮನ ಸ್ವರೂಪಭೂತವಾದ **ಗುಣ-ಧರ್ಮವಾಗಿರುತ್ತದೆ" (ಸ್ವಭಾವವಾಗಿರುತ್ತದೆ.) "ತನ್ನ ಸ್ವಭಾವ ಸ್ವಾತಂತ್ರ್ಯ ವಿಭಾಗವ ಮಾಡಿಕೊಟ್ಟ ಹರಿ" ಎಂದು ಮೂರನೆಯ ಪದ್ಯದಲ್ಲಿ "ಸ್ವಭಾವ" ವೆಂಬುದಾಗಿ ವಿಶೇಷಣವನಿಟ್ಟಿರುತ್ತಾರೆ. ಆದುದರಿಂದ ಸ್ವಾತಂತ್ರ್ಯವು ಹರಿಯ ಸ್ವಭಾವವಾದುದರಿಂದ ಅದನ್ನು ದಾನಮಾಡುವದು ಹೇಗೆ ಯುಕ್ತವಾಗುತ್ತದೆ? ಜೀವರಿಗೆ ಪರಾಧೀನ ಕರ್ತೃತ್ವವನ್ನು ಒಪ್ಪಿದರೆ ಸ್ವಾತಂ**

ತ್ರ್ಯದಾನದ ಮಹಾಸಮಸ್ಯೆಯು ಬಂದು ನಿಲ್ಲುತ್ತದೆ. ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಉತ್ತರವನ್ನು ಹೇಳುತ್ತೇವೆ.

ಪರಮಾತ್ಮನು ಸ್ವಾತಂತ್ರ್ಯವನ್ನು ದಾನಮಾಡುವನೆಂಬಂತೆ, ಅಲ್ಲಲ್ಲಿ ನಿಂತು ರಮಣಮಾಡುವನೆಂಬುದಾಗಿಯೂ ಪ್ರಮಾಣಗಳಿಂದ ತಿಳಿದುಬರುತ್ತದೆ. ಇವೆರಡನ್ನೂ ಸಮನ್ವಯಿಸಿ ಹೇಳಲು ಸ್ವಾತಂತ್ರ್ಯದಾನವೆಂಬುದನ್ನು ಸ್ಪಷ್ಟೀಕರಿಸಬೇಕು. ಕರ್ಮಗಳನ್ನು ಮಾಡುವದರಲ್ಲಿ ಅಭಿವ್ಯಕ್ತಗೊಳಿಸಿರುವ ಶಕ್ತಿಗಳುಳ್ಳ ರೂಪಗಳನ್ನು ಕೊಡುವದೇ ಸ್ವಾತಂತ್ರ್ಯದಾನವೆಂದು ಸ್ಪಷ್ಟೀಕರಿಸಬೇಕು. ಬೇರೆ ರೀತಿಯ ಸ್ವಾತಂತ್ರ್ಯದಾನದ ಸ್ಪಷ್ಟೀಕರಣವು ಸರಿಹೋಗಲಾರದು. "ದತ್ತೋಽಹಮಯಾಹಮಿತಿ" ಎಂದು ಭಗವಂತನ ವಚನಗಳಿಂದ ನಾವು ಹೇಳಿದ ಸ್ವಾತಂತ್ರ್ಯದಾನವೇ ಸರಿ ಎಂದು ತಿಳಿದು ಬರುತ್ತದೆ. ಒಂದು ವ್ಯಕ್ತಿಯಲ್ಲಿ–ದಾನಕೊಡುವದು ಕಂಡು ಬರುತ್ತದೆ.

ವಿಷ್ಣುರಹಸ್ಯದ ಭೃಗು-ಇಂದ್ರದ್ಯುಮ್ನರ ಸಂವಾದದಲ್ಲಿ ಸ್ವಾತಂತ್ರ್ಯದಾನವನ್ನು ಹೇಳಲಾಗಿರುತ್ತದೆ. ವೇದವ್ಯಾಸರನ್ನನುಸರಿಸಿದ ಈ ದಾಸರಾಯರೂ ಸಹ "ಸಂಕ್ಷೇಪ ವಿಸ್ತಾರಗಳಿಂದ ಪದೇ ಪದೇ ಜ್ಞಾನಿಗಳು ವಿಮರ್ಶಿಸುತ್ತಾರೆ" ಎಂದು ಹೇಳಿದಂತೆ-ಭೃಗ್ವಿಂದ್ರದ್ಯುಮ್ನ ಸಂವಾದದಲ್ಲಿ ಹೇಳಲಾಗಿರುವ ಸ್ವಾತಂತ್ರ್ಯದಾನವನ್ನು ವಿವರಿಸುತ್ತಾರೆ. ಆದುದರಿಂದ ಸ್ವಗತ ಸ್ವಾತಂತ್ರ್ಯ ಸಂಧಿಯನ್ನು ಉಪಕ್ರಮಿಸುತ್ತಾರೆ "ಸ್ವಗತ" ಎಂಬ ಪಲ್ಲವಿಯಿಂದ.

"ಮುಚಗಳ ಪದಗಳನ್ನು ಹಿಡಿದುಕೊಂಡು" ಎಂದು ಹೇಳಿ. "ಎರಡರಲ್ಲಿಯೂ, ಸಂವಾದವನ್ನು ಮಾತ್ರ ತೋರಿಸುವೆವು" ಎಂದು ಪೂರ್ವಾಚಾರ್ಯರು ಹೇಳಿದಂತೆ ಪೂರ್ವಸಂಪ್ರದಾಯವನ್ನು ಅನುಸರಿಸಿ, ಭೃಗ್ವಿಂದ್ರದ್ಯುಮ್ನರ ಸಂವಾದವನ್ನು ಇಲ್ಲಿರುವ ಪದಗಳಿಂದ ಸಂವಾದಮಾಡಿ ಅನುವದಿಸುವದರಿಂದ ಹಿತಕಾಮಿಗಳು ಇದರಲ್ಲಿ ಅವಿಶ್ವಾಸವನ್ನು ಮಾಡಬಾರದು. ಈ ಅಭಿಪ್ರಾಯದಿಂದ "ಪೇಳಿದನು" ಎಂಬುದಾಗಿ ದಾಸರಾಯರು ನುಡಿದಿರುತ್ತಾರೆ.

ವಿಷ್ಣುರಹಸ್ಯದಲ್ಲಿ, ೨೧ನೆಯ ಅಧ್ಯಾಯದಲ್ಲಿ—

"ಭಗವಾನ್ ವಿಷ್ಣುವು ಸ್ವತಂತ್ರನು; ಅವನ ಪತ್ನಿ ಲಕ್ಷ್ಮೀದೇವಿಯು ವಕ್ಷಸ್ಥಲದಲ್ಲಿ ಆಶ್ರಯಿಸಿರುತ್ತಾಳೆ. ಬ್ರಹ್ಮ ಹಾಗೂ ಪ್ರಾಣದೇವರು ಸಚಿವರು,

ತ್ರಿವಿಧಾಹಂಕಾರಾಭಿಮಾನಿಗಳಾದ ಗರುಡ,ಶೇಷರೂ ಸಹ ಅವಾಂತರ ಸಚಿವರೇ ಆಗಿರುತ್ತಾರೆ. ಇಂದ್ರನು ಮನಸ್ಸಿಗೆ ಅಭಿಮಾನಿಯು. ಸೂರ್ಯ ಮುಂತಾದವರು ಇಂದ್ರಿಯಾಭಿಮಾನಿಗಳು ಎಂದು ಎರಡು ಪದ್ಯಗಳಿಂದ ಭೃಗುಋಷಿಗಳು ಇಂದ್ರದ್ಯುಮ್ನನಿಗೆ ಉಪದೇಶಿಸಿರುತ್ತಾರೆ. ಅದನ್ನೇ ಒಂದು ಪದ್ಯದಲ್ಲಿ ಅನುವದಿಸುತ್ತಾರೆ "ಪರಮ" ಎಂಬ ಪದ್ಯದಿಂದ. "ಪ್ರಿಯ"ವೆಂಬ ಪದವನ್ನು "ಸಚಿವ"ವೆಂಬ ಪೂರ್ವಪದಕ್ಕೆ ಅನ್ವಯಿಸಬೇಕು. "ಅರಸು" ಎಂಬ ಪದವನ್ನು "ಮನಸ್ಸಿಗೆ" ಎಂದು ಅನ್ವಯಿಸಬೇಕು. ॥೧॥

**ಅವತರಣಿಕಾ :**—ದೇವತೆಗಳಂತೆ, ಕಲಿ ಮೊದಲಾದ ದೈತ್ಯಾದಿಗಳು ತತ್ವದಲ್ಲಿ ವ್ಯಾಪಿಸಿದ್ದು ಸರ್ವರ ಸ್ಥೂಲದೇಹದಲ್ಲಿದ್ದು ವ್ಯಾಪಾರಮಾಡುವರೆಂದು ಹೇಳುತ್ತಾರೆ.

**ಈದಿವೌಕಸರಂತೆ ಕಲಿಮೊದ ।**
**ಲಾದ ದೈತ್ಯರು ಸರ್ವದೇಹದಿ ।**
**ಶೋದಕರು ತಾವಾಗಿ ವ್ಯಾಪಾರಗಳ ಮಾಡುವರು ॥**
**ವೇಧನಂದದಿ ಕಲಿಯಹಂಕಾ ।**
**ರಾಧಿಪಾಧಮ ಮಧುಕೈಟಭ ।**
**ಕ್ರೋಧಿಶಂಬರ ಮುಖರು ಮನಸಿಗೆ ಸ್ವಾಮಿಯೆನಿಸುವರು ॥೨॥**

**ಪದ್ಯಾರ್ಥ :**—ಈ ದಿವೌಕಸರಂತೆ, ಈ ದೇಹಗಳಲ್ಲಿ ತತ್ವನಿಯಾಮಕರಾದ, ದಿವೌಕಸರಂತೆ=ಸ್ವರ್ಗವಾಸಿಗಳಾದ ದೇವತೆಗಳಂತೆ, ಕಲಿ ಮೊದಲಾದ ದೈತ್ಯರು=ತಮೋಯೋಗ್ಯರಾದ ಕಲಿಯೆ ಮೊದಲಾಗಿ ಸಾಂಶದೈತ್ಯರು, ಸರ್ವದೇಹದಿ=ಸರ್ವರಸ್ಥೂಲ ದೇಹದಲ್ಲಿ, ತೋದಕರು=ಪ್ರೇರಕರು, ತಾವಾಗಿ=ಪಾಪಕೃತ್ಯಗಳಿಗೆ ಪ್ರೇರಕರು ತಾವೇ ಆಗಿ, ವ್ಯಾಪಾರಗಳ ಮಾಡುವರು=ಪಾಪಕೃತ್ಯಗಳನ್ನು ದೇವತೆಗಳ ಪ್ರೇರಣೆಯಿಂದ ಮಾಡುವರು. ವೇಧನಂದದಿ=ಬ್ರಹ್ಮದೇವರೋಪಾದಿಯಲಿ, ಕಲಿ=ಕಲಿನಾಮಕ ದೈತ್ಯನು, ಅಹಂಕಾರಾಧಿಪಾಧಮ=ಅಹಂಕಾರತತ್ವಕ್ಕೆ ಅಧಿಪ ನಿಯಾಮಕ, ಸಕಲರಲ್ಲಿ ಅಧಮ=ನೀಚ, ಮಧುಕೈಟಭಶಂಬರಮುಖರು ಕ್ರೋಧಿಗಳು=ಮಧುಕೈಟಭ, ಶಂಬರಾಸುರನೇ ಮೊದಲಾದವರು ಮಹಾ ಕೋಪಿಗಳು, ಮನಸ್ಸಿನಲ್ಲಿ ಸಿಟ್ಟು ಕೋಪಾವೇಶ

ಹುಟ್ಟಿಸುವರು, ಮನಸಿಗೆ=ಮನಸ್ ತತ್ವಕ್ಕೆ, ಸ್ವಾಮಿ=ಒಡೆಯ ಅಭಿಮಾನಿ ಗಳೆನಿಸುವರು.

**ಭಾವಸೂಚನ :—** ಈ ದಿವೌಕಸೇತಿ॥ ತೋದಕರು ॥ ಪ್ರೇರಕರು ॥ ಯಥೋಕ್ತಂ ಭೃಗುಣಾ ॥ ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ । ಬ್ರಹ್ಮವಚ್ಚ ಕಲಿಸ್ತೇಷಾಮಧಿಪೋ(ಕೋ)ಹಂಕೃತಿಃ ಸ್ಮೃತಃ ॥೩॥ ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ ॥ಇತಿ॥

**ಸೂಚನೆ :—** ಈ ಕಲ್ಯಾದಿ ದೈತ್ಯರಲ್ಲಿ ನಿಂತು, ಸಕಲ ತತ್ವಾಭಿಮಾನಿ ದೇವತೆಗಳ ದ್ವಾರಾ ಶ್ರೀಹರಿಯೇ ದೈತ್ಯ ಸ್ವಭಾವಕರ್ಮ ಪ್ರೇರಿಸಿ, ಮಾಡಿಸು ತ್ತಾನೆ. ದೈತ್ಯಾದಿಗಳು ಸ್ವತಂತ್ರರಲ್ಲ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ದಿವೌಕಸ" ಇತಿ ॥ "ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ॥ ಬ್ರಹ್ಮವಚ್ಚ ಕಲಿಃ ತೇಷಾಂ ಅಧಿಕೋಹಂಕೃತಿಃ ಸ್ಮೃತಃ ॥ ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾಃ ಮನೋಧಿಪಾಃ॥ ಅನ್ಯೇಪಿ ದೇವ ವತ್ ದೈತ್ಯಾಃ ತತ್ತದಿಂದ್ರಿಯಮಾನಿನಃ ॥" ಇತಿ. ಪದ್ಯದ್ವಂದ್ವಂ ಅನೇನ ಉಕ್ತಾರ್ಥಮ್ ॥ ೨ ॥

## ಕನ್ನಡಾರ್ಥ

"ದೇವತೆಗಳು ಈ ಶರೀರದಲ್ಲಿ ತತ್ವ ಕಾರ್ಯಗಳನ್ನು ಮಾಡುತ್ತಿರುವಂತೆ ದೈತ್ಯರೂ ಇರುವರು. ಆ ದೈತ್ಯರಲ್ಲಿ ಕಲಿಯು ಎಲ್ಲರಿಗಿಂತಲೂ ಅಧಿಕನು ; ಅಹಂಕಾರಾಭಿಮಾನಿ ಎನ್ನಿಸಿಕೊಳ್ಳುತ್ತಾನೆ. ಮಧುಕೈಟಭರೇ ಮುಖ್ಯರಾಗಿ ಉಳ್ಳ ಶಂಬರ ಮುಂತಾದ ಅಸುರರು ಮನಸ್ಸಿಗೆ ಅಧಿಪತಿಗಳು. ಇದರಂತೇ ಇನ್ನೂ ಬೇರೆ ದೈತ್ಯರೂ, ದೇವತೆಗಳಂತೆ ಆಯಾ ಇಂದ್ರಿಯಗಳಿಗೆ ಅಭಿಮಾನಿ ಗಳಾಗಿರುತ್ತಾರೆ." ಹೀಗೆ ಹೇಳುತ್ತಿರುವ ವಿಷ್ಣುರಹಸ್ಯದ ಎರಡು ಪದ್ಯಗಳ ಅರ್ಥವನ್ನು "ಈ ದಿವೌಕಸರೊಡನೆ" ಎಂಬ ಪದ್ಯವು ಅನುವಾದಿಸಿರುತ್ತದೆ ॥೨॥

**ಅವತರಣಿಕಾ :—** ಇಂದ್ರಿಯಾಭಿಮಾನಿ ದೇವತೆಗಳಂತೆ ಆ ಆ ದೇವತೆ ಗಳ ನಾಮದಿಂದಲೇ ದೈತ್ಯಾದಿಗಳು ಅಹಂಕಾರ ತತ್ವಾರಂಭಿಸಿ, ದೇವತೆಗಳ ಪ್ರೇರಣೆಯಂತೆ ಯಾವತ್ತು ವ್ಯಾಪಾರ ಮಾಡುವರು. ಇಂತಹ ವ್ಯಾಪಾರ

ಮಾಡಲಿಕ್ಕೆ ಶಕ್ತಿ ಕೊಡಲು, ರಾಜನೋಪಾದಿಯಲಿ ಶ್ರೀಹರಿಯು ಎಲ್ಲ ಸೇವಕರಿಗೆ ತನ್ನ ಸ್ವರೂಪಭೂತವಾದ ಸ್ವಾತಂತ್ರ್ಯ ದಾನಮಾಡಿದನೆಂದು ಹೇಳುತ್ತಾರೆ.

**ದೇವತೆಗಳೋಪಾದಿ ನಿತ್ಯದಿ ।**
**ಏವಮಾದೀ (ಸ) ನಾಮದಿಂದಲಿ ।**
**ಯಾವದಿಂದ್ರಿಯಗಳಲಿ ವ್ಯಾಪಾರಗಳ ಮಾಡುವರು ॥**
**ಸೇವಕರ ಸೇವಾನುಗುಣಫಲ ।**
**ವೀವ ನೃಪನಂದದಲಿ ತನ್ನ ಸ್ವ ।**
**ಭಾವಸ್ವಾತಂತ್ರ್ಯ ವಿಭಾಗವ ಮಾಡಿಕೊಟ್ಟ ಹರಿ ॥ ೩ ॥**

**ಪದ್ಯಾರ್ಥ :—**ದೇವತೆಗಳೋಪಾದಿ ನಿತ್ಯದಿ=ದೇವತೆಗಳಂತೆ ಪ್ರತಿನಿತ್ಯದಲ್ಲಿ, ಏವಮಾದಿಸನಾಮದಿಂದಲಿ=ದೇವತೆಗಳ ಆಯಾ ನಾಮದಂತೆ ಅದೇ ಪೆಸರಿನಿಂದ ಕರೆಸುತ್ತ, ಯಾವದಿಂದ್ರಿಯಗಳಲ್ಲಿ=ಸ್ಥೂಲದೇಹದಲ್ಲಿಪ್ಪ ಪಂಚ ಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚತನ್ಮಾತ್ರಾ, ಪಂಚಭೂತ (೧) ಮನಸ್ಸು ತ್ರಿವಿಧ, ಈ ಪ್ರಕಾರ ಯಾವತ್ತು ಇಂದ್ರಿಯಗಳಲ್ಲಿ ದೇವತೆಗಳ ಪ್ರೇರಣೆಯಂತೆ ಸಕಲ ವ್ಯಾಪಾರ ಮಾಡುವರು = ಎಲ್ಲ ಪಾಪಕೃತ್ಯಗಳನ್ನು ಮಾಡುವರು. ಅಂದರೆ ಈ ದೇಹದಲ್ಲಿ, ಸದ್ವ್ಯಾಪಾರ ದುರ್ವ್ಯಾಪಾರ ಮಾಡತಕ್ಕ ದೇವತೆ, ದೈತ್ಯಾದಿಗಳು ಇರುವರೆಂದು ಭಾವ. ಇವರಿಗೆ ಸ್ವತಂತ್ರವಾಗಿ ಯಾವ ವ್ಯಾಪಾರ ಶಕ್ತಿ ಇಲ್ಲ, ಕಾರಣ—ಸೇವಕರ ಸೇವಾನುಗುಣಫಲವೀವ ನೃಪನಂದದಲಿ=ರಾಜನು ತನ್ನ ಮಂತ್ರಿಗಳು, ಸೇನಾಧಿಪತಿಗಳು ಇತರ ಸೇವಕರಿಗೆ ಅವರವರ ತಕ್ಕ ಸೇವೆಯಂತೆ ಅವರವರಿಗೆ ಸಂಬಳ ಕೊಡುವ ನೃಪನಂತೆ ರಾಜನಂತೆ (ಏಕದೇಶದೃಷ್ಟಾಂತ). ಶ್ರೀಹರಿಯು ತನ್ನ = ಸಚ್ಚಿದಾನಂದ ಅನಂತ ಸ್ವಭಾವ ಸ್ವಾತಂತ್ರ್ಯ=ಸ್ವಾಂಶ ಕಲೆ ಸತ್ತಾ ಅಧಿಕಾರ ಗುಣಗಳನ್ನು, ವಿಭಾಗ ಮಾಡಿಕೊಟ್ಟ ಹರಿ=ಆ ಬಿಂಬರೂಪನಾದ ಪರಮಾತ್ಮ ಸೃಷ್ಟ್ಯಾರಂಭದಲ್ಲಿ ಸ್ವಾಂಶ ಕಲೆ ಶಕ್ತಿ ಆಯಾ ಜೀವರಲ್ಲಿ ಇತ್ತು ಹಂಚಿಕೊಟ್ಟನು. ರಾಜನು ಬಹಿರಂಗದ ದುಡ್ಡು ಕಾಸು ಸೇವಕರ ಯೋಗ್ಯತೆಯಂತೆ ಕೊಡುವನು. ಶ್ರೀಹರಿಯಾದ ರಾಜರಾಜೇಶ್ವರನು, ತಾನು ಸ್ವಯಂಮೇವ ಬ್ರಹ್ಮಾದೇವತೆಗಳಲ್ಲಿ ಅಂತಃ

ಪ್ರೇರಕನಾಗಿದ್ದು, ಸೃಷ್ಟಿಕಾರ್ಯ ನಡೆಯಿಸಲು ಅವರವರ ಯೋಗ್ಯತೆ ತನ್ನ ಸ್ವಭಾವ ಸ್ವಾಂಶಕಲೆರೂಪಗಳನಿಟ್ಟು, ಆ ತನ್ನ ಶಕ್ತಿಯಿಂದಲೇ ಕರ್ಮ ಮಾಡಲು ಶಕ್ತಿಯು ಹರಿಯ ನಿಜಸ್ವರೂಪಭೂತವಾದ ಶಕ್ತಿ ಕೊಟ್ಟ=ಇತ್ತನು.

**ಭಾವಸೂಚನ** :—ದೇವತೇತಿ ||

ಅನ್ಯೇsಪಿ ದೇವವದ್ವೈತ್ಯಾಸ್ತತ್ತದಿಂದ್ರಿಯಮಾನಿನಃ ||೪|| ನೃಪೇತಿ ತದುಕ್ತಂ|| ಸ್ವತಂತ್ರೋsಪಿ ಹರಿಃ ಸೃಷ್ಟೌ ಸ್ವಸ್ವಾತಂತ್ರ್ಯಮನೇಕಧಾ|| ವಿಭಜ್ಯಾದಾನ್ನೃಪ ಇವ ಸರ್ವಕಾರ್ಯೇಷು ಲೀಲಯೇತಿ ||೩||

## ವ್ಯಾಸದಾಸ ಸಿದ್ಧಾಂತ ಕೌಮುದೀ

"ದೇವತೆ" ಇತಿ|| "ಸ್ವತಂತ್ರೋsಪಿ ಹರಿಃ ಸೃಷ್ಟೌ ಸ್ವಸ್ವಾತಂತ್ರ್ಯಮನೇಕಧಾ| ವಿಭಜ್ಯಾದಾತ್ ನೃಪ ಇವ ಸರ್ವಕಾರ್ಯೇಷು ಲೀಲಯಾ|| ತತ್ತತ್ಸ್ವಾತಂತ್ರ್ಯಯೋಗೇನ ಫಲಭಾಕ್ ಸ ಸ ಜಾಯತೇ||" ಇತಿ ಸಾರ್ಧಪದ್ಯಂ ವಿವೃತಮ್ ||೩||

## ಕನ್ನಡಾರ್ಥ

"ಸರ್ವಸ್ವತಂತ್ರನಾದರೂ ಶ್ರೀಹರಿಯು ಸೃಷ್ಟಿಯಲ್ಲಿ (ಸೃಷ್ಟ್ಯಾರಂಭದಲ್ಲಿ) ತನ್ನ ಸ್ವಾತಂತ್ರ್ಯವನ್ನು ಸರ್ವಕಾರ್ಯಗಳಲ್ಲಿ ತನ್ನ ಇಚ್ಛೆಯಿಂದ ಲೀಲಾರೂಪವಾಗಿ ಹಂಚಿ ಅವರವರಿಗೆ ಕೊಟ್ಟನು. ಆಯಾ ಸ್ವಾತಂತ್ರ್ಯದ ಸಂಬಂಧದಿಂದ ಆ ಆ ಜೀವರು ಫಲಕ್ಕೆ ಭಾಗಿಗಳಾಗುತ್ತಾರೆ" ಎಂದು ಹೇಳುವ ಒಂದೂವರೆ ಪದ್ಯದ ಭಾಗವನ್ನು ಸೇವಕರ ಸೇವಾನುಗುಣ, ಫಲವೀವ ನೃಪನಂದದಲಿ ತನ್ನ ಸ್ವಭಾವ ಸ್ವಾತಂತ್ರಿಯ ವಿಭಾಗವ ಮಾಡಿಕೊಟ್ಟ ಹರಿ" ಎಂಬ ಪದ್ಯದ ಉತ್ತರಾರ್ಧವು ಅನುವಾದಿಸಿರುತ್ತದೆ.

**ಅವತರಣಿಕಾ**:—ಶ್ರೀಹರಿಯು ಸೃಷ್ಟಿಯ ಪ್ರಾರಂಭದಲ್ಲಿ ಜೀವರ ಯೋಗ್ಯತೆಯನುಸರಿಸಿ ಅನಾದಿಕರ್ಮ ಮೊನೆಮಾಡಿ ಜೀವರಿಂದ ಸಾಧನ ಮಾಡಿಸಲು, ತನ್ನ ಸ್ವರೂಪಶಕ್ತಿ ಕಲೆಗಳನ್ನೇ ಇಟ್ಟು, ಸ್ವತಂತ್ರ ವಿಭಾಗಮಾಡಿ ಕೊಟ್ಟ ವಿವರವ ೪-೫-೬ ಈ ಮೂರು ಪದ್ಯಗಳಿಂದ ವಿವರಿಸುತ್ತಾರೆ.

**ಅಗಣಿತ ಸ್ವಾತಂತ್ರ್ಯವ ನಾ।**
**ಲ್ವಗೆ ವಿಭಾಗವ ಮಾಡಿ ಒಂದನು।**
**ತೆಗದು ದಶವಿಧಗೈಸಿ ಪಾದರೆ ಪಂಚಪ್ರಾಣನಲಿ॥**
**ಮೊಗಚತುಷ್ಟಯನೊಳು ಸಪಾದೈ।**
**ದುಗುಣವಿರಸಿದ ಮತ್ತೆ ದಶವಿಧ।**
**ಯುಗಳ ಗುಣವನು ಮಾಡಿ ಎರಡು ಸದಾಶಿವನೊಳಿಟ್ಟ ॥೪॥**

**ಪದ್ಯಾರ್ಥ :—** ಅಗಣಿತ ಸ್ವಾತಂತ್ರ್ಯವ=ಶ್ರೀಹರಿಯ ಅನಂತ ಲೆಕ್ಕವಿಲ್ಲದ ಸ್ವತಂತ್ರ ಗುಣಗಳು, "ಒಂದು ಗುಣದೊಳನಂತ ಗುಣಗಳು ಪೊಂದಿಪ್ಪವು ಗುಣಗಣಸಹಿತ" ಎಂಬುವಂತೆ ಆ ಅನಂತ ಗುಣದಲ್ಲಿ ಸೃಷ್ಟಿಗೆ ಅನುಕೂಲವಾಗಿ ಕಾರ್ಯ ನಡೆಸಲು, ನಾಲ್ವಗೆ ವಿಭಾಗ ಮಾಡಿ,= ನಾಲ್ಕು ಬಗೆಯಿಂದ ಅಂದರೆ ನಾಲ್ಕು ಅಂಶದ ಸ್ವಸ್ವಾತಂತ್ರ್ಯಗುಣ ೪ ವಿಧವಾಗಿ ತೆಗೆದು ಹಂಚಿಹಾಕಿದನು. ಇದರ ವಿವರ:—

೧. ಒಂದನು ತೆಗೆದು ದಶವಿಧಗೈಸಿ=ಒಂದರಲ್ಲಿ ಹತ್ತು ಪ್ರಕಾರ ವಿಭಾಗ ಮಾಡಿದನು. ಈ ೧೦ ಗುಣಗಳಲ್ಲಿ.
   ಪಾದರೆ ಪಂಚ=೪॥।-ಮುಖ್ಯಪ್ರಾಣದೇವರಲ್ಲಿ
   ಸಪಾದೈದು =೫। -ಮೊಗಚತುಷ್ಟಯ ಬ್ರಹ್ಮದೇವರಲ್ಲಿ ಇರಸಿದ
   ೧೦ ಹೀಗೆ ಹತ್ತು ಗುಣ ೧ನೇ ಅಂಶನಲ್ಲಿ.

೨. ಮತ್ತೆ=ಪುನಃ ಯುಗಳ ಗುಣವನು ಎರಡನೇ ಗುಣವನ್ನು ದಶವಿಧಗೈಸಿ= ೧೦ ವಿಧ ಮಾಡಿ ಇದರಲ್ಲಿ
   ೨ ಗುಣ ಸದಾಶಿವ=ಅಹಂಕಾರಾಧಿಪತಿ ರುದ್ರದೇವರಲ್ಲಿ.
   ಮುಂದಿನ ಪದ್ಯದಲ್ಲಿ ಉಳಿದ ೮ ಗುಣಗಳ ವಿಭಾಗ ಹೇಳುತ್ತಾರೆ.

**ಭಾವಸೂಚನ :—** ಅಗಣಿತೇತಿ ॥ ಯಥೋಕ್ತಂ ॥ ಸ್ವಸ್ವಾತಂತ್ರ್ಯ ಚತುರ್ಥಾಂಶಂ ದಶಧಾ ವ್ಯಭಜದ್ಧರಿಃ ॥ ಪಾದೋನಪಂಚಕಂ ಪ್ರಾಣೇ ಸಪಾದೇ ಬ್ರಹ್ಮಣೇ ದದಾವಿತಿ ॥ ಮೊಗಚತುಷ್ಟಯ=ಬ್ರಹ್ಮ ॥ ಮತ್ತೆರಡನೆ ಗುಣ ಹತ್ತು ವಿಭಾಗ ಮಾಡಿದ॥ ಯಥೋಕ್ತಂ॥ ದ್ವಿತೀಯೇ ತು ಚತುರ್ಥಾಂಶೇ ದಶಧೈವ ವಿಭಾಜಿತೇ ॥೭॥ ದ್ವಾವೇವಾಂಶಾವಹಂಕಾರೇ ॥ ಇತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವಸ್ವಾತಂತ್ರ್ಯಂ ಚತುರ್ಥಾಂಶಂ ದಶಧಾ ವ್ಯಭಜತ್ ಹರಿಃ ॥ ಪಾದೋನ ಪಂಚಕಂ ಪ್ರಾಣೇ ಸಪಾದಂ ಬ್ರಹ್ಮಣೇ ದದೌ॥ ದ್ವಿತೀಯೇ ತು ಚತುರ್ಥಾಂಶೇ ದಶಧೈವ ವಿಭಾಜಿತೇ ॥ ದ್ವಾವೇವಾಂಶಾವಹಂಕಾರೇ" ಇತಿ. ಪಾದಾರ್ಥಸಹಿತಪದ್ಯಂ ವಿವೃಣೋತಿ "ಅಗಣಿತ" ಇತಿ ॥ ೪ ॥

## ಕನ್ನಡಾರ್ಥ

ಹರಿಯು ತನ್ನಲ್ಲಿರುವ ಸ್ವಾತಂತ್ರ್ಯದಲ್ಲಿ ನಾಲ್ಕು ಭಾಗಗಳನ್ನು ಮಾಡಿ ಮತ್ತೆ ಅದರ ಒಂದು ಭಾಗದಲ್ಲಿ ಹತ್ತು ಭಾಗಗಳನ್ನು ಮಾಡಿದನು. ಪ್ರಾಣನಲ್ಲಿ ಕಾಲುಭಾಗ ಕಡಮೆ ಐದು ಭಾಗಗಳನ್ನು ಇಟ್ಟನು. ಐದೂಕಾಲ ಭಾಗಗಳನ್ನು ಚತುರ್ಮುಖನಲ್ಲಿ ಇಟ್ಟನು. ೪ ಭಾಗಗಳಲ್ಲಿಯ ೨ನೆಯ ಭಾಗದಲ್ಲೂ ಒಂದನೆಯ ಭಾಗದಲ್ಲಿಯಂತೆ ಹತ್ತು ಭಾಗಗಳನ್ನು ಮಾಡಿ ಎರಡು ಅಂಶಗಳನ್ನು ಮಾತ್ರ ಅಹಂಕಾರಾಭಿಮಾನಿಯಾದ ರುದ್ರದೇವನಲ್ಲಿ ಇಟ್ಟನು". ಎಂಬುದಾಗಿ ಹೇಳುವ ವಿಷ್ಣುರಹಸ್ಯ ಪದ್ಯದ ಅರ್ಥವನ್ನೇ ವಿವರಿಸುತ್ತಾರೆ. "ಅಗಣಿತ" ಎಂಬ ಪದ್ಯದಿಂದ ॥ ೪ ॥

**ಅವತರಣಿಕಾ:**—ಎರಡನೇ ಸ್ವಾತಂತ್ರ್ಯಗುಣದಲ್ಲಿ ೧೦ ವಿಧ ಮಾಡಿದ್ದ ವಿವರ ಮತ್ತು ಪುನಃ ೪ ಗುಣಗಳಲ್ಲಿ ಉಳಿದ ಎರಡು ಗುಣ ವಿಭಾಗ ವಿವರ ಹೇಳುತ್ತಾರೆ.

**ಪಾಕಶಾಸನ ಕಾಮರೊಳು ಸಾ।**
**ಧೈಕವಿಟ್ಟ ದಶೇಂದ್ರಿಯರಸದಿ ।**
**ನಾಕಸಾದ್ಯರೊಳೊಂದು ಯಾವಜ್ಜೀವರೊಳಗೊಂದು ॥**
**ನಾಲ್ಕುವರೆ ಕಲ್ಯಾದಿ ದೈತ್ಯಾ।**
**ನೀಕಕಿತ್ತನು। ಎರಡು ತ್ರಿವಿಧ ವಿ।**
**ವೇಕ ಗೈಸಿಂದಿರಿಗೆ ಒಂದೆರಡಾತ್ಮ ತನ್ನೊಳಗೆ ॥ ೫ ॥**

**ಪದ್ಯಾರ್ಥ :—** ೧ ಪಾಕಶಾಸನ ಕಾಮರೊಳು ಸಾರ್ಧೈಕವಿಟ್ಟ = ಇಂದ್ರ ದೇವರು, ಕಾಮದೇವರಲ್ಲಿ ಒಂದುವರಿಗುಣವಿಟ್ಟ ೧॥

೨. ದಶೇಂದ್ರಿಯಾಪ ದಿವೌಕಸರೊಳಗೊಂದು = ದಶ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಒಂದು ಒಂದು ಗುಣ ೧

೩. ಉಳಿದ ಯಾವಜ್ಜೀವರೊಳಗೊಂದು, ಉಳಿದ ಸರ್ವಜೀವರಲ್ಲಿ ೧

೪. ನಾಲ್ಕುವರೆ ಕಲ್ಗ್ಯಾದಿ ದೈತ್ಯಾನೀಕ=ಸಮೂಹಕೆ ಇತ್ತನು ೪॥

| | |
|---|---|
| | ೮ |
| ಹಿಂದಿನ ಪದ್ಯ ಸದಾಶಿವನಲ್ಲಿ | ೨ |
| ೪ ಗುಣತೆಗೆದುದರಲ್ಲಿ ೨ ಗುಣವಾಯಿತು | ೧೦ |

ಉಳಿದ ಎರಡು ಗುಣದಲ್ಲಿ, ತ್ರಿವಿಧ ವಿವೇಕಗೈಸಿ=ತನ್ನ ಸತ್ಯ ಸಂಕಲ್ಪದಂತೆ ಮೂರುಭಾಗ ಮಾಡಿದನು. ಇದರಲ್ಲಿ ಇಂದಿರಿಗೆ ಒಂದು=ಲಕ್ಷ್ಮೀದೇವಿಯರಲ್ಲಿ ೧ ಭಾಗವಿಟ್ಟ. ಎರಡಾತ್ಮ ತನ್ನೊಳಗೆ=ಎರಡು ಆತ್ಮರೂಪ ತನ್ನೊಳಗೆ ಇಟ್ಟುಕೊಂಡ ॥ ೫ ॥

**ಭಾವಸೂಚನೆ :—**ಪಾಕೇತಿ ॥ ತದುಕ್ತಂ॥ ಸಾರ್ಧೈಕಂ ಚಿತ್ರ ದೈವತೇತಿ ॥ ವಂದೇತಿ ॥ ತದುಕ್ತಂ ॥ ಭಗವಾನ್ ಪ್ರದದಾವಿಂದ್ರೇ ಸಾರ್ಧೈಕಂ ಚಿತ್ರದೈವತೇ ॥ ಏಕಮೇವೇಂದ್ರಿಯಾಧಿಪೇ॥ ಏವಮೇವ ದದೌ ಜೀವೇ॥ ನಾಲ್ಕುವರೀತಿ ॥ ಉಕ್ತಂ ಚ॥ ದೈತ್ಯೇಭ್ಯಃ ಸಾರ್ಧಚತುರಾನ್ ಇತಿ॥ ಪ್ರತಿಪಾದಿತಂ ಚೈತತ್ ವಿಷ್ಣುರಹಸ್ಯೇ ॥ ಯರಡೇತಿ ॥ ಅಥ, ದ್ವೌ ತು ತುರೀಯಾಂಶೌ ಸ್ವಾತಂತ್ರ್ಯಾದವಶೇಷಿತೌ॥ ತೌ ವಿಧಾಯ ತ್ರಿಧಾ ತ್ರ್ಯಂಶಂ ಮಾಯಾಯೈ ಪ್ರದದೌ ಸ್ವಯಮ್॥ ಶೇಷಭಾಗದ್ವಯಂ ಸ್ವಸ್ಮಿನ್ ಸ್ಥಾಪಯೇತ್ಸ ನಿಜೇಚ್ಛಯಾ ಇತಿ॥ ಎರಡಾತ್ಮ॥ **ಎರಡುರೂಪ** ಅನೇನ ಸರ್ವತ್ರ ಸ್ವಾತಂತ್ರ್ಯ ಪದೇನ **ಶ್ರೀಹರಿರೂಪಮೇತ್ಯುಕ್ತಂ ಭವತಿ ॥೫॥** ಸರ್ವತ್ರ ಸ್ವಾತಂತ್ರ ಗುಣಗಳು ಶ್ರೀಹರಿಯ ರೂಪಗಳೆಂದು ಹೇಳಿದಂತಾಯಿತು. ಅಂದರೆ, ಶ್ರೀ ಹರಿಯ ಗುಣ ರೂಪಗಳಿಗೆ ಕಿಂಚಿತ್ತಾದರೂ ಭೇದವಿಲ್ಲ. ಶ್ರೀಹರಿಯೇ ತಾನು ಇಷ್ಟುರೂಪದಿಂದು ಕಾರ್ಯನಡೆಸುತ್ತಾನೆ.

**ವಿಶೇಷ ಸೂಚನೆ:—**ಶ್ರೀ ವಿಜಯದಾಸಾರ್ಯರು ಸ್ವಾತಂತ್ರ್ಯವಿಭಾಗ, ತಾರತಮ್ಯ ಸುಳಾದಿ–೧೩ ಅಶೂನ್ಯ ನಾಮಕ ಪೂರ್ಣ ಬ್ರಹ್ಮವೆಂಬ ಸುಳಾದಿ **ತ್ರಿವಿಡಿತಾಳದಲ್ಲಿ** ॥ ಅನಂತಾನಂತ ಗುಣ ಸ್ವಾತಂತ್ರ್ಯಾತ್ಮಕ। ಏನಂಬೆ

**ಸೃಷ್ಟಿಯ ಪ್ರಾರಂಭದಿ। ಜ್ಞಾನಮಯವಾದ ಅಭಿನ್ನ ಭಾಗದಿಂದ।** ಅನಂತಾತ್ಮಕ ಗುಣವೆ ಹತ್ತು । ಆನಂದದಿಂದ ತೆಗೆದು ಚತುರ್ಭಾಗವನ್ನೆ ಮಾಡಿ । ಸಾದಿ ದೇವ ಇವರೊಳೇಕಭಾಗ । ತಾ ನೋಡಿ ತೆಗೆದುಕೊಂಡು ಈ ಒಂದು ಭಾಗದೊಳು । ಎಣಿಕಿಗೆ ಹತ್ತು ಭಾಗಮಾಡಿ । ಪ್ರಾಣನಾಯಕಗೆ ಚತುರಾನನಗೆ ಇತ್ಯಾದಿ ॥ ಅಟ್ಟತಾಳ ಪೂರ್ತಿ ಮೇಲಿನ ವಿಭಾಗದಂತೆ ಯಾವ ಜೀವರೊಳಗೆ ವಿಭಾಗವನ್ನು ಹೇಳಿದ್ದಾರೆ.

ಮತ್ತು ಮುಂದೆ **ಆದಿತಾಳದಲ್ಲಿ** ಚತುರಭಾಗದೊಳೆರಡು। ಮಿತಿ ಯಾಯಿತು ಈಬಗೆ। ಅತಿಶಯ ಉಳಿದೆರಡು ಭಾಗ ಮಿ। ಳಿತದಿಂದ ತ್ರಯ ಭಾಗಮಾಡಿ । ಜಿತ ಶರೀರಳಾದ ತನ್ನ । ಸತಿ ಲಕುಮಿಗೆ ಒಂದು ಭಾಗ। ಹಿತದಿಂದ ಪಾಲಿಸಿದ । **ಪ್ರತಿ ಪ್ರತಿ ಸೃಷ್ಟಿಗೆ ಅ । ಚ್ಯುತ ದೇವಸ್ವರೂ ಪಾಂಶ** ಪ್ರಾ । ಕೃತಿ ಪ್ರಕೃತಿ ಬದ್ಧರಿಗೆ ಕೊ । ಡುತಲಿಪ್ಪ ಸ್ವಾತಂತ್ರ್ಯ । ಚತುರನಾಗಿ ಸರ್ವ ಜೀವಗತನಾಗಿ ತತ್ತತ್ಕಾಲ । ಗತಿಯಂತೆ, ಚೇಷ್ಟೇಮಾಡಿಸಿ। ಮತಿಕೊಡುವ ಪಾಪ ಪುಣ್ಯಕೆ ॥ ತುತಿಪೆ ಕೇಳು **ಉಳಿದಭಾಗದಿ । ಕ್ಷಿತಿಯೊಳಗೆ ಅವತಾರಾವೇಶಾ ।** ಚತುರಾಸ್ಯ ಮರುತಾ ಸರ। ಸ್ವತಿಶ್ರದ್ಧಾ ಗರುಡಾದಿ ಕಾಮದೇವತಾ ಸಮುದಾಯ । ದಿತಿಜ ಬಳಗ ಮನುಜೋತ್ತಮ ಸರ್ವ । ಇತರ ಜೀವಕ್ಕೆ ತತುಉಳಿದ ಭಾಗದಿಂದ । ರತಿಪತಿ ಪಿತ ವ್ಯಾಪಾರ ಮಾಡುವ । ಚತುರ ಮೂರುತಿ ವಿಜಯವಿಠ್ಠಲ್ಲಾ ಸತತ ತುರ್ಯ ಜೀವ ನಾಮಕ ॥೫॥ ಇಂತು ವಿಸ್ತಾರವಾಗಿ ಅಪ್ಪಣೆಕೊಡಿಸಿದ್ದಾರೆ. ಪ್ರತಿ ಪ್ರತಿ ಸೃಷ್ಟಿವ್ಯಾಪಾರಕ್ಕೆ ತನ್ನ ಅವತಾರಾವೇಶಗಳಿಗೆ ಮೂರುಭಾಗದಲ್ಲಿ ೨ ಭಾಗ, (೧) ಭಾಗ ಇಂದಿರೆಗೆ ಇತರ ಜೀವರಲ್ಲಿ, ಮೇಲ್ಕಾಣಿಸಿದಂತೆ ಸ್ವಸ್ವಾತಂತ್ರ್ಯ ರೂಪಗಳನ್ನಿಟ್ಟು ವ್ಯಾಪಾರಮಾಡುವನು. ಅನಂತಗುಣಗಳಲ್ಲಿ ಇಷ್ಟೇ ಸೃಷ್ಟಿಗೆ ತಕ್ಕ ಸ್ವಾತಂತ್ರ್ಯ ವಿಭಜನ ಒಂದು ಸೃಷ್ಟಿಗೆ ಆದಿಸೃಷ್ಟಿಯಲ್ಲಿ ತನ್ನ ರೂಪ ವಿಭಾಗ ಮಾಡಿಟ್ಟನೆಂದು ಸವಿಸ್ತರ ವರ್ಣಿಸಿದ ದಾಸರೆ ಜ್ಞಾನದಾಯಕರು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸಾರ್ಧೈಕಂ ಚಿತ್ತದೈಪತೇ ॥ ಭಗವಾನ್ ಪ್ರದದಾವಿಂದ್ರೇ ಕಾಮ್ಯೈಕಂ ತ್ರಿಂದ್ರಿಯಾತ್ಮಕೇ ॥ ಏಕಮೇವ ದದೌ ಜೀವೇ ದೈತ್ಯೇಭ್ಯಃ ಸಾರ್ಧಚಾತುರಾನ್ ॥ ಅಥ ದ್ವಾ ತು ತುರೀಯಾಂಶಾ ಸ್ವಾತಂತ್ರ್ಯಸ್ಯಾವಶೇಷಿತಾ ॥

ತೌ ವಿಧಾಯ ತ್ರಿಧಾ ತ್ರ್ಯಂಶಂ ಮಾಯಾಯೈ ಪ್ರದದೌ ಸ್ವಯಮ್ । ಶೇಷ ಭಾಗದ್ವಯಂ ಸ್ವಸ್ಮಿನ್ ಸ್ಥಾಪಯನ್ ಸನ್ ನಿಜೇಚ್ಛಯಾ ॥ ಇತಿ. ಪಾದಾರ್ಥೇತಿ ಪದ್ಯಾರ್ಥಮಾಹ–"ಪಾಕ" ಇತಿ ॥ ೫ ॥

## ಕನ್ನಡಾರ್ಥ

"೨ನೆಯ ಭಾಗದ ಉಳಿದ ೮ ಭಾಗಗಳಲ್ಲಿ ೧॥ ಭಾಗವನ್ನು ಚಿತ್ತ ದೇವತೆಯಾದ ಇಂದ್ರನಿಗೆ ಕೊಟ್ಟನು. ಕಾಮನಿಗೆ ಒಂದು ಭಾಗವನ್ನು ಕೊಟ್ಟನು. ಜೀವನಿಗೆ ಒಂದುಭಾಗ, ದೈತ್ಯರಿಗೆ ೪॥ ಭಾಗ. ಹೀಗೆ ಹಂಚಿದನು. ಇನ್ನು ಮೂಲ ನಾಲ್ಕು ಭಾಗಗಳಲ್ಲಿ ಎರಡು ಭಾಗಗಳನ್ನು ಹೀಗೆ ಅವಾಂತರ ವಿಭಾಗದಿಂದ ಹಂಚಿದನಂತರ ಉಳಿದ ಎರಡು ಭಾಗಗಳನ್ನು ತೆಗೆದುಕೊಂಡು ಅವುಗಳಲ್ಲಿ ಮೂರು ಭಾಗಗಳನ್ನು ಮಾಡಿದನು. ಮೂರನೆಯ ಭಾಗವನ್ನು ಅಥವಾ-೧ ಭಾಗವನ್ನು ರಮಾ ದೇವಿಯರಿಗೆ ಕೊಟ್ಟನು ಮಿಕ್ಕ ಎರಡುಭಾಗಗಳನ್ನು ತನ್ನಲ್ಲಿಯೇ ತನ್ನ ಇಚ್ಛೆಯಂತೆ ಇಟ್ಟುಕೊಂಡನು". ಎಂಬ ಭಾವದ ಪದ್ಯಗಳನ್ನು (೧॥ ಪಾದದ) ವಿವರಿಸುತ್ತಾರೆ. "ಪಾಕಶಾಸನ" ಎಂಬ ಪದ್ಯದಿಂದ. ॥೫॥

**ಅವತರಣಿಕಾ** :—ಅನಂತ ಬಗೆ ಸ್ವಾತಂತ್ರ್ಯವಿದ್ದರೂ, ಒಂದು ಬ್ರಹ್ಮಾಂಡ ಸೃಷ್ಟಿಗೆ ಹಿಂದೆ ಪೇಳಿದಂತೆ ಎಷ್ಟು ಶಕ್ತಿ ಸ್ವಾತಂತ್ರ್ಯ ಬೇಕೋ ಅಷ್ಟೇರೂಪದಿಂದ ರಮಿಸುತ್ತಾ ಬ್ರಹ್ಮಕಲ್ಪಾವಸಾನಕ್ಕೆ ಅವರಿಗೆ ನಿಜಗತಿ ಕೊಡುವನೆಂದು ವರ್ಣಿಸುತ್ತಾರೆ.

**ಈ ವಿಧದಿ ಸ್ವಾತಂತ್ರಿಯತ್ವವ ।**
**ದೇವಮಾನವ ದಾನವರೊಳು ರ ।**
**ಮಾ ವಿನೋದಿ ವಿಭಾಗಮಾಡಿಟ್ಟಲ್ಲೆ ರಮಿಸುವನು ॥**
**ಮೂವರೊಳಗಿದ್ದವರ ಕರ್ಮವ ।**
**ತಾ ವಿಕಾರವಗೈಸದಲೆ ಕ ।**
**ಲ್ಪಾವಸಾನಕೆ ಕೊಡುವನು ಅನಾಯಾಸವರಗತಿಯ ॥ ೬ ॥**

**ಪದ್ಯಾರ್ಥ** :—ಈ ವಿಧದಿ ಸ್ವಾತಂತ್ರಿಯತ್ವವ= (ಹಿಂದೆ ಪೇಳಿದಂತೆ) ಈ ಪ್ರಕಾರವಾಗಿ ತನ್ನ ಸ್ವಾಂಶ ಸ್ವಾತಂತ್ರ್ಯಗುಣ ರೂಪವನ್ನು, ದೇವ=ಬ್ರಹ್ಮಾದಿ

ದೇವತೆಗಳಲ್ಲಿ, ಮಾನವ=ಮನುಜಗಂಧರ್ವಾದಿ ತೃಣಾಂತ ಜೀವರಲ್ಲಿ, ದಾನವರೊಳು=ದನುದೇವಿಮಕ್ಕಳಾದ ದಾನವ ದೈತ್ಯಾದಿಗಳಲ್ಲಿ, ರಮಾವಿನೋದಿ= ಶ್ರೀ ಲಕ್ಷ್ಮೀದೇವಿಗೆ ವಿನೋದದಿಂದ ಆನಂದಕೊಡುವನಾದ ಶ್ರೀ ಹರಿಯೇ ವಿಭಾಗವ ಮಾಡಿಟ್ಟಲ್ಲಿ ರಮಿಸುವನು=ತನ್ನ ಸ್ವಭಾವ ಸ್ವಾತಂತ್ರ್ಯ ಗುಣಗಳ ರೂಪಗಳನ್ನು ವಿಭಾಗವಮಾಡಿ=ಯಾರಲ್ಲಿ ಎಷ್ಟೆಷ್ಟು ರೂಪಗಳನ್ನಿಡಬೇಕೋ ಇಟ್ಟಲ್ಲಿ=ಆ ಸ್ವರೂಪದಿಂದ ತಾನಿದ್ದು, ರಮಿಸುವನು=ವಿಹಾರ ಕ್ರೀಡಾ ಮಾಡುವನು. ಆದರೆ ತಾನೂ ಮೂವರೊಳಗಿದ್ದವರ ಕರ್ಮಗಳ ಮಾಡುವಲ್ಲಿ ರಮಿಸಿದರೂ, ತ್ರಿವಿಧ ಗುಣ ವಿಕಾರವಗೈಸದಲೆ=ತಾನು ಮೂವರು ದೇವ, ಮಾನವ, ದಾನವರ ಸತ್ವ, ರಜ, ತಮೋಗುಣ ವಿಕಾರ ಹೊಂದದಲೇ, ಮತ್ತು ತ್ರಿವಿಧರ ಚಿತ್ ಸ್ವರೂಪಕ್ಕೆ ಈ ಗುಣ ಬದ್ಧತೆ ವಿಕಾರ ಪೊಂದಿಸದೇ, ಕಲ್ಪಾವಸಾನಕೆ= ಬ್ರಹ್ಮಕಲ್ಪ ಕೊನೆಗೆ, ಅನಾಯಾಸ=ಯಾವ ತರದ ಆಯಾಸವಿಲ್ಲದೇ, ಅವರವರ ಗತಿಯ ಕೊಡುವನು=ತ್ರಿವಿಧರಿಗೆ ತ್ರಿವಿಧಗತಿಯನ್ನು ಕೊಡುತ್ತಾನೆ. ಜೀವನು ಚಿತ್ ಸ್ವರೂಪನು ಕರ್ಮವಿಕಾರದಿಂದ ಜೀವನ ಸ್ವರೂಪಕ್ಕೆ ಕರ್ಮಲೇಪವೇ ಇಲ್ಲ. ಲಿಂಗಶರೀರಾಂಭಿಸಿ ಸ್ಥೂಲಪರಿಯಂತ ಕರ್ಮಜನ್ಯ ವಿಕಾರವೆಂದು ಶಾಸ್ತ್ರದ ನಿಜಮರ್ಮವನ್ನು ವಿವರಿಸಿದ ವಿಜಯರಶಿಷ್ಯರ ಪಾದವೇ ನಮಗೆ **ಗತಿ.**

**ಭಾವಸೂಚನೆ :**—ಈವಿಧೇತಿ ||೬||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಯದಿಂದ್ರಿಯೇಣ ಯತ್ ಕರ್ಮ ಪುಣ್ಯಂ ಪಾಪಂ ಚ ದೃಶ್ಯತೇ || ತಸ್ಯ ತಸ್ಯ ಸ್ವತಂತ್ರತ್ವಾತ್ ಫಲಭಾಜೋಽಖಿಲಾ ಹಿ ತೇ ||" ಇತ್ಯಸ್ಯಾರ್ಥಮಾಹ "ಈ" ಇತಿ ||

## ಕನ್ನಡಾರ್ಥ

"ಯಾವ ಇಂದ್ರಿಯದಿಂದ ಯಾವ ಕರ್ಮವು ಮಾಡಲ್ಪಡುವದೋ ಪುಣ್ಯಪಾಪಗಳಾಗುವವೋ ಆಯಾ ಕರ್ಮ ಹಾಗೂ ಪುಣ್ಯ ಪಾಪಗಳಿಗೆ ಅವರೆಲ್ಲರೂ ಭಾಗಿಗಳಾಗುತ್ತಾರೆ." ಎಂಬ ಭಾವದ ಶ್ಲೋಕದ ಅರ್ಥವನ್ನು ಹೇಳುತ್ತಾರೆ. "ಈ ವಿಧದಿ" ಎಂಬ ಪದ್ಯದಿಂದ ||೬||

**ಅವತರಣಿಕಾ :—**ಶ್ರೀಹರಿಯ ಸ್ವಾತಂತ್ರ್ಯಗುಣ ಪ್ರೇರಣೆ ವಿನಾ ಜೀವನು ಜಡತುಲ್ಯನು. ಶ್ರೀಹರಿಯು ಶ್ರೀ ಭೂದುರ್ಗಾದೇವಿಯರಿಂದ ಕೂಡಿ ಲೀಲಾ ಮಾಡಲು, ಜೀವರಿಗೆ ಸ್ವರೂಪಾಧಿಕಾರಾನುಸಾರ ತ್ರಿಗುಣ ಕಾರ್ಯಗಳು ಹೊರಸೂಸುವವು ಎಂದು ದೃಷ್ಟಾಂತಪೂರ್ವಕ ಉಪದೇಶಗೈಯುತ್ತಾರೆ.

**ಆಲಯಗಳೊಳಿಪ್ಪ ದೀಪ ।**
**ಜ್ವಾಲೆವರ್ತಿಗಳನುಸರಿಸಿ ಜನ ।**
**ರಾಲಿಗೊಪ್ಪುವ ತೆರದಿ ಹರಿ ತಾ ತೋರ್ಪ ಸರ್ವತ್ರ ॥**
**ಕಾಲಕಾಲದಿ ಶ್ರೀಧರಾ ದು ।**
**ರ್ಗಾಲಲನೆಯರ ಕೂಡಿ ಸುಖಮಯ ।**
**ಲೀಲೆಗೈಯಲು ತ್ರಿಗುಣ ಕಾರ್ಯಗಳಿಹವು ಜೀವರಿಗೆ ॥ ೭ ॥**

**ಪದ್ಯಾರ್ಥ :—**ಆಲಯಗಳೊಳಿಪ್ಪ = ಮನೆಗಳಲ್ಲಿ ಇರುವ, ದೀಪದ ವರ್ತಿಗಳನುಸರಿಸಿ = ಬತ್ತಿಗಳು ಸಣ್ಣದು ದೊಡ್ಡವು ಇದ್ದಂತೆ ಆ ಬತ್ತಿಗಳಿಗೆ ಅನುಸಾರ, ಜ್ವಾಲೆ=ಪ್ರಕಾಶವು, ಜನರಾಲಿಗೊಪ್ಪುವ ತೆರದಿ = ಜನರ ಕಣ್ಣಿಗೆ ಪ್ರಕಾಶ ಕಾಣುವ ತೆರದಂತೆ, ಹರಿ ತಾ ತೋರ್ಪ ಸರ್ವತ್ರ = ಬಿಂಬನಾದ ಹರಿಯು ತಾನು ಅನಂತ ಕೋಟಿ ಸೂರ್ಯ ಪ್ರಕಾಶನಾದರೂ, ಆಯಾ ಜೀವರ ಸ್ವರೂಪ ಯೋಗ್ಯತಾನುಗುಣವಾಗಿ ಆ ಜೀವನ ಸ್ವರೂಪ ಪ್ರಕಾಶ-ಜ್ಞಾನ ಆನಂದಾದಿಗಳಲ್ಲಿ ತಾನು ತನ್ನ ಪ್ರಕಾಶವನ್ನಿಟ್ಟು ಜೀವರ ಪ್ರಕಾಶ, ತೋರ್ಪ ಸರ್ವತ್ರ = ನಿರಂತರದಲ್ಲಿ ತೋರುವನು. ಕಾಲಕಾಲದಿ = ಕ್ಷಣೆ ಕ್ಷಣೆ ಶ್ರೀಹರಿಯು, ಶ್ರೀಧರಾ, ದುರ್ಗಾಲಲನೆಯರ ಕೂಡಿ = ತನ್ನ ಪತ್ನಿಯರಾದ ತ್ರಿಗುಣ ಜಡ ಪ್ರಕೃತಿಗೆ ಅಭಿಮಾನಿಯರಾದ ಶ್ರೀ ಭೂದೇವಿ ದುರ್ಗಾದೇವಿಯರಿಂದ ಸಹಿತನಾಗಿ, ಸುಖಮಯ = ಚಿನ್ಮಯ, ಜ್ಞಾನ ಆನಂದಮಯನಾಗಿ, ಲೀಲೆಗೈಯಲು = ಜೀವಾಂತಃಪ್ರೇರಕನಾಗಿ ವ್ಯಾಪಾರ ಮಾಡಲು, ತ್ರಿಗುಣ ಕಾರ್ಯಗಳಿಹವು ಜೀವರಿಗೆ=ಸತ್ವಾದಿ ಜೀವರಿಗೆ ತ್ರಿವಿಧವಾದ ಕಾರ್ಯ ವ್ಯಕ್ತವಾಗುತ್ತವೆ. ಶ್ರೀಹರಿ ಪ್ರೇರಿಸದಿದ್ದರೆ ಜೀವರು ಜಡತುಲ್ಯ, ಹರಿನಿಂತು ಚಲಿಸಿದರೆ ಕಾರ್ಯ ಪ್ರವೃತ್ತಿ ॥ ೭ ॥

**ಭಾವಸೂಚನ :—**ಆಲಯೇತಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸ್ವಾತಂತ್ರ್ಯಂ ಚ ಗುಣಸ್ವರೂಪಮೇವ ಇತ್ಯಾಹ—"ಆಲಯ"—ಇತಿ॥ ॥೭॥

## ಕನ್ನಡಾರ್ಥ

"ಸ್ವಾತಂತ್ರ್ಯವು ಭಗವಂತನ ಸ್ವರೂಪವೇ ಆಗಿರುವದು" ಎಂಬುದಾಗಿ ಹೇಳುತ್ತಾರೆ. "ಆಲಯ" ಎಂಬ ಪದ್ಯದಿಂದ. ॥ ೭ ॥

**ಅವತರಣಿಕಾ :**—ಇಂದ್ರಿಯಗಳಿಗೆ ಪ್ರೇರಕನಾದ ಹರಿಗೆ ಇಂದ್ರಿಯಜ ಪುಣ್ಯ ಪಾಪಕರ್ಮಗಳನ್ನರ್ಪಿಸಲು ಪುಣ್ಯವ ಸ್ವೀಕರಿಸಿ ಪಾಪ ಭಸ್ಮಮಾಡುತ್ತಾನೆ. ಅಂದರೆ ಭಕ್ತ ಜನರ ನಿಂದಿಸುವರಿಗೆ, ಭಕ್ತರ ಪಾಪವಿತ್ತು, ಆ ನಿಂದಕರ ಪುಣ್ಯವನ್ನು ತನ್ನ ಭಕ್ತರಿಗೀವನೆಂದು ಉಪದೇಶಿಸುತ್ತಾರೆ.

**ಇಂದ್ರಿಯಗಳಿಂ ಮಾಳ್ಪ ಕರ್ಮ ।**
**ದ್ವಂದ್ವಗಳ ತನಗರ್ಪಿಸಲು ಗೋ ।**
**ವಿಂದ ಪುಣ್ಯವ ಕೊಂಡು ಪಾಪವ ಭಸ್ಮವನೆ ಮಾಳ್ಪ ॥**
**ಇಂದಿರೇಶನು ಭಕ್ತಜನರನು ।**
**ನಿಂದಿಸುವರೊಳಗಿಪ್ಪ ಪುಣ್ಯವ ।**
**ತಂದು ತನ್ನವಗೀವ ಪಾಪಗಳವರಿಗುಣಿಸುವನು ॥ ೮ ॥**

**ಪದ್ಯಾರ್ಥ :** — ಇಂದ್ರಿಯಗಳಿಂ ಮಾಳ್ಪ = ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮನಸ್ಸು ಒಂದು ಹೀಗೆ ಏಕಾದಶ ಇಂದ್ರಿಯಗಳಿಂದ ಹರಿ ಪ್ರೇರಿಸಿದಂತೆ ಆಗುವ, ಕರ್ಮ ದ್ವಂದ್ವಗಳ=ಪುಣ್ಯ ಪಾಪ ಎರಡೂ ಕರ್ಮಗಳನ್ನು, ತನಗರ್ಪಿಸಲು=ಶ್ರೀಹರಿಯೇ ನೀನು ಅಂತಃಪ್ರೇರಕನಾಗಿ ಮಾಡಿಸಿದ ಪುಣ್ಯಪಾಪಗಳು ನಿನಗೆ ಅರ್ಪಿತವಾಗಲಿಯೆಂದು ಭಕ್ತಿಯಿಂದ ನಾನು ಕರ್ತೃವಲ್ಲಿ ಸಕಲ ಕರ್ತಾ ಕಾರಯಿತಾ ಎಂಬ ಸುಜ್ಞಾನದಿಂದ ಶ್ರೀಹರಿಗೆ ಕೊಡಲು, ಗೋವಿಂದ="ಗಾಂ ವಾಣೀಂ ವಿಂದತಿ ಇತಿ ಗೋವಿಂದ", "ಗವಾಮಿಂದ್ರ ಇತಿ ವಾ ಗೋವಿಂದ", "ಗಾಂ ಭೂಮಿಂ ವಿಂದತಿ ಗೋವಿಂದ" (ವಿದ್ಯಾಧಿರಾಜೀಯ) ವೇದಗಳಿಂದ ಸ್ತುತ್ಯನಾದುದರಿಂದ ಗೋವಿಂದ ಹರಿಯು, ಪುಣ್ಯವ ಕೊಂಡು= ಪುಣ್ಯ[illegible]ವೆಂದು ಸ್ವೀಕರಿಸಿ, ಆ ಪುಣ್ಯಫಲವನ್ನು ಅರ್ಪಿಸಿದ ಭಕ್ತನಿಗೆ

ಕೊಡುವನು, ಪಾಪವ ಭಸ್ಮವನೆ ಮಾಳ್ಪ=ಭಕ್ತನ ಪಾಪಕರ್ಮಗಳನ್ನು ಸುಟ್ಟು ಬಿಡುತ್ತಾನೆ. ಅಂದರೆ ಪಾಪಕರ್ಮಲೇಪ ಭಕ್ತನಿಗಿಲ್ಲ. ಪಾಪ ಭಸ್ಮಮಾಡಿದವು ಎಲ್ಲಿ ಹೋಗುತ್ತವೆಂದು ಶಂಕಾ ಬಂದರೆ, ಇಂದಿರೇಶ=ರಮಾಪತಿ, ಭಕ್ತ ಜನರನ್ನು ನಿಂದಿಸುವರೊಳಗಿಪ್ಪ ಪುಣ್ಯವ=ಹರಿ ಹರಿಭಕ್ತ ನಿಂದಾದ್ವೇಷ ಮಾಡುವವರಲ್ಲಿರುವ ಪುಣ್ಯವನ್ನು ತಂದು, ತನ್ನವಗೀವ = ತನ್ನ ಭಕ್ತರಿಗೆ ಕೊಡುವ, ಭಕ್ತ ಜನರಲ್ಲಿಪ್ಪ ಪಾಪ, ಅವರಿಗುಣಿಸುವ ಭಕ್ತಜನ ನಿಂದಕರಿಗೆ ಪಾಪಫಲ ಉಣಿಸುವ=ಭೋಜನ ಮಾಡಿಸುತ್ತಾನೆ.

**ಭಾವಸೂಚನ :**—ಇಂದ್ರಿಯೇತಿ। ಪುಣ್ಯವ ಕೊಂಡೇತಿ ॥ ಪಾಪವ ಭಸ್ಮೇತಿ ॥ ಉಕ್ತಂ ಚ ಭೃಗುಮುನಿನಾ ॥ "ಯದಿಂದ್ರಿಯೇಣ ಯತ್ಕುರ್ವನ್ ಪುಣ್ಯಂ ಪಾಪಂ ಚ ದೃಶ್ಯತೇ ॥ ತಸ್ಯ ತತ್ತತ್ ಸ್ವತಂತ್ರತ್ವಾತ್ ಫಲಭಾಜೋಽಖಿಲಾ ಹಿ ತೇ ॥ ೧೧ ॥ ಗೃಣ್ಹಾತಿ ಹಿ ಹರಿಃ ಪುಣ್ಯಂ ಪಾಪಂ ಭಸ್ಮೀಕರೋತಿ ಚ ॥ ಸ್ವಸ್ಯ ಚ ದ್ರೋಹಿಣಃ ಕಿಂಚಿತ್ಪಾಪಾಂಶಂ ಪ್ರದದಾತಿ ಸಃ ॥೧೨॥ ತಥೈವ ನಿಜಭಕ್ತಾನಾಂ ಬ್ರಹ್ಮಾದೀನಾಂ ಚ ಯೇ ದ್ರುಹಃ ॥ ತೇಭ್ಯ ಏವ ಹಿ ತತ್ಪಾಪ ವಿಭಾಗಂ ಪ್ರದದಾತ್ಯಜಃ ॥೧೩॥ ಪಾಪ ಕರ್ಮಾಣಿ ಯೇಪಿ ಸ್ಯುಃ ಸಹಾಯಾಃ ಪಾಪರೂಪಿಣಃ ॥ ಯಥಾಪರಾಧಂ ತೇಭ್ಯೋಪಿ ಪಾಪಾನಾಂ ವಿಭಜತ್ಯಸೌ ॥ ॥ ೧೪ ॥ ದೈತ್ಯಭಾಗಗತಂ ಪುಣ್ಯಂ ತಥಾ ಭಾಗಂ ದದಾತಿ ಚ। ಪುಣ್ಯ ಕರ್ಮ ಸಹಾಯಾ ಯೇ ತೇಷಾಮಥ ಚ ಯೇ ನರಾಃ ॥೧೫॥ ಇತಿ ವಿಷ್ಣುರಹಸ್ಯೇ ॥೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಗೃಹ್ಣಾತೀತಿ ಹರಿಃ ಪುಣ್ಯಂ ಪಾಪಂ ಭಸ್ಮೀಕರೋತಿ ಚ । ಸ್ವಸ್ಯೈವ ದ್ರೋಹಿಣಃ ಕಿಂಚಿತ್ ಪಾಪಾಂಶಂ ಪ್ರದದಾತಿ ಸಃ ॥ ತಥೈವ ನಿಜಭಕ್ತಾನಾಂ ಬ್ರಹ್ಮಾದೀನಾಂ ಚ ಯೇ ದ್ರುಹಃ । ತೇಭ್ಯ ಏವ ಹಿ ತತ್ಪಾಪವಿಭಾಗಂ ಪ್ರದದಾತ್ಯಜಃ ॥ ಪಾಪಕರ್ಮಣಿ ಯೇಽಪಿ ಸ್ಯುಃ ಸಹಾಯಾಃ ಪಾಪಕಾರಿಣಃ। ಯಥಾಪರಾಧಂ ತೇಭ್ಯೋಪಿ ಪಾಪಾಂಶಂ ವಿಭಜತ್ಯಸೌ ॥ ದೈತ್ಯಭಾಗಗತಂ ಪುಣ್ಯಂ ಯಥಾಭಾಗಂ ದದಾತಿ ಚ । ಪುಣ್ಯ ಕರ್ಮಸಹಾಯಾಃ ಯೇ ತೇಷಾಮಥ ಚ ॥" ಇತಿ ಕಿಂಚಿತ್ ನ್ಯೂನ ಪದ್ಯ ಚತುಷ್ಟಯಾಭಿಪ್ರಾಯಮಾಹ— "ಇಂದ್ರಿಯೇ ॥" ಇತಿ ॥ ೮ ॥

## ಕನ್ನಡಾರ್ಥ

ಪುಣ್ಯವನ್ನು ಸ್ವೀಕರಿಸಿ ಹರಿಯು ಭಕ್ತರ ಪಾಪಗಳನ್ನು ಭಸ್ಮಮಾಡುತ್ತಾನೆ. ತನ್ನ ದ್ರೋಹಿಗಳಿಗೇ ಪಾಪಾಂಶಗಳನ್ನು ಕೊಡುತ್ತಾನೆ. ಹಾಗೂ ತನ್ನ ನಿಜಭಕ್ತರಾದ ಬ್ರಹ್ಮಾದಿಗಳಿಗೆ ದ್ರೋಹ ಬಗೆಯುವವರಿಗೂ ಪಾಪವನ್ನು ಹಂಚುತ್ತಾನೆ. ಪಾಪಕರ್ಮಗಳಲ್ಲಿ ಸಹಾಯವಾದವರೂ ಪಾಪ ಕರ್ಮ ಮಾಡಿದವರೇ ಆಗುತ್ತಾರೆ. ಅವರ ಅಪರಾಧಾನುಗುಣವಾಗಿ ಅವರಿಗೂ ಪಾಪಾಂಶವು ಹಂಚಲ್ಪಡುತ್ತದೆ. ದೈತ್ಯಭಾಗದಲ್ಲಿರುವ ಪುಣ್ಯವನ್ನು ಸತ್ಕರ್ಮ ಮಾಡಿದವರೂ ಹಾಗೂ ಪುಣ್ಯ ಕರ್ಮಗಳಲ್ಲಿ ಸಹಾಯವಾದವರೂ ಆದ ತನ್ನ ಭಕ್ತರಿಗೆ ಅವರವರಿಗೆ ತಕ್ಕಂತೆ ಕೊಡುತ್ತಾನೆ" ಎಂದು ಹೇಳುವ ಸುಮಾರು ನಾಲ್ಕು ಪದ್ಯಗಳ ಅಭಿಪ್ರಾಯುವನ್ನು ವಿಶದಪಡಿಸುತ್ತಾರೆ—"ಇಂದ್ರಿಯಗಳಿಂ" ಎಂಬ ಪದ್ಯದಿಂದ ॥ ೮ ॥

**ಅವತರಣಿಕಾ :** — ಪಾಪಕರ್ಮರತರಾದವರ ನಿಂದಾ ಮಾಡುವದು, ತನಗಿಂದುತ್ತಮರಾದವರ ಸುಗುಣಗಳ ಸ್ತೋತ್ರಮಾಡುವದು ಶಾಸ್ತ್ರಸಮ್ಮತವಿರಲು ನಿಂದಕರನ್ನು ನಿಂದಿಸದೇ ಉತ್ತಮರ ಗುಣಸ್ತೋತ್ರ ಮಾಡದೇ ಇರುವರಿಗೆ ನಿಂದಕರಿಗಿಂತಲೂ ಹೆಚ್ಚಿನ ಪಾಪ ಬರುತ್ತದೆಂದು ಹೇಳುತ್ತಾರೆ.

**ಹೊತ್ತು ಹೊತ್ತಿಗೆ ಪಾಪಕರ್ಮ ಪ್ರ ।**
**ವರ್ತಕರ ನಿಂದಿಸದೆ ತನಗಿಂ ।**
**ದುತ್ತುಮರಗುಣ ಕರ್ಮಗಳ ಕೊಂಡಾಡಲೆ ಇಪ್ಪ ॥**
**ಮರ್ತ್ಯರಿಗೆ ಗೋಬ್ರಾಹ್ಮಣ ಸ್ತ್ರೀ**
**ಹತ್ಯ ಮೊದಲಾದಖಿಳ ದೋಷಗ ।**
**ಳಿತ್ತಪನು ಸಂದೇಹ ಬಡಸಲ್ಲಖಿಳ ಶಾಸ್ತ್ರ ಮತ ॥ ೯ ॥**

**ಪದ್ಯಾರ್ಥ :**—ಹೊತ್ತು ಹೊತ್ತಿಗೆ=ಕಾಲ ಕಾಲಕೆ, ವೇಳೆವೇಳೆಗೆ, ಪಾಪಕರ್ಮ ಪ್ರವರ್ತಕರ ನಿಂದಿಸದೆ=ಕುಕರ್ಮ ಕೆಟ್ಟಕರ್ಮದಲ್ಲಿರತನಾದವ, ವೈಷ್ಣವಾಭಾಸಕ ಚಿಹ್ನಗಳನ್ನು ಧರಿಸಿ, ಅಗಮ್ಯಾಗಮನ, ಅಪೇಯಪಾನ, ಅಭಕ್ಷ್ಯಭಕ್ಷಣ, ಅನೃತಕಪಟ ಪರಹಿಂಸಾರತರಾದ ದುಷ್ಕಾರ್ಯ ಪ್ರವರ್ತಕರಲ್ಲದೇ, ಪಂಚಭೇದ ಶಾಸ್ತ್ರಜ್ಞಾನಶೂನ್ಯರೂ, ಅಜ್ಞಾನಿ ಮಿಥ್ಯಾಜ್ಞಾನಿಗಳನ್ನು

ಅವರ ಮರ್ಗಣಗಳನ್ನು ಭರ್ತ್ಸನ ಮಾಡಿ ನಿಂದಾ ಮಾಡದಿರುವರಿಗೆ, ಇದರ ವಿರುದ್ಧವಾಗಿ, ತನಗಿಂದುತ್ತಮರ ಗುಣಕರ್ಮಗಳ ಕೊಂಡಾಡಲಿ ಇಪ್ಪ=ತನಗಿಂತಲೂ ಹೆಚ್ಚಿನ ಗುಣವುಳ್ಳ ಭಗವದ್ಭಕ್ತರ ಉತ್ತಮ ಒಳ್ಳೇ ಪುಣ್ಯಕಾರ್ಯಗಳನ್ನು ಸ್ತುತಿಸದೇ ಇರುವ, ಮರ್ತ್ಯರಿಗೆ=ಭೂಲೋಕದ ನರಮನುಜರಿಗೆ ಕೆಟ್ಟವರ ನಿಂದಾ ಮಾಡದಿರುವದು, ಉತ್ತಮರ ಗುಣಹೊಗಳದೇ ಇರುವರು ಮರ್ತ್ಯರು=ನರಪಶುಗಳು ಅಜ್ಞಾನಿಗಳೆಂತ ಭಾವ ಇಂತಹ ಮರ್ತ್ಯರಿಗೆ, ಗೋ ಬ್ರಾಹ್ಮಣ ಸ್ತ್ರೀಹತ್ಯ ಮೊದಲಾದಖಿಳ ದೋಷಗಳು=ಆಕಳು, ಬ್ರಾಹ್ಮಣ, ಹೆಂಗಸು, ಶಿಶುವೇ ಮೊದಲಾದವರನ್ನು ಕೊಂದ ಪಾಪಗಳನ್ನು ಇತ್ತಪನು= ಕೊಡುವನು, ಇಡುವನು ಅಂದರೆ ಯಾವ ಕೆಲಸ ಶಾಸ್ತ್ರವಿಹಿತ ಮಾಡುವದು ಬಿಡುವ ನರನಿಗೆ ಪಾಪವೇ ಬರುವುದು, ಅಖಿಳ ಶಾಸ್ತ್ರ ಸಮ್ಮತವು=ಎಲ್ಲ ಶಾಸ್ತ್ರ ಪುರಾಣ ಆಗಮಗಳಿಗೆ ಸಮ್ಮತ. ಇದು ಭಗವಂತನ ಆಜ್ಞೆ. ಇದರಲ್ಲಿ ಸಂದೇಹ ಬಡಸಲ್ಲ = ಸಂಶಯ ಮಾಡಬೇಕಾಗಿಲ್ಲವೆಂದು ಉಪನಿಷದರ್ಥವನ್ನು ಹೇಳುತ್ತಾರೆ.

**ಭಾವಸೂಚನ** :—ಹೊತ್ತೀತಿ ॥ ದೈತ್ಯನಿಂದಾಂ ನ ಕುರ್ವಂತಿ ತೇಪಿ ತತ್ಪಾಪಭಾಗಿನಃ ॥ ಇತಿ ವಿಷ್ಣುರಹಸ್ಯೇ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಯೇ ನರಾಃ ॥ ದೈತ್ಯ ನಿಂದಾಂ ನ ಕುರ್ವಂತಿ ತೇಽಪಿ ತತ್ಫಲಭಾಗಿನಃ" (ಭೋಗಿನಃ) ಇತಿ ಕಿಂಚಿತ್ ಅಧಿಕಶ್ಲೋಕಾರ್ಥಂ—"ಯಃ ನಿಂದ್ಯಾಂಸ್ತು ನ ನಿಂದಯತಿ". ಇತಿ ಚ ಅರ್ಥತಃ ಗೃಹ್ಣಾತಿ "ಹೊತ್ತು" ಇತಿ ॥ ೯ ॥

## ಕನ್ನಡಾರ್ಥ

"ದೈತ್ಯರನ್ನು ನಿಂದಿಸದವರೂ ಸಹ ಸಜ್ಜನರ ಪಾಪ ಕರ್ಮ ಫಲ ಭಾಗಿಗಳಾಗುತ್ತಾರೆ. ಆದುದರಿಂದ ನಿಂದ್ಯರನ್ನು ನಿಂದಿಸಲೇಬೇಕು" ಎಂಬ ಅಭಿಪ್ರಾಯದ ಪದ್ಯವನ್ನು ಅರ್ಥಾತ್ ಸಂಗ್ರಹಿಸಿ ಹೇಳುತ್ತಾರೆ—"ಹೊತ್ತು ಹೊತ್ತಿಗೆ" ಎಂಬ ಪದ್ಯದಿಂದ ॥ ೯ ॥

**ಅವತರಣಿಕಾ** :—"ಓಂ ಶಕ್ತಿವಿಪರ್ಯಯಾತ್" "ಓಂ ಅಲ್ಪಶಕ್ತಿತ್ವಾಜ್ಜೀವಸ್ಯ" ಎಂಬ ಸರ್ವಜ್ಞರ ವಚನಾನುಸರಿಸಿ, ಜೀವರು ಅಲ್ಪಶಕ್ತಿಗಳು. ಫಲಾ

ಫಲಭೋಕ್ತೃತ್ವ ಶಕ್ತಿ ಜೀವರಿಗಿಲ್ಲದ ಕಾರಣ ಹರಿಯು ಜೀವರಲ್ಲಿ ತನ್ನ ಸ್ವಾತಂತ್ರ್ಯ ಸಾಮರ್ಥ್ಯವನ್ನಿಟ್ಟು ಫಲಭಾಗಿಗಳನ್ನು ಮಾಡಿದನೆಂಬ ರಹಸ್ಯ ಉಪದೇಶಿಸುತ್ತಾರೆ.




**ತನ್ನ ಸ್ವಾತಂತ್ರ್ಯ ಗುಣಗಳ ಹಿ।**
**ರಣ್ಯ ಗರ್ಭಾದ್ಯರಿಗೆ ಕಲಿಮುಖ।**
**ದಾನ್ನವರ ಸಂತತಿಗೆ ಅವರಧಿಕಾರವನುಸರಿಸಿ॥**
**ಪುಣ್ಯಪಾಪಗಳೀವ ಬಹು ಕಾ।**
**ರುಣ್ಯಸಾಗರನಲ್ಪಶಕ್ತಿಗ।**
**ಉಣ್ಣಲರಿಯದೆ ಇರಲು ಉಣಕಲಿಸಿದನು ಜೀವರಿಗೆ ॥ ೧೦ ॥**

**ಪದ್ಯಾರ್ಥ :**—ತನ್ನ ಸ್ವಾತಂತ್ರ್ಯ ಗುಣಗಳು=ಶ್ರೀಹರಿಯು ತನಗಿಂತ ಅಭಿನ್ನವಾದ ಸ್ವ=ಸ್ವತಂತ್ರನಾಮಕ ಹರಿಯು ತನ್ನ ಜ್ಞಾನಬಲ ಆನಂದ ಸ್ವತಂತ್ರ ಗುಣಗಳನ್ನು, ಹಿರಣ್ಯಗರ್ಭಾದ್ಯರಿಗೆ=ಬ್ರಹ್ಮದೇವರೇ ಮೊದಲಾದ ಮುಕ್ತಿಯೋಗ್ಯರಿಗೆ, ಕಲಿಮುಖದಾನ್ನವರ ಸಂತತಿಗೆ=ಕಲಿಯೆ ಮೊದಲಾಗಿ ಚತುರ್ವಿಧ ದೈತ್ಯಮತ್ಯಾಧಮರ ಸಂತತಿಗೆ=ದೈತ್ಯ ಪೀಳಿಗೆ ವಂಶಕ್ಕೆ, ಅವರಧಿಕಾರವನುಸರಿಸಿ=ಅವರವರ ಸ್ವರೂಪ ಸ್ವಭಾವ ಯೋಗ್ಯತಾನುಗುಣವಾಗಿ, ಪುಣ್ಯ=ದೇವತೆಗಳಿಗೆ ಪುಣ್ಯ=ಯೋಗ್ಯ ಕೃತಿಯ ಒಳ್ಳೇ ಫಲ, ಪಾಪಗಳೀವ=ದೈತ್ಯಾದಿಗಳಿಗೆ, ಪಾಪ=ಹೀನಕೃತ್ಯದ ಫಲ, ನರಕಾದಿಗಳನ್ನು ಕೊಡುವನು. ಅಲ್ಪ ಶಕ್ತಿಗಳುಣ್ಣಲು ಅರಿಯದೆ ಇರಲು=ಜೀವರ ಸ್ವರೂಪ ಜ್ಞಾನೇಚ್ಛಾ ಪ್ರಯತ್ನ ಶಕ್ತಿಗಳಿದ್ದರೂ, ಅಲ್ಪಶಕ್ತಿಗಳು ಏನು ಕಾರ್ಯ ಮಾಡಲರಿಯವು ಕಾರಣ ಬಹುಕಾರುಣ್ಯಸಾಗರ=ಬಹುಕರುಣಾಸಮುದ್ರನಾದ ಹರಿಯು ಜೀವರಿಂದ ಸಾಧನ ಮಾಡಿಸಿ ಅವರ ಗತಿ ಕೊಡಲೋಸುಗ ದಯೆಯಿಂದ ತನ್ನ ಶಕ್ತಿಗಳಿಂದ ಪ್ರೇರಿಸಿ, ಉಣಕಲಿಸಿದನು ಜೀವರಿಗೆ=ಅಲ್ಪಶಕ್ತಿಗರಾದ ಜೀವರಿಗೆ ಕರ್ಮ ಫಲಾಫಲ ಭೋಕ್ತೃತ್ವ ಶಕ್ತಿ ಇತ್ತು, ಅನಾದಿ ಕರ್ಮ ಸೇವನ ಮಾಡಿ, ಉಣಲಾರದ ಶಕ್ತಿ ಇಲ್ಲದವರಿಗೆ ಉಣಲಿಕ್ಕೆ ಶಕ್ತಿ ಇತ್ತ ಕಾರುಣಿಕ ಹರಿ.

**ಭಾವಸೂಚನ :**—ತನ್ನೇತಿ ॥ ಏವಂ ಪುಣ್ಯಸ್ಯ ಪಾಪಸ್ಯ ಚತ್ವಾರಿಂಶತ್ತಮಂ ಲವಮ್ ॥ ಪ್ರಾಪ್ನೋತಿ ಜೀವಸ್ತೇನೈವ ಪೂರ್ಣೋಯಂ ಭವತಿ

ಧ್ರುವಮ್ ॥ ಅಲ್ಪಶಕ್ತಿತ್ವತೋಽಲ್ಪಂ ಚ ಪುಣ್ಯಂ ಪಾಪಂ ಪ್ರಜಾಯತೇ ॥೧೭॥
ವಿಷ್ಣುರಹಸ್ಯೇ ॥ ೧೦ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಏವಂ ಪುಣ್ಯಸ್ಯ ಪಾಪಸ್ಯ ದಶಾಂಶಾನ್ ಜೀವಶಕ್ತಿತಃ ॥ ಪ್ರಾಪ್ನೋತಿ. ಜೀವಃ ತೇನೈವ ಪೂರ್ಣೋಽಯಂ ಭವತಿ ಧ್ರುವಮ್॥ ಅಲ್ಪಶಕ್ತೇಃ ತತೋಽಲ್ಪಂ ತು ಪುಣ್ಯಂ ಪಾಪಂ ಚ ಜಾಯತೇ ॥ ಇತಿ ಸಾರ್ಧಪದ್ಯತಾತ್ಪರ್ಯಂ ತ್ರಿಭಿಃ ಶ್ಲೋಕೈಃ ಆಹ—"ತನ್ನ" ಇತಿ ॥ ॥ ೧೦ ॥

### ಕನ್ನಡಾರ್ಥ

"ಈ ರೀತಿಯಾಗಿ ಪುಣ್ಯ ಹಾಗೂ ಪಾಪಗಳ ಭಾಗಗಳನ್ನೂ, ಶಕ್ತಿಯನ್ನೂ, ಪೂರ್ಣನಾದ ಭಗವಂತನಿಂದಲೇ ಜೀವನು ಪಡೆದು ಭಗವನ್ ಮಾಯೆಯಿಂದ (ಇಚ್ಛೆಯಿಂದ) ಅಲ್ಪಶಕ್ತಿಯಾದವನು ಅಲ್ಪವಾದ ಪುಣ್ಯಪಾಪಗಳನ್ನು ಹೊಂದುವನು" ಎಂಬ ಭಾವದ ವಿಷ್ಣು ರಹಸ್ಯ ಶ್ಲೋಕದ ತಾತ್ಪರ್ಯವನ್ನು ಮೂರು ಪದ್ಯಗಳಿಂದ ವಿವರಿಸಿ ತಿಳಿಸುತ್ತಾರೆ—"ತನ್ನ" ಎಂಬುದಾಗಿ ॥ ೧೦ ॥

**ಅವತರಣಿಕಾ :**—ಹಿಂದಿನ ಪದ್ಯದಲ್ಲಿ ವಿವರಿಸಿದ್ದೇ ದಾರ್ಢ್ಯಾರ್ಥವಾಗಿ ಮತ್ತೂ ಪ್ರಮೇಯ ವಿಸ್ತರಿಸಿ ಪರಮಾಣು ಜೀವಿಗೆ ಸ್ಥೂಲ ಪದಾರ್ಥ ಉಣ್ಣುವ ಶಕ್ತಿ ಇತ್ತ ಶ್ರೀಹರಿಯ ಮಹಿಮೆಯ ಕೊಂಡಾಡುತ್ತಾರೆ.

**ಸತ್ಯ ವಿಕ್ರಮ ಪುಣ್ಯ-ಪಾಪ ಸ ।**
**ಮಸ್ತರಿಗೆ ಕೊಡಲೋಸುಗದಿ ನಾ ।**
**ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ॥**
**ಅತ್ಯಲುಪ ಪರಮಾಣು ಜೀವಿಗೆ ಸಾ ।**
**ಮರ್ಥಿ(ರ್ಥ್ಯ)ಯೆನು ತಾ ಕೊಟ್ಟು ಸ್ಥೂಲ ಪ ।**
**ದಾರ್ಥಗಳನುಂಡುಣಿಪ ಸರ್ವದ ಸರ್ವಜೀವರಿಗೆ ॥ ೧೧ ॥**

**ಪದ್ಯಾರ್ಥ :**—**ಸತ್ಯವಿಕ್ರಮ**=ಸತ್ಯ-ವಿಕ್ರಮವೆಂದು ಎರಡು ಪದ ವಿಷ್ಣುಸಹಸ್ರನಾಮರೀತ್ಯಾ ಅರ್ಥಮಾಡಿದರೆ ಒಳ್ಳೇದು. ಸತ್ಯ=ನಿರ್ದುಃಖಾನಂದ ಪ್ರ[illegible]ತ್ವಾ[illegible]ನಾಹುಃ ಸತ ಮಚ್ಯುತಮಿತ್ಯುಕ್ತರೀತ್ಯಾ ಸತ್ಯಃ ॥ ನಿರ್ದುಃ

ಜ್ಞಾನಂದ ಪೂರ್ಣನಾದುದರಿಂದ ಸತ್ಯನೆಂತಲೂ, ಕ್ರಮಃ=ವಿಕ್ರಮಣಾದ್ವಿ ಕ್ರಮಃ ॥ ವಿನಾ ಪಕ್ಷಿಗರುಡೇನ ಕ್ರಮಣಾತ್ ವಿಶಿಷ್ಟಕಾರ್ಯಕ್ರಮತ್ತ್ವಾದ್ವಾ ವಿಕ್ರಮಃ (ವಿದ್ಯಾಧಿರಾಜೀಯ) ಅಂದರೆ ನಿರ್ದುಃಖಜ್ಞಾನಾನಂದ ಪರಿ ಪೂರ್ಣನೂ, ಸ್ವತಂತ್ರನಾದ ವಿಪಕ್ಷಿಪರಮಾತ್ಮನೋಃ ಎಂಬುವ ರೀತ್ಯಾ, ಸ್ವಸ್ವಾತಂತ್ರ್ಯದಿಂದ ಸಕಲ ಕ್ರಿಯಾ ಮಾಡಿಸುವವನೂ ಸತ್ಯವಿಕ್ರಮಹರಿಯು, ಪುಣ್ಯ ಪಾಪ=ಒಳ್ಳೆ ಕರ್ಮ, ಕೆಟ್ಟ ಕರ್ಮ ಸಮಸ್ತರಿಗೆ ಕೊಡಲೋಸುಗದಿ= ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಿಗೆ ಪುಣ್ಯ, ಕಲ್ಯಾದಿ ದೈತ್ಯ ಬಳಗಕ್ಕೆ ಪಾಪಕೊಡಲೋಸುಗವಾಗಿ, ಹಿಂದಿನ ಪದ್ಯಗಳಲ್ಲಿ ಹೇಳಿರುವಂತೆ; ನಾಲ್ವತ್ತು ಭಾಗವಮಾಡಿ= ನಾಲ್ಕು ಭಾಗದೊಳಗೆ ಹತ್ತು ಹತ್ತು ೪×೧೦=೪೦ ವಿಭಾಗ ಮಾಡಿ, ಅದರಲ್ಲಿ, ಲೇಶಾಂಶವನು, ಜನಕೀವ=ಕಿಂಚಿತ್ ಸ್ವಲ್ಪ ಅಂಶ ಒಂದು ಅಂಶವನ್ನು ಜನಕೀವ=ಜೀವರಿಗೆ ಕೊಡುವನು, ಇಂತಹ ಅಲ್ಪ ಅಂಶ ಶಕ್ತಿ ಜನಗಳಿಗೆ ಕೊಟ್ಟು ಅತ್ಯಲ್ಪ ಪರಮಾಣು ಜೀವಿಗೆ=ಸ್ವರೂಪತಃ ಅಲ್ಪ ಶಕ್ತಿತಃ ಅಲ್ಪ ಗುಣತಃ ಅಲ್ಪರಾದ ಜೀವರಿಗೆ, ಲೇಶಸ್ವಕಲೆ ಸ್ವಾತಂತ್ರ್ಯವನ್ನು ಪ್ರವೇಶಮಾಡಿಸಿ, ಸಾಮರ್ಥ್ಯವನ್ನು ಕೊಟ್ಟು ಸ್ಥೂಲಪದಾರ್ಥಗಳನುಂಡುಣಿಸ ಸರ್ವದಸರ್ವಜೀವರಿಗೆ=ಸದಾ ಕಾಲದಲ್ಲಿ ಪರಮಾಣುವಾದ ಸಕಲ ಜೀವರಿಗೆ ಸ್ಥೂಲವಾದ ಮಹತ್ ಪದಾರ್ಥಗಳಲ್ಲಿಪ್ಪ ಸ್ವಾಖ್ಯರಸ ತಾನುಂಡು, ಜೀವರಿಗೆ ಉಣಿಸುವನು ಎಂತ ಅಭಿಪ್ರಾಯ. ಶ್ರೀಹರಿಯ ಶಕ್ತಿಪ್ರಚೋದನದಿಂದಲೇ ಜೀವರಲ್ಲಿ ಕಾರ್ಯವಾಗುವುದು.

**ಭಾವಸೂಚನ :**—ಸತ್ಯೇತಿ ॥ ೧೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸತ್ಯ ವಿಕ್ರಮಃ" ಇತಿ ॥ ಓಂ ॥ ಇಂದ್ರೋಽವಸೇ ವೃಧಾತಿ ಏವೇಂ ದಿಂದ್ರಃ ಸುತೇ ಅಸ್ತಾವಿ ಸೋಮೇ ಭರದ್ವಾಜೇಷು ಕ್ಷಯದಿನ್ ಮಘೋನಃ ಅಸದ್ಯಥಾ ಜರಿತ್ರೇ ॥ ಓಂ ॥ ಸತ್ಯಂ ಸಮೀಚೀನಂ ಸೋಮಾಭಿಷವಾದಿಕರ್ಮ। ತತ್ಪರಾಃ ಭರದ್ವಾಜಾದಯಃ॥ ತಾನ್ ಆಕ್ರಮತೇ ಪ್ರಾಪ್ನೋತಿ ಇತಿ ತಥೋಕ್ತಃ ॥ ೧೧ ॥

## ಕನ್ನಡಾರ್ಥ

"ಸತ್ಯವಿಕ್ರಮ" ಎಂಬ ನಾಮವು ವಿಷ್ಣುಸಹಸ್ರ ನಾಮಾಂತರ್ಗತವಾದುದು. ಸತ್ಯ–ಸಮೀಚೀನವಾದ ವಿಧಿಗೆ ಅನುಸಾರವಾಗಿರುವ ಸೋಮವನು ಹೋಮಿಸುವದು ಮುಂತಾದ ಕರ್ಮಗಳಲ್ಲಿ ತತ್ಪರರಾದ ಭರದ್ವಾಜ ಮುಂತಾದ್ವರನ್ನು ಕುರಿತು ಪ್ರೀತಿಯಿಂದ ಒಲಿದು ಬರುತ್ತಾನೆ ಆದುದರಿಂದ "ಸತ್ಯವಿಕ್ರಮ" "ಸತ್ಯ ಪರಾಕ್ರಮ" ಎನ್ನುತ್ತಾರೆ ಎಂದು ಬೃಹತೀಮಂತ್ರ ಸಂಸೂಚಿತವಾದ ಅರ್ಥ ॥ ೧೧ ॥

**ಅವತರಣಿಕಾ:**—ಶ್ರೀಲಕ್ಷ್ಮೀಶನು ಸರ್ವ ಜೀವಿಗಳಲ್ಲಿದ್ದು ವ್ಯಾಪಾರ ಮಾಡಿದರೂ ಲೇಶದೋಷರಹಿತನೆಂದು ದೃಷ್ಟಾಂತಪೂರ್ವಕ ವರ್ಣಿಸುತ್ತಾರೆ.

**ತಿಮಿರ ತರಣಿಗಳೇಕ ದೇಶದಿ।**
**ಸಮನಿಸಿಪ್ಪವೆ ಎಂದಿಗಾದರು।**
**ಭ್ರಮಣಛ(ಚ)ಳಿ ಬಿಸಲಂಜಿಕೆಗಳುಂಟೇನೊ ಪರ್ವತಕೆ॥**
**ಅಮಿತ ಜೀವರೊಳಿದ್ದು ಲಕ್ಷ್ಮೀ।**
**ರಮಣ ವ್ಯಾಪಾರಗಳ ಮಾಡುವ।**
**ಕಮಲ ಪತ್ರ ಸರೋವರಗಳೊಳಗಿಪ್ಪ ತೆರನಂತೆ ॥ ೧೨ ॥**

**ಪದ್ಯಾರ್ಥ:**—ತಿಮಿರ=ಕತ್ತಲೆ, ತರಣಿ=ಸೂರ್ಯನು ಸುಪ್ರಕಾಶನು ಏಕದೇಶದಿ=ಒಂದೇ ಕಡಿಯಲ್ಲಿ, ಕತ್ತಲೆ ಮತ್ತು ಸೂರ್ಯರು, ಒಂದೆಡೆ ಸಮನಿಸಿಪ್ಪವೆ ಎಂದಿಗಾದರೂ=ಒಂದು ದೇಶಕಾಲಗಳಲ್ಲಿ, ಕೂಡಿರುವದು ಹೇಗೆ ಅಶಕ್ಯವೋ, ಸೂರ್ಯನಿಗೆ ಕತ್ತಲೆ ಅಂಜಿಕೆ ದೋಷವಿರುವದೆ? ಇಲ್ಲ. ಪರ್ವತಕ್ಕೆ=ಗುಡ್ಡಗಳು ಗಿರಿಗಳು ಅಚಲ-ಸ್ಥಿರವಾದುವು, ಪರ್ವತಕ್ಕೆ, ಭ್ರಮಣ=ತಿರುಗಾಡುವಿಕೆ ಸುತ್ತುವಿಕೆ ಭ್ರಮಿಸುವಿಕೆ, ಮತ್ತು ಚಳಿ, ಬಿಸಲು, ಮಳೆ ಬೇಕಾದಷ್ಟು ಬಂದರೆ, ಪರ್ವತಕ್ಕೆ ಏನಾದರೂ, ಅಂಜಿಕೆ=ಹೆದರಿಕೆಯುಂಟೆ? ಇಲ್ಲ. ಹಾಗೆಯೇ, ಸೂರ್ಯಕೋಟಿ ಪ್ರಕಾಶಕ, ಪರ್ವತದಂತೆ ಸುಸ್ಥಿರವಾಗಿ ಜೀವಿಗಳಲ್ಲಿ ಇದ್ದು, ಲಕ್ಷ್ಮೀರಮಣ = ಲಕ್ಷ್ಮೀಪತಿಯು, ಸಕಲ ಇಂದ್ರಿಯಗಳಿಂದ ವ್ಯಾಪಾರ ಮಾಡಿಸುತ್ತಿದ್ದರೂ ನಿರ್ಲಿಪ್ತನು. ಹೇಗಂದರೆ, ಸರೋವರದ ನೀರಿನಲ್ಲಿ, ಕಮಲದ ಹೂವು ಇದ್ದರೂ, ನೀರಿನ ಸಂಪರ್ಕ ಕಮಲ ಪತ್ರಗಳಿಗೆ ಇಲ್ಲದಂತೆ

ಶ್ರೀಹರಿಯು ಸುಪ್ರಕಾಶನು, ಸುದೃಢನು, ನಿರ್ಲೇಪನೆಂದು ಉಪದೇಶಗೈದಿದ್ದಾರೆ. ಶ್ರೀಹರಿಯ ಅಘಟಿತ ಶಕ್ತಿ.

**ಭಾವಸೂಚನ :—** ತಿಮಿರೇತಿ ॥ ೧೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಿಮಿರ" ಇತಿ ॥ ೧೨ ॥

## ಕನ್ನಡಾರ್ಥ

ಶರೀರಾದಿಗಳಲ್ಲಿರುತ್ತಿದ್ದರೂ ಪರಮಾತ್ಮನಿಗೆ ದೋಷಲೇಪವಿಲ್ಲವೆಂಬುದಾಗಿ ತಿಳಿಸುತ್ತಾರೆ—"ತಿಮಿರ" ಎಂಬ ಪದ್ಯದಿಂದ ॥ ೧೨ ॥

**ಅವತರಣಿಕಾ :—** ಬ್ರಹ್ಮಾದಿ ತೃಣಾಂತಸತ್ವಜೀವರು ಕಲ್ಯಾದಿ ದೈತ್ಯರ ಯೋಗ್ಯತೆಯಂತೆ ಫಲವೀವನೆಂದು ಅಂಬುಧಿಜಲ, ಅಣುಮಹಘಟಗಳ ದೃಷ್ಟಾಂತದಿಂದ ಉಪದೇಶಿಸುತ್ತಾರೆ.

**ಅಂಬುಜೋದ್ಭವ ಮುಖ್ಯಸುರ ಕಲಿ ।**
**ಶಂಬರಾದಿ ಸಮಸ್ತ ದೈತ್ಯ ಕ ।**
**ದಂಬಕನುದಿನ ಪುಣ್ಯಪಾಪವ ಭಾಗವಂ ಮಾಡಿ ॥**
**ಅಂಬುಧಿಯ ಜಲವಣು ಮಹದ್ಘಟ ।**
**ದಿಂಬನಿತು ತುಂಬುವತೆರದಿ ಪ್ರತಿ ।**
**ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲವೀವ ॥ ೧೩ ॥**

**ಪದ್ಯಾರ್ಥ :—** ಅಂಬುಜ=ಕಮಲ, ಉದ್ಭವ=ಕಮಲದಲ್ಲಿ ಹುಟ್ಟಿದ ಬ್ರಹ್ಮದೇವರೆ, ಮುಖಸುರ= ಮೊದಲಾದ ಎಲ್ಲ ದೇವತೆಗಳು, ಕಲಿಶಂಬರಾದಿ ಸಮಸ್ತ ದೈತ್ಯ= ಕಲಿ ಶಂಬರಾಸುರನೇ ಮೊದಲಾಗಿ ದೈತ್ಯರ, ಕಂದಬಕನುದಿನ= ಸಮೂಹಕ್ಕೆ ನಿತ್ಯದಲ್ಲಿ, ಪುಣ್ಯ ಪಾಪ ವಿಭಾಗವಂಮಾಡಿ,=ಪುಣ್ಯ ಒಳ್ಳೆ ಸದ್ಧರ್ಮ ಫಲ ದೇವತೆಗಳಿಗೆ, ಪಾಪ= ಕೆಟ್ಟ ಕುಕರ್ಮ ಫಲವನ್ನು ದೈತ್ಯರಿಗೆ ಅವರ ಸ್ವರೂಪವನುಸರಿಸಿ, ಪುಣ್ಯವಂತರಾದ ದೇವತೆಗಳಿಗೆ ಪುಣ್ಯ, ಕುಕರ್ಮ ನಿರತರಾದ ದೈತ್ಯಾದಿಗಳಿಗೆ ಪಾಪಫಲವನ್ನು ಅವರವರ ಯೋಗ್ಯತೆಯಂತೆ ವಿಭಾ

ಗವಂ ಮಾಡಿ=ಹಂಚಿಹಾಕುತ್ತಾನೆ. ಹೇಗಂದರೆ ದೃಷ್ಟಾಂತದಿಂದ ಹೇಳುತ್ತಾರೆ. ಅಂಬುಧಿಯ ಜಲ=ಅಗಾಧವಾದ ಸಮುದ್ರದ ನೀರು, ಅಣು ಮಹ ಘಟ=ಚಿಕ್ಕ ದೊಡ್ಡ ಕೊಡಗಳಲ್ಲಿ ಆ ಸಣ್ಣ ದೊಡ್ಡ ಪಾತ್ರೆಗಳಲ್ಲಿ ನೀರು ಎಷ್ಟು ಹಿಡಿಯುತ್ತವೋ ಅಷ್ಟೇ ನೀರು ತುಂಬುವಂತೆ, ಸಮುದ್ರ ಸದೃಶನಾದ ಹರಿಯು, ಅಲ್ಪ ಅಣುಮಹ ಘಟ ಸದೃಶರಾದ ಜೀವರಾದ ಪ್ರತಿಬಿಂಬರಲ್ಲಿ ತಾನಿದ್ದು ಯೋಗ್ಯತೆಯಂತೆ ಫಲವೀವ=ಅವರವರ ತಕ್ಕ ಸ್ವರೂಪ ಅಧಿಕಾರ ಯೋಗ್ಯತಾನುಸರಿಸಿ, ಫಲವೀವ=ಲಾಭವನ್ನು ದಾನಮಾಡುವನು.

**ಭಾವಸೂಚನ :—** ಅಂಬುಜೋದ್ಭವೇತಿ ॥ ಸ್ವಯೋಗ್ಯಂ ಜಲಮಾದತ್ತೇ ಸಮುದ್ರಾದುದ್ಧೃತೋ ಘಟಃ॥ ತಾವತ್ತೈವ ಭವೇತ್ಪೂರ್ಣ ಏವಮತ್ರ ನಿದರ್ಶನಮ್ ॥ ೧೮ ॥ ಇತಿ ವಿಷ್ಣು ರಹಸ್ಯೇ ತ್ರಿಂಶೋಽಧ್ಯಾಯಃ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ವಯೋಗ್ಯಂ ಜಲಮಾದತ್ತೇ ಸಮುದ್ರಾತ್ ಉದ್ಧೃತೋ ಘಟಃ ॥ ತಾವತ್ತೈವ ಭವೇತ್ ಪೂರ್ಣ (೦) ಏವಮತ್ರ ನಿದರ್ಶನಮ್" ॥ ಇತ್ಯಭಿಪ್ರಾಯಮಾಹ "ಅಂಬುಜೋದ್ಭವ" ಇತಿ ॥ ೧೩ ॥

## ಕನ್ನಡಾರ್ಥ

ಕೊಡವು ಸಮುದ್ರದಿಂದ ತನಗೆ ಯೋಗ್ಯವಾದಷ್ಟೇ (ಹಿಡಿಸುವಷ್ಟೇ) ಜಲವನ್ನು ತೆಗೆದುಕೊಳ್ಳುತ್ತದೆ. ತನಗೆ ಹಿಡಿಸುವಷ್ಟು ತೆಗೆದುಕೊಳ್ಳುವದೇ ಪೂರ್ಣತೆಯೆನಿಸುವದರಿಂದ ಕೊಡವು "ತುಂಬಿತು—ಪೂರ್ಣವಾಯಿತು" ಎನ್ನುವರು. ಇದು ದೃಷ್ಟಾಂತವಾಗಿರುವದೆಂಬುದಾಗಿ ಹೇಳುತ್ತಾರೆ. "ಅಂಬುಜೋದ್ಭವ" ಎಂಬ ಪದ್ಯದಿಂದ. ॥ ೧೩ ॥

**ಅವತರಣಿಕಾ :—** ಈ ಸ್ವಗತ ಸ್ವಾತಂತ್ರ್ಯ ವಿಭಾಗವನ್ನು ನಾನು ನನ್ನ ಸ್ವಮತಿಯಿಂದ ಹೇಳಿದ್ದಲ್ಲ. ವಿಷ್ಣು ರಹಸ್ಯವೆಂಬ ಗ್ರಂಥದಲ್ಲಿ, ಶ್ರೀ ಭೃಗುಋಷಿಗಳು ಇಂದ್ರದ್ಯುಮ್ನರಾಜನಿಗೆ ಹೇಳಿದುದನ್ನೇ ಹೇಳಿದ್ದೇನೆ. ಬುಧರು ಅನುಚಿತೋಕ್ತಿಗಳಿದ್ದರೂ ಕ್ಷಮಿಸಿ ಪಾಂಡಿತ್ಯ ಮತ್ಸರವನ್ನು ಬಿಟ್ಟು ಕೇಳುವದೆಂದು ದಾಸರು ವಿನಯಪೂರ್ವಕ ವಿಜ್ಞಾಪಿಸುತ್ತಾರೆ.

**ಇನಿತು ವಿಷ್ಣು ರಹಸ್ಯದೊಳು ಭೃಗು।**
**ಮುನಿಪ ಇಂದ್ರದ್ಯುಮ್ನಗರುಪಿದ।**
**ದನು ಬುಧರು ಕೇಳುವದು ನಿತ್ಯದಿ ಮತ್ಸರವ ಬಿಟ್ಟು॥**
**ಅನುಚಿತೋಕ್ತಿಗಳಿದ್ದರೆಯು ಸರಿ।**
**ಗಣನೆ ಮಾಡದಿರೆಂದು ವಿದ್ವ।**
**ಜ್ಜನಕೆ ವಿಜ್ಞಾಪನೆಯ ಮಾಡುವೆ ವಿನಯಪೂರ್ವಕದಿ ॥ ೧೪ ॥**

**ಪದ್ಯಾರ್ಥ :—** ಇನಿತು=ಈ ಪ್ರಕಾರವಾಗಿ ಹಿಂದೆ ಹೇಳಿದಂತೆ ವಿಷ್ಣು ರಹಸ್ಯದೊಳು=ಶೌನಕಾದಿ ಋಷಿಗಳ ಸೂತರ ಸಂವಾದವೆಂಬ ಗ್ರಂಥದಲ್ಲಿ, ಭೃಗು ಮುನಿಪ=ಶ್ರೀ ಭೃಗುಋಷಿಗಳು, ಇಂದ್ರದ್ಯುಮ್ನಗರುಪಿದದನು=ಇಂದ್ರದ್ಯುಮ್ನ ನೆಂಬ ರಾಜನಿಗೆ ಹೇಳಿದುದನ್ನೇ, (ನಾನು ಹೇಳಿದ್ದೇನೆ.) ನಿತ್ಯದಿ=ಪ್ರತಿನಿತ್ಯ ಕಾಲಕಾಲಕ್ಕೆ, ಬುಧರು=ಜ್ಞಾನಿಗಳು ಪಂಡಿತರು, ಮತ್ಸರವಬಿಟ್ಟು=ಅಸೂಯೆ ಹೊಟ್ಟೆಕಿಚ್ಚು ಸಿಟ್ಟು ಬಿಟ್ಟು, (ಪಂಡಿತರಿಗೆ ಮತ್ಸರ ಎಲ್ಲಿಂದವೆಂದರೆ, ಅಹಂ ಪಂಡಿತಂ ಮನ್ಯಮಾನರ ಉದ್ದೇಶ ಇಟ್ಟುಕೊಂಡು ಈ ಮತ್ಸರ ಶಬ್ದ ಪ್ರಯೋಗ) ಕೇಳುವದು. ಏಕಂದರೆ, ಇದರಲ್ಲಿ ಅನುಚಿತೋಕ್ತಿಗಳಿದ್ದರೆಯು ಸರಿ = ಉಚಿತ ವಲ್ಲದ ಶಾಸ್ತ್ರಕ್ಕೆ ಅಸಮ್ಮತವಾದ, ಉಕ್ತಿ=ಮಾತುಗಳು ಇದ್ದರೆಯು ಸರಿ= ಇದ್ದರೂ ಇರಬಹುದು, (ಇದೇನು? ವರ್ಣಾಭಿಮಾನಿ ದೇವತೆಗಳೇ ನಿಂತು ನುಡಿಸಿದ ಈ ಗ್ರಂಥದಲ್ಲಿ ಅನುಚಿತ ಮಾತುಗಳು ಹೇಗೆ ಬಂದವು ಎಂಬ ಶಂಕಾ ಇದು ಸರಿಯಲ್ಲ. ಹೇಗಂದರೆ, ಮತ್ಸರಗ್ರಸ್ತರಾದ ಪಂಡಿತಂ ಮನ್ಯಮಾನರಿಗೆ, ಸ್ವಗತಸ್ವಾತಂತ್ರ್ಯ ದತ್ತಸ್ವಾತಂತ್ರ್ಯ ನಿಜಭಾವ ತಿಳಿಯದ ಕಾರಣ ಅವರಿಗೆ ಕರ್ಣಕಠೋರ ಅನುಚಿತ ಉಕ್ತಿಗಳೆ ಹೊರತಾಗಿ ಶಾಸ್ತ್ರ ಮರ್ಮ ಬಲ್ಲ ವಿದ್ವ ಜ್ಜನರಿಗಲ್ಲವಾದರೂ, ದಾಸಾರ್ಯರು ಸ್ವಾಹಂಕಾರ ಖಂಡನರೂಪ, ವಿನಯ ತೋರಿದ್ದಾರೆ) ಗಣನೆ ಮಾಡದಿರೆಂದು=ಅನುಚಿತೋಕ್ತಿ ಇದ್ದರೂ ಎಣಿಸ ಬೇಡಿರೆಂದು, ವಿದ್ವಜ್ಜನಕೆ=ನಿಜವಾದ ತಿಳುವಳಿಕೆಯುಳ್ಳ ವೇದಶಾಸ್ತ್ರ ವಿಚಾರ ಬಲ್ಲ ಪಂಡಿತರು ಜ್ಞಾನವುಳ್ಳವರಿಗೆ, ವಿಜ್ಞಾಪನೆಯ ಮಾಡುವೆ=ಬೇಡಿ ಕೊಳ್ಳುವೆ, ವಿನಯಪೂರ್ವಕದಿ=ನಮ್ರಭಾವದಿಂದ, ಅನುಚಿತ ಉಕ್ತಿಗಳಿದ್ದರೂ ಎಣಿಸದಿರೆಂದು ಪ್ರಾರ್ಥನೆಗೈದುದು ಉತ್ತಮರ ಲಕ್ಷಣ.

**ಭಾವಸೂಚನ :—** ಏತತ್ ಸರ್ವಂ ಸಪ್ರಮಾಣಕಮಿತ್ಯಾಹ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅತ್ರೈವಂ ಪಂಚದ(ಶೋ)ಶಾಧ್ಯಾಯಃ ಅವಸಿತಃ ॥ ಅತ್ರಾಪಿ ಉಪ ಸಂಹರತಿ—"ಇನಿತು" ಇತಿ ॥ ೧೪ ॥

"ಅನುಚಿತೋಕ್ತಿ"=ಪ್ರಾಕೃತೋಕ್ತಿ ॥

## ಕನ್ನಡಾರ್ಥ

ಇಲ್ಲಿಗೆ ವಿಷ್ಣುರಹಸ್ಯದ ೧೫ನೆಯ ಅಧ್ಯಾಯವು ಕೊನೆಗೊಂಡುದರಿಂದ ಉಪಸಂಹರಿಸುತ್ತಾರೆ "ಇನಿತು" ಎಂಬ ಪದ್ಯದಿಂದ.

ಅನುಚಿತೋಕ್ತಿಗಳೆಂದರೆ ಪ್ರಾಕೃತೋಕ್ತಿಗಳೆಂದು ತಿಳಿಯಬೇಕು ॥೧೪॥

**ಅವತರಣಿಕಾ** :—ಶ್ರೀಹರಿಯ ಅನಂತಗುಣ ಉತ್ಕರ್ಷಪೂರ್ವಕ, ಮೈಮರೆದು ಮಹಾಸ್ತೋತ್ರವನ್ನು ಗೈಯ್ಯುತ್ತ ಸ್ವಗತಸ್ವಾತಂತ್ರ್ಯಸಂಧಿ ಉಪ ಸಂಹಾರಗೈದು ಬಿಂಬರೂಪಿ ಹರಿಗೆ ಅರ್ಪಿಸುತ್ತಾರೆ.

**ವೀತಭಯ ವಿಶ್ವೇಶ ವಿಧಿಪಿತ ।**
**ಮಾತುಳಾಂತಕ ಮಧ್ವವಲ್ಲಭ ।**
**ಭೂತಭಾವನನಂತ ಭಾಸ್ಕರತೇಜ ಮಹರಾಜ ॥**
**ಗೌತಮನ ಮಡದಿಯನು ಕಾಯ್ದಾ ।**
**ನಾಥರಕ್ಷಕ ಗುರುತಮ ಜಗ ।**
**ನ್ನಾಥವಿಟ್ಠಲ ತನ್ನನಂಬಿದ ಭಕುತರನು ಪೊರೆವ ॥ ೧೫ ॥**

ಅಂತು ಸಂಧಿ ೧೬ ಪದ ೪೮೭ಕ್ಕೆ ಸ್ವಗತಸ್ವಾತಂತ್ರ್ಯಸಂಧಿ ಸಮಾಪ್ತ.

॥ ಮಂಗಳಮಾಹ ಶ್ರೀಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ:**—ವೀತಭಯ=ವೀತಂ ವಿಗತಂ ಭಯಂಯಸ್ಮಾದಿತಿ ವೀತ ಭಯ=ಹೋಗಲ್ಪಟ್ಟ ಭಯ ಉಳ್ಳವ, ಭಯವಿಲ್ಲದವನೆಂದರೆ, ಸರ್ವತಂತ್ರ ಸ್ವತಂತ್ರ ನಿರ್ದೋಷ ಸರ್ವೋತ್ತಮ. ವಿಶ್ವೇಶ=ಸಕಲ ಜಗತ್ತಿಗೆ ಈಶ ಒಡೆಯ, ರಮಾಬ್ರಹ್ಮಾದಿಗಳು ತದ್ದಾಸರು, ವಿಧಿಪಿತ=ಬ್ರಹ್ಮಜನಕ, (ಸೃಷ್ಟ್ಯಾದಿ ಕರ್ತೃ) ಮಾತುಳಾಂತಕ=ಸೋದರಮಾವನಾದ ಕಂಸದೈತ್ಯನನ್ನು ಸಂಹಾರ

ಮಾಡಿದವ, ಅಂದರೆ ಪಕ್ಷಪಾತವಿಲ್ಲದೇ ತಾಯಿ ಅಣ್ಣನೆಂಬ ಭಿಡಿಯ ಹಿಡಿಯದೇ ದುಷ್ಟನಾದ ಕಂಸನನ್ನು ಸಂಹರಿಸಿದ ಕೃಷ್ಣ, ದುಷ್ಟ ನಿಗ್ರಹಿ ಶಿಷ್ಟಪರಿಪಾಲಕನೆಂದು ಅರ್ಥ; ಮಧ್ವವಲ್ಲಭ=ಅನಾದ್ಯನಂತ ಕಾಲದಲ್ಲಿ "ಮಧ್ವ ಇತ್ಯಾನಂದ ಉದಿಷ್ಟೋ" ಎಂಬ ನಾಮವು ವೇದದಲ್ಲಿ ಹೊಗಳಲ್ಪಡುತ್ತ ಈಶದಾಸಭಾವ ಶಾಸ್ತ್ರದಿಂದ ಸಂತತ ಆನಂದವನ್ನು ಕೊಡುವರೆ ಮಧ್ವವಾಯು ಇವರಿಗೆ ವಲ್ಲಭ= ಒಡೆಯ ಈಶ, ಭೂತಭಾವನ=ಭೂತಾನಿ ಭಾವಯತಿ ಉದಯತಿ ವರ್ಧಯತಿ ಪ್ರಾಪಯತೀತಿ ವಾ ಭೂತಭಾವನಃ (ವಿದ್ಯಾಧಿರಾಜರು) ಅನಾದ್ಯನಂತ ಕಾಲದಿಂದ ಜೀವರ ನಿಜಸ್ವರೂಪವನ್ನು ತಿಳಿದವನು, ಉದಯತಿ= ಜೀವರನ್ನು ಸೃಷ್ಟಿಗೆ ತರುವವನು, ವರ್ಧಯತಿ=ಏಳಿಗೆ ಮಾಡಿ ಬೆಳಸಿ ಪಾಲನ ಮಾಡುವವನು. ಪ್ರಾಪಯತಿ=ಮುಕ್ತಿಯನ್ನು ಕೊಡುವವನು. ಅಂದರೆ ಭಗವಂತನು ಸೃಷ್ಟಿ ಸ್ಥಿತಿ ಲಯಾದಿ ಅಷ್ಟಕರ್ತೃತ್ವ ಉಳ್ಳವನು. ಭಾಸ್ಕರತೇಜ=ಪ್ರಕಾಶಮಾನನಾಗಿ ಸೂರ್ಯನಿಗೆ ತೇಜಸ್ಸು ಕೊಡುವವನು. ಅಂದರೆ ಪ್ರಕಾಶ ತೇಜ= ಜ್ಞಾನಪ್ರದನೆಂದು ಅಭಿಪ್ರಾಯ. ಮಹಾರಾಜ= ಹೇ ಪ್ರಭೋ ರಾಜರಿಗೆಲ್ಲ ರಾಜ; ರಾಜರಾಜೇಶ್ವರರೂಪಿಯೇ–ಈ ರೂಪದಿಂದಲೇ ಸಕಲ ದೇಶಕಾಲಗಳಲ್ಲಿ ಇರುವ ಬ್ರಹ್ಮಾಂಡಗಳನ್ನು ಆಡಳಿತ ಮಾಡುವ ರೂಪ ರೂಪವೆಂದು. ಹೇ ಮಹಾರಾಜ ಎಂದು ಉತ್ಕರ್ಷದಿಂದ ಪ್ರಭೋ ಮಹಾರಾಜನೆಂದು ಮೈಮರೆದು ಪೊಗಳಿದ್ದಾರೆ. ಗೌತುಮನ ಮಡದಿಯನು ಕಾಯ್ದ=ಗೌತಮ ಋಷಿಗಳ ಶಾಪದಿಂದ ಅವರ ಪತ್ನಿ ಅಹಲ್ಯೆಯು ಇಂದ್ರದೇವರಲ್ಲಿ ಜಾರತ್ವ ನಿಮಿತ್ಯದಿಂದ ಶಾಪ ಕೊಡಲು, ಶಿಲಾಸದೃಶಳಾಗಿ ನಿಶ್ಚೇಷ್ಟಳಾಗಿ ಬಿದ್ದ ಅಹಲ್ಯೆಯನ್ನು ಪಾದಸ್ಪರ್ಶದಿಂದ ಪೆಣ್ಣಾಗಿ ಮಾಡಿದ ರಾಮರೂಪಿ ಹರಿಯೇ ನೀನು ಭಕಾಪರಾಧ ಸಹಿಷ್ಣೋ ಅಪ್ಪಾ. ನೀನು ಅನಾಥರಕ್ಷಕ=ನಿನ್ನ ಹೊರತು ಯಾರೂ ಗತಿ ಇಲ್ಲವೆಂದು ಯಾರು ಅನನ್ಯ ಭಾವದಿಂದ ನಂಬಿರುವರೋ, ಅಥವಾ ಅ= ಕಾರಶಬ್ದವಾಚ್ಯ ಅಜನೆ ಎಮಗೆ ನಾಥ ಒಡೆಯ ನಾಥ ತನ್ನ ವಶದಲ್ಲಿಪ್ಪ ಸಕಲ ಜೀವರನ್ನು ರಕ್ಷಣೆ ಮಾಡುವವ. "ನೀನೆ ಅನಾಥ ಬಂಧು" ಎಂದು ಪುರಂದರರ ವಚನ, ಗುರುತಮ=ಅಜ್ಞಾನ ಅಂಧಕಾರವನ್ನು ಕಳೆಯುವಲ್ಲಿ ಶ್ರೇಷ್ಠ ಸುಜ್ಞಾನ ಪ್ರದನಾದ ಜಗನ್ನಾಥ ವಿಟ್ಠಲ=ಜಗತ್ತಿಗೆ ಸ್ವಾಮಿ ಈಶನಾಗಿ ದಯೆಯಿಂದ ಅಜ್ಞಾನ ಅಂಧಕಾರದಲ್ಲಿರುವ ಸುಜೀವರಿಗೆ ಸುಜ್ಞಾನವನ್ನು

ಪಾಲಿಸುವ ವಿಟ್ಠಲ ನಾಮಕ ಹರಿಯು, ಎಂದು ತನ್ನ ನಂಬಿದ ಭಕತರನು ಪೊರೆವ ಯಾರು ಅನನ್ಯ ಬುದ್ಧಿಯಿಂದ ಸರ್ವೇಶನಾದ ಹರಿಯನ್ನು ನಂಬಿರುವರೋ ಅವರನ್ನು ಪೊರೆವ ಸಂರಕ್ಷಿಸುವ, ಮುಕ್ತಿ ಕೊಡುವನೆಂದು ಶ್ರೀ ಹರಿಯ ಸ್ತೋತ್ರ ಮಾಡಿ ಸ್ವಗತ ಸ್ವಾತಂತ್ರ್ಯಸಂಧಿ ಮಂಗಳಮಾಡಿದ್ದಾರೆ.

ಎನ್ನ ಮೈಯ್ಯಲ್ಲಿ ಅಸ್ವಾಸ್ಥ್ಯ, ಸಂಸಾರ ತಾಪ, ಹೆಂಡರುಮಕ್ಕಳ ವಿಪರೀತ ಕಾಟ, ಮನೋವ್ಯಗ್ರತೆ ಕೊಟ್ಟಾಗ್ಯೂ ದಾಸರು ತಮ್ಮ ಪಾದಾರವಿಂದದಲ್ಲಿ ದಾರ್ಢ್ಯವಿತ್ತು ಸ್ವಗತ ಸ್ವಾತಂತ್ರಾಖ್ಯ ಸಂಧಿಯ ಪದ್ಯಾರ್ಥವನ್ನು ಬೋಧಿಸಿ ಬರೆಸಿ ಬರೆದದು. ದಾಸರಂತರ್ಯಾಮಿ ಮಧ್ವೇಶನ ಅಡಿದಾವರಿಗಳಿಗೆ ಅರ್ಪಣ ಕೊನಿಯ ಪದ್ಯ ಬರೆಸುವ ಕಾಲ ಆನಂದವಿತ್ತಂತೆ ಸದಾ ಭಗವದ್ಗುಣೋತ್ಕರ್ಷ ಹರಿಕಥಾಮೃತ ಪಾನ ಮಾಡಿಸರಿ ದಾಸರೇ ಮರೆದು ಕೈಬಿಡಬೇಡರಿ ಸಂಸಾರಾರ್ಣವವಮಗ್ನಂ ಮಾಮಿಂದಿರೇಶ ಸಮುದ್ಧರವೆಂಬ ಪ್ರಾರ್ಥನೆ ನೆನಪಿಗೆ ತಂದಿತ್ತರಿ. ದಾಸಾರ್ಯರಲ್ಲಿಪ್ಪ ಹರಿಗೆ ಕೃಷ್ಣಾರ್ಪಿತ.

**ಭಾವಸೂಚನ :**—ವೀತೇತಿ॥ ಓಂ ಇತಿ ಹರಿಕಥಾಮೃತಸಾರ ಭಾವ ಸೂಚನೆ ಸ್ವಗತ ಸ್ವಾತಂತ್ರ್ಯ ಸಂಧಿಃ ಸಮಾಪ್ತಃ ॥ ೧೫ ॥ ಶ್ರೀಕೃಷ್ಣಾರ್ಪಿತ ॥



## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಸಂಧಿಂ ಉಪಸಂಹರಿತಿ—"ವೀತಭಯ" ಇತಿ ॥ ಉಕ್ತಾರ್ಥಮ್ ॥ "ಭೂತಭಾವನಃ"—ಓಂ ತ್ವೇ ಕ್ರತುಮಪಿ ವೃಂಜಂತಿ (ವೃಜೇತಿ) ವಿಶ್ವೇ ನದಂ ವ ಓದತೀನಾಮ್ ॥ ದ್ವಿರ್ಯದೇತೇ ತ್ರಿರ್ಭವಂತ್ಯೂ ಮಾನದಂ ಯೋಯುವತೀನಾಮ್ (ನೋಮ್) ॥ ಭೂತಾನಿ ದ್ವಿಃ ತ್ರಿವಾರಂ ಚ ಭಾವಯತಿ ಉತ್ಪಾದಯತಿ. ಇತಿ ತಥೋಕ್ತಃ ॥೧೫॥

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಸ್ವಗತಸ್ವಾತಂತ್ರ್ಯ ಸಂಧಿಃ ಸಮಾಪ್ತಃ ॥೧೬॥

### ಕನ್ನಡಾರ್ಥ

ಸಂಧಿಯನ್ನು ಮುಗಿಯಿಸುತ್ತಾರೆ—"ವೀತಭಯ" ಎಂಬ ಪದ್ಯದಿಂದ.

"ವೀತಭಯ"—ಈ ನಾಮದ ಬೃಹತೀಮಂತ್ರಾನುಗುಣವಾದ ಅರ್ಥ ವನ್ನು ಮೊದಲೇ ವಿವರಿಸಲಾಗಿರುತ್ತದೆ.

"ಭೂತಭಾವನ"—ಪ್ರಾಣಿಗಳನ್ನು ಎರಡು ಮೂರು ಹೀಗೆ ಅನೇಕ ಸಲ ಹುಟ್ಟಿಸುವದರಿಂದ ಭೂತಭಾವನನೆಂದು ಹೆಸರು ಬಂದಿದೆ ಇದು ಬೃಹತೀ ಮಂತ್ರಸಂಸೂಚಿತವಾದ ಅರ್ಥ ||೧೫||

ಇಲ್ಲಿಗೆ ಶ್ರೀ ವ್ಯಾಸದಾಸಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ ೧೬ನೆಯ ಸಂಧಿಯು ಮುಗಿದುದು.

|| ಶ್ರೀ ಮಧ್ವೇಶ ಕೃಷ್ಣಾರ್ಪಿತಮಸ್ತು ||




---

**ವಿ. ಸೂ :**—೧೬೭೬ ಪುಟದಿಂದ ೧೭೭೬ ಪುಟಸಂಖ್ಯಾ ತಪ್ಪಾಗಿ ೧೭೪೧ನೆ ಪುಟಕ್ಕಿಂತ ಹಿಂದೆ ಪುಟಸಂಖ್ಯೆಯಲ್ಲಿ ೧೭ಕ್ಕೆ ಬದಲಾಗಿ ೧೮ ತಪಾಗಿ ಅಚ್ಚಾಗಿದೆ. ಅದನ್ನೆಲ್ಲ ೧೭ ಎಂದು ಓದಿಕೊಳ್ಳಬೇಕು.

ಶ್ರೀ ಲಕ್ಷ್ಮೀನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶಃ ಪ್ರಸನ್ನಃ

# ೧೭ನೆಯ ದತ್ತ ಸ್ವಾತಂತ್ರ್ಯ ಸಂಧಿಯು

ಶ್ರೀ ಬಾದರಾಯಣ ದೇವರ ಬ್ರಹ್ಮ ಸೂತ್ರಗಳು ಶ್ರೀಮದಾನಂದ ತೀರ್ಥ ಭಗವತ್ಪಾದರ ಬ್ರಹ್ಮಸೂತ್ರ ಭಾಷ್ಯಾರ್ಥಗಳ ಸಾರ ರೂಪವಾಗಿದೆ.

## ಜೀವ ಕರ್ತೃತ್ವಾಧಿಕರಣದಲ್ಲಿ

೧೦ ಬ್ರಹ್ಮಸೂತ್ರಗಳನ್ನು ವಿಶದವಾಗಿ ವಿಚಾರಿಸಿದ್ದಾರೆ. ಅನಂತ ಶ್ರುತಿಗಳು, ಇದರಲ್ಲಿ ಜೀವನಿಗೆ ಕರ್ತೃತ್ವ ಹೇಳುವ ಉಪಕ್ರಮ ಶ್ರುತಿಗಳು, ಉಪ ಸಂಹಾರರೂಪ ಸಿದ್ಧಾಂತ ಶ್ರುತಿಗಳ ಪರಸ್ಪರ ವಿರೋಧಾಭಾಸ ಪರಿಹಾರಾರ್ಥ ಶ್ರೀ ಬಾದರಾಯಣರು ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ. ಸೂತ್ರ ಭಾಷ್ಯ ಉಪಕ್ರಮ ಉಪಸಂಹಾರ ಸೂತ್ರಗಳನ್ನು ಮಾತ್ರ ನಿತ್ಯ ಪಾರಾಯಣ ಮಾಡಿ ಪಠಿಸಿದರೆ ದಾರ್ಢ್ಯವಾಗಿ ಮುಂದಿನ ಶಾಸ್ತ್ರಾರ್ಥ ವಿಚಾರ ಮಾಡಲು ಅಧಿಕಾರಿ ಯಾಗುತ್ತಾನೆ. ಗುರುಗಳ ಅನುಗ್ರಹದಿಂದ ಸಕಲ ಶಾಸ್ತ್ರಾರ್ಥವಾಗುತ್ತದೆ. ಕಾರಣ ಇಲ್ಲಿ ಸೂತ್ರ ತದ್ವಿಚಾರ ಭಾಷ್ಯವನ್ನು ಮೂಲ ಮಾತ್ರ ಕೊಟ್ಟಿದೆ. ಸುಜ್ಞರು ಚಿತ್ತೈಸಬಹುದು.

ಈಶ್ವರಸ್ಯೈವಕರ್ತೃತ್ವಮುಕ್ತಮ್ ಯತ್ಕರ್ಮ ಕುರುತೇ ತದಭಿಸಂಪ ದ್ಯತಾ ಜೀವಸ್ಯೋಪಲಭ್ಯತೇ ಅತ ಆಹ.

**೧ ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ**

**ಭಾಷ್ಯ**— ಜೀವಸ್ಯ ಕರ್ತೃತ್ವಾಭಾವೇ ಶಾಸ್ತ್ರಸ್ಯಾಪ್ರಯೋಜಕತಾ ಪ್ರಾಪ್ತೇಃ ಜೀವೋಪಿ ಕರ್ತಾ ॥

**೨. ಓಂ ವಿಹಾರೋಪದೇಶಾತ್ ಓಂ ॥**

**ಭಾ** ॥ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾsಜ್ಞಾನಿಭಿರ್ವೇತ್ಯಾದಿ.

**೩. ಓಂ ಉಪಾದಾನಾತ ಓಂ ॥**

**ಭಾ** ॥ ಸಾಧನಾದ್ಯುಪಾದಾನಾಪ್ರತೀತೇಶ್ಚ ॥

**೪. ಓಂ ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ ಓಂ ||**

**ಭಾ ||** ಆತ್ಮಾನಮೇವ ಲೋಕಮುಪಾಸೀತೇತಿ ಕ್ರಿಯಾಯಾಂ ವ್ಯಪದೇಶಾಚ್ಚ ಅನ್ಯಥಾऽऽತ್ಮೇವ ಲೋಕಮಿತಿ ನಿರ್ದೇಶಃ ಸ್ಯಾತ್ ತರ್ಹಿ ಕಥಮೀಶ್ವರಸ್ಯೈವ ಕರ್ತೃತ್ವಮಿತ್ಯತೋ ವಕ್ತಿ ||

ಈ ನಾಲ್ಕು ಸೂತ್ರಗಳು ಜೀವನಿಗೆ ಕರ್ತೃತ್ವವಿದೆಂದು ಹೇಳುವ ಸಾಮಾನ್ಯ ಬಹಿರರ್ಥ ತೋರುವವೆ. ಜೀವನಿಗೆ ಕರ್ತೃತ್ವವಿದೆಂದು ವಿವಾದಕ್ಕೆ ಕಾರಣವಾಗಿವೆ. ಉಪಕ್ರಮ ಸೂತ್ರಗಳು.

ಮುಂದಿನ ೪ ಸೂತ್ರಗಳಲ್ಲಿ ಜೀವನು ಅಲ್ಪಶಕ್ತಿಯುಳ್ಳವನು ಅನಿಯಮನು. ಜೀವನ ಕರ್ತೃತ್ವವು ಪರಾಧೀನವಾಗಿದೆಂದು ಹೇಳುತ್ತಾರೆ.

**೫. ಓಂ ಉಪಲಬ್ಧಿವದನಿಯಮಃ ಓಂ ||**

**ಭಾಷ್ಯ ||** ಯಥಾ ಜ್ಞಾನಂ ಇದಂ ಜ್ಞಾಸ್ಯಾಮೀತ್ಯನಿಯಮಃ ಪ್ರತೀಯತ ಏವಂ ಕರ್ಮಣಿ. ಯ ಆತ್ಮಾನಮಂತರೋಯಮಯತೀತಿ ಚ ಶ್ರುತಿಃ ||

**೬. ಓಂ ಶಕ್ತಿವಿಪರ್ಯಯಾತ್ ಓಂ ||**

**ಭಾಷ್ಯ ||** ಅಲ್ಪಶಕ್ತಿತ್ವಾಜ್ಜೀವಸ್ಯ ||

**೭. ಓಂ ಸಮಾಧ್ಯಭಾವಾಚ್ಚ ಓಂ ||**

**ಭಾಷ್ಯ ||** ಸಮಾಧಾನಾಭಾವಾಚ್ಚಾಸ್ವಾತಂತ್ರ್ಯಂ ಪ್ರತೀಯತೇ || ಅತಃ ||

**೮. ಓಂ ಯಥಾ ಚತಕ್ಷೋಭಯಥಾ ಓಂ ||**

**ಭಾಷ್ಯ ||** ಯಥಾ ತಕ್ಷ್ಣಃ ಕಾರಯತ್ರನಿಯತತ್ವಂ ಕರ್ತೃತ್ವಂ ಚ ವಿದ್ಯತೇ ಏವಂ ಜೀವಸ್ಯಾಪಿ ||

ಇನ್ನು ಮುಂದೆ ೨ ಸೂತ್ರಗಳಲ್ಲಿ ಜೀವನಿಗೆ ಕರ್ತೃತ್ವಶಕ್ತಿ ಪರ ಉತ್ತಮ ಸ್ವತಂತ್ರನಾದ ಶ್ರೀಹರಿಯೇ ಶಕ್ತಿಪ್ರದನು. ಹರಿ ಪ್ರೇರಿಸದಿದ್ದರೆ ಜೀವನು ಜಡತುಲ್ಯನೆಂದು ಹೇಳುತ್ತಾರೆ. ಸಿದ್ಧಾಂತ ಸೂತ್ರಗಳು.

**೯. ಓಂ ಪರಾತ್ತು ತಚ್ಛ್ರುತೇಃ ಓಂ ||**

**ಭಾಷ್ಯ** || ಕರ್ತೃತ್ವಂ ಕರಣತ್ವಂ ಚ ಸ್ವಭಾವಶ್ಚೇತನಾ ಧೃತಿಃ| ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯೇತಿ ಹಿ ಪೈಂಗಿಶ್ರುತಿಃ ||

ಕೊನೆಗೆ ಸಿದ್ಧಾಂತವಾಗಿ ಜೀವನಿಗೆ ಪರಮಾತ್ಮ ಪ್ರೇರಕನಾಗಿ, ಜೀವನ ಯೋಗ್ಯತಾ ಸ್ವಭಾವಗುಣವಾಗಿಯೇ ಕರ್ಮ ಮಾಡಿಸುತ್ತಾನೆ. ಜೀವನಿಗೆ ಕಿಂಚಿತ್ತಾದರೂ ಕರ್ತೃತ್ವ ಶಕ್ತಿ ಇಲ್ಲ. ಕರ್ತೃತ್ವ ಶಕ್ತಿ ಜೀವನಿಗೆ ಹತ್ತಿದ್ದರೂ, ಪ್ರಚೋದಕ ಪ್ರೇರಕ ಶ್ರೀಹರಿಯೇ ಆಗಿರುವನು. ಶಾಸ್ತ್ರಕ್ಕೆ ಅಪ್ರಯೋಜಕ ವಿಲ್ಲೆಂಬು ಮುಂದಿನ ಸೂತ್ರದಲ್ಲಿ ವಿವರಿಸುತ್ತಾರೆ.

**೧೦. ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷೇಧಾವೈಯ್ಯರ್ಥ್ಯಾದಿಭ್ಯಃ ಓಂ ||**

**ಭಾಷ್ಯ** || ೧. ತತೋಽಪ್ರಯೋಜಕತ್ವಂ ಶಾಸ್ತ್ರಸ್ಯನಾಽಽಪದ್ಯತೇ ||

೨. ಕೃತಪ್ರಯತ್ನಾಪ್ರೇಕ್ಷತ್ವಾತ್ತತ್ಪ್ರೇರಕತ್ವಸ್ಯ

೩. ಆದಿಶಬ್ದೇನ ವೈಷಾಮ್ಯಾದಿ ||

೪. ಪೂರ್ವಕರ್ಮಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯತು |

೫. ಈಶ್ವರಃ ಕಾರಯೇತ್ ಸರ್ವಂ ತಚ್ಚೇಶ್ವರಕೃತಂ ಸ್ವಯಮ್ ||

೬. ಅನಾದಿತ್ವಾದದೋಷಶ್ಚ ಪೂರ್ಣಶಕ್ತಿತ್ವತೋ ಹರೇರಿತಿ ಭವಿಷ್ಯತ್ಪರ್ವಣಿ ||

೭. ಏತದೇವಂ ನ ಚಾಪ್ಯೇವಮೇತದಸ್ತಿ ಚ ನಾಸ್ತಿ ಚೇತಿ ವೋಕ್ಷಧರ್ಮೇ||

|| ಇತಿ ಕರ್ತೃತ್ವಾಧಿಕರಣಮ್ ||

ಮುಂದೆ ತ್ರಿವಿಧ ಜೀವ ಕರ್ತೃತ್ವ ವಿಚಾರದಲ್ಲಿ, ತತ್ವಪ್ರದೀಪ ನಯಚಂದ್ರಿಕಾದಿ ತತ್ವಪ್ರಕಾಶಿಕಾ, ಅನುವ್ಯಾಖ್ಯಾನ ನ್ಯಾಯಸುಧಾ ಪರಿಮಳ ಚಂದ್ರಿಕಾದಿ ೧೧-೧೨ ಗ್ರಂಥಗಳ ವಿಸ್ತಾರ ವಿವರಣೆ ಉಪನಿಷತ್ ದಾಸರಾಯರ ಸುಳಾದಿಗಳ ಸಾರದೊಂದಿಗೆ ಕೊಡಲಾಗಿದೆ. ಸದ್ಯ ಈ ಸೂತ್ರಗಳು ಭಾಷ್ಯ ಪಾರಾಯಣ ಪಠಣೆ ಪುಣ್ಯಪ್ರದ ಜ್ಞಾನಪ್ರದ. ಹಿಂದೆ ಸಂಧಿ ೧೬ ಪದ್ಯ (೧)ರಲ್ಲಿ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರೂ ವಿವರಿಸಿದ್ದಾರೆ.

ಶ್ರೀ ದಾಸವರ್ಯರು, ೧೭ನೇ ಸಂಧಿಯಲ್ಲಿ ಶ್ರೀಹರಿಯು, ಆದಿ ಸೃಷ್ಟಿಯಲ್ಲಿ ಸ್ವಸ್ವಾತಂತ್ರ್ಯ ೪ ಭಾಗಮಾಡಿ ೧-೨ರಲ್ಲಿ ೧೦-೧೦ ಗುಣಗಳನ್ನು ವಿಭಾಗಗೈಸಿ ಅವರವರಿಗೆ ಇತ್ತಂತೆ ಮುಂದೆ ಅನಿರುದ್ಧ ಸ್ಥೂಲ ದೇಹಪವರೆಗೆ ಪ್ರಕೃತಿ ಗುಣಬಿಂದುಗಳು ಹೆಚ್ಚಿದಂತೆ ಆ ಸ್ವಾತಂತ್ರ್ಯ ಗುಣ ವಿಭಾಗಗಳನ್ನು ಹೆಚ್ಚಿಗೆ ಗೈಸುವನು. ಮಹಾ ವಿದ್ಯುತ್, ತಟಿತ್ ಪ್ರಕಾಶಿಪನ ಲೇಶಶಕ್ತಿಯು ಮಹಾಕಾರ್ಯವಿದು. ತಾನು ಸ್ವಸ್ವಾತಂತ್ರ್ಯ ವಿಭಾಗ ಮಾಡಿಕೊಟ್ಟರೂ, ಶ್ರೀ ಹರಿಯು ತಾನು ಒಳಗೆ ದತ್ತಸ್ವಾತಂತ್ರ್ಯ ರೂಪದಿಂದಿದ್ದು ಕಾರ್ಯ ಮಾಡಿಸುತ್ತಾನೆಂದು ಹೇಳುತ್ತಾರೆ.

ಕರುಣಾಕರನಾದ ಶ್ರೀ ಹರಿಯು, ತನ್ನೊಳಗಿದ್ದ ಅಪಾರ ಸ್ವಾತಂತ್ರ್ಯ ಗುಣಸ್ವರೂಪಭೂತಶಕ್ತಿ ಒಂದಕ್ಕೆ ೧೦೦ ಹೆಚ್ಚಿಸಿ ೪ಕ್ಕೆ ೪೦೦ ನಾಲ್ಕುನೂರು ಮಾಡಿ ಕಾರ್ಯೋನ್ಮುಖನಾದ. ಈ ಸ್ವಾತಂತ್ರ್ಯ—

೨೦೦ ಗುಣ (೧-೨ ಭಾಗದಲ್ಲಿ) ೧೩೨|||. ತನ್ನಲ್ಲಿಟ್ಟುಕೊಂಡನು.
ಲಕ್ಷ್ಮೀದೇವೇರಿಗೆ ೬೭|. ಹೀಗೆ ೨೦೦ ಗುಣ

೧೦೦ ಸ್ವಾತಂತ್ರ್ಯ ಗುಣದಲ್ಲಿ ಬ್ರಹ್ಮದೇವರಲ್ಲಿ ೫೨
ಪವಮಾನ ವಾಯುದೇವರಲ್ಲಿ ೪೮ ಇಟ್ಟನು.

೧೦೦ ಸ್ವಾತಿಂತ್ರಿಯ ಗುಣ; ಸದಾಶಿವ ಮಹದೇವರಲ್ಲಿ ೨೦
೨ ಇಂದ್ರ ಕಾಮರಲ್ಲಿ ೧೫
೩ ತತ್ವಾಭಿಮಾನಿದೇವತೆಗಳಲ್ಲಿ ೧೦
೪ ಅಖಿಳ ಜೀವರಲ್ಲಿಟ್ಟದ್ದು ೧೦

೫೫

ಇನ್ನು ಕಲಿಮೊದಲಾದಖಿಳ ದಾನವರೊಳಗೆ ೪೫

೪೦೦ ೧೦೦

ಅಂತೂ ನಾಲ್ಕು ನೂರು ಈ ಪ್ರಕಾರ ಅವರವರ ಯೋಗ್ಯತೆಯಂತಿಟ್ಟಿರುವನೆಂದು ತಿಳಿದು ಆರಕ್ಷಣ ಮಾಡುವನೇ ಹೇ ಲಕ್ಷ್ಮೀಪತಿಯೇ ನಿನ್ನ ಭೃತ್ಯ

ದಾಸನೆಂದು ಉಪಾಸನೆ ಮಾಡಿದರೆ ಸರ್ವತ್ರ ಗೆಳೆಯನಂದದಲಿ ಸಂತೈಸುವನು. ಹೇಗಂದರೆ ಲೋಕವಲ್ಲಿ ರಾಜನ ಏಕದೇಶ ದೃಷ್ಟಾಂತ ಹೇಳುತ್ತಾರೆ. ರಾಜಾ ತನ್ನ ಸ್ವಾಮಿತ್ವಧರ್ಮ ತನ್ನ ವಶರಾದ ಮಂತ್ರ್ಯಾದಿಗಳಿಗಿತ್ತು ಅವರ ದ್ವಾರಾ ರಾಜಕಾರ್ಯ ಹೇಗೆ ಮಾಡಿಸಬೇಕೋ ಅದರಂತೆ, ರಾಜನಂತೆ ಎಲ್ಲೋ ಒಂದು ತನ ರಾಜಸದನದಲ್ಲಿ ಕುಳಿತಿರುತ್ತಾನೆ. ಆದರೆ ದೇವರು ಸರ್ವರಲ್ಲಿ ತಾನು ನಿಂತು ಕವಿಭಿರೀಡಿತ ಜ್ಞಾನಿ ವಂದ್ಯ ಸರ್ವಜ್ಞ ಸರ್ವಬಲ್ಲವನು ತನ್ನ ಕಳೆ ಗಳನ್ನು ದಿವಿಜ, ದಾನವ ಮಾನವರಲ್ಲಿಟ್ಟು ನಿರಂತರ ತಾನಿಂತು, ಅವರಿಂದ ಸತ್ವರಜಸ್ತಮ ಗುಣಸ್ವಭಾವ ಕರ್ಮವ ಮಾಡಿ ಮಾಡಿಸುವನು. ತಾನು ಅಪರಿಮಿತ ಸ್ವತಂತ್ರನಾದಾಗ್ಯೂ ಹಿಂದಿನ ಸಂಧಿಯಲ್ಲಿ ಹೇಳಿದಂತೆ ತಾನು ಲಕ್ಷ್ಮೀದೇವಿಯೂ ೨೦೦ ಗುಣದಲ್ಲಿ ಬ್ರಹ್ಮಾದಿಗಳ ಅಧಿಕಾರವಿಲ್ಲ. ಬ್ರಹ್ಮಾದಿ ಗಳ ಅಧಿಕಾರವಿಟ್ಟಿದ್ದಾದರೂ, ಆ ಸ್ವಾತಂತ್ರ್ಯವು ಪರ, ಉತ್ತಮ ಹರಿಯಾ ಧೀನವಾದುದು.

ಎಲ್ಲ ಜೀವರಲ್ಲಿದ್ದು ಪಾಪದೈತ್ಯಾದಿಗಳಿಂದ ಮಾಡಿಸಿ ಪಾಪ ದೈತ್ಯರಿಗೆ ಉಣಿಸುವನು. ಎಲ್ಲ ಪುಣ್ಯ ಕೃತ್ಯ ದೇವತೆಗಳಿಗೆ ತಂದೀವನು. ಮಾನವರಲ್ಲಿ ಮಿಶ್ರಫಲ ಮಾಡಿಸುವನು ಯೋಗ್ಯರು ಸದ್ಧರ್ಮದಲ್ಲಿ ನಡೆಯುವರು ಅಯೋಗ್ಯರು ಸದ್ಧರ್ಮದಲ್ಲಿ ಎಂದರೆ ನಾಯಿ ಯಜ್ಞದಲ್ಲಿದ್ದ ಪುರೋಡಾಶ ತೆಗೆದುಕೊಂಡಂತೆ ಸರಿ. ಯಾಕಂದರೆ ಅವರು ಭವತ್ಪ್ರೀತ್ಯರ್ಥವಾಗಿ ಸುಜ್ಞಾನದಿಂದ ಕರ್ಮಗಳನ್ನು ಮಾಡುವುದಿಲ್ಲ. ಕಾರಣ ಅದು ಕೆಟ್ಟು ವಿಪರೀತ ವಾಗಿ ಜನರಲ್ಲಿ ಕೂಡ ಧರ್ಮಾನುಷ್ಠಾನ ಮಾಡಿದರೂ ಫಲವಾಗಲಿಲ್ಲಾಂತ ಅನಿಸಿ, ನಿಜಭಕ್ತರು ತನಗೆ ಅರ್ಪಿಸುವರೆಂದು ಅವರ ಸ್ವರೂಪಕರ್ಮವನ್ನು ಅವರ ಕಡೆಯಿಂದ ಮಾಡಿಸುತ್ತಾನಾದ ಕಾರಣ, ಫಲ ವ್ಯತ್ಯಾಸ ಮಾಡುವನು. ವೈಷಮ್ಯಾದಿಗಳಿಲ್ಲ. ಹೀಗೆಸನ್ನುತ ಸುಕರ್ಮ ಫಲ ಪ್ರಪನ್ನರಿಗೆ ಸುಖ ಕೊಡುವ, ತಾನು ಸುಭುಜಾಹ್ವ, ಸ್ವಾಖ್ಯರಸ ರೂಪಶುಭ ಭುಂಜಿಸುವನು.

ಯದ್ಯಪಿ ದೈತ್ಯಾದಿಗಳು ಸತ್ಕರ್ಮ ಯಜ್ಞಾದಿಗಳು ಕೆಲಕಾಲ ಮಾಡಿ ದರೂ ಮಾಣಿಕ್ಯ ಸದೃಶವಾದ ಆ ಯಜ್ಞಫಲವನ್ನರಿಯರು. ಆದಕಾರಣ ಮಾಣಿಕ್ಯವ ಬೆಲೆಬಾಳುವ ರತುನವನ್ನು ಕೊಟ್ಟರೆ, ತಿಳಿಯದ ಅಜ್ಞಾನಿಗೆ ಅಂಗಡಿಕಾರನು ಅದರ ಬೆಲೆಗೆ ಅಜಿವಾನ ಕೊಟ್ಟು ಸರಿ ನಿನಗೆ ಇಷ್ಟೇ

ಸಾಕು ಹೋಗೆಂದು ಸಮಾಧಾನ ಮಾಡಿ ಕಳಿಸುವಂತೆ, ಅಯೋಗ್ಯರಾದ ದಾನವರು ಐಹಿಕ ಸುಖಕ್ಕಾಗಿ ಮಾಡುವರಾದ ಕಾರಣ, ಅವರು ಬೇಡಿದ ಐಹಿಕ ಸುಖವಾದ ಅನೇಕ ವಿಭವಗಳನ್ನು ಕೊಟ್ಟು ದಾನ ಯಜ್ಞಾದಿಗಳ ಫಲಗಳನ್ನು ಪ ವ ಮಾ ನ ಪಿ ತ, ತಾನಪರಿಹರಿಸಿ, ಐಹಿಕ ಸುಖದಿಂದ ಮದೋನ್ಮತ್ತರನ್ನು ಮಾಡಿ, ಸ್ವರೂಪಸುಖವಿಲ್ಲದವರನ್ನು ನಿರಯ ಪೊಂದಿಸುವನು.

ಇನ್ನು ಏಣಲಾಂಛನ ಚಿಗರೆ ಕಲೆಯುಳ್ಳ ಚಂದ್ರನ ಕಿರಣಗಳು ಶುಕ್ಲ ಪಕ್ಷದಿ, ದಿನೆ ದಿನೆ ಅಭಿವೃದ್ಧಿ ಐದುತ್ತ ಲೋಕರಿಗೆ ಮುಸುಕಿರುವ ಅಜ್ಞಾನ ಕತ್ತಲೆಯು ಪರಿಹರಿಸುವಂತೆ, ಕಾಲರೂಪಿ ಗರುಡಗಮನ ಹರಿಯ ಮೂರ್ತಿ ಧ್ಯಾನವುಳ್ಳ ಮಹಾತ್ಮರಿಗೆ, ಸುಜ್ಞಾನ ಭಕ್ತಿಗಳೆಂಬ ಕಿರಣಗಳನ್ನು ಅಭಿವೃದ್ಧಿ ಗೈಸಿ ಮುಕ್ತಿ ಯೋಗ್ಯರಿಗೆ ಸುಖ ಕೊಡುತಿಹವು.

ಜೀವರಲ್ಲಿ ತಾನು ಶಕ್ತಿಪ್ರದನಾಗಿ, ಹೇಗೆ ವ್ಯಾಪಾರಗಳನ್ನು ಮಾಡುವನೆಂದರೆ, ಜೀವರಿಗೆ ಅನ್ನದ=ಅನ್ನದಲ್ಲಿ ಅನ್ನಶಬ್ದ ವಾಚ್ಯನಾಗಿ ಅನ್ನ ಕೊಡುವನಾಗಿ, ಮತ್ತು ಅನ್ನಾದ=ಅನ್ನವನ್ನು ಭುಂಜಿಸತಕ್ಕವನು ತಾನೇ ಆಗಿ, ಅನ್ನ=ಉಪಜೀವ್ಯನು ಅನ್ನ ನಾಮಕನಾಗಿ ಮುನ್ನ ಪೇಳಿದಂತೆ ಜೀವರಲ್ಲಿ ಅನ್ನರೂಪದಿಂದ ಪ್ರವೇಶಗೈಸಿ ತಾನು ತ್ರೈಗುಣ್ಯ ವರ್ಜಿತನಾದ್ದಕ್ಕೆ ಬನ್ನ ಬಡದಲೆ ಅವರ ವ್ಯಾಪಾರ ಮಾಡಿಸುತ್ತಾ ಜೀವರನ್ನು ಧನ್ಯರೆನಿಸುವನು. ತತ್ತನ್ನಾಮದಿಂದ ತಾನೆ ಕರೆಸುವನು. ಈ ಕಾರಣ ಸರ್ವ ಕರ್ತಾ ಕಾರಯಿತಾ ಎಂದು ತಿಳಿದು, ಸಕಲ ಪುಣ್ಯ ಪಾಪಗಳನ್ನು ಅರ್ಪಿಸಿದರೆ ಕರ್ಮಲೇಪವಿಲ್ಲೆಂ ಬುದು ಹೇಳುತ್ತಾರೆ. ಜನಪನರಿಕೆಯ=ಒಂದಾನೊಂದು ಸಮಯ ರಾಜ ಅಕಸ್ಮಾತ್ತಾಗಿ ನಗರವನ್ನೀಕ್ಷಿಸಲು ಗುಪ್ತಚಾರರೊಂದಿಗೆ ಗುಪ್ತವೇಷವನ್ನು ಹಾಕಿ ರಾತ್ರಿ ಹೊರಟ ಸಮಯ ಒಬ್ಬ ರಾಜಗಳ್ಳ ಆ ರಾಜನ ಮನೆಯ ಪದಾರ್ಥವೂ ಅಥವಾ ಪಟ್ಟಣದೊಳು ಕದ್ದ ಧನವು ರಾಜನಿಗೆ ತಿಳಿದದೆಂದು ಭಯದಿಂದ, ಮಹಾ ಸ್ವಾಮಿಾ ನಾನು ಕದ್ದುದು ನಿಜ. ತಮ್ಮ ಧನ ತಾವು ತೆಗೆದುಕೊಳ್ಳಿರೆಂದು ರಾಜನಿಗೆ ಅರ್ಪಿಸಲು ಸಂತುಷ್ಟನಾಗಿ ಕಳ್ಳತನ ಮಾಡಿದ ವನನ್ನು ಶಿಕ್ಷಿಸದೆ ಬಿಡುವ. ಒಂದು ವೇಳೆ ಆ ಕಳ್ಳ ಧನ ಕೊಡದಿದ್ದರೆ

ಅವನನ್ನು ಶಿಕ್ಷಿಸಿ ಬಲಾತ್ಕಾರದಿಂದಾದರೂ ಅಪಹರಿಸುವನು. ದೇವರು ಎಡ ಬಿಡದೇ ಸರ್ವತ್ರ ವ್ಯಾಪ್ತನಾಗಿರಲು ಅವನ ಕಣ್ಮರೆಯಾಗಿ ಯಾವ, ಕರ್ಮವು ಮಾಡುವದು ಸಾಧ್ಯವಿಲ್ಲ. ಅರಿತ ಕಳ್ಳನು ಕಳವು ಮಾಡಿದ್ದು ಪಾಪ ಕಾರ್ಯ ವಿದು, ಶಿಕ್ಷಿಸುವನೆಂಬ ಭಯದಿಂದ ಅರ್ಪಿತ ಪುಣ್ಯಫಲವೆರಡೂ ಸ್ವೀಕರಿಸಿ, ಪಾಪನಿರ್ಮುಕ್ತನ್ನ ಮಾಡಿ ಪುಣ್ಯವಂತನ ಮಾಡುವ ಕಾರಣ ಉಚಿತ ಅನುಚಿತ ಪುಣ್ಯ ಪಾಪವೆರಡೂ ಕೃಷ್ಣಾರ್ಪಣವೆನಲು ತನ್ನ ಭಕ್ತರನ್ನು ಸಂರಕ್ಷಿಸುವ, ಈ (೮) ನೇ ಶ್ಲೋಕಾಭಿಪ್ರಾಯವನ್ನು ಚನ್ನಾಗಿ ಮನವರಿಯು ವದು. ಅಂದರೆ ಪ್ರತಿಯೊಂದು ಕಾರ್ಯ ಭಗವಂತನ ವಿಸ್ಮೃತಿಯಿಲ್ಲದೇ ಮಾಡಿದ್ದು. ಭಗವತ್ ಸ್ಮೃತಿ ಇಲ್ಲದಾಗ ಮಾಡಿದ್ದು. ಎರಡು ದೇವರೇ ಮಾಡಿಸುವನೆಂಬ ನಂಬಿಕೆಯನ್ನಿತ್ತು ಅವನ ಪಾದಕ್ಕೆ ಅರ್ಪಿಸಲು ಪಾಪ ಭಸ್ಮಮಾಡಿ ಪುಣ್ಯಕೈಕೊಂಬ. ಹೇಗಂದರೆ ಒಂದು ಉದಕಬಿಂದು ಕ್ಷೀರ ಸಮುದ್ರದಲ್ಲಿ ಹಾಕಲು ಹಾಲು ಸಮುದ್ರಕ್ಕೆ ಏನಾದರೂ ವಿಕಾರವೇ? ಆದರೂ ಆ ಒಂದು ಬಿಂದೋದಕ ಸಮುದ್ರದ ಹಾಲಿನಲ್ಲಿ ಕೂಡಿ ತದ್ರೂಪವನ್ನೇ ಧರಿಸು ವಂತೆ, ಕಲಿ ಕಲುಷ ಹರನಾದ ಶ್ರೀಕೃಷ್ಣನ ಅರ್ಚಿಸುವ, ಒಳ್ಳೇ ಕುಲದಲ್ಲಿ ಹುಟ್ಟಿದವರ ಕುಕರ್ಮಗಳಾದರೂ, (ಉದಕದ ಹನಿ ಹಾಲು ಕಲೆತು ಪಾವನ ವಾಗುವಂತೆ), ನಿಷ್ಕಲುಷ ಕರ್ಮಗಳಾಗಿ ಪುರುಷಾರ್ಥಗಳನ್ನು ಕೊಡುವವು. ದೇವರ ಕೃಪೆಯೇ ಪುಣ್ಯ. ದೇವರ ಅವಕೃಪೆ ಪಾಪ.

ದೇವರು ದೇಹದೊಳಗೆ ಹೊರಗೆ, ಇಂದ್ರಿಯಗಳಲ್ಲಿಯೂ, ಕಾಲ ನಾಮದಿಂದ ಜೀವಾಂತರ್ಗತನಾಗಿ ಪುರುಷ ರೂಪದಿಂದ, ಆಧಾರಭೂತನಾಗಿ ನಿಯಾಮಕನಾಗಿ, ವ್ಯಂಜಕನಾಗಿ ಪ್ರೇರಕನಾಗಿರುವನೆಂದು ಉಪಾಸನೆ ಮಾಡುವವರಿಗೆ, ಮೊಗದೊಳಗೆ ಮೊಗವಿಟ್ಟು ಮುದ್ದಾಡಿ, ಮಗುವನ್ನು ಸ್ನೇಹದಿ ಬಿಗಿದಪ್ಪಿ, ಜನನಿಯು ತನ್ನ ಸ್ತನಗಳನ್ನು ತೆಗೆದು ಉಣಿಸುವಂತೆ, ತನ್ನ ಪಾದಾಬ್ಜಗಳ ಧೇನಿಸುವವರಿಗೆ ವ್ಯಕ್ತನಾಗಿ ತೋರುತ್ತ ಸರ್ವತ್ರ ಸೌಖ್ಯವ ಕೊಡುವನು. ಲೋಕದಲ್ಲಿ ತೋಟ ಮಾಡುವವನು, ಭೂಮಿಯಲ್ಲಿ ಬೀಜ ವನ್ನು ನಾಟಸಬೇಕಂತ ಊರಿ, ಭಾವಿಯಲ್ಲಿದ್ದ ಉದಕವನ್ನು ಮೋಟೆಯಿಂದ ಮೇಲೆ ತೆಗೆದು ಆ ನೀರುಹಾಕಿ ಬೀಜಾಂಕುರವನ್ನು ಸಂತೈಸುವಂತೆ, ಯಾವ ಆಯಾಸವೂ ಇಲ್ಲದೇ ಜಗತ್ತಿನಲ್ಲಿ ಜೀವರನ್ನು ಸೃಷ್ಟಿಗೆ ತಂದು, ಹಯಾಸ್ಯನು

ಅವರ ಯೋಗ್ಯತೆ ಮೀರದಲೇ ಸರ್ವದ ಸಲಹುವನೆಂದರೆ, ಅನಾದಿ ಕಾಲದಿಂದ ಬಂದ ಲಿಂಗದಲ್ಲಿದ್ದ ವೃತ್ತಿ ಜ್ಞಾನವೇ ಬೀಜ. ಅನಿರುದ್ಧ ಸ್ಥೂಲ ಶರೀರ ಮನಸ್ಸೇ ಭೂಮಿ, ಸತ್ಕರ್ಮ ಮಾಡಿಸುವದು, ಹರಿಗೆ ಬಿತ್ತುವದು. ಗುರು ಮುಖದಿಂದ ತತ್ವ ಶ್ರವಣವೆಂಬ ನೀರು, ಸತ್ವಗುಣ ಅಭಿವೃದ್ಧಿಯೇ ಇದರ ಫಲ. ಭೂಮಿಯಲ್ಲಿ ಇದ್ದದ್ದು ಮರೆತು, ಆಕಾಶದಿಂದ ಮಳೆ ಬರುವದು. ಈ ಕಾರಣ ಭ್ರಮದಿಂದ ನೀರು ಅಲ್ಲಿರುವದೆಂದು ತಿಳಿದು, ನೀರಡಿಸಿದವನು ಆಕಾಶವನ್ನೇ ತೋಡಿ ನೀರು ಕುಡಿಯುವನೆಂದು ಬಳಲುವಂತೆ, ಜ್ಞಾನವು ಒಳಗಿದ್ದು ಅದನ್ನು ಚಿಗಿಸುವ ಸಾಮಗ್ರಿಗಳು ಹೊರಗಿರುವವು ಕಾರಣ, ಈ ಸಾಮಗ್ರಿಯಿಂದ ಒಳಗಿನ ಜ್ಞಾನವನ್ನು ಚಿಗಿಸಬೇಕು. ಹೊರಗೆ ಜ್ಞಾನ ವನ್ನೆ ಹುಡುಕಬಾರದು. ಜ್ಞಾನವೇ ಸಸಿ, ಹೊರಗಿರುವ ಸಾಧನವೇ, ಸದ್ಗುರು ಗಳ ಕರುಣಾರಸವಾದ ನೀರು ಹಾಕಿ, ಅದರ ಮನನ ನಿಜಧ್ಯಾಸದಿಂದ ಬಳ್ಳಿಯ ಕುಡಿಯಂತೆ ಚಿಗಿಸಬೇಕು. (ವಿಜಯ ವಿ||)

ಭೂಲೋಕ 'ಭುವರ್ಲೋಕ' ಸ್ವರ್ಗ, ಸುಖ ಜಡ, ಅನುಭವಿಸಿದರೆ, ಕ್ಷಣಿಕ, ನಶ್ವರಸುಖ ಅಮುಖ್ಯ. ವೈಷಯಿಕ ಸುಖವೆಂದು ಕರೆಸುವವು.

ಮಹರಾದಿ ಲೋಕ ಮುಖ್ಯಾ ಮುಖ್ಯ ಫಲಗಳು, ಮಿಶ್ರವಾದವು. ವೈಕುಂಠದಲ್ಲಿ ಮುಖ್ಯ ಫಲ ಕೇವಲ ಸ್ವರೂಪಾನಂದವೇ ಅನುಭೋಗಿಸೋಣ. ಯಾವ ಫಲಾಪೇಕ್ಷೆ ಇಲ್ಲದೇ, ಬಯಸುವ ಸಂಬಳ ಇಲ್ಲೇ ಕೊಟ್ಟು ಪ್ರತಿಫಲ ಮುಗಿಸುವಂತೆ ಎನ್ನನು ಮಾಡಬೇಡ, ನಿನ್ನ ಮನೆಯವನನ್ನಾಗಿ ಮಾಡಿಕೋ ಎಂತ ಪ್ರಾರ್ಥಿಸಬೇಕು. ಈ ಪ್ರಾರ್ಥನೆಯಾದರೂ, ಅಜ್ಞಾನ, ವಿಪರೀತ ಜ್ಞಾನ, ದೈತ್ಯ ಬಾಧೆಗಳಿಂದ ಆಗುವವು. ಕಲಿ ಸಂಸರ್ಗದಿಂದ ಈ ಬಾಧಾ ಪರಿಹರಿಸೆ ಭಾರತೀಶನ ವ್ಯತಿರಿಕ್ತ, ಮಿಕ್ಕ ದೇವತೆಗಳಿಗಿಲ್ಲದ ಕಾರಣ, ಆತನ ಅಂತರ್ಗತ ಪರಮಾತ್ಮನ ಪೂಜಿಸಬೇಕು.

ಯದ್ಯಪಿ, ಭಾಗವತಾದಿ ಗ್ರಂಥಗಳಲ್ಲಿ, ಧರ್ಮಾರ್ಥ ಕಾಮಾದಿಗಳೇ ಫಲವೆಂದು ಹೇಳಿದರೂ "ರೋಚನಾರ್ಥಂ ಫಲಶ್ರುತಿಃ" ಎಂಬುವಂತೆ ಮೊದ ಲಿಗೆ ಕಾಮನಾ ಕರ್ಮ ಮಾಡುತ್ತ ಹೋಗುವದರಿಂದ, ಮುಕ್ತಿ ಯೋಗ್ಯರು ಕ್ರಮವಾಗಿ, ಕಾಮ್ಯ ಕರ್ಮಗಳನ್ನು ಬಿಡುತ್ತ ನಿಷ್ಕಾಮಕರ್ಮಾಚರಿಸಿರು ವರು. ಕೂಸಿಗೆ ಬೇನೆ ಬಂದಿರಲು ಮೊದಲಿಗೆ ಸೀ ಇರುವ ಬೆಲ್ಲದ ರುಚಿ

ಯನ್ನು ತೋರಿಸಿ, ಸಾಧನವಾದ, ವಗರು ಇತ್ಯಾದಿ ಔಷಧ ಹಾಕುವ ತಾಯಿ ಯಂತಿರುವ ಕರುಣಾಳುವಾದ ಹರಿಯು ಮುಮುಕ್ಷುಗಳನ್ನು ದಾರಿಗೆ ತರುವ ಮಾರ್ಗ ತೋರಿಸಿರುವನು. ಇತ್ಯಾದಿ ಅನೇಕ ಬಗೆಯ ಸಾಧನ, ಅದರಲ್ಲಿ ಸರ್ವಕರ್ತಾ ಕಾರಯಿತಾ ಶ್ರೀಹರಿಯೆಂದೇ ತಿಳಿಯುವದೇ ಮುಖ್ಯವಾದುದು.

ಇನ್ನು ಶ್ರೀ ವಿಜಯದಾಸರು ೪೫–೪೬ ಶ್ರೀ ಹರಿಯೇ ಮುಖ್ಯ ಕರ್ತೃ ನೆಂಬ ಸುಳಾದಿಗಳಲ್ಲಿ, ಶಾಸ್ತ್ರಾರ್ಥ ವಿಚಾರವನ್ನು ನಾನಾವಿಧವಾಗಿ ವರ್ಣಿ ಸಿರುವರು.

"ಜೀವನಿಗಿರುವ ಸ್ವತಂತ್ರವು ಅದ್ಯಾತರದು ? ದೇವರು ಮಾಡಿಸಿದರೆ ಜೀವ ಮಾಡುವ, ಇಲ್ಲವೆ ಜಡತುಲ್ಯ ಜೀವ ಜಡನೇ ಹೇಗಂದರೆ, ಜೀವ ಜಡ ನಲ್ಲ. ಜಡನಿಗೂ ಜೀವನಿಗೂ, ಏನು ವೈಷಮ್ಯ, ಜೀವನಲ್ಲಿರುವ ಜ್ಞಾನೇಚ್ಛಾ ಕ್ರಿಯಾಶಕ್ತಿಗಳಿಗೆ ಶ್ರೀ ಹರಿಯಾದ ಮೇಲೆ, ಜಡದಲ್ಲಿರುವ ಕ್ರಿಯಾಶಕ್ತಿ ಪ್ರೇರಕನು ಹರಿಯೇ. ಆದ ಮೇಲೆ, ಜೀವನಿಗೆ ಎಂಥ ಕರ್ತೃತ್ವ."

೧ "ಅರೆ ಮರೆ ನಿಮಗ್ಯಾಕೆ ತಾಯಿ ತನ್ನ ಮಕ್ಕಳಿಗೆ | ಗರಳವಾಗಲಿ ಪೀಯೂಷವಾಗೆ | ಎಂದರೆ ಉಂಬಾ ಕರ್ತೃತ್ವಾ ಇದ್ದ ತೆರದಿ | ಸರುವ ಜೀವಿ ಗಳಿಗೆ ಇಪ್ಪದದಕೋ | ಹರಿ ಜೀವನ ಕೂಡ ಹೊರಗೆ ಒಳಗೆ ಇದ್ದು ಪರಿ ಪರಿ ಚೇಷ್ಟೆಯ ಮಾಡಿಪನು | ಸರ್ವರಂತರ್ಯಾಮಿ ವಿಜಯವಿಠ್ಠಲರೇಯ | ನರಕ ದಲ್ಲಿದ್ದರು ನಿರ್ಲಿಪ್ತ ನೆಂಬುದೇನೋ "||

೨ "ಸುರರು ಮಿಕ್ಕಾದ ಜೀವರ ವೊಳಗೆ ನಿತ್ಯಾ ಹರಿ ಪ್ರೇರಿಸಿ ಕರ್ಮಾ ಚರಣೆಯ ಮಾಡಿಸಲು | ಪರಮಾತ್ಮಗೆ ದೋಷವರಕೊಂಬದೇನೋ ?" |

೩ "ಕೊಂಬನು ಕೊಡಿಸುವನು, ಇವನಿಂದಾದ ಸತ್ಕರ್ಮ ಇಂಬು ಮಾಡಿ ಕೊಡುತಾ ತನ್ನ ಪುರದ ವೊಳಗೆ| ಎಂಬಾ ನಿಮಿತ್ಯದಲ್ಲಿ ಜೀವಕ್ಕೆ ಕರ್ತೃತ್ವ | ವೆಂಬೋದೆ ಸಿದ್ಧಾ ಹರಿ ಮಾಡಿದ ಮರಿಯಾದೆ| ಬೆಂಬೊ ಕುಣಿಸಿ ದಂತೆ ಸರ್ವರ ಸೂತ್ರ ಧರಿಸಿ| ಬೆಂಬಿಡದಾಡಿಸುವ ಬಹುಲೀಲಾವಿಶ್ವಕು | ಟುಂಬಿ ಪಾಲಕ ಪರಮ ಪುರುಷ ಅನಾಥ ಬಂಧು |

೪ ಜೀವಾ ಸ್ವತಂತ್ರ [illegible]ಸ್ವತಂತ್ರ ವೆರಡಕ್ಕೆ ಆವಾವ ಕಾಲಕ್ಕೆ ಇವ ಗೆ[illegible]ೋ | ಜೀವ ಸ್ವ[illegible]ಾ ಇವನೆ ಅರಸಾಗಿ | ಪಾವನ್ನ ಮತಿ

ಸುಲ್ಲಿ ಸರ್ವ ಸೌಖ್ಯ । ತಾವುಂಡು ತೃಪ್ತಿಯಾಗದಿಪ್ಪ ಬಗೆ ಏನೋ?। ಕೋವಿದರು ಪೇಳಿ ಮುಂದೇ ಕೇಳಿ। ಜೀವ ಅಸ್ವತಂತ್ರ ನೆಂಬಿಯಾ ಸುಮ್ಮನೆ। ಆವಾವ ಪ್ರಯೋಜನ ಇಲ್ಲದೊಂದೇ। ಠಾವಿನಲ್ಲಿ ಇರನ್ಯಾಕೆ ಇದರ ವಿಚಾರವ। ಭಾವದಲ್ಲಿ ತಿಳಿದು ನೋಡುವದು। ಜೀವಕ್ಕೆ ಸ್ವಾತಂತ್ರ ಅಸ್ವಾತಂತ್ರವೆಂಬೋ। ಈ ವಿಧ ಕರ್ಮಗಳು ಕಾಣಿಪದೇ। ದೇವೇಶ ಎಂಥ ಉಪಾಯವಂತ ನೋಡಿ। ಜೀವನದೊಳಗೆ ತಾನಿದ್ದು ಇದ್ದು । ಯಾವತ್ತೂ ನಡತಿಯು ನಡಿಸುವ ಪರಸ್ಪರ। ಜೀವರಿಂದಲಿ ಭೇದ, ಬಿಂಬನೆನಿಸಿ॥ ಆವಾಗ ಭೂಷಣ ದೂಷಣ ಮಾತಿಲಿ ಕಾವ ಕೊಲ್ಲುತಲಿಪ್ಪ ನಿರ್ದೋಷದಿ॥

ಹೀಗೆ ಶಾಸ್ತ್ರವಿಚಾರದ ಮರ್ಮವನ್ನು ವಿವರಿಸಿ, ಮುಂದೆ

೫ ತುತ್ತು ಮೊದಲಾದ ಯತ್ನ ಹರಿಯಿಂದಾ। ಗುತ್ತಲಿ ಆಗುವವೆಂದು ನಲಿದಾಡೋರು। ದತ್ತಾ ಸ್ವತಂತ್ರ ಶ್ರುತಿಗೆ ವಿರೋಧವಾಗದಂತೆ। ಸತ್ಕರ್ಮಾಚರಿಸುವರು ಜನ ಹಿತಾರ್ಥ। ಹತ್ತಿದಾ ಪ್ರಾರಬ್ಧ ಭೋಕ್ತನಿಗೆ ಕೇಳು ಎತ್ತಣದೋ ಪಾಪ ಪುಣ್ಯ ವಿಚಾರಿಸೆ। ಕೀರ್ತಿ ತಂದು ಕೊಡುವ ಇವರಿಗೆ ಕರ್ಮಲೇಶ। ಮಾತ್ರ ಬರಗೊಡನು ಸ್ಮರಣೆಯಿಂದ। ಶತ್ರು ಸಂಹಾರ ನಮ್ಮ ವಿಜಯ ವಿಠ್ಠಲನ್ನ ಪಾ। ಡುತ್ತ ತಿರುಗುವ ಭಕ್ತನೇ ಮಹಧನ್ಯ" ॥ ೧ ॥

೬ ದೇವರೆ ಎಲ್ಲ ಕರ್ತೃನಾದರೆ, ಜೀವನಿಗಿರುವ ಸ್ವತಂತ್ರವೆಂಥದು ಎಂದರೆ "ಭಕ್ತರೆಂದದಕೆ, ನೀ ಬಿರಿಗಂಣು ಬಿಟ್ಟು ನಡದಾ, ಎಂಬೋ ಸುಳಾದಿ ಮಟ್ಟತಾಳದಲ್ಲಿ ಶ್ರೀ ವಿಜಯದಾಸಾಚಾರ್ಯರು".

೧ "ಇನನ ಪ್ರಕಾಶದೊಳಗೆ ಎಳೆಬತ್ತಿಯಲ್ಲಿ ಮಿಣಿ ಮಿಣಿಗುಟ್ಟುವ ದೀಪವ ರಚಿಸಿರಲು। ಜನರಿಗೆ ಕಾಣಿಸದು। ಕಾಣಿಸಿದರೆ ಪ್ರಯೋಜನಕೆ ಬಾರದು ಸು । ಮ್ಮನೆ ನಾಮವುಂಟು, ಅಕಾರ್ಯವಾಗಿ। ಎನಗಿದ್ದ ಸ್ವಾತಂತ್ರ ಅನಾದಿಯಲ್ಲಿಂದ ಇನಿತು ಇಪ್ಪದು ಕಾಣೇ ಇದು ನಿನ್ನಾಧೀನ। ಅನುಗಾಲ ಬಿಡದಲೆ ಆದೆಯೆಂದರೆ ಆದೆ ಕ್ಷಣವಾದರುಲೇಸು। ಹೊಲ್ಲೆಯಂಗಳ ನಡತಿ ಅನುಭವಿಪೆನೆಂದು ಯೋಚಿಸಿದರೆ ಇಲ್ಲಿ, ತನುಮನಕರಣ ನಿನ್ನಾಧೀನ"॥ ಮುಂದೆ ತ್ರಿವಿಡಿ ತಾಳದಲ್ಲಿ ಮತ್ತೆಂಥ ಸ್ವಾತಂತ್ರ ಜೀವನದೆಂಬ ಎರಡನೇ ಉದಾಹರಣೆ ಹೇಳುತ್ತಾರೆ.

೭ "೨ ಕ್ಷೀರಾಬ್ಧಿ ತೀರದಲಿ ಇರಿವಿಗೆ ತೃಷಿಯಡಗದ। ನೀರು ಚಲಿಮೆ ಒಂದು ಇದ್ದಂತೆವೋ,

೩ ಮೇರು ಪರ್ವತದ ದೆಡಿಯ ಪಾದಕಾಣಿಯ ತೂಕ, ಹೀರವಾದರು ವೊಂದು ಇದ್ದಂತೆವೊ,

೪ ನೂರಾರು ಕೋಟಿ ಮಂದಿಗೆ ಉಣಿಸುವಾಗೊಂದು ಚೂರು ತಂಡುಲ ಹಾಕಿ ಇದ್ದಂತೆವೊ। **ಈ ರೀತಿ ಎನ್ನ ಸ್ವಾತಂತ್ರವೆಂದೆಂಬೊದೇ। ಸ್ವರೂಪ ಭೂತವೆಂಬೋದೆ ಸಿದ್ಧಾ.** ಬೇರೆ ಪೇಳುವದಲ್ಲ ಜ್ಞಾನಮಯ ಜೀವ। ವೋರಂತೆ ಸರ್ವವು ಸರ್ವದಲ್ಲಿ। ಮಾರುತ್ತರವೆ ಇಲ್ಲ ಇಂಥ ಸ್ವಾತಂತ್ರದಿ। ಧಾರುಣಿಯೊಳಗೆ ಪ್ರಖ್ಯಾತವೇನೋ ಕಾರ್ಯ। ಕಾರಣವಲ್ಲ ಪೂರ್ವದಲಿ ಪೊಂದಿರಲು ಪತಿಕರಿಸಬೇಕಾಗಿದೆ। ಈರೊಂದು ಕೂಡಿದ ಬಲು ಸೂಕ್ಷ್ಮವಾದ ಶ। ರೀರ ಕೊಟ್ಟವರಾರು? ಅಂದೆ ನಾನೇ। ಮಾರದೇ ನಿನ್ನಾಧೀನವಾಗಿಪ್ಪೆ ವಿಚಾರಾಂಶ ವ್ಯಾಕೆ ವಿಶ್ವ ನಯನ। ಪ್ರೇರಣೆ ನಿನ್ನದು ಹರಿ ನಿನ್ನವಿನಾ ವು। ತ್ತಾರದಲ್ಲವೆಂದು ಧೃಡ ಭಕ್ತಿಲಿ। ಸಾರಿ ಸಾರಿಗೆ ಬಿಡದೆ ಅಣಿಖಡ್ಡಿಯನಿಟ್ಟು ಸಾರುವೆ ಹಿಂದುಳಿಯದೆ ಜಗದೊಳು".

೮ "ಕರ್ತೃ ನಾನೆಂದು ಆಡಿಕೊಂಡಿದ್ದರೆ ನರಕ ವಾ। ದೀತೆಂದು ಅಂಜುತಲಿರಬೇಕು। ಸರಕು ವೊಪ್ಪಿಸಿಕೊಟ್ಟ ತರುವಾಯ ಲಾಭಾಲಾಭಾ ಎರಡರ ಚಿಂತೆ ಯಾತಕೆ ಆವಲ್ಲಿದ್ದರು.

೯ "ಮೇದಿನಿಯೊಳು ನಾನೇ ಸ್ವತಂತ್ರನೆಂಬಿಯಾ ಗಾದೆ ಉಂಟಾದ ಕೊಂದು ಲಾಲಿಸಯ್ಯ। ಕಾದಿ ಬರಲು ಮಹರುದ್ರನ್ನ ಸ್ತಂಭ ದೋಪಾದೆಯಲಿ ನಿಲಿಸಿದೆ ಸುರರು ನೋಡೆ। ಆಧೀರವಂತನಿಗೆ ನಿನ್ನಿಂದಲಾ ತೆರ। ನಾದಮೇಲೆ ಎನ್ನ ಪಾಡೇನಯ್ಯಾ। ಶೋಧಿಸಿ ನೋಡಲು ಎನಗೊಂದು ಎಳ್ಳನಿತಾದರೂ ಸ್ವಾತಂತ್ರ ಎಲ್ಲಿ ಕಾಣೆ।

೧೦ ಶ್ರೀ ಹರಿಯು ಸ್ವರೂಪದಲ್ಲಿ ನಿಂತು ಕಾರ್ಯ ಮಾಡಿಸಿದರೆ ಜೀವನಿಂದ ಕಾರ್ಯವಾಗುವವು. "ಒಡೆಯಾ ನಿಲ್ಲಲಾವು ನಿಲುವೆವಯ್ಯಾ। ಒಡಿಯಾ ನಡಿಯಲಾವು ನಡಿವೆನೆಯ್ಯಾ" ॥ ಇತ್ಯಾದಿ ॥

೧೧ "ನಿನ್ನಧೀನಾ ಪ್ರಾಣಾ ದೇಹೇಂದ್ರಿಯ ಕರ್ಮಾಚರಣೆ,। ನಿನ್ನಾಧೀನಾ ಜ್ಞಾನೇಚ್ಛ ಪ್ರಯತ್ನ ಪರಿಪರಿ। ನಿನ್ನಾಧೀನಾ ಬುದ್ಧಿ ಮತಿ ಧೈರ್ಯ ಕೀರ್ತಿ ಶಕ್ತಿ। ನಿನ್ನಾಧೀನ ನಿನ್ನಾಧೀನ ಒಂದೊಂದೆ ಎರಡೆ। ಪನ್ನಗಶಯನ ವಿಜಯ ವಿಠ್ಠಲ ಬಂಣಿಸಲಾರೆನು ಭಕತವತ್ಸಲ್ಲ" ॥

೧೨ ಮುಂದೆ ತ್ರಿವಿಡಿ ತಾಳದಲ್ಲಿ "ಎಲ್ಲ ನಿನ್ನಾಧೀನಾವಾಗಿವೆ ಅನ್ಯಥ ಇಲ್ಲ ವಿಲ್ಲವಯ್ಯ ಇದರೊಳಗೊಂದು। ಬಲ್ಲವನಾರಯ್ಯ ವ್ಯವಥಾನ ಕಾಲಗಳು। ಎಲ್ಲೆಲ್ಲಿ ಪೋಗಿ ತಿರುಗುವ ಸಂಭ್ರಮು। ಸಲ್ಲುವದೇನು ಸ್ವಾತಂತ್ರ ಒಬ್ಬರಿಗಾದರು ಕಲ್ಲು ಕವಣಿ ನಿನ್ನಾಧೀನಾ ಕಣೋ "॥

೧೩ "ಎನಗೆ **ಸ್ವತಂತ್ರವು ಕೊನೆ ಮಾತುರವುಂಟು। ಅನುದಿನ ನಿನ್ನಾಧೀನವೆಂಬೋ ಮಾತು**। ಸನುಮತವೆ ಸರಿ ಸನಕಾದಿಗಳೊಡೆಯಾ। ಇನಿತಾದರೂ ನೀನೆ ಎನಗೆ ಪ್ರೇರಿಸದಲೆ। ಅನಬಲ್ಲೆನೆ ನಾನು ಕನಸಿಲಿ ಮನಸಿಲಿ" ॥ ಹೀಗೆ ಹೇಳುತ್ತಾ ಕೊನೆಗೆ ಜತೆಯಲ್ಲಿ–

೧೪ "ನೀನಿತ್ತಾ ಸ್ವಾತಂತ್ರ ಒಲ್ಲೆ ನೆಂದರೆ ಬಿಡದು। ನಾನೇ ನಿನ್ನವನಯ್ಯಾ ವಿಜಯ ವಿಠ್ಠಲ ಕರುಣಿ" ಎಂದು ಶ್ರೀ ಹರಿಯನ್ನು ಪ್ರಾರ್ಥಿಸುತ್ತಾ

೧೫ ಮುಂದೆ ಇನ್ನೊಂದು ಸುಳಾದಿಯಲ್ಲಿ,

"ನೀನಡದರಾವು ನಡಿವೆವಯ್ಯಾ। ನೀನುಡಿದರಾವು ನುಡಿವೆವಯ್ಯಾ। ನೀಪಿಡಿದರಾವು ಪಿಡಿವೆವಯ್ಯಾ। ನೀ ತಡೆದರಾವು ತಡಿವೆವಯ್ಯಾ। **ನೀ ನಿರ್ದಯವಾಗೆ ಅಜಭವ ಸುರಾದಿಗಳು ಕಾಣಿಗೆ ಬಾರದೆ ಪೋಗುವರೋ। ನೀನೆ ಸ್ವಾತಂತ್ರ ಅನಾದಿ ಸ್ವಭಾವ।** ನೀನೆ ಸುತ್ರಾಮಣಿ ಗಣಕೆಂಬುದೇ ಸಿದ್ಧ। ನೀನೇ ಜ್ಞಾನಗಮ್ಯ ವಿಜಯ ವಿಠ್ಠಲರೇಯ। ನೀ ನಡದರಾವು ನಡಿವೆವಯ್ಯಾ"। ಇನ್ನು ಜಡಗಳಲ್ಲಿ ನಿಂತು ಕ್ರಿಯಾಶಕ್ತಿ, ನಡಿಸುವ ಜೀವನಲ್ಲಿವ ಗುಣವಾದರೂ ಪರಾಧೀನವಾದದು. ಅದಕ್ಕೆ ಶಾಸ್ತ್ರ ಮರ್ಯಾದೆ "ದರ್ವಿ, ಸವಟು" ಎಂದು ಪೇಳಿದ್ದಾರೆ. ಸವಟು ಅಡಿಗೆಯವನಾಧೀನವಾಗಿ; ಅಡಿಗಿಯವ, ಸಾರು, ಹುಳಿ, ಗೊಜ್ಜು, ಪಲ್ಲ್ಯ ಮುಂತಾದವು

ಗಳನ್ನು ಕಲಿಸುವ ಕೆಲಸಮಾಡಿದರೆ ಕಲಿಸುವ ಗುಣಧರ್ಮ ಸವಟಿನದೇ ಹೊರತಾಗಿ ಸವಟು ಸ್ವತಃ ಯಾವ ಚೇಷ್ಟಾ ಮಾಡಲಾರದು.

ಶ್ರೀಹರಿಯು

೧೬ ಜಡ ಕಾಷ್ಠದೊಳಿದ್ದು ನಡಿಸುವನು ನೀನೆ।
ಕಡಲ ತೆರೆಯ ರಭಸ ಗೈಸುವನು ನೀನೆ।
ಗುಡಿ ಗಿರಿಯೊಳು ಪೇಳೆ ಪ್ರತಿ ಶಬ್ದನು ನೀನೆ।
ಕಡಿಗೆ ಸರ್ವ ಶಬ್ದ ವಾಚ್ಯೈಕನು ನೀನೆ।

ಎಂದು ಪೇಳುತ್ತಾ ಸಕಲ ಜಡವಾದ ಇಂದ್ರಿಯಗಳಲ್ಲಿಪ್ಪ- ೧೭ ಆ ಇಂದ್ರಿಯ ಶಕುತಿ, ಅದಕೆ ಪ್ರೇರ್ಯನು. ಶ್ರೀಹರಿಯು ಹೇಗೆರುವನೆಂಬುದು ಬಹು ಮನದಟ್ಟಾಗಿ ವರ್ಣಿಸಿರುವರು. "ಒಲ್ಲೆನೆಂದರೆ ಎನ್ನ ತೊಲಗಲಿ ವಿಯ್ಯಾ ನಿನ್ನ,। ಎಂಬುವ ಸುಳಾದಿ ಅಟ್ಟತಾಳದಲ್ಲಿ ಜಡದಲ್ಲಿ ಶ್ರೀಹರಿಯು ವ್ಯಾಪಾರಗೈದು ಕಾರ್ಯಪ್ರವರ್ತಕನು ಹೇಗೆಂಬುದು ವರ್ಣಿಸಿರುತ್ತಾರೆ.

೧ ತೂಗಿ ಕೊಡುವ ತಕ್ಕಡಿಯಂತೆ (ತಕ್ಕಡಿ ತೂಗುವನಿದ್ದರೆ ಸಮನಾಗಿ ತೋರಿಸುವದು. ತಕ್ಕಡಿ ಗುಣಧರ್ಮ ಪ್ರವರ್ತಕ ತೂಗುವ ಹರಿ)

೨ ಜೋಗಿಯ್ಯ ಕೈಯ್ಯ ಕಪ್ಪಾರನಂತೆ (ಭಿಕ್ಷುಕನಾದ ಜೋಗಿಯು ಕೈಯಲ್ಲಿ ಕಪ್ಪಾರ, ಧಾನ್ಯ ಹಾಕಿಸಿಕೊಂಬ ಭಿಕ್ಷಾಪಾತ್ರಿ ಹಿಡಿದು ತಿರುಗಿದರೆ ಧಾನ್ಯ ತುಂಬುವದು. ಇದು ಜೋಗಿಯ ಅಧೀನ.)

೩ ವೇಗದಲಿ ತುಂಬಿ ಕೊಡುವ ಸೊಲ್ಲಿಗಿಯಂತೆ (ಆವಟಿಗನು ಸೊಲಿಗಿಯಿಂದ ಧಾನ್ಯವಳೆದರೆ ತುಂಬುವ ಸ್ವಭಾವ ಧರ್ಮ ಸೊಲಿಗಿ ಸೇರುಮುಂತಾದವು)

೪ ಬ್ಯಾಗಡಿ ಹಚ್ಚಿದ ಪಾದರಕ್ಷಿಯಂತೆ (ಪಾದರಕ್ಷೆಯಾದ ಕೆರವಿಗೆ ಬ್ಯಾಗಡಿ ಹಚ್ಚಿಟ್ಟರೆ ಏನು ಸಾರ್ಥಕ ಆ ಬ್ಯಾಗಡಿ ಹಚ್ಚಿದ ಪಾದರಕ್ಷೆಯನ್ನು ಹಾಕಿಕೊಂಡು ತಿರುಗಿದರೆ ಅದರ ಚಂದ ಹೊರಬೀಳುವದು)

೫ ತ್ಯಾಗದವನ ಕೈಯ್ಯ ಧನದಂತೆ ಸಂತತ (ಕೋಟ್ಯಾಧೀಶನಾದರೂ ಜಿಬಕ (ಜೀನ)ನಾಗಿದ್ದರೇನು ? ಆ ಧನಕ್ಕೆ ಶೋಭೆ. ಪಾತ್ರರಲ್ಲಿ ತ್ಯಾಗ ಮಾಡುತ್ತಿರುವನ ಕೈಯಲ್ಲಿ ಧನವು ಶೋಭಿಸುವಂತೆ)

೬ ಯೋಗಿಯ ಕೈಯ್ಯ ಅಜಿನದಂತೆ ಆವಾಗ ಯೋಗಿಯ ಕೈಯಲ್ಲಿರುವ, ಕೃಷ್ಣಾಜಿನ ವ್ಯಾಘ್ರಾಜಿನ, ಸಾಧಕನಿಗೆ ಆಸನವಾಗಿ ಜ್ಞಾನಜನಕತ್ವವಾಗಿ ತೋರುವದು. ಯೋಗಿಯೇ ಬಿಸಾಟಿದರೆ ಅದರ ಸೊಬಗೇನು ?

೭ ರಾಗದವನ ಕೈಯ ತಾಳ ಮದ್ದಲಿಯಂತೆ (ತಾಳ ಮದ್ದಲಿಯಲ್ಲಿ ಲಯ ತಾಳ, ಶಬ್ದಾದಿ ಗುಣಕಧ್ವನಿಯು ಇದ್ದರೂ, ಅದನ್ನು ಬಾರಿಸುವನು, ರಾಗ ಜ್ಞಾನವುಳ್ಳವನಾಧೀನವಾಗಿ ತಾಳ ಮದ್ದಲಿ ಶಬ್ದಗುಣ ಕೊಡುವವು)

೮ ಆಗರದೊಳಗಿದ್ದ ಉಡುಗುವ ಹಿಡಿಯಂತೆ (ಕಸಬೋರಿಗಿ ಗುಣ ಉಡಿಗಿದರೆ ಕಸ ತೆಗೆಯುವದು ಕಸ ಉಡುಗುವನಿದ್ದರೆ ಅದರ ಗುಣಧರ್ಮ ವ್ಯಕ್ತ)

೯ ಸಾಗರದಲಿ ಇದ್ದ ಉಸುಕಿನಂತೆ ಇಪ್ಪ। (ಹೇಗೆ ಸಮುದ್ರದಲ್ಲಿರುವ ಉಸುಕು, ಸರ್ವತ್ರ ಏಕತ್ರ ಕಲೆತು ಒಂದೆಡೆ ಕಲೆತುಕೊಂಡಿರುವಂತೆ) ಆಗಿಲೆನ್ನದಲೆ ಆದ್ಯಂತ ಕಾಲದಲಿ। ಜಾಗರ ಸ್ವಪ್ನ ಸುಷುಪ್ತಿಯಲ್ಲಿ ನೀನೆ। ಜಾಗು ಮಾಡದೇ ಆವಾವ ಕರ್ಮಗಳನು। ರಾಗದಿಂದಲಿ ಮಾಡಿಸುವ ಮಹದೈವ॥ ಎಂದು ಶ್ರೀ ವಿಜಯದಾಸರು ಜಡಗಳಲ್ಲಿರುವ ಶಕ್ತಿ ಪ್ರದಾತೃತ್ವ ಹೇಗೆಂಬುದು ಉದಾಹರಿಸಿರುವರು.

ಈ ವಿಷಯವನ್ನೇ ಶ್ರೀ ಗೋಪಾಲ ದಾಸರಾಯರು ಶಾಸ್ತ್ರವಿಮರ್ಶ ರೀತಿಯಿಂದ ವರ್ಣಿಸಿರುವರು.

೧ ಪೃಥಿವಿ ಮೇಲೆ ವೊಂದು ರಥವೇರಿ ಬರಲಾಗಿ
ರಥ ಬರುತಿದೆ. ನೋಡು. ಎಂಬರು ಜನರೆಲ್ಲ।
ರಥ ರಥಿಕರಿಬ್ಬರಿಗಾವಾಧಾರವು ಎಂಬ
ಮತಿ ಮನದಲಿ ಉಳ್ಳರಾಗಿದ್ದರು ಸರಿಯೆ।
ಪೃಥಿವಿ ರಥ ಹೊತ್ತು ಬಾ ಹದನರ್‍ಯಾತಕೆ।
ಪ್ರತಿತಾ ತೋರಿದರ್ಥ ಎತಾರ್ಥ ವೆನಬ್ಯಾಡಿ।

ಮತಿ ಎರಡು ಪ್ರಕಾರ ಕರ್ತೃತ್ವ ದೊಳಗಾಗಿ।
ಸ್ಥಿತಿ ಅರಿತು ನೋಳ್ಪದು ಜ್ಞಾನಿಗಳು।
ಖತಿ ಗೊಳದಿರಿ ಇನ್ನು ಕರ್ತೃತ್ವ ವೆಂಬುದು।
**ಜಿತವಾಗಿ ಜೀವ ಜಡಗಳಿಗನಾದಿ ಸಿದ್ಧ**
**ಮತಿವುಳ್ಳ ಕರ್ತೃತ್ವ ಚೇತನ ನಿಷ್ಠವು ಇನ್ನು।**
**ಮತಿ ರಹಿತಾ ಕರ್ತೃತ್ವ ಜಡದ ಸ್ಥಿತಿ**
ಸತತ ಜಡ ಚೇತನಕೆ ಕರ್ತೃನೆನಿಸಿ ಹರಿಯು।
ಗತಿ ಅರಿತು ಅವರವರ ಪಥ ದಲಿಡುವ।
ಪತಿತ ಪಾವನ ರಂಗ ಗೋಪಾಲ ವಿಠ್ಠಲ
ಚತುರ ಕ್ರೀಡೆಯು ಮಾಳ್ಪ ಸರ್ವರೊಳಗೆ ನಿಂತು ॥೩॥

ಮತ್ತು "ಹರಿಯು ಸೇವಿಸುವ ಅವ ಪಾಮರನೆ ಮರದು" ಎಂಬ ಸುಳಾದಿ. ಅಟ್ಟತಾಳದಿ,

**"ಕರ್ತೃತ್ವ ವೆಂಬುದು ಜೀವ ಸ್ವರೂಪವು।**
ಹತ್ತಿ ಇಪ್ಪದು ನೋಡು ಅನಾದಿಯಿಂದ ನಿತ್ಯ।
ದತ್ತ ವಾಗಿದೆ ಈಶನಿಂದ ವೆಂಬ ಮಾತು।
**ಅರ್ತು ನೋಡಿ ಹರಿಯ ಹೊರ್ತು ಆಗುವದಿಲ್ಲ।**
ಮರ್ತರೆ ಮರೆವುವ, ಅರ್ತರೆ ಅರಿಯುವ।
ಕರ್ತೃ ಕಾರ್ಯ ತಾ, ಸರ್ವ ಸ್ವಾತಂತ್ರ ಹರಿ ತಾನು। ಸೂತ್ರ ನಾಟಕ ಸರ್ವ ಚೇಷ್ಟಿ ತಾ ಮಾಡಿಸಿ। ಕೀರ್ತಿ ಅಪಕೀರ್ತಿ ಜೀವರ್ಗೆ ತಂದೀವ। ಸ್ವಾರ್ಥ ಪಾರ ರಹಿತಾ ಗೋಪಾಲ ವಿಠ್ಠಲ। ಆರ್ತಿ ತರಿವಾ ಅರಿದ ಭಕ್ತರ ಮನದ ॥೬॥

ರೂಪಕ ತಾಳದಲ್ಲಿ

ಚೇತನರೆ ಸರಿ ಜೀವ ಚಲನ ಮಾಡಿಸೆ ಹರಿ। ಚೇತನವೆ ಜಡತುಲ್ಯ ಜೀವ ಚಲನೆ ಮಾಡಿಸದಿರಲು। ಚೇತನಾ ಚೇತನಕೆ ಸಾಮ್ಯವೆ ಹರಿ ವಿನಹಾ। ಯಾತರಿಂದಲಿ ನೋಡು ಜ್ಞಾನೇಚ್ಛ ಪ್ರಯತುನವು. ಪಾತಕಾ ಪುಣ್ಯಕ್ಕೆ ಹರಿಯ ಪ್ರೇರಕನೆಂದು। ತಾ ತಿಳಿದು ಇಪ್ಪವಗೆ ಯಾತನೆಂಬದು ಯಲ್ಲೋ॥

ಮಟ್ಟ ತಾಳದಲ್ಲಿ—(ಹರಿ ಮಾಡಿದಂತೆ ಎಲ್ಲ ಮಾಡುವೆನಯ್ಯಾ ನಾನು)

"ಕರ್ತೃ ನಾನೆಂದರೆ ಹರಿಯ ಹೊರತಾಗಿನ್ನು | ವ್ಯರ್ಥ ನೋಡು ಏನು ಮಾಡಿದ ಕರ್ಮವು | ಮರ್ತ್ಯ (ಮೃತ್ಯು) ತನಗೆ ತಾನು ತಂದು ಕೊಡುವ ನಾಹ | ಆರ್ತಿಲಿ ಅವನಿಗೆ ನಾಶವಾಗದಿನ್ನು | ಕರ್ತೃ ನಾನಲ್ಲವೆನೆ ಸಾಧನಕೆ ಫಲವೇನು ? | ಪ್ರತ್ಯಕ್ಷಕೆ ಬಾಧೆ ಮಿಥ್ಯ ಜ್ಞಾನಿಯು ಅವಾ | ಕರ್ತೃತ್ವ ವೆಂಬೋದಾ ಜೀವನಿಷ್ಟವು ನೋಡು | ಶ್ರುತ್ಯರ್ಥಗಳಲ್ಲಿ ಸಿದ್ಧವಾಗಿದೆ ನೋಡು| ಮರ್ತ್ಯ ಹರಿಯ ಮಹಿಮೆ ನರಿಯಾದೆ ಜೀವನು | ಸ್ಫೂರ್ತಿ ಇಲ್ಲದ ಅಪಕೀರ್ತಿ ವಂತನಾಹ | ಕರ್ತೃಕಾರ ಯಿತಾ ವಿಷ್ಣು ಗೋಪಾಲ ವಿಠ್ಠಲನ್ನ| ಅರ್ತಿವಾ ಧನ್ಯನೋ ಕರ್ತೃನೆಂಬದರೊಳಗೆ ॥ ೨ ॥ ಹೀಗೆ ದಾಸರಾಯರು ಶ್ರುತಿ ಸ್ಮೃತಿಗಳಿಗೆ ಸೂತ್ರ ಭಾಷ್ಯಾರ್ಥ ಟೀಕಾ ಟಿಪ್ಪಣಿಗಳಿಗೆ ವಿರೋಧಬಾರದಂತೆ ಸುಗುಮವಾಗುವಂತೆ ಬೋಧಿಸಿ ಜತೆಯಲ್ಲಿ

"ಸ್ವಾತಂತ್ರಾ ಸ್ವಾತಂತ್ರ ತಿಳಿದವನಿಗೆ ಪಾರ | ತಂತ್ರ ವಿದೂರ ಗೋಪಾಲ ವಿಠ್ಠಲ ವೊಲಿವಾ" ॥ "ಕರ್ತೃ ಎನಿಸುವ ನಮ್ಮ ಕರ್ತೃ ಮಾತನಾಗಿ ಸೂತ್ರ ಧಾರಕದೇವ ಗೋಪಾಲ ವಿಠ್ಠಲ"

ಇಂತು ಜೀವನಿಷ್ಠವಾದ ಜ್ಞಾನೇಚ್ಛಾ ಕ್ರಿಯಾ ಶಕ್ತಿ ಪ್ರೇರಕ, ಶ್ರೀಹರಿ, ಮುಖ್ಯ ——

ಶ್ರೀಮದ್ಬ್ರಹ್ಮಸೂತ್ರ ಭಾಷ್ಯ ದ್ವಿತೀಯಾಧ್ಯಾಯ ಮೂರನೇ ಪಾದ (೧೭) ನೇ ಕರ್ತೃತ್ವಾಧಿಕರಣದಲ್ಲಿ ಶ್ರೀಮದಾನಂದ ತೀರ್ಥರು, "ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ", ಇತ್ಯಾದಿ ೧೦ ಸೂತ್ರಗಳಲ್ಲಿ ಶ್ರುತಿಗೆ ಪರಸ್ಪರ ವಿರೋಧಬಾರದಂತೆ ವಿವರಿಸಿರುವರು. **"ತತೋ ಪ್ರಯೋಜಕತ್ವಂ ಶಾಸ್ತ್ರಸ್ಯ ನಾಪದ್ಯತೇ | ಕೃತಪ್ರಯತ್ನಾಪೇಕ್ಷತ್ವಾತ್ತತ್ಪ್ರೇರಕತ್ವಸ್ಯ ಅದಿಶಬ್ದೇನಾವೈಷಮ್ಯಾದಿ" (ಭಾಷ್ಯ)**, ಕೊನೆಗೆ ಭಾಷ್ಯಕಾರರು ಕರ್ತೃತ್ವ ಶಕ್ತಿ ಈಶ್ವರಾಧೀನವಾದುದರಿಂದಲೂ, ವಿಧಿನಿಷೇಧಾತ್ಮಕ ಶಾಸ್ತ್ರಕ್ಕೆ ವೈಯ್ಯರ್ಥ್ಯವು ಪ್ರಸಕ್ತವಾಗುವುದಿಲ್ಲ. ವೈಯ್ಯರ್ಥವು ಬರಲಾರದು, ಎನ್ನುವದಕ್ಕಾಗಿಯೇ ಜೀವ ಪ್ರೇರಕನಾದ ಪರಮಾತ್ಮನಿಗೆ ಜೀವನಿಷ್ಠ, ಅನಾದಿ ಪುಣ್ಯ ಪಾಪ ರೂಪ ಕರ್ಮ ಸಾಧನ ಗೋಚರ ಪ್ರಯತ್ನ ಯೋಗ್ಯತಾ ಇವುಗಳ ಅಪೇಕ್ಷೆ ಇದ್ದುದರಿಂದ ಆದಿ ಶಬ್ದದಿಂದ, ಪರಮಾತ್ಮನಿಗೆ ವೈಷಮ್ಯ ನೈರ್ಘೃಣ್ಯ ಬರಬೇಕಾದೀ

ತೆಂದರೆ, ಪರಮಾತ್ಮ ವೈಷಮ್ಯ ನೈರ್ಘೃಣ್ಯಾದಿ ರಹಿತ, ಜೀವನ ಅನಾದಿಯಾದ ಕರ್ಮಾದಿಗಳನ್ನು ಅಪೇಕ್ಷಿಸಿಕೊಂಡೆಯೇ ಜೀವನನ್ನು ಶ್ರೀಹರಿಯು ಪ್ರೇರಿಸುತ್ತಾನೆ. ಸ್ಮೃತಿ ಸಮ್ಮತಿ ಏನೆಂದರೆ | ಹೇಳುತ್ತಾರೆ, "ಪೂರ್ವ ಕರ್ಮ ಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯತು | ಈಶ್ವರಃ ಕಾರಯೇತ್ಸರ್ವಂ ತಚ್ಚೇಶ್ವರಕೃತಂ ಸ್ವಯಮ್ ॥ ಅನಾದಿತ್ವಾದದೋಷಶ್ಚ ಪೂರ್ಣಶಕ್ತಿತ್ವ ತೋ ಹರೇ । ಇತಿ ಭವಿಷ್ಯತ್ಪರ್ವಣಿ ॥ ಎಂದು ಭಾಷ್ಯ.

ಈ ಎಲ್ಲವುಗಳ ಸಾರವೇನೆಂದರೆ, ಈಶ್ವರನು ಸುಖಪೂರ್ಣ ಸ್ವಾತಂತ್ರ್ಯ ಆತನಿಗೆ ಯಾವ ಪ್ರಯೋಜನವಿಲ್ಲವಾದರೂ, ಕರುಣಾಳುವಾದ ಹರಿಯು ಜೀವರ ಅನಾದಿ ಕರ್ಮ, ಯೋಗ್ಯತೆ ಜ್ಞಾನೇಚ್ಛಾ ಪ್ರಯತ್ನಾದಿಗಳಿಗೆ ಪ್ರೇರಕ ನಾಗಿ, ಸರ್ವವನ್ನು ತಾನೇ ಮಾಡಿಸುತ್ತಾನೆ. ಜೀವನಿಗೆ ಯಾವ ಕರ್ತೃತ್ವಶಕ್ತಿ ಇಲ್ಲ. "ಶ್ವಾಸ ಬಿಡುವ ಶಕ್ತಿಲೇಶಿಲ್ಲೆಂಬುದೇ ಫಲವಿದು ಬಾಳ್ದುದಕೆ" ಎಂಬುವ ಪದ, ಹೀಗೆ ಬ್ರಹ್ಮಸೂತ್ರ ಭಾಷ್ಯನಿರ್ಣಯಕ ಶಾಸ್ತ್ರಾರ್ಥಗಳನ್ನೇ ಶ್ರೀ ವಿಜಯದಾಸರು ಹೇಳಿರುವರು.

ಇನ್ನೊಂದು ಮುಖ್ಯ ವಿವೇಚನೆಯು ಇಲ್ಲಿ ಮಾಡುವದು ಅತ್ಯಾವಶ್ಯಕ ವಾಗಿದೆ. ಶ್ರೀಹರಿಯು ತಾನು ಜೀವರಿಗೆ ದತ್ತ ಸ್ವಾತಂತ್ರ್ಯರೂಪ ಶಕ್ತಿಯಿತ್ತು ಸಕಲ ಕ್ರಿಯಾ ಮಾಡಿ ಮಾಡಿಸಿ ಜೀವರಿಗೆ ಅನುಭೋಗ ತಂದೀವನು ವಸ್ತು ಗತ್ಯಾ ಜೀವನು ಅಸ್ವತಂತ್ರನು ಶ್ರೀಹರಿಯ ಆಧೀನನಾಗಿರಲು.

### ಜೀವನಿಗೇಕೆ? ಸುಖದುಃಖಲೇಪ?

ಎಂದರೆ ಅಹಂಕಾರ ಮಮಕಾರ ಮೂಲಕ ಜೀವನಿಗೆ ಸುಖದುಃಖಾದಿ ಗಳ ಲೇಪವು, ಲಿಂಗ ಅನಿರುದ್ಧ ಸ್ಥೂಲವಾದ ವಿಕಾರಜನ್ಯ ದೇಹಗಳಿಗೆ ಹೊರ್ತಾಗಿ, ಚಿದಾನಂತ್ಮಾಕನಾದ ಜೀವನಿಗೆ ಸ್ವರೂಪದಲ್ಲಿ ಪಾಪ ಪುಣ್ಯ ಕರ್ಮ ಲೇಪವಿಲ್ಲ.

ಯಾಕಂದರೆ ಯಾವನು ಕರ್ತೃವೋ ಅವನೇ ಫಲಭೋಕ್ತನು, ಜೀವನಿಗೂ ಲೇಪವಿಲ್ಲೆಂದ ಮೇಲೆ ಅವನಿಗೆ ಫಲಭೋಕ್ತೃತ್ವವು ಹೇಗೆ? ಈ ವಿಷಯವನ್ನು, ಶ್ರೀ ಶ್ರೀ ಛಲಾರಿ **ಸಂಕರುಷಣಾಚಾರ್ಯರು** ತ್ರಿವಿಧಜೀವ ಕರ್ತೃತ್ವ ವಿಚಾರದಲ್ಲಿ ಚನ್ನಾಗಿ ನಿರೂಪಿಸಿರುತ್ತಾರೆ.

"ಜೀವಾನಾಂ ಪುಣ್ಯ ಪಾಪ ಕರ್ಮ ಶಕ್ತ್ಯಭಾವಾತ್, ಜೀವಸ್ಯೇದಂ ನ ಯುಕ್ತಂ । ಯಃ ಕರ್ತಾ ಸ ಏವ ಭೋಕ್ತೇತಿ ನ್ಯಾಯಾತ್॥ ಹರೇಃ ಪುಣ್ಯ ಪಾಪ ಫಲ ಭೋಕ್ತೃತ್ವಂ ವಾಚ್ಯಂ । ತದುಕ್ತಮೇವ ಪೂರ್ಣಾನಂದಸ್ಯ ಹರೇಃ ಭೋಕ್ತೃತ್ವನ್ನಾಮ ತತ್ತತ್ಕರ್ಮ ಜನ್ಯ ಫಲಸಾಕ್ಷಾತ್ಕಾರ ಏವ ಭೋಕ್ತೃತ್ವ ಶಬ್ದಾರ್ಥಃ ॥ ನ ಕರ್ಮಜನ್ಯರಸವಿಕಾರತ್ವರೂಪೋಽರ್ಥಃ । ಕರ್ಮಜನ್ಯ ಸ್ಥೂಲರಸವಿಕಾರಃ ಸ್ಥೂಲ ದೇಹಸ್ಯ, ಸೂಕ್ಷ್ಮಪ್ರಾಕೃತ ರಸವಿಕಾರವತ್ತ್ವ ನಿರುದ್ಧದೇಹಸ್ಯ, ಸೂಕ್ಷ್ಮತರವಿಕಾರಸ್ತು ಲಿಂಗದೇಹಸ್ಯ, ತತ್ತದ್ವಿಕಾರ— ಸಾಕ್ಷಾತ್ಕಾರಃ ಜೀವಸ್ಯೇತಿ ಸಿದ್ಧಾಂತಃ । ಪೂರ್ವೋಕ್ತ ಸ್ಥೂಲರಸಮಾರಭ್ಯ ಜೀವ ಸ್ವರೂಪ ಭೂತ ತೇಜೋ ಮಯರಸಾಂತಸ್ಥ ಬಿಂಬರೂಪ ರಸಸ್ಯ ಸಂಶ್ಲೇಷೈಕ್ಯತ್ವಂ ಸ್ಥೂಲಾದಿರಸ ಸಾಕ್ಷಾತ್ಕಾರತ್ವಂ ಚ, ಉಭಯ ಭೋಕ್ತೃತ್ವಂ ಚ, ಹರೇರ್ಯುಕ್ತಮೇವೇತಿ ಜ್ಞಾತವ್ಯಮ್ ॥ ತದುಕ್ತಂ ॥

"ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇಪರಾರ್ಧೇ । ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ತ್ರಿನಾಚಿಕೇತಾಃ ॥ ಲೋಕಾವಿತಿ ಪ್ರತೀಯತೇ ॥ "ಓಂ ಗುಹಾ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್, ಓಂ" ॥ ತದುಕ್ತಂ ಭಾಷ್ಯೇ । "ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ ॥ ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮಿತಿ ॥ ಅನಶ್ನನ್ನನ್ಯೋ ಅಭಿಚಾಕಶೀತೀತಿ ಶ್ರುತೇಃ॥ **ಸ್ಥೂಲರಸ ಸಾಕ್ಷಾತ್ಕಾರ ಏವ ಅರ್ಥ:** ॥ ನನು ಸಂಶ್ಲೇಷೈಕ್ಯಾರ್ಥಃ । **ಅನೇನ ಸ್ವಗತಸ್ವಾತಂತ್ರ್ಯ ದತ್ತ ಸ್ವಾತಂತ್ರಾಖ್ಯ ರೂಪದ್ವಯಮ್ ಹರೇರೇವ ನ ಜೀವಸ್ಯೇತ್ಯರ್ಥ:** ॥ ಅನಾದಿ ನಿತ್ಯತ್ವೇನ ವಿದ್ಯಮಾನ ಕರ್ತೃತಾ ಸರ್ವ ಜೀವೇಷು ಹರಿಣಾ ಸಂಸ್ಥಿತಾ ಸ್ಥಾಪಿತೇರ್ಥಃ ॥ ತದುಕ್ತಂ ತಾತ್ಪರ್ಯ ನಿರ್ಣಯೇ "ಕರ್ತೃತಾ ಜೀವ ಸಂಸ್ಥಾ ಯಾ ಅನಾದಿ ಸಿದ್ಧಾ ಸರ್ವ ಜೀವೇಷು ಇತ್ಯಾದಿ ॥

ದೇವರು ಸರ್ವಕರ್ತೃನಾದರೆ, ಸರ್ವ ಭೋಕ್ತೃತ್ವ ಹೇಗೆ ಕೊಡುತ್ತದೆ ಎಂದರೆ, ತತ್ತತ್ಕರ್ಮಜನ್ಯ ಫಲ ಸಾಕ್ಷಾತ್ಕಾರ ಆಯಾ ಕರ್ಮದಿಂದ ಹುಟ್ಟಿದ ಫಲ ಅನುಭೋಗ ಮಾಡಿಸುವಲ್ಲಿ ಸಾಕ್ಷಾತ್ ತಾ ನಿಂತು ಮಾಡಿಸುವದೆ ಫಲ ಸಾಕ್ಷಾತ್ಕಾರ, ಸಚ್ಚಿದಾನಂದ ಹರಿಗೆ. ಚಿದಾನಂದನಾದ ಜೀವನಿಗೆ ಕರ್ಮದಿಂದ

ಪುಟ್ಟುವ ರಸವಿಕಾರವೂ ಸಹ ಅಲ್ಲ. ವಿಕಾರವೂ ಯಾವಾಗಲೂ, ಜಡಕ್ಕೆ ಹೊರ್ತಾಗಿ, ಚೇತನರಿಗೆ ಕಂಡಿಲ್ಲ. ಪುಣ್ಯ ಪಾಪ ಕರ್ಮಜನ್ಯ ಸ್ಥೂಲರಸವಿಕಾರ ಸ್ಥೂಲ ದೇಹಕ್ಕೆ, ಸೂಕ್ಷ್ಮ ಪ್ರಾಕೃತ ರಸ ವಿಕಾರ ಅನಿರುದ್ಧ ದೇಹಕ್ಕೆ, ಸೂಕ್ಷ್ಮತರ ರಸವಿಕಾರವು ಲಿಂಗದೇಹಕ್ಕೆ, ಈ ಮೂರು ದೇಹಗಳಿಗೆ ವಿಕಾರ ಆಗುವ ಸಾಕ್ಷಾತ್ಕರ ನೋಡುವದು ಮಾತ್ರ ಜೀವನದೆಂದು ಸಿದ್ಧಾಂತ.

ಈ ಕಾರಣದಿಂದ ಪೂರ್ವೋಕ್ತ ಸ್ಥೂಲ ರಸ ಆರಂಭಿಸಿ ಜೀವನ ಸ್ವರೂಪ ಭೂತ ತೇಜೋಮಯರಸಾಂಶಸ್ಥನಾದ ಬಿಂಬರೂಪಿ ಹರಿಯ ಸ್ವಾಖ್ಯ ರಸಕ್ಕೆ ಸಂಶ್ಲೇಷೈಕತ್ವಂ"........

ಸ್ವಾಖ್ಯರಸ ಸಾಕ್ಷಾತ್ಕಾರವೂ, ಸ್ಥೂಲಾದಿ ರಸ ಸಾಕ್ಷಾತ್ಕಾರ ಉಭಯ ಭೋಕ್ತೃರ್ತ್ವವು ಹರಿಗೇವೆ ಯುಕ್ತವೆಂದು ತಿಳಿಯುವದು.

ಅಂತರಾತ್ಮನು ಹರಿ-ಬಿಂಬ ಜೀವಾಂತರ್ಯಾಮಿ ಹರಿಗೆ, ಜೀವ ರೂಪನಾದ ಆತ್ಮನಾದ ಹರಿಯು ಪ್ರತಿಬಿಂಬನಾಗಿ ಚಿದ್ದೇಹಾಕಾರದಲ್ಲಿಪ್ಪನು. ಈ ಎರಡು ಅಂತರಾತ್ಮ ಸ್ವಗತ ಸ್ವಾತಂತ್ರ್ಯ, ಆತ್ಮದತ್ತ ಸ್ವಾತಂತ್ರ್ಯ ರೂಪವೆರಡೂ ಹರಿ, ಪರಮಾತ್ಮನ ರೂಪಗಳೇ, ದತ್ತ ಸ್ವಾತಂತ್ರ್ಯ ರೂಪವು ಜೀವನದಲ್ಲ. ಈ ದತ್ತ ಸ್ವಾತಂತ್ರ್ಯ ರೂಪದಿಂದ ಜೀವನಲ್ಲಿ ತಾನಿದ್ದು, ಕಾರ್ಯ ಮಾಡುವ ಹರಿ ಇರಲು, ಜೀವನೆಲ್ಲಿ ಆಗಡದತ್ತ ?

## (ಶ್ರೀ ವಿಜಯದಾಸರ ಸುಳಾದಿ)

"ಪುಣ್ಯ ಪಾಪಗಳೆರಡು ಹರಿ ಮಾಡಿದಂತೆ ಜೀವ ಗಣ್ಯರು ಮಾಡುವರು ಜನುಮಾನುಜನುಮಾ |........... ಕಣ್ಣಿವೆ ಇಕ್ಕುವದು ಜೀವರ ಸ್ವತಂತ್ರವೇ ? | ಅನ್ಯಾಯ ವೆನ್ನದಿರಿ ಗ್ರಂಥ ಸಮ್ಮತವಿದಕೆ | ಅನ್ಯಥ ನುಡಿಸಲ್ಲ ಎಂದೆಂದಿಗೆ | ಧನ್ಯ ರಾದವರಿಗೆ ಮನೋವಾಕು ಕಾಯ | ಅನು | ಗುಣ್ಯವಾಗಿಪ್ಪದೋ ಹರಿಯಾ ಶಕ್ತಿ | ಹೀಗೆ ದೇವರ ಸರ್ವ ಸ್ವಾತಂತ್ರ್ಯ ಹೇಳುತ್ತ, ಮುಂದೆ ಮಟ್ಟತಾಳದಲ್ಲಿ, "ಜೀವಕ್ಕೆ ಆವರಣ ಲಿಂಗಶರೀರವು | ಆವಾವ ಕಾಲಕ್ಕೆ ಇದ್ದುದೇ ಸರಿ ಇದ್ದರೆ | ನೋವಿದ್ದಿಲ್ಲವೋ ಭವಿಷ್ಯೋತ್ತರದಲ್ಲಿ | ತಾ ವ್ಯವಧಾನದಲಿ ತಗಲಿಸುತಿಪ್ಪುದು | ಆ ವ್ಯಾಖ್ಯೆದಲಿ ಜ್ಞಾನೇಚ್ಛ ಪ್ರಯತ್ನ | ಜೀವಕೆ ಸ್ವರೂಪ ಭೂತವಾದರು, ಸ್ವ ಸ್ವ | ಭಾವಾಚರಣೆ

ಮಾಡದೇ ಸುಮ್ಮನಿದ್ದದೇನು । ದೇವದೇವೇಶನ್ನ ಉತ್ತುಮ ಕ್ರೀಡಿಗೆ ।
ಆವನು ತುತಿಸಿ ನೆಲೆಗಂಡವನಾರು ಕೋವಿದರಸ ಶ್ರೀ ವಿಜಯ ವಿಠ್ಠಲರೇಯ ।
ಜೀವರ ವಿಭಕ್ತುವ ಮಾಡುವ ಬಗೆ ನೋಡು ॥ ೨ ॥

ಈ ತಾಳದಲ್ಲಿ ಹೇಳಿದ ಪ್ರಮೇಯವು ಮೇಲೆ ವಿವರಿಸಿದ ಛಲಾರಿ ಆಚಾರ್ಯರ ಟೀಕಾಕ್ಕೆ ಸಮ್ಮತವಾಗಿರುವದು. ಕೊನೆಗೆ ದಾಸರು ಜತೆಯಲ್ಲಿ "ಹರಿ ಪ್ರಯೋಜನ ಮಾಡಿದ ವ್ಯಾಲಿ ತಿಳಿವಂಥ। ಪರಿ ಉಂಟು ವಿಜಯ ವಿಠ್ಠಲನ ಕರುಣದಿಂದ॥ ಎಂದು ಶಾಸ್ತ್ರ ನಿರ್ಣಯವನ್ನು ಪೇಳಿ ಮಂಗಳ ರೂಪವಾದ ಮಂಗಳ ಮಾಡಿರುವರು ಇವೆಲ್ಲ ರಹಸ್ಯವನರಿತ ಅಪರೋಕ್ಷ ಜ್ಞಾನಿಗಳೂ ಪಂಡಿತ ಶ್ರೇಷ್ಠರೂ ಆದ ಶ್ರೀ ಜಗನ್ನಾಥದಾಸವರ್ಯರು," ಕರಣ ಕರ್ಮವ ಮಾಡಿದರೆ ವಿ । ಸ್ಮರಣೆ ಕಾಲದಿ ಮಾತಗಳಿಗುತ್ತರವ ಕೊಡ ದಲೆ ಸುಮ್ಮನಿಪ್ಪರು ಜಾಗರಾವಸ್ಥೆ । ಕರುಣಿಸಲು ವ್ಯಾಪಾರ ಮಾಡುವ । ಬರಲು ನಾಲ್ಕಾವಸ್ಥೆಗಳ ಪರಿಹರಿಸಿಕೊಳನೇತಕೆ ಸ್ವತಂತ್ರನು ತಾನೆ ಎಂಬುವನು ॥ ೩೦ ॥

ಸಕಲಾವಸ್ಥಾ ಪ್ರೇರಕ, ಕರ್ತಾ ಕಾರಯಿತಾ ಹರಿ ಎಂದು ಪೇಳುತ್ತ ಪುರಾಣ ಶಾಸ್ತ್ರ ಸಮ್ಮತವಾದವು. ವಿಚಾರಗೈದರೆ ಇದರಲ್ಲಿಯ ಒಂದೊಂದು ಪದವೂ ಮುಕ್ತಿಗಿದು ಪಾವಟಣಿಗೆ ಎನಿಪವು. ಭಕ್ತಿ ಪೂರ್ವಕ ಪಠಿಸುವರಿಗೆ ಸ್ವರೂಪ ಸುಖ ವ್ಯಕ್ತಮಾಡುತ್ತಾ ಪ್ರವಿವಿಕ್ತರನು ಮಾಡುವನು. ಭವ ಭಯದಿಂದ ಬಹು ರೂಪನಾದ ಹರಿಯು,

ಅಗತಾಕ್ಷನಾದ ನೇತ್ರ ಉಳ್ಳವನು "ಆದರುಶ" ಮುಖವನ್ನು ನೋಡುವ ಕನ್ನಡಿಗೆ ಭಾಷಾ ಭೇದದಿಂದಲಿ ಆ ಕನ್ನಡಿಯಂತೆ, ಇದನ್ನು ಕನ್ನಡ ನುಡಿ ಎಂದು ಕರೆಯೆ ಅದನ್ನು ಜ್ಞಾನಿಗಳಾದವರು ಕನ್ನಡಿಯಂತಿರುವ ಕನ್ನಡ ನುಡಿ ಯಲ್ಲಿರುವದನ್ನು ನೋಡದೇ ಎಂದಿಗಾದರೂ ಬಿಡುವರೇ? ಎಂದಿಗೂ ಬಿಡ ಲಾರರು! ಮಾಧವನ ಗುಣ ಪೇಳ್ವ ಪ್ರಾಕೃತವಾದರೆಯು ಸರಿ ಕೇಳಿ ಪರಮಾಹ್ಲಾದ ಬಡದಿಪ್ಪರೆ ನಿರಂತರ ಬಲ್ಲ ಕೋವಿದರು ॥

ತಸ್ಕರನಾದ ಕಳ್ಳನು ಭಾಸ್ಕರ ಸೂರ್ಯ ಮಂಡಲವನ್ನು ನಮಸ್ಕರಿಸದೆ ನಿಂದಿಸಿದರೆ ಆ ಸೂರ್ಯನಿಗೇನು ಕುಂದು ಕೊರತೆಗಳುಂಟೇನು! ಅದರಂತೆ

ತಸ್ಕರ ಸದೃಶರಾದವರು, ಶ್ರೀ ಹರಿಗುಣಗಳನ್ನು ಕದ್ದು ಜೀವನಲ್ಲಿ ಆರೋಪಿತ ಮಾಡುವ ಸಂಸ್ಕೃತ ಭಾಷಾಶಬ್ದ ಶಾಸ್ತ್ರ ಘಟ ಪಟಾದಿಗಳ ಬಹಿರರ್ಥ ವಿಚಾರ ದವರು, ಸಂಸ್ಕೃತ ಮರ್ಮ ರಹಸ್ಯವನ್ನು ತಿಳಿಯದೇ ಇದು ಸಂಸ್ಕೃತವಿದಲ್ಲೆಂದು ಕುಹಕ ರೀತಿಯಿಂದ ತಿರಸ್ಕಾರ ಮಾಡಲೇನಾಗುವದು. ಅರ್ಥಜ್ಞಾನ ಪೂರ್ವಕವಾಗಿ ಭಕ್ತಿ ಪುರಸ್ಸರವಾಗಿ ಕೇಳುವರಿಗೆ, ಕಮಲಪತ್ರ ನಯನನೂ ಜ್ಞಾನಿಗಳಿಗೆ ಸಖನಾದವನು ಒಲಿಯುವನು ಸರ್ವಭಾಷಾ ಅಭಿವ್ಯಂಜಕ ಶಕ್ತಿ ಇತ್ತು ಭಾಷಾ ಅಭಿವ್ಯಕ್ತಗೈಸಿದ ಹರಿಯೇ ತಾನಿಂಮ ಎಲ್ಲ ಭಾಷೆಗಳನ್ನು ಪ್ರವರ್ತಿಸಿ ತನ್ನ ನಿಜವಾದ ಜ್ಞಾನವನ್ನು ಕೊಟ್ಟಿದ್ದಾನೆ ಕೊಡುತ್ತಾನೆ, ಎಂಬ ಈ ನಿಜ ಜ್ಞಾನವರಿಯದೆ, ಪ್ರಾಕೃತ ಶಬ್ದಗಳೆಲ್ಲ ನಾಶವಾಗುವವು. ಸಂಸ್ಕೃತ ಶಬ್ದವೇ ನಿತ್ಯವಾದವು ಇದು ಹೇಗೆ ಎಂಬ ಈ ಮರ್ಮವನ್ನರಿಯದೆ ಊಹಿಸು ವರ ಕುತರ್ಕ ಸಂಸ್ಕೃತವಾದರೇನು? ಹೇಗಂದರೆ ಪತಿತ ಅನ್ಯಥಾ ಜ್ಞಾನಿಯಲ್ಲಿ ಜ್ಞಾನ ಸಂಪಾದನೆ ಸರ್ವಥಾ ಮಾಡಕೂಡದು ತೊಗಲತತ್ತಿಯಲ್ಲಿ ತರಲಾಗದು ಉದಕ। ಎಂದು ವಿಜಯರ ಉಕ್ತಿಯಂತೆ ಪತಿತನ ಕಪಾಲದೊಳು ಭಾಗೀ ರಥಿಯು ಜಲವಿರೆ ಪೇಯವೆನಿಪುದೇ? ಹೀಗೆ ಆ ಭಾಗೀರಥಿ ಸೇವೆಗರ್ಹ ವಲ್ಲವೋ ಆದರಂತೆ ಅಜ್ಞಾನ ದೆಶೆಯಲ್ಲಿ ಮುಳುಗಿ ಇತರ ಕಾವ್ಯ ಸ್ತ್ರೀ ಕಚ ಕುಚಾದಿ ವರ್ಣನೆ ಶ್ರೀ ಹರಿಯ ಸದ್ಗುಣಗಳ ವ್ಯತಿರಿಕ್ತ ಇತರ ಸ್ತೋತ್ರವಾದ ಕುಕಾವ್ಯವು ಶ್ರಾವ್ಯವಲ್ಲವು.

ಆದರೆ ಕೃತಿ ಪತಿ ಜಗತ್ತಿಗೆ ಒಡೆಯನಾಗಿ ಸೃಷ್ಟಿ ಮಾಡುವ ಕೃತಿದೇವಿ ಅರಸನಾದ ಶ್ರೀ ಪ್ರದ್ಯುಮ್ನದೇವ ವೇದಾಭಿಮಾನಿ ಭಾರತಿ ಸ್ವರಸ್ವತಿಯುವರ ತಂದೆಯಾದ ವೇದ ಪ್ರತಿಪಾದ್ಯನಾದ ಗೋವಿಂದನ ನಾಮ ಕಥಾನ್ವಿತವೆನಿಪ ಪ್ರಾಕೃತವು ಈ ಗೋವಿಂದನಾಮ ಅಮೃತ ನಾಶವಾದುದೇ ಎಂದೆಂದಿಗೂ ನಾಶವಿಲ್ಲ. ಇಂಥ ಪ್ರಾಕೃತವೆ ತಾನು ಸಂಸ್ಕೃತನೆನಿಸಿ ಸದ್ಗತಿಯನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ ಆದರಿಂದ ಪ್ರಾಕೃತವೇನು ? ಸಂಸ್ಕೃತವೇನು, ಈ ಮರ್ಮವನ್ನು ಅರಿತವರಿಂದ ತಿಳಿಯಿರಿ.

ಇದೇ ಮರ್ಮವನ್ನು ಪಾಂಡಿತ್ಯ ಬಲಮದದಿಂದ ಅರಿವುದು ಸಾಧ್ಯ ವಲ್ಲ. ಜ್ಞಾನಿಗಳ ಸಹವಾಸಬೇಕು. ಸಂಪ್ರದಾಯಬಲ್ಲ ಪೂರ್ವಿಕರು ಬೇಕು. ವಾಸುದೇವನ ಗುಣೋಪಾಸನೆ ತಾರಕ ಹೇಸಿ ಸಂಸಾರವೇ ಮಾರ

ಕವು. ಎಂಬ ಪದ ೩ನೇ ನುಡಿಯಲ್ಲಿ "ಕರ್ತಾ ಮೂರ್ಲೋಕಕ್ಕೆ ಪಾರ್ಥ ಸಾರಥಿಯನ್ನು । ಅರ್ತವನಂತೆ ಪ್ರವರ್ತಿಸುವಿ । ಕರ್ತಾ ಶಾಸ್ತ್ರಾರ್ಥತ್ವದರ್ಥವು ತಿಳಿಯದೇ । ಜೀವ । ಕರ್ತೃತ್ವಾ ತಿಳಿಧರಿಯಾ ಮರ್ತಿಗುವಿ ॥ ಭರ್ತಾ ಮನಿಗೆ ಎನ್ಗೊರ್ತು ಯಾರಿಲ್ಲೆಂದು । ವ್ಯರ್ಥ ಭಾರವೇ ನೀ ಪೊತ್ತಿರುವಿ । ಉತ್ತುಮ ರೊಡನೆ ಉನ್ಮತ್ತ ಭಾವದಿ ತಿರುಗಿ ಅತ್ತಣದ್ವಾರ್ತಿಯ ಮರ್ತಿರುವಿ ॥ ೩ ॥ ಮಡದಿ ಮಕ್ಕಳು ನಿನ್ನ ಹಡದ ತಾಯಿ ತಂದಿ ಒಡವೆ ವಸ್ತುಗಳೆಲ್ಲ ಪೊಡವಿ ಯಲ್ಲೆ । ಒಡೆಯಾ ನೆನಸಿ ಪೊಡವಿ ತಳದಿ ಬಹು ಪಡದ ಮನಿ ಧನ ಮಡದಿ ಗಲ್ಲೇ । ದೃಢ ಮನದಲಿ ನೇಮ ಹಿಡಿದು ಮಾಡಿದಕರ್ಮ ಜಡಮೂರ್ತಿ ಪೂಜೆಯು ಒಡಲಿಗಲ್ಲೇ । ಕಡುಭವ ಸುಳಿಯಿಂದ ದಡ ಸೇರಿಸುವ ನಮ್ಮ । ಜಡ ಜನಾಭನ ಪಾದ ದೃಢಮಾಡಲೊಲ್ಲಿ ॥ ೪ ॥ ಧಾತಕುಲದಿ ಪ್ರಖ್ಯಾತ ಭಾವಿ ವಿಧಾತ ಶಾಸ್ತ್ರದ ವ್ಯಾಖ್ಯಾತ್ರನಾಗಿ । ಮಾತರಿಶ್ವನ ವಾದರೀತಿ ತಿಳಿಯದೇ ಮೂರ್ಖ ವ್ರಾತದೊಡನೆ ಬರಿದೆ ಖ್ಯಾತನಾಗೀ । ನೀತ ಸಜಾತಿ ವಿಜಾತಿ ವಿಭೂತಿಯು ಈ ತೆರನೀ ತಿಳಿಯಧೋಗಿ । ದಾತಗುರು ಜಗನ್ನಾಥ ವಿಠ್ಠಲ ಗತಿ ಪ್ರೀತಿಯಾಗುವ ವ್ರಾತಮಾಡದೆ ನೀಗಿ ॥ ೫ ॥ ಹೀಗೆ ವಿವರಿಸಿರುವ ಅರ್ಥ ವನ್ನು ಚನ್ನಾಗಿ ತಿಳದು ಅರಿತರೆ ಕರ್ಮದಿಂದ ಬಿಡುಗಡೆ.

ಕೊನೆಗೆ ದಾಸರು ನಾನು ಪಂಡಿತನಲ್ಲ. ಕರ್ತೃತ್ವ ಭಾವ ಎನ್ನದಲ್ಲ ವೆಂಬುವ ಸ್ವಾಹಾಂಕಾರ ಖಂಡನೆ ದ್ವಾರ ಹರಿ ಕರ್ತೃತ್ವ ಪೇಳಲು ನಾನು ವೇದ ಶಾಸ್ತ್ರ ಪುರಾಣ ಗ್ರಂಥಗಳನ್ನು ಓದಿದವನೂ ಕೇಳಿದವನೂ, ಅಲ್ಲ. ಅಲ್ಲವೇನು ? ಎಂದರೆ ಹೌದಯ್ಯಾ ಶ್ರೀ ವರದೇಂದ್ರ ಶ್ರೀ ಪಾದಂಗಳವರಲ್ಲಿ, ಆ ಬಾಲ್ಯಾರಭ್ಯ ಸಕಲ ಸಚ್ಛಾಸ್ತ್ರ ಪಾಂಡಿತ್ಯ ಸಂಪಾದನೆ ಮಾಡಿದರೂ, ವಿದ್ಯಾ ಮದದಿಂದ ಫಲಕಾರಿಯಾಗಲಿಲ್ಲ. ಶಲ್ಯರಾಜರಿಗೆ ಪೂರ್ವ ಜನ್ಮದಿ ದೈತ್ಯಾನ್ನ ಭುಕ್ತ ಮಾಡುದರಿಂದ ಮಹನೀಯರಾದ ಜ್ಞಾನಿಗಳಾದ ಗುರುಗಳಲ್ಲಿ ಮಾತ್ಸರ್ಯ ಉದಿತವಾಗಿ, ಈ ಹರಿಕಥಾಮೃತ ಸಾರ ಗ್ರಂಥ ರಚನೆ ಮೊದಲಿಗೆ ಸಾಧುಗಳ ಸಹವಾಸವಾಗಲಿಲ್ಲವಾದರೂ ಶ್ರೀ ಗುರುವರದೇಂದ್ರರ ಅನುಗ್ರಹದಿಂದ, ಶ್ರೀ ಹರಿಯು ಮದ ಅಜ್ಞಾನವನ್ನು ಪರಿಹರಿಸಿ ಶ್ರೀ ವಿಜಯದಾಸ ಸಾಧುಗಳ ಸಹ ವಾಸವಾದ ಮೇಲೆ 'ಗುರು ಕರುಣವಾಗೆ ಹರಿ ಒಲಿವ' ಎಂಬುವಂತೆ, ಮೋದ

ತೀರ್ಥರ ಮತಾನುಗರಾದ, ಶ್ರೀಪಾದ ವ್ಯಾಸಯೋಗಿ, ಶ್ರೀ ಪುರಂದರ ಶ್ರೀ ವಿಜಯ ಗೋಪಾಲದಾಸರ ಕರುಣಾಬಲದಿ ಶ್ರೀ ವಾದಿರಾಜರ ಕೋಶ ಕೊಪ್ಪುವ ಶ್ರೀ ಹರಿಕಥಾಮೃತಸಾರಾ ಅವರು ಪೇಳಿಸಿದಂತೆ ಪೇಳ್ದೆನು ಎನ್ನ ಸ್ವಮತಿಯಲ್ಲ. ರಮಾಧವ ಜಗನ್ನಾಥ ವಿಠ್ಠಲ ತಿಳಿಸಿದರೊಳಗೆ ಯಥಾ ಯೋಗ್ಯ ಪೇಳ್ದನಲ್ಲದೆ ಎಂದು ಹರಿಯ ನಮುನಗೈದಿದ್ದಾರೆ.

ಹೀಗೆ ಸಕಲ ಕರ್ಮಕರ್ತಾ ಕಾರಯಿತಾ ಬಿಂಬನೆಂಬೋ ಜ್ಞಾನ ಸಂಪಾದಿಸಿ ಕರ್ಮ ಬಿಡುಗಡೆ ಹೊಂದಲು ಇದೇ ಉಪಾಯ ಜಡವಾದ ಕರ್ಮ ತಾರಕನ ಕ್ರಿಯೋಪಾಸನೆ ಹೇಳಿದ್ದಾರೆ.

ಶ್ರೀ ಗುರುರಾಜೋ ವಿಜಯತೇ

# ೧೭. ದತ್ತ ಸ್ವಾತಂತ್ರ್ಯ ಸಂಧಿ

॥ ಶ್ರೀ ರಾಘವೇಂದ್ರ ಗುರು, ಶ್ರೀ ವರದೇಂದ್ರ ಗುರು ॥

ಹರಿಕಥಾಮೃತಸಾರಗುರುಗಳ ।
ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

**ಕಾರುಣಿಕ ಹರಿ ತನ್ನೊಳಿಪ್ಪಾ ।**
**ಪಾರ ಸ್ವಾತಂತ್ರಿಯಗುಣದಿ (ವ) ನಾ ।**
**ನೂರು ತೆಗೆದು ಸಪಾದ ಆರೊಂದಧಿಕ ಅರವತ್ತು ॥**
**ನಾರಿಗಿತ್ತು ದ್ವಿಷೋಡಶಾಧಿಕ ।**
**ನೂರುಪಾದತ್ರಯುವ ತನ್ನ ಶ ।**
**ರೀರದೊಳಗೀಪರಿ ವಿಭಾಗವ ಮಾಡ್ದ ತ್ರಿಪದಾಹ್ವ ॥ ೧ ॥**

**ಅವತರಣಿಕಾ :**—ಹಿಂದೆ ೧೬ ನೇ ಸಂಧಿಯಲ್ಲಿ ಅನಾದಿ ನಿತ್ಯ ಅಸ್ವತಂತ್ರರಾದ ಜೀವರಲ್ಲಿ ಸೃಷ್ಟಿಪ್ರಾರಂಭದಲ್ಲಿ ತನ್ನ ಸ್ವಾಂಶ ಕಲೆಗಳಾದ ಸ್ವಗತ ಸ್ವಾತಂತ್ರ್ಯವನ್ನು ಇಟ್ಟ ವಿವರ ವಿಸ್ತಾರವಾಗಿ ಹೇಳಿದ್ದಾರೆ. "ಜೀವಾ ಅನಾದಿತಃ ಸರ್ವೇಪ್ಯಸ್ವತಂತ್ರಾ ರಮಾವಶಾಃ। ಪ್ರಕೃತ್ಯಾತ್ಮಕ ಲಿಂಗೇನ

ಬದ್ಧಾಶ್ಚ ಹರಿಕುಕ್ಷಿಗಾಃ ॥ ಸ್ವರೂಪಾಣ್ಯೇವ ವಿಷ್ಣೋಸ್ತು ನಿತ್ಯವ್ಯಾಪ್ತಾನಿ ಕೃತ್ಸ್ನಶಃ। ಸ್ವತಂತ್ರಾಣಿ ಸ್ವತಂತ್ರಸ್ಯ ಪುರುಷಸ್ಯ ಮಹಾತ್ಮನಃ॥ ಯಃ ಸ್ವರೂಪ ಸ್ಥಿತೋ ಯಸ್ಯ ಜ್ಞಾನಕರ್ಮಾಣ್ಯಪಿ ಸ್ಫುಟಮ್। **ಸರ್ವಸ್ವರೂಪಚೇಷ್ಟಾಸು ಪರಾಪೇಕ್ಷಾ ನ ಯಸ್ಯ ಹಿ**॥ ಸ ಸ್ವತಂತ್ರ ಇತಿ ಪ್ರೋಕ್ತಃ ಸ ವಿಷ್ಣುರ್ನೇತರಃ ಕ್ವಚಿತ್ ॥ ಅವ್ಯಕ್ತತತ್ಕಾರ್ಯಮಯದೇಹಶೂನ್ಯಾ ರಮಾಪಿ ಹಿ ॥ ತಚ್ಚಿತ್ತೇಂದ್ರಿಯಮಾತ್ರಾಸ್ತು ನಿತ್ಯಾಂ ವ್ಯಾಪ್ತಸ್ವರೂಪಕಾಃ ॥ ವಿಷ್ಣ್ವೇಕವಶಗಾಃ ತಸ್ಯಾಃ ಹರ್ಯಪೇಕ್ಷಾ ಸದಾಸ್ತಿ ಹಿ ॥ **ಪರಾಪೇಕ್ಷಾಯುತತ್ವಾತ್ತಾ ಅಸ್ವತಂತ್ರಾ ಪ್ರಕೀರ್ತಿತಾ ॥ ಬ್ರಹ್ಮಾದಿಮುಕ್ತಾಮುಕ್ತಾನಾಮಸ್ವಾತಂತ್ರ್ಯಮನಾದಿತಃ ॥** ಸಿದ್ಧಮೇವ ಸ್ವರೂಪಂ ಚ ಜ್ಞಾನಕರ್ಮಾಣ್ಯಪಿ ಸ್ಫುಟಮ್"॥ ಪ್ರಕಾಶಸಂಹಿತಾ ಪ್ರ. ಪ. ಅಧ್ಯಾಯ ೫.

ಇಂತು ಅನಾದಿಯಿಂದ ಸರ್ವಜೀವರು ಅಸ್ವತಂತ್ರರು. ರಮಾ ವಶರಾಗಿ ಹರಿ ಕುಕ್ಷಿಯಲ್ಲಿರುವವರು. ಸೃಷ್ಟಿ ಪ್ರಾರಂಭದಲ್ಲಿಯೂ, ಸರ್ವಸ್ವತಂತ್ರನಾದ ಪುರುಷರೂಪಿ ಹರಿಯ ಮಾಹಾತ್ಮ್ಯೆಯಿಂದ ಅಥವಾ ಮಹಾತ್ಮನಾದಪುರುಷ ರೂಪಿಯು ಜೀವರ ಸ್ವರೂಪ ಜ್ಞಾನಕರ್ಮೇಂದ್ರಿಯಗಳು, ಸರ್ವಸ್ವರೂಪ ಚೇಷ್ಟಾದಿಗಳು, ಪರ ಉತ್ತಮನಾದ ಶ್ರೀಹರಿಯ ("ಪರಾಪೇಕ್ಷಾ ನ ಯಸ್ಯ ಹಿ") ಪ್ರೇರಣಾ ಇಲ್ಲದೆ ಇಲ್ಲೇ ಇಲ್ಲ. ಕಾರಣ ಸಃ ಆ ವಿಷ್ಣುವೇ ಸ್ವತಂತ್ರನೇ ಹೊರತಾಗಿ ಅನ್ಯರೊಬ್ಬರು ಸ್ವತಂತ್ರರಲ್ಲ. ಹರಿ ಕುಕ್ಷಿಯಿಂದ ಬಹಿರ್ಗತರಾಗಿ ಸೃಷ್ಟರಾದ ಜೀವರು. ಲಿಂಗದೇಹ, ಅವ್ಯಕ್ತದೇಹ, ತತ್ಕಾರ್ಯಮಯ ದೇಹಾದಿಗಳು, ಶೂನ್ಯಾಭಿಧ ಹರಿಯ ರಮೆಯ ವಶವಾಗಿ, ಜೀವರುಗಳ ಸ್ವರೂಪ ಚಿತ್ತ, ಇಂದ್ರಿಯ, ಮಾತ್ರಾದಿಗಳಲ್ಲಿ ಶ್ರೀಹರಿಯು ತನ್ನ ಸ್ವಸ್ವರೂಪದಿಂದ ವ್ಯಾಪ್ತನಾಗಿ ಚೇಷ್ಟಾಪ್ರದನಾಗಿದ್ದಾನೆ. ಸದಾಕಾಲದಲ್ಲಿ ಸರ್ವಜೀವರು ವಿಷ್ಣುವಿನ ವಶದಲ್ಲೇ ಇರುವರು. ಹೀಗೆ ಹರಿಯ ಅಧೀನರಾಗಿ ಪರಾಪೇಕ್ಷಯುತರಾದುದರಿಂದ **ಅಸ್ವತಂತ್ರರೆಂದು ಕರೆಸಿಕೊಳ್ಳುತ್ತಾರೆ,** ಬ್ರಹ್ಮಾದಿ ಸಕಲ ಮುಕ್ತ ಅಮುಕ್ತ ಜೀವರು. **ಅನಾದಿಯಿಂದ ಅಸ್ವತಂತ್ರರು.** ಜೀವರ ಸ್ವರೂಪ ಜ್ಞಾನಕರ್ಮೇಂದ್ರಿಯಗಳು ನಿತ್ಯಸ್ಫುಟವಾಗಿರುವವಾದರೂ, ಈ ಸ್ವರೂಪೇಂದ್ರಿಯಗಳಲ್ಲಿ ಸ್ವರೂಪ ಸ್ವತಂತ್ರನಾದ ಶ್ರೀ ಹರಿಯು ನಿಂತು ಪ್ರೇರಿಸದ ವಿನಾ ಕಾರ್ಯಮಾಡಲಾರವು. ಈ ಪ್ರಕಾರ ಅನಾದಿಯಿಂದ

ಸದಾಕಾಲ ಅಸೃಜ್ಯ ಸೃಜ್ಯ ಮುಕ್ತಾವಸ್ಥೆಯಲ್ಲಿ ಹರಿಯು ಅಧೀನರು. ಅಸ್ವತಂತ್ರರು. ಇವರ ಸ್ವರೂಪೇಂದಿಯ ಪ್ರೇರಣೆಗೆ ಶ್ರೀಹರಿಯು ಮುಖ್ಯ. ಶ್ರೀ ಹರಿಯ ಚಲನೆ ವಿನಾ ಜೀವ ಚಲಿಸಲಾರನೆಂದು ಪ್ರಕಾಶ ಸಂಹಿತೆಯಲ್ಲಿ ಹೇಳಿದ್ದಾರೆ.

ಇಂತು ಅಸ್ವತಂತ್ರ ಪರಾಧೀನರಾದ ಜೀವರನ್ನು ಸೃಷ್ಟಿಗೆ ತಂದು ಸಾಧನ ಮಾಡಿಸಲು ಶ್ರೀ ಹರಿಯು ಜೀವರಿಗೆ ತನ್ನ ಸ್ವಸ್ವರೂಪ ಶಕ್ತಿ ಇತ್ತುದನ್ನು ಹೇಳುತ್ತಾರೆ. "ಸರ್ವವಸ್ತುಷು ಯಾ ಶಕ್ತಿಃ ಸಾ ಮದೀಯೈವ ನಾನ್ಯಥಾ" ॥ ಮತ್ತು **ಓಂ ಪರಾತ್ತುತಚ್ಛ್ರುತೇಃ ಓಂ** ॥ ಸಾ ಕರ್ತೃತ್ವ ಶಕ್ತಿ ಪರಾದೇವ ಎಂಬ ಬ್ರಹ್ಮಸೂತ್ರಾನುಸರಿಸಿ ತನ್ನಲ್ಲಿದ್ದ ಸ್ವರೂಪ ಭೂತ ಸ್ವಾತಂತ್ರ್ಯವೆ ಜೀವರಿಗೆ ಇತ್ತನೆಂದು ಉಪದೇಶಿಸುತ್ತಾರೆ.

ಹಿಂದೆ ಸೃಷ್ಟಿ ಪ್ರಾರಂಭದಲ್ಲಿ ೪ ಭಾಗ ಸ್ವಗತಸ್ವಾತಂತ್ರ್ಯ ತೆಗೆದು ಒಂದೊಂದರಲ್ಲಿ ೧೦ ಭಾಗಮಾಡಿ ೪೦ ಭಾಗ ಸ್ವಗತಸ್ವಾತಂತ್ರ್ಯ ಇಟ್ಟನೆಂದು ಹೇಳಿದರು. ಆದರೆ,

ಅನಂತ ಗುಣವಿದ್ದರೂ, ಸ್ವರೂಪ ಸ್ವಾತಂತ್ರ್ಯಯ ನಾಲ್ಕು ವಿಭಾಗ ಏಕೆ ಮಾಡಿದನೆಂದು ಶಂಕೆ ಬಂದರೆ ಶ್ರೀಹರಿಯ ಇಚ್ಛಾ ಮೊದಲನೆದು. ತನ್ನ ಸಂಕಲ್ಪಾನುಸಾರ ನಾಲ್ಕು ಗುಣ ವಿಭಾಗ ತೆಗೆದ. ಹಿಂದೆ ಸಂಧಿ ೪, ಪದ್ಯ ೨೯ರಲ್ಲಿ ಮತ್ತು ಇದೇ ೧೭ ಸಂಧಿ, ಪದ್ಯ ೨೩ರಲ್ಲಿ ೧. ತ್ರಿಜಗದ್ವ್ಯಾಪಕತ್ವ, ೨. ನಿಯಾಮಕತ್ವ, ೩. ಸ್ಥಾಪಕತ್ವ, ೪. ವಶಿತ್ವ ಈ ನಾಲ್ಕು ಸ್ವಸ್ವಾತಂತ್ರ್ಯ ಗುಣದಲ್ಲಿ ಈಶತ್ವ ಗುಣವು ಎಲ್ಲದರಲ್ಲಿ ಅಡಕವಾಗಿದೆ. ಹೀಗೆ ನಾಲ್ಕು ಶಕ್ತಿ ಇಟ್ಟನೆಂಬುದು ದಾಸರ ವಚನವೇ ಸಾಕು. ಇವೇ ಸೃಷ್ಟಿ ಸ್ಥಿತಿಗೆ ಮುಖ್ಯ ಕಾರಣ.

ಇನ್ನು ವಿಷ್ಣು ರಹಸ್ಯ ಅಧ್ಯಾಯ ೨೧ರಲ್ಲಿಯೂ, "ಸ ಏವ ಕ್ರೀಡ ನಾರ್ಥಾಯ ಜೀವಾನಾಂ ಗತಿಹೇತವೇ ದೇಹಯೋಗೇನ ಸಂಸೃಜ್ಯ ತೇಷು ಚಾಪ್ಯವಿಶತ್ ಸ್ವಯಮ್ ॥ ೨೬ ॥ (೧) ಬ್ರಹ್ಮಾಣಂ ಚ ತಥಾ ಪ್ರಾಣಂ (೨) ತಥಾನ್ಯಾಸ್ತತ್ವದೇವತಾಃ। ದೇಹೇ ನಿಯೋಜಯಾಂಚಕ್ರೇ (೩) ತಥಾ ಕಲ್ಪ್ಯಾದಿಕಾನ್ ಸುರಾನ್ ॥೨೭॥ ಸ್ವಾತಂತ್ರ್ಯಂ ವ್ಯಭಜತ್ತೇಷು ಯಥಾ (೪) **ಜೀವೇಷು ಭಾಗಶಃ**। ಯಥಾ ರಾಜಾ ನಿಜಾಮಾತ್ಯಾನ್ ದತ್ವಾತ್ವ ಸ್ವಾತಂತ್ರ್ಯ

ಮಾತ್ಮನಃ ||೨೮|| ಇಂತು ೧. ಬ್ರಹ್ಮ, ಪ್ರಾಣ, ೨. ಇತರ ತತ್ವದೇವತೆಗಳು, ೩. ಕಲ್ಯಾದಿ ಅಸುರರಿಗೆ, ೪. ಸಕಲ ಜೀವಿಗಳಿಗೆ. ರಾಜನು ಅಮಾತ್ಯಾದಿ ಗಳ ಯೋಗ್ಯತೆಯಂತೆ (೪) ವಿಧ ಮಾಡಿದನು.

ಈಗ ಸೃಷ್ಟಿಸ್ಥಿತಿ ಕಾಲದಲ್ಲಿ ದತ್ತಸ್ವಾತಂತ್ರಗುಣವು ಅವೇ ಸ್ವಗತ ಸ್ವಾತಂತ್ರ್ಯವೋ ಬೇರೆಯೋ ಎಂದರೆ ಅನಂತಾನಂತ ಶ್ರೀಹರಿಯ ಗುಣಗುಣಿ ಗಳಿಗೆ ಕಿಂಚಿತ್ ಭೇದವಿಲ್ಲ. ಕಾರಣ ಸ್ಥಿತಿ ಕಾಲದಲ್ಲಿ ಸ್ವರೂಪೇಂದ್ರಿಯಪ್ರವ ರ್ತಕ ಶಕ್ತಿ ಇತ್ತು ಇಂದ್ರಿಯ ಕಾರ್ಯ ಮಾಡಿಸುವನು ಹರಿಯೆಂದು ಪ್ರಕಾಶ ಸಂಹಿತೆಯಲ್ಲಿ ಮೇಲೆ ವಿವರಿಸಿದಂತೆ ಅದೇ ೪೦ ಅಂಶ ಭಾಗಗಳಲ್ಲಿಯೇ ಒಂದೊಂದಕ್ಕೆ ೧೦ ಮಡಿ ವೆಗ್ಗಳಿಸಿದನು. ಏಕಂದರೆ ಲಿಂಗ, ಅವ್ಯಕ್ತ, ಅನಿ ರುದ್ಧ, ಸ್ಥೂಲ ದೇಹಾದಿಗಳಲ್ಲಿ ಪ್ರಕೃತಿ ಗುಣಬಿಂದುಗಳು ಹೆಚ್ಚಿದಂತೆ ಶ್ರೀ ಹರಿಯ ಪ್ರಾಪಕ, ಸ್ಥಾಪಕ, ನಿಯಾಮಕ, ವ್ಯಾಪಕ ರೂಪಗಳ ಪ್ರೇರಕತ್ವವೇ ಮುಖ್ಯ ಕಾರಣವೇ ಹೊರ್ತಾಗಿ ಬೇರೆ ಬೇರೆ ಸ್ವತಂತ್ರ ಗುಣದಲ್ಲಿ ಒಂವರಲ್ಲಿ ಅನಂತ ಗುಣವಿದ್ದರೂ ಒಂದಕ್ಕೊಂದು ಅಭೇದ.

ದತ್ತಸ್ವಾತಂತ್ರ ರೂಪವೇನು?

"ದತ್ತಸ್ವಾತಂತ್ರ್ಯನಾಮ್ನಾಹಂ ಹರಿರೀಶೇನ ಸರ್ವದಾ| ಪ್ರೇರಿತಃ ಕರ್ಮ ಕುರ್ವಾಣೋ ನ ಮೇ ಶಕ್ತಿಃ ಕಥಂಚನ| ದತ್ತಸ್ವಾತಂತ್ರ್ಯರೂಪಂ ತು ಹರೇರೇವ ನ ಮೇತಿ ಚ || ಮಯಿ ಸಂಸ್ಥಾಪ್ಯ ಬಿಂಬೋಸೌ ತೇನ ಕರ್ಮಾಣಿ ಕಾರಯನ್ || ಸ್ವಯಂ ಕರೋತಿ ಕರ್ಮಾಣಿ ಸ್ವಾಂಶೈಃ ಕಾರಯತಿ ಪ್ರಭುಃ|| (ಪ್ರಕಾಶಸಂ) **ಸ್ವಗತಸ್ವಾತಂತ್ರ್ಯ ದತ್ತಸ್ವಾತಂತ್ರ್ಯ ರೂಪ ದ್ವಯಂ ಹರೇರೇವ ನ ಜೀವಸ್ಯೇತ್ಯರ್ಥಃ** (ಭಲಾರಿ ಆಚಾರ್ಯರು) "ಕರ್ತೃತಾ ಜೀವಸಂಸ್ಥಾ ಯಾ್ಽನಾದಿಸಿದ್ಧಾ ಸರ್ವಜೀವೇಷು ನಿತ್ಯಾ ಇತ್ಯಾದಿ" ತಾತ್ಪರ್ಯನಿರ್ಣಯ.

ಇತ್ಯಾದಿ ಪ್ರಮಾಣಗಳಿಂದ, ಸ್ವಗತಸ್ವಾತಂತ್ರ್ಯ ರೂಪದಿಂದ ತನ್ನ ಸ್ವಾಂಶಕಲೆಗಳಲ್ಲಿ ಜೀವರಲ್ಲಿಟ್ಟಿದ್ದು ಸ್ಥಿತಿ ಕಾಲದಲ್ಲಿ ದತ್ತಸ್ವಾತಂತ್ರ್ಯರೂಪ ದಿಂದ ದಶೇಂದ್ರಿಯಗಳ ಕಾರ್ಯಪ್ರವೃತ್ತಿ ಮಾಡಿಸುವನು. ಸ್ವಗತ ಸ್ವಾತಂತ್ರ್ಯ, ದತ್ತಸ್ವಾತಂತ್ರ್ಯ ಎರಡು ರೂಪಗಳೂ ಶ್ರೀಹರಿಯ ರೂಪಗಳೇ

ಹೊರ್ತಾಗಿ ಜೀವನವಲ್ಲವೆಂದೂ, ಅನಾದಿಯಿಂದ ಜೀವನಲ್ಲಿ ತನ್ನ ಕೃರ್ತೃತ್ವ ಶಕ್ತಿ ಇಟ್ಟಿದ್ದಾನೆಂದು ತಾತ್ಪರ್ಯ ನಿರ್ಣಯ ವಚನಾನುಸಾರವಾಗಿ, **ಶ್ರೀಹರಿಯೆ ದತ್ತಸ್ವಾತಂತ್ರ್ಯರೂಪದಿಂದ** ಇದ್ದು ಕಾರ್ಯಮಾಡುತ್ತಾನೆಂದು ಶ್ರೀ ದಾಸವರ್ಯರು **ದತ್ತಸ್ವಾತಂತ್ರ್ಯಸಂಧಿಯೆಂದು** ಪೆಸರಿಟ್ಟದು **ಬಹು ಸಾರ್ಥಕ್ಯ.**

**ಪದ್ಯಾರ್ಥ :**—ಕಾರುಣಿಕ=ದಯಾವಂತನಾದ ಹರಿಯು ಜೀವರಿಂದ ಸಾಧನಮಾಡಿಸಿ ಮುಕ್ತ್ಯಾದಿ ಗತಿ ಕೊಡಲೋಸುಗ ಜೀವರು ಅಸ್ವತಂತ್ರರು ಸದಾ ನನ್ನ ಆಧೀನರು. ಎಂಬ ಅಂತಃಕರಣದಿಂದ, ಹರಿ=ಬಿಂಬರೂಪಿಯಾದ ಪರಮಾತ್ಮ, ತನ್ನೊಳಿಪ್ಪಾಪಾರಸ್ವಾತಂತ್ರಿಯಗುಣದಿ=ತನ್ನ ಸ್ವರೂಪಭೂತವಾದ ಅಪರಿಮಿತ ಸ್ವಾತಂತ್ರ್ಯಗುಣಕ್ಕೆ ಇಷ್ಟೇ ಅಂತ ಲೆಕ್ಕವಿಲ್ಲ, ಪರಿಮಿತಿ ಇಲ್ಲ ಅನಂತ ಸ್ವಾತಂತ್ರ್ಯಗುಣ ಒಂದಕ್ಕೊಂದು ಭೇದವಿಲ್ಲವಾದರೂ, ಇಂತಹ ಸ್ವಾತಂತ್ರ್ಯಗುಣಗಳನ್ನು, ನಾನೂರು ತೆಗೆದು=೪೦೦ ನೂರು ಸ್ವತಂತ್ರಗುಣ ತೆಗೆದನು. ಇದರಲ್ಲಿ ಸಪಾದ ಆರೊಂದಧಿಕ ಅರವತ್ತು ನಾರಿಗಿತ್ತ=೬+೧=೭ ಹೆಚ್ಚಿಗೆ ಆದ ೬೦+೭=೬೭ ಸಪಾದ ·|· ಗುಣ ಹೀಗೆ ರಮೆಯಲ್ಲಿ ೬೭|

ಗುಣ, ದ್ವಿಷೋಡಶಾಧಿಕ ನೂರು ಪಾದತ್ರಯವ
೧೬×೨=೩೨×೧೦೦=೧೩೨ ಮೂರುಪಾದ||| ಹೀಗೆ } ೧೩೨||| / ೨೦೦

ತನ್ನ ಶರೀರದೊಳಗೀಪರಿ=ಅವತಾರ ವ್ಯಾಪಾರಾದಿಗಳಿಗೋಸ್ಕರ ೧೩೨||| ಗುಣಗಳನ್ನು. ತನ್ನ ವಶದಲ್ಲಿರಿಸಿ ಈಪ್ರಕಾರ, ವಿಭಾಗ ಮಾಡ್ದ=ಹಂಚಿದನು, ತ್ರಿಪ್ರದಾಹ್ವ=ತ್ರೀಣಿ ಪದಾನಿ ಯಸ್ಯೇತಿ ತ್ರಿಪದಾಹ್ವ. (ಶ್ರೀ ವಿದ್ಯಾಧಿರಾಜೀಯ) (ಋಗ್ವೇದ; ಯಜುರ್ವೇದ; ಸಾಮವೇದ. ಪ್ರತಿಪಾದ್ಯ) ಅಥವಾ, ತ್ರಿಪಾದ ಸ್ಯಾಮೃತಂ ಭುವಿ ಸ್ವರ್ಗ, ಮರ್ತ್ಯ, ಪಾತಾಳ, ಮೂರು ಪಾದಗಳಿಂದ ಆಕ್ರಮಿಸಿದ ತ್ರಿವಿಕ್ರಮ ರೂಪಿಹರಿಯು ಈ ಪ್ರಕಾರ ಸ್ವಾತಂತ್ರ್ಯ ಹಂಚಿದ.

**ಭಾವಸೂಚನ :**—ಮಂಜೂಷಾಯಾಂ ಕಮಲಾಪತಿದಾಸಧುರೀಣಾ ಆಪ್ಯಬ್ರುವತ ಸಂಧಿಗಮನಿಕಾಯಾಂ || **ಭಾಮಿನಿ ||** ಶ್ರೀ ರಮಣಿಪತಿ–ತನ್ನೊಳಿಪ್ಪಾ| ಪಾರಸ್ವಾತಂತ್ರ್ಯಯದಿ ಕೇಚಿ|| ತ್ತಾರತಮ್ಯದಿ ಇತ್ತು ಜೀವರ

ಹೃದ್ಗತದಿ ನಿಂದಾ || ಶೌರಿಸ್ವಾತಂತ್ರ್ಯಯು ಸ್ವರೂಪದ| ಪಾರಕರ್ಮಾಚರಿಸಿ ಚರಿಪನಿಂ| ತಾರು ಚಿಂತಿಸಲವರ್ಗೆ ಸದ್ಗತಿ ಕೊಡುವೆನೆಂತ್ನುಡಿದ ||೧೬||

ಕಾರುಣಿಕೇತಿ || ಸ್ವಾತಂತ್ರ್ಯರೂಪ ವಿಶೇಷಃ|| ತ್ರಿಪದೇತಿ| ತ್ರಿಪದಃ ಸ್ತ್ರಿದಿಶಾಧ್ಯಕ್ಷ ಇತ್ಯುಕ್ತೇಃ ||೧||

**ಸೂಚನೆ:**—ವ್ಯಾಸದಾಸ ಸಿದ್ಧಾಂತ ಕೌಮುದಿಟೀಕಾ ಪದ್ಯ, ೧–೨ ಕೂಡಿಸಿ ಬರೆದಿದ್ದಾರೆ. ಕಾರಣ ಎರಡನೇ ಪದ್ಯದಲ್ಲಿ ಕೊಟ್ಟಿದೆ. ಮುಂದೆ ನೋಡಿ ಆನಂದ ಪಡೆಯುವರಾಗಿರಿ.

**ಅವತರಣಿಕಾ:**—ಹಿಂದಿನ ಪದ್ಯದಲ್ಲಿ ಶ್ರೀ ಹರಿಯು ಅಪಾರ ಸ್ವಾತಂತ್ರ್ಯಗುಣಗಳಲ್ಲಿ ೪೦೦ ಗುಣಗಳನ್ನು ತೆಗೆದು ೬೨|· ರಮಾದೇವಿಯರಲ್ಲಿ ೧೩೭|||· ಸೃಷ್ಟಿಕಾರ್ಯನಡೆಯಿಸಲು ತನ್ನವಶದಲ್ಲಿ ಹೀಗೆ ೨೦೦ ಗುಣ ವಿಭಾಗ ಗೈದದು ಹೇಳಿ, ಈ ಉಳಿದ ೨೦೦ ಗುಣಗಳನ್ನು ಬ್ರಹ್ಮಾದಿ ಜೀವರುಗಳಲ್ಲಿ ಅವರವರ ಯೋಗ್ಯತೆಯಂತೆ ತನ್ನ ಸ್ವಾಂಶ ಕಲಾರೂಪವಾದ ಸ್ವಾತಂತ್ರ್ಯ ಕಲೆಗಳನ್ನು ಇಟ್ಟನೆಂದು ವಿಷ್ಣು ರಹಸ್ಯ ೨೧ನೇ ಅಧ್ಯಾಯರಹಸ್ಯ ವಿವರಿಸುತ್ತಾರೆ.

**ಸತ್ಯ ಲೋಕಾಧಿಪನೊಳಗೆ ಐ |**
**ವತ್ತೆರಡು ಪವಮಾನ ನೊಳು ನಾ|**
**ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು ||**
**ಚಿತ್ತಜೇಂದ್ರ ರೊಳೈಧಿಕ ದಶ |**
**ತತ್ವ ಮಾನಿಗಳೆನಿಪ ಸುರರೊಳು |**
**ಹತ್ತು ಈರೈದಖಿಳ ಜೀವರೊಳಿಟ್ಟ ನಿರವದ್ಯ ||೨||**

**ಪದ್ಯಾರ್ಥ:**—(೧) ಸತ್ಯಲೋಕಾಧಿಪನೊಳಗೆ ಐವತ್ತೆರಡು=೫೨ ಸತ್ಯಲೋಕಕ್ಕೆ ಒಡೆಯನಾದ ಬ್ರಹ್ಮದೇವರಲ್ಲಿ.

(೨) ಪವಮಾನ=ವಾಯುದೇವರಲ್ಲಿ ನಾಲ್ವತ್ತು ಮೇಲೆಂಟಧಿಕ=೪೮

(೩) ಶಿವ=ಸದಾಮಂಗಳಕರವಾದ ರಾಮನಾಮ ಜಪಿಸುವ ರುದ್ರನೊಳಿಟ್ಟನಿಪ್ಪತ್ತು ೨೦

(೪) ಚಿತ್ತಜೇಂದ್ರರೊಳೈಧಿಕದಶ=ಚಿತ್ತಜ=ಕಾಮ, ಇಂದ್ರ ದೇವರಲ್ಲಿ ದಶಕ್ಕೆ ಐದಧಿಕ ೧೦+೫= ೧೫

(೬) ತತ್ವಮಾನಿಗಳೆನಿಪ ಸುರರೊಳು, ಹತ್ತು=ಪಂಚಜ್ಞಾನ ಕರ್ಮೇಂದ್ರಿಯಾಭಿಮಾನಿಗಳಾದ ದೇವತೆಗಳಲ್ಲಿ- ೧೦

(೭) ಈರೈದಖಿಳ ಜೀವರೊಳಿಟ್ಟ=೨+೫=೧೦ ಈರೈದು ೧೦

(೮) ಕಲಿಮೊದಲುಗೊಂಡಖಿಳ ದಾನವರೊಳಗೆ ನಾಲ್ವತ್ತೈದು-೪೫ ಕಲಿಯೇ ಮೊದಲಾಗಿ ಎಲ್ಲಿ ದೈತ್ಯ ದಾನವರಲ್ಲಿ ಹೀಗೆ ಒಟ್ಟಿಗೆ ಎರಡನೂರು ಗುಣಗಳನ್ನು ಇಟ್ಟನು. ——
೨೦೦

ಒಟ್ಟಿಗೆ ೪೦೦ ಗುಣಗಳ ಲೆಕ್ಕ ಸೃಷ್ಟಿ ವ್ಯಾಪಾರಕ್ಕಾಗಿ ನಿರವದ್ಯ=ದೋಷರಹಿತನಾದ ಶ್ರೀ ಹರಿಯು ಸ್ವಕಳೆಗಳನ್ನು ಇಟ್ಟು ತಾನೆ ಪ್ರೇರಿಸಿ ಸಕಲ ಕರ್ಮಮಾಡಿಸುವನೆಂದು ಹೇಳಿದ್ದಾರೆ. ಸಾಕಷ್ಟು ಪ್ರಮಾಣಗಳೂ ಇವೆ.

**ಭಾವಸೂಚನೆ:—**ಸತ್ಯೇತಿ || ಚಿತ್ತಜ=ಕಾಮ ||೨||

**ವಿಶೇಷಸೂಚನೆ:—**ಇದಕ್ಕೆ ವಿಷ್ಣುರಹಸ್ಯ ಅಧ್ಯಾಯ ೨೧ ಪ್ರಮಾಣ-"ಸ್ವಸ್ಮಿನ್ನರ್ಧಂ ಸ್ವತಂತ್ರತ್ವಂ ಸಮಾಧಾಯ ತದರ್ಧಕಮ್ || ವಿಭಜ್ಯ ಶತಧಾ ಭೂಯೋಽಷ್ಟಾಚತ್ವಾರಿಂಶದಂಶಕಾನ್ ||೩೨|| ಪ್ರಾಣೇ ಸ್ವಾತಂತ್ರ್ಯಮಾಧಾಯ ದ್ವಿಪಂಚಾಶತ್ತು ವೇಧಸಿ | ಪಾದಂ ಚತುರ್ಥಂ ಶತಧಾ ವಿಭಜ್ಯ ದಶಭಾಗಕಾನ್ ||೩೩|| ಜೀವೇ ಸ್ವಾತಂತ್ರ್ಯಮಾಧಾಯ ತತೋ ವಿಂಶತಿಭಾಗಕಾನ್| ಅಹಂಕಾರಾತ್ಮಕೇ ರುದ್ರೇ ತಥಾ ಬುದ್ಧೌ ನಿಧಾಯ ಚ ||೩೪|| ಮನೋದೇವೇ ತತಃ ಶಕ್ರೇ ಭಾಗಾನ್ ಪಂಚದಶೈವ ತು| ತತ್ವದೇವೇ ದಶಾಂಶಾಂಶ್ಚ ಸ್ವಾತಂತ್ರ್ಯಂ ನಿದಧೇ ಹರಿಃ||೩೫|| ಪಂಚಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವಧಾತ್ ಸ್ವಯಮ್ || ವಿಷ್ಣೋಃ ಪರೋ ನ ಚಾನ್ಯೋಽಸ್ತಿ ಸ್ವತಂತ್ರಃ ಕೋಪಿ ಚೇತನಃ ||೪೬||

ಶೇಷಭಾಗದ್ವಯಂ ಸ್ವಸ್ಮಿನ್ ಸ್ಥಾಪಯೇತ್ಸ ನಿಜೇಚ್ಛಯೇತಿ || ವಿಷ್ಣುರಹಸ್ಯೇ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶ್ರೀರಸ್ತು | ಹರಿಃ ಓಮ್ ||

ತತ್ರೈವ ಭಾಗಾಂತರೇ—ಸ ಏವ ಕ್ರೀಡನಾರ್ಥಾಯ ಜೀವಾನಾಂ

ಗತಿಹೇತವೇ || ದೇಹಯೋಗೇನ ಸಂಸೃಜ್ಯ ತೇಷು ಚಾಪ್ಯವಿಶತ್ ಸ್ವಯಮ್|| ಬ್ರಹ್ಮಾಣಂ ಚ ತಥಾ ಪ್ರಾಣಂ ತಥಾನ್ಯಾಃ ತತ್ವದೇವತಾಃ || ದೇಹೇ ನಿಯೋಜಯಾಂಚಕ್ರೇ ತಥಾ ಕಲ್ಯಾದಿಕಾನ್‌ಸುರಾನ್ || ಸ್ವಾತಂತ್ರ್ಯಂ ವ್ಯಭಜತ್ ತೇಷು ತಥಾ ಜೀವೇಷು ಭಾಗಶಃ || ಸ್ವಾತಂತ್ರ್ಯಸ್ವರೂಪಂ ನಿಯಂತೃತ್ವೇನ ಸರ್ವತ್ರ ತಿಷ್ಠನ್ ಜೀವೇಷು ಸರ್ವದಾ|| ಸ್ವಸ್ಮಿನ್ ಅರ್ಧಂ ಸ್ವತಂತ್ರತ್ವಂ ಸಮಾದಾಯ ತದರ್ಧಕಮ್ || ವಿಭಜ್ಯ ಶತಧಾ ಭೂಯೋ ಷಟ್‌ಚತ್ವಾರಿಂಶದಂಶಕಾನ್ || ಪ್ರಾಣೇ ಸ್ವಾತಂತ್ರ್ಯಮಾಧಾಯ ದ್ವಿಪಂಚಾಶತ್ತು ವೇಧಸಿ || ಪಾದಂ ಚತುರ್ಥಂ ಶತಧಾ ವಿಭಜ್ಯ ದಶ ಭಾಗಕಾನ್|| ಜೀವೇ ಸ್ವಾತಂತ್ರ್ಯಮಾಧಾಯ ತತೋ ವಿಂಶತಿ ಭಾಗಕಾನ್| ಅಹಂಕಾರಾತ್ಮಕೇ ರುದ್ರೇ ತಥಾ ಬುದ್ಧೌ ನಿಧಾಯ ಚ|| ಮನೋದೇವೇ ತತಃ ಶಕ್ರೇ ಭಾಗಾನ್ ಪಂಚದಶೈವ ತು || ತತ್ವದೇವೇ ದಶಾಂಶಾಂಶ್ಚ ಸ್ವಾತಂತ್ರ್ಯಂ ನಿದಧೇ ಹರಿಃ|| ಇತಿ ವಿಸ್ತೃತ್ಯ (ವಿಸ್ತರೇಣ) ದಾನಶಂಸಕ ಪದ್ಯಜಾತಾಭಿ ಪ್ರಾಯಮ್ ಪದ್ಯದ್ವಯೇನ ಆಹ—"ಕಾರುಣಿಕ" ಇತಿ "ಸತ್ಯ" ಇತಿ ಚ||೧||೨||

## ಕನ್ನಡಾರ್ಥ

ವಿಷ್ಣುರಹಸ್ಯದಲ್ಲಿಯೇ ಇನ್ನೊಂದು ಅಧ್ಯಾಯದಲ್ಲಿ "ಆ ಹರಿಯೇ ಜೀವರ ಗತಿಗೋಸುಗ ದೇಹಸಂಬಂಧದಿಂದ ಜೀವರನ್ನು ಸೃಷ್ಟಿಸಿ, ಅವರಲ್ಲಿ ತಾನೇ ಪ್ರವೇಶಿಸಿದನು. ಬ್ರಹ್ಮದೇವನನ್ನೂ, ಪ್ರಾಣದೇವರನ್ನೂ ಹಾಗೂ ಬೇರೆ ತತ್ವಾಭಿಮಾನಿ ದೇವತೆಗಳನ್ನೂ ದೇಹದಲ್ಲಿ ನಿಯೋಜಿಸಿದನು. ಅದ ರಂತೆ ಕಲಿ ಮುಂತಾದ ದೈತ್ಯರನ್ನೂ ನಿಯಮಿಸಿದನು. ಅವರಲ್ಲಿಯೂ, ಜೀವ ರಲ್ಲಿಯೂ ಭಾಗಶಃ ಸ್ವತಂತ್ರತ್ವವನ್ನು ಹಂಚಿದನು.

ಸ್ವಾತಂತ್ರ್ಯದ ಸ್ವರೂಪವಿಂತಿರುತ್ತದೆ :—

"ಎಲ್ಲ ಜೀವರಲ್ಲಿ ಯಾವಾಗಲೂ ನಿಯಂತೃವಾಗಿ ಇದ್ದು, ಹರಿಯು ತನ್ನಲ್ಲಿಯ ೪೦೦ರಲ್ಲಿ ಅರ್ಧ ಸ್ವಾತಂತ್ರ್ಯವನ್ನು ತನ್ನಲ್ಲಿಟ್ಟುಕೊಂಡು, ಮಿಕ್ಕ ಅರ್ಧಭಾಗವನ್ನು ನೂರರಂತೆ ವಿಭಜಿಸಿದನು. ಆ ನೂರರಲ್ಲಿ ೪೬ ಭಾಗಗಳನ್ನು ಮುಖ್ಯಪ್ರಾಣನಲ್ಲಿಯೂ, ೫೨ ಭಾಗಗಳನ್ನು ಬ್ರಹ್ಮದೇವರಲ್ಲಿಯೂ ಹಂಚಿದನು. ಉಳಿದ ಕೊನೆಯ ನೂರರ ಭಾಗದಲ್ಲಿ ೧೦ ಭಾಗಗಳನ್ನು ಜೀವರಲ್ಲಿಯೂ, ೨೦ ಭಾಗಗಳನ್ನು ಅಹಂಕಾರಾಭಿಮಾನಿ ರುದ್ರನಲ್ಲಿಯೂ, ೧೫ ಭಾಗಗಳನ್ನು

ಇಂದ್ರಕಾಮರಲ್ಲಿಯೂ, ೧೦ ಭಾಗಗಳನ್ನು ತತ್ವಾಭಿಮಾನಿ ದೇವತೆಗಳಲ್ಲಿಯೂ ಹಂಚಿ ಇಟ್ಟನು" ಎಂದು ವಿಷ್ಣುರಹಸ್ಯದಲ್ಲಿ ಹೇಳಲಾಗಿರುತ್ತದೆ.

ವಿಷ್ಣುರಹಸ್ಯದ ಈ ಶ್ಲೋಕಾರ್ಥವನ್ನು ಎರಡು ಪದ್ಯಗಳಿಂದ ವಿವರಿಸುತ್ತಾರೆ. "ಕಾರುಣಿಕ" ಹಾಗೂ "ಸತ್ಯ" ಎಂಬುದಾಗಿ. ॥ ೧, ೨ ॥

**ಅವತರಣಿಕಾ :**—ಕಲಿ ಮೊದಲಾದ ತತ್ವಾಭಿಮಾನಿ ದೈತ್ಯಾದಿಗಳಲ್ಲಿಯೂ ೪೫ ತನ್ನ ಸ್ವಾತಂತ್ರ್ಯ ಗುಣಗಳನ್ನು ಇಟ್ಟು ತತ್ವ ದೇವತೆಗಳಲ್ಲಿ ತಾ ನಿಂತು ಪ್ರೇರಿಸಿ, ಅವರಿಂದ ಕಲ್ಯಾದಿಗಳ ವ್ಯಾಪಾರ ಮಾಡಿಸುತ್ತಾನೆಂದು ಹೇಳುತ್ತಾರೆ.

**ಕಲಿ ಮೊದಲುಗೊಂಡಖಿಳ ದಾನವ ।**
**ರೊಳಗೆ ನಾಲ್ವತ್ತೈದು ಈ ಪರಿ ।**
**ತಿಳಿದುಪಾಸನೆಮಾಡು ಮರೆಯದೆ ಪರಮ ಭಕುತಿಯಲಿ ॥**
**ಇಳಿಯೊಳಗೆ ಸಂಚರಿಸು ಲಕ್ಷ್ಮೀ ।**
**ನಿಲಯನಾಳಾನೆಂದು ಸರ್ವ ।**
**ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ॥ ೩ ॥**

**ಪದ್ಯಾರ್ಥ :**—ಕಲಿ ಮೊದಲುಗೊಂಡಖಿಳದಾನವರೊಳಗೆ ನಾಲ್ವತ್ತೈದು=ದುಷ್ಟ ಪಾಪಕೃತ್ಯ ಕಲ್ಯಾದಿ ದೈತ್ಯರದ್ವಾರಾ ಮಾಡಿಸಬೇಕಾಗಿ, ಕಲಿ ಮೊದಲಾಗಿ ಎಲ್ಲ ದಾನವರೊಳಗೆ ೪೫ ಸ್ವಸ್ವಾತಂತ್ರ್ಯಗುಣ ವಿಭಾಗ ಮಾಡಿಟ್ಟಿದ್ದಾನೆ. ಈಪರಿ ತಿಳಿದುಪಾಸನೆಮಾಡು ಮರಿಯದೇ ಪರಮ ಭಕುತಿಯಲಿ=ಶ್ರೀಹರಿಯು ಸ್ವಾಂಶ ಕಲೆಗಳಿಂದ ಪ್ರೇರಿಸದಿದ್ದರೆ ಜೀವರು ಜಡಸಮಾನರೆಂದು ನಿಶ್ಚಯವಾಗಿ ತಿಳಿದು ಶ್ರೀಹರಿಯೇ ಸ್ವತಂತ್ರ ಕರ್ತೃನೆಂದೂ ಕಾಲ ಕಾಲಕ್ಕೆ ಅರಿದು ಧ್ಯಾನ ಉಪಾಸನೆ ಮಾಡುವದು ಉತ್ತಮವಾದ ಭಕುತಿಯಿಂದ ಹರಿಯೇ ಸರ್ವಕರ್ತನೆಂದು, ಮತ್ತೂ ಲಕ್ಷ್ಮೀನಿಲಯನಾಳಾನೆಂದು ಇಳಿಯೊಳಗೆ ಸಂಚರಿಸು=ಸದಾ ಶ್ರೀ ರಮೆಯ ಸಹಿತನಾದ ಪರಮಾತ್ಮನ ವ್ಯಾಪ್ತತೆ, ವ್ಯಕ್ತತೆ ತಿಳಿದು ಮತ್ತು ನಾನು ಸದಾ ಶ್ರೀಹರಿಯ ಆಳು ದಾಸ ಸೇವಕ, ಅಧೀನನೆಂದು, ತಿಳಿದು ಹರಿ ಮಾಡಿಸಿದಂತೆ ನಾನು ಮಾಡುವೆನೆಂದು ಸಂಚರಿಸು=ಸಕಲ ವ್ಯಾಪಾರಗಳನ್ನು ಮಾಡು. ಇಂಥ ಉಪಾಸನೆಯಿಂದ ಭಗವಂತನು, ಗೆಳೆಯನಂದದಲಿ=ಮಿತ್ರನಂತೆ

ಅರ್ಜುನ ಸಾರಥಿಯಾಗಿ ಸಲಹಿದಂತೆ. ಬಹಿರಂಗದಲ್ಲಿಯೂ, ಜೀವಾಂತ ರ್ಯಾಮಿಯಾಗಿ ಒಳಗೂ, ಹೀಗೆ ಸರ್ವ ಸ್ಥಳಗಳಲ್ಲಿ ಮುಕ್ತಿಯಲ್ಲಿ ಸಹ, ಸಂಕ್ಷೈಸುವನು=ರಕ್ಷಿಸುವನು, ಕಾಪಾಡುವನು ॥

**ಭಾವಸೂಚನ :**— ಕಲೀತಿ ॥ ಗೆಳೆಯ ಮಿತ್ರ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪಂಚ ಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವಧಾತ್ ಸ್ವಯಮ್" ಇತ್ಯಸ್ಯ ಅರ್ಥಂ ಆಹ "ಕಲಿ" ಇತಿ ॥ ೩ ॥

## ಕನ್ನಡಾರ್ಥ

"೪೫ ಭಾಗಗಳನ್ನು ಕಲಿ ಮುಂತಾದ ದೈತ್ಯರಲ್ಲಿ ಹಂಚಿ ಇಟ್ಟನು." ಎಂದು ಹೇಳುವ ಶ್ಲೋಕಾರ್ಥವನ್ನು ನಿರೂಪಿಸುತ್ತಾರೆ. "ಕಲಿಮೊದಲು" ಎಂಬ ಪದ್ಯದಿಂದ. ॥ ೩ ॥

**ಅವತರಣಿಕಾ :**—ಶ್ರೀಹರಿಯು ಸ್ವಸ್ವಾತಂತ್ರ್ಯ ಕಲೆಗಳನ್ನಿಟ್ಟು ಸಕಲ ವ್ಯಾಪಾರಗಳನ್ನು ಮಾಡುವನೆಂದು ರಾಜನ ದೃಷ್ಟಾಂತದಿಂದ ಉಪದೇಶ ಗೈಯ್ಯುತ್ತಾರೆ.

**ಅವನಿಪ ಸ್ವಾಮಿತ್ವ ಧರ್ಮವ ।**
**ಸ್ವವಶಮಾತ್ಯರಿಗಿತ್ತು ತಾ ಮ ।**
**ತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ ॥**
**ಕವಿಭಿರೀಡಿತ ತನ್ನ ಕಲೆಗಳ ।**
**ದಿವಿಜದಾನವ ಮಾನವರೊಳಿ ।**
**ಟ್ಟವಿರತ ಗುಣತ್ರಯಜಕರ್ಮವ ಮಾಡಿ ಮಾಡಿಸುವ ॥ ೪ ॥**

**ಪದ್ಯಾರ್ಥ :**— ಅವನಿಪ = ಭೂಪಾಲನಮಾಡುವ ರಾಜನು, ಸ್ವಾಮಿತ್ವಧರ್ಮವ=ತನ್ನ ಅಧಿಕಾರ ಒಡೆತನ ಪಾಲನಮಾಡತಕ್ಕ ಧರ್ಮ ಕರ್ತವ್ಯವನ್ನು, ಸ್ವವಶ=ತನ್ನ ವಶದ, ತನ್ನ ಅಧೀನರಾದ, ಅಮಾತ್ಯರಿಗಿತ್ತು= ಮಂತ್ರಿಗಳು, ಸೈನಾಧಿಪರೇ ಮೊದಲಾದವರಿಗೆ, ಅವರವರ ಕಾರ್ಯನಿರ್ವಾಹ ಮಾಡಲು, ತನ್ನ ಅಧಿಕಾರವನ್ನು ಇತ್ತು=ಭೃತ್ಯರಲ್ಲಿ ತನ್ನ ಅಧಿಕಾರವನ್ನೇ

ಇಟ್ಟು. ತಾ= ತಾನು, ಮತ್ರ್ಯವರ ಮುಖದಲಿ=ಆ ಮಂತ್ರ್ಯಾದಿಗಳ ದ್ವಾರಾ ರಾಜಕಾರ್ಯವ ಮಾಡಿಸುವ ತೆರದಿ=ರಾಜ್ಯದ ಕಾರ್ಯ ಕೆಲಸವನ್ನು ಮಾಡಿಸುವಂತೇ, ( ಇದು ಏಕದೇಶೀಯ ದೃಷ್ಟಾಂತ. ರಾಜನು ಬಹಿರಂಗ ಆಜ್ಞೆ ಕೊಡುವನೇ ಹೊರ್ತು=ಅಂತರಂಗದಲ್ಲಿ ನಿಂತು ಪ್ರೇರಿಪನಲ್ಲವಾದರೂ, ಆ ರಾಜನಿಗೆ ರಾಜರಾಜೇಶ್ವರ ರೂಪದಿಂದ ರಾಜ್ಯಾಡಳಿತ ಪ್ರೇರಕನೂ, ಅಮಾತ್ಯರಲ್ಲಿ ನಿಂತು ಕಾರ್ಯಮಾಡಿಸುವನು ಶ್ರೀ ಹರಿಯೂ ) ಕವಿಭಿರೀಡಿತ=ಜ್ಞಾನಿಗಳಾದ ಬ್ರಹ್ಮಾದಿ ದೇವತೆಗಳಿಂದ ಸ್ತುತ್ಯನಾದವ, ತನ್ನ ಕಳೆಗಳ= ತನ್ನ ಸ್ವ, ಸ್ವತಂತ್ರರೂಪ ಪ್ರಕಾಶಮಾನವಾದ ಚಿದಂಶಗಳನ್ನು, ದಿವಿಜ=ಸ್ವರ್ಗವಾಸಿಗಳಾದ ದೇವತೆಗಳಲ್ಲಿ, ದಾನವ=ದನುಪುತ್ರರಾದ ದುಷ್ಟಜನರಲ್ಲಿ, ಮಾನವರೊಳು=ಮನುಜಾದಿಗಳಲ್ಲಿ, ಇಟ್ಟು=ತಾನೇ ಸ್ವರೂಪದಿಂದ ಇದ್ದು, ಅವಿರತ=ಸಂತತವಾಗಿ ಬಿಡದೆ, ಗುಣತ್ರಯಜಕರ್ಮವ=ದಿವಿಜರಲ್ಲಿ ಸತ್ವಗುಣ ಕಾರ್ಯ, ದಾನವರಲ್ಲಿ, ತಮೋಗುಣಕಾರ್ಯ, ಮರ್ತ್ಯರಾದ ನಿತ್ಯ ಸಂಸಾರಿಗಳಲ್ಲಿ ರಜೋಗುಣಕಾರ್ಯ ಮಾಡಿ ಮಾಡಿಸುವವನು, ತಾನು ಹರಿಯು ಅಂತಃ ಪ್ರೇರಕನಾಗಿ ಮಾಡಿ, ಜೀವರಿಂದ ಮಾಡಿಸುವನು.

**ಭಾವಸೂಚನೆ—ಅವನೀತಿ ॥ ೪ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಯಥಾ ರಾಜಾ ನಿಜಾಮಾತ್ಯಾನ್ ದತ್ವಾ ಸ್ವಾಮಿತ್ವಮಾತ್ಮನಃ ॥ ಕಾರ್ಯೇ ನಿಯೋಜ್ಯ ತತ್ರತ್ಯಾನ್ ಗುಣಾನ್ ದೋಷಾಂಶ್ಚ ಪೃಚ್ಛತಿ ॥ ಶಕ್ತ್ಯಾ ಸ್ವದತ್ತಯಾಮಾತ್ಯೈಃ ಕೃತೇ ಕಾರ್ಯೇ ಸ ತುಷ್ಯತಿ॥ ಸತ್ಯಾಂ ಶಕ್ತೌ ಕಾರ್ಯನಾಶೇ ಸ್ವಾಜ್ಞಾಂ ಉಲ್ಲಂಘ್ಯ ವರ್ತನೇ॥ ಕುಪಿತ್ವಾ ದಂಡಯೇತ್ ಏವಂ ತಥಾ ಕ್ರೀಡತ್ಯಯಂ ಹರಿಃ॥ " ಇತ್ಯಸ್ಯ ಅಭಿಪ್ರಾಯಂ ಆಹ–" ಅವನಿಪ " ಇತಿ ॥ " ರಾಜಾಂಗೈರಿವ ಭೂಮಿಪಃ " ಇತಿ ವಾಯುಪುರಾಣೇ ॥ ೪ ॥

## ಕನ್ನಡಾರ್ಥ

"ರಾಜನು ತನ್ನಲ್ಲಿರುವ ಒಡೆತನ ( ಸ್ವಾಮಿತ್ವ ) ವನ್ನು ಕೊಟ್ಟು ಅಮಾತ್ಯರನ್ನು ಕಾರ್ಯಗಳಲ್ಲಿ ನಿಯೋಜಿಸಿ ಅಲ್ಲಿರುವ ಗುಣದೋಷಗಳನ್ನು ವಿಚಾರಿಸಿ; ಅಮಾತ್ಯರು ತನ್ನಿಂದ ಕೊಡಲ್ಪಟ್ಟ ಶಕ್ತಿಯಿಂದ ಕಾರ್ಯವನ್ನು

ಮಾಡಿದ್ದರೆ ಸಂತೋಷಪಡುತ್ತಾನೆ, ಶಕ್ತಿಯಿದ್ದರೂ ಕಾರ್ಯವನ್ನು ಮಾಡ ದಿದ್ದರೆ ಅಥವ ಕಾರ್ಯನಾಶವಾದರೆ, ಮತ್ತು ತನ್ನ ಆಜ್ಞೆಯನ್ನು ಮೀರಿ ವರ್ತಿಸಿದರೆ ರಾಜನು ಸಿಟ್ಟಿಗೆದ್ದು ಅವರನ್ನು ದಂಡಿಸುತ್ತಾನೆ. ಹೀಗೆಯೇ ರಾಜಾದಿಗಳು ಅಮಾತ್ಯ ಮುಂತಾದವರೊಡನೆ ವರ್ತಿಸುವಂತೆ ಹರಿಯು ಜೀವರೊಡನೆ ತನ್ನ ಶಕ್ತಿಯನ್ನು ಅವರಿಗೆ ಇತ್ತು ಅವರಿಂದ ಕಾರ್ಯಗಳನ್ನು ಮಾಡಿಸಿ ಕ್ರೀಡಿಸುತ್ತಾನೆ" ಎಂದು ಹೇಳುವ ಪದ್ಯಗಳ ಅರ್ಥಗಳನ್ನು ವಿವರಿಸಿ ಹೇಳುತ್ತಾರೆ "ಅವನಿಪ" ಎಂಬ ಪದ್ಯದಿಂದ,

"ರಾಜನು ರಾಜಾಂಗರಾದ ಸಚಿವ ಮುಂತಾದವರೊಡನೆ ವರ್ತಿಸುವಂತೆ ಹರಿಯು ಜೀವರೊಡನೆ ಕ್ರೀಡಿಸುತ್ತಾನೆ" ಎಂದು ವಾಯು ಪುರಾಣದಲ್ಲಿಯೂ ಹೇಳಲಾಗಿರುತ್ತದೆ. ॥ ೪ ॥

ಅವತರಣಿಕಾ— ಒಳ್ಳೇ ಕೆಟ್ಟಕಾರ್ಯಗಳು ದೇವದಾನವರಲ್ಲಿ ತಾ ನಿಂತು ಪ್ರೇರಿಸಿ ಮಾಡಿ ಮಾಡಿಸುವನಾದರೂ ಶ್ರೀಹರಿಯು ಅವರವರ ಪುಣ್ಯ ಪಾಪಕರ್ಮಫಲ ಮಾತ್ರ ವ್ಯತ್ಯಾಸಮಾಡಿ ಕೊಡುತ್ತಾನೆಂದು ಹೇಳುತ್ತಾರೆ. ಇದು ಜೀವರ ಯೋಗ್ಯತಾನುಗುಣವಾದ ಫಲ ಆಗಿರುವುದು.

**ಪುಣ್ಯಪಾಪಗಳೀತೆರದಿ ಕಾ|**
**ರುಣ್ಯಸಾಗರ ದೇವದಾನವ |**
**ಮಾನ್ಯವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ ||**
**ಬನ್ನಬಡಿಸುವ ಭಕ್ತಿಹೀನರ |**
**ಸನ್ನುತ ಸುಕರ್ಮ ಫಲತೆಗೆದು ಪ್ರ |**
**ಪನ್ನರಿಗೆ ಕೊಟ್ಟವರ ಸುಖಬಡಿಸುವನು ಸುಭುಜಾಹ್ವ ||೫||**

ಪದ್ಯಾರ್ಥ—ಪುಣ್ಯ=ಸುಕೃತವಾದ ಒಳ್ಳೇಕಾರ್ಯ, ಪಾಪ=ದುಷ್ಕೃತ ವಾದ ಕೆಟ್ಟಕೆಲಸ, ಈ ತೆರದಿ=ಈ ಪ್ರಕಾರವಾಗಿ, ದೇವದಾನವ ಮಾನವ ರೊಳು=ದೇವತೆಗಳು ದನುಪುತ್ರ ದೈತ್ಯಾದಿಗಳು, ಮರ್ತ್ಯರಲ್ಲಿ ಸತ್ವ, ತಮ, ರಜೋಗುಣದವರಲ್ಲಿ, ಫಲವ್ಯತ್ಯಾಸವನೆ ಮಾಡಿಟ್ಟು=ದೇವತೆಗಳು ಪಾಪಮಾಡಿ ದರೆ ಅವರ ಪಾಪಫಲ ದಾನವರಿಗೆ, ದೈತ್ಯಾದಿಗಳು ಪುಣ್ಯಮಾಡಿದರೆ ಆ ಪುಣ್ಯ ಕರ್ಮಫಲ ದೇವತೆಗಳಿಗೆ, ವ್ಯತ್ಯಾಸ=ಅಂತರ ಹೆಚ್ಚು ಕಡಿಮೆ, ವಿರುದ್ಧವಾಗಿ ಮಾಡಿ ಇಡುವನು. ಶ್ರೀಹರಿಯು ಕಾರುಣ್ಯಸಾಗರನು=ಕರುಣಾ ಸಮುದ್ರನು

ಏಕೆಂದರೆ ವೈಷಮ್ಯ ನೈರ್ಘೃಣ್ಯಾದಿಗಳಿಲ್ಲ. ಜೀವರ ಸ್ವರೂಪಬಲ್ಲ ಕರುಣಾಳು ಭಕ್ತಿಹೀನರಾದ=ತನ್ನಲ್ಲಿ ಭಕ್ತಿಯಿಲ್ಲದ ತಮೋಯೋಗ್ಯರನ್ನು ಬನ್ನ=ಕ್ಲೇಶ ದುಃಖಪಡಿಸುವನು. ಈ ಭಕ್ತಿಹೀನರು ದ್ವೇಷಿಗಳಾದವರ ಸನ್ನುತ=ಸುಕರ್ಮ ಗಳ ಫಲತೆಗೆದು=ಶ್ಲಾಘ್ಯವಾದ ಸಮೀಚೀನ ಪುಣ್ಯಕರ್ಮಗಳ ಫಲವನ್ನು ತೆಗೆದು, ಪ್ರಪನ್ನರಿಗೆ=ತನ್ನ ಶರಣಾಗತರಾದ ಭಕ್ತರಿಗೆ ದೈತ್ಯರ ಪುಣ್ಯಫಲ ವನ್ನು ಕೊಟ್ಟು, ಸುಖಬಡಿಸುವ=ಆನಂದ ಬಡಿಸುವನು, ಸುಭುಜಾಹ್ವ= ಸು=ಶೋಭನಾಃ ಜಗದ್ರಕ್ಷಾಕರಾಃ ಭುಜಾಃ ಯಸ್ಯೇತಿ ಸುಭುಜಃ|| (ವಿದ್ಯಾಧಿ ರಾಜೀಯ)

**ಭಾವಸೂಚನೆ:**—ಪುಣ್ಯೇತಿ ಸುಭುಜೇತಿ ಸುಭುಜೋ ದುರ್ಧರೋ ಇತ್ಯುಕ್ತೇಃ ||೫||

**ವಿ. ಸೂ:**—ಪ್ರಮಾಣ ವಿಷ್ಣು ರಹಸ್ಯ ಅ. ೨೧.

ಪುಣ್ಯಕರ್ಮಾಥವಾ ಪಾಪಂ ಯಜ್ಜೀವೋ ವಿದಧಾತ್ಯಯಮ್|| ಸ್ವಾತಂತ್ರ್ಯ ಮನುಸೃತ್ಯೈವ ತತ್ಫಲಂ ಭಾಗಕಲ್ಪನಮ್ ||೪೭|| ದೈತ್ಯಾನಾಂ ತತ್ರ ನೈವಾಸ್ತಿ ಪುಣ್ಯಕರ್ಮ ವಿಭಾಗಕಃ || ಪುಣ್ಯಂ ಭಾಗಂ ಹರತ್ಯೇಷಾಂ ಸ್ವಯಮೇವ ಜನಾರ್ದನಃ ||೪೮|| ಬ್ರಹ್ಮಾದಿಕೇಷು ಪುಣ್ಯಸ್ಯ ಯಥಾಭಾಗಂ ಭವೇತ್ಫಲಮ್||

ಇತ್ಯಾದಿ ಮತ್ತು

ಪುಣ್ಯಕರ್ಮ ವಿಭಾಗಸ್ತು ದೇವಾನಾಂ ಭಾಗಶೋ ಭವೇತ್ || ಪಾಪ ಕರ್ಮ ವಿಭಾಗಸ್ತು ತತ್ವದೈತ್ಯೇಷು ಭಾಗಶಃ ||೭೯|| ತತ್ವದೈತ್ಯೇಷು ಯತ್ಪಾಪಂ ತದ್ಭಾಗೀ ಕಲಿರೇವ ಹಿ || ಕಲೌ (ಲೆ) ನಾಸ್ತಿ ಹಿ ದೇವಾನಾಂ ಸ್ವಾತಂತ್ರ್ಯಂ ಬ್ರಹ್ಮಣಾ ವಿನಾ ||೮೦||

**ಶ್ರೀ ವಿಜಯದಾಸಾರ್ಯರ ಸುಳಾದಿ**;– "ಸುಜನರ ಕೈಯಿಂದ ಪಾಪವ ಮಾಡಿಸಿ | ನಿಜ ಬುದ್ಧಿಯನು ಕೊಟ್ಟು ಸದ್ಗತಿ ಪಾಲಿಪ | ಕುಜನರ ಕೈಯಿಂದ ಸತ್ಕರ್ಮ ಮಾಡಿಸಿ | ಭಜನೆಗೆಡಿಸಿ ಐದಿಸುವ ಪಾಪಮಾರ್ಗ | ಸುಜನಕ್ಕೆ ಕುಜನಕ್ಕೆ ದೃಷ್ಟಾಂತ ಉಂಟು | ತ್ರಿಜಗದೊಳಗೆ ಇದೆ ಸಿದ್ಧಾಂತ ವೈಯ್ಯಾ | ಅಜಮಿಳನ ನೋಡು ಕೆಟ್ಟು ಹೋಗಿದ್ದರು ರಜದೂರನ ಮಾಡಿ ಹರಿ ಕಾಯಿದಾ | ಕುಜನಬುದ್ಧರು ಸನ್ಮಾರ್ಗದೊಳಿದ್ದರೂ ದ| ನುಜರಿಪು

ಬುದ್ಧನಾಗಿ ಕೆಂಗಡಿಸಿದ ನೆನೆ। ಅಜನ ಪಿತನ ಇಚ್ಛೆ ಅಂಥಾದೆ ಅಂಥಾದೆ ಅಜರ ವೈಚಿತ್ರಿಕಾ ಲೋಕ ವಿಲಕ್ಷಣ। ವಿಜಯವಿಠಲರೇಯಾ। ನಿಜ ಇಚ್ಛೆ ನಿಜಕ್ರಿಯಾದಿ ॥ ಸುಳಾದಿ

ಧರ್ಮೋಽ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ ॥ ಪಾಪಂ ಭವತಿ ಧರ್ಮೋಽಪಿ ಯೇನಾಭಕ್ತೈಃ ಕೃತೋ ಹರೇಃ" ಎಂದು ಶ್ರೀ ಸರ್ವಜ್ಞರ ವಚನ ಮೂಲಾಧಾರವಾಗಿದೆ.

**ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ :- ಪುಣ್ಯ ಇತಿ ॥ ೫ ॥**

**ಕನ್ನಡಾರ್ಥ**

"ಪರಮಾತ್ಮನು ದೇವದಾನವ ಮಾನವರುಗಳಲ್ಲಿ ಪುಣ್ಯ ಹಾಗೂ ಪಾಪಕರ್ಮಗಳನ್ನು ಮಾಡಿಸಿ, ಪುಣ್ಯಪಾಪಗಳ ಫಲಭೋಗಗಳಲ್ಲಿ ವ್ಯತ್ಯಾಸ ಮಾಡಿ ಭಕ್ತಿಹೀನರ ಪುಣ್ಯಫಲವನ್ನು ತೆಗೆದು ಭಕ್ತರಿಗೆ ಕೊಟ್ಟು, ಅವರನ್ನು ಸುಖಪಡಿಸುವನು" ಎಂದು ಈ ಪದ್ಯದ ಭಾವ ॥ ೫ ॥

**ಅವತರಣಿಕಾ:**—ಹಿಂದಿನ ಪದ್ಯದಲ್ಲಿ ಹೇಳಿರುವದೇ ಸ್ಪಷ್ಟೀಕರಿಸಲು ದೈತ್ಯಾದಿಗಳಿಂದ ಪುಣ್ಯಮಾಡಿಸಿದರೂ; ಅವರಿಗೆ ಬಾಹ್ಯ ಅಸಮೀಚೀನ ಸುಖಗಳನ್ನು ಕೊಟ್ಟು ಸೊಕ್ಕಿದವರನ್ನು ಮಾಡುವನೆಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ಮಾಣಿಕವ ಕೊಂಡಂಗಡಿಯೊಳಜ್ಞ।**
**ನಾನಕೊಟ್ಟಾ ಪುರುಷನ ಸಮಾ।**
**ಧಾನಮಾಡುವ ತೆರದಿ ದೈತ್ಯರು ನಿತ್ಯದಲಿ ಮಾಳ್ಪ॥**
**ದಾನ ಯಜ್ಞಾದಿಗಳ ಫಲ ಪವ।**
**ಮಾನ ಪಿತನಪಹರಿಸಿ ಅಸಮೀ।**
**ಚೀನ ಸುಖಗಳ ಕೊಟ್ಟು ಅಸುರರ ಮತ್ತರನು ಮಾಳ್ಪ ॥ ೬ ॥**

**ಪದ್ಯಾರ್ಥ :**—ಮಾಣಿಕವ=ಬೆಲೆಯುಳ್ಳ ಅತ್ಯುತ್ತಮವಾದ ಕೆಂಪು ರತ್ನವನ್ನು, ಆ ಪದ್ಮರಾಗ ಮಣಿಯ ಬೆಲೆಯನರಿಯದ ಪುರುಷನಿಂದ, ಅಂಗಡಿಯೊಳು ಕೊಂಡು=ಅಂಗಡಿಕಾರನು ತೆಗೆದುಕೊಂಡು, ಏನೋ ಇದು ಗಾಜು

ಮಣಿ ಇದರ ಬೆಲೆಯಾಗದು, ಹೆಚ್ಚಿನ ದುಡ್ಡು ಬರದು, (ದೈತ್ಯಾದಿಗಳು ಪುಣ್ಯ ಫಲವನ್ನರಿಯದ ವಿಮೂಢರು) ಎಂದು ಆ ಮಾಣಿಕಕ್ಕೆ ಬದಲಾಗಿ ಅಜಿವಾನ ಕೊಟ್ಟು ಪುರುಷನ ಸಮಾಧಾನ ಮಾಡುವ ತೆರದಿ=ಅಜೀರ್ಣರೋಗಕ್ಕೆ ಔಷದ ವಾದ ಸಾಮಾನ್ಯ ಬೆಲೆಬಾಳದ ಪದಾರ್ಥಕೊಟ್ಟು, ಇದು (ಪುಣ್ಯಕರ್ಮ ಜೀರ್ಣಿಸಲಾರದ ದೈತ್ಯಾದಿಗಳಿಗೆ) ಅಜಿವಾನರೂಪವಾಗಿ ಕೊಟ್ಟು ಸಮಾಧಾನ= ಶಾಂತಿ, ತೃಪ್ತಿಮಾಡುವಂತೆಯೇ, ದೈತ್ಯರ, ದಾನ ಯಜ್ಞಾದಿಗಳ ಫಲ=ದುಷ್ಟ ರಾದ ದೈತ್ಯಾದಿಗಳು ರಾಜರಾಗಿ ಯಜ್ಞಯಾಗ ದಾನ ಸ್ನಾನ ಸತ್ಕರ್ಮಾನುಷ್ಠಾನದ ಪುಣ್ಯಫಲವನ್ನು, ಪವಮಾನ ಪಿತನಪಹರಿಸಿ=ವಾಯುವಿನ ತಂದೆಯಾದ ಶ್ರೀ ಸಂಕರ್ಷಣರೂಪಿ ಹರಿಯು, ಅವರ ಪುಣ್ಯಫಲ ಕರ್ಷಿಸಿ, ಅಸಮೀಚೀನ ಸುಖಗಳಕೊಟ್ಟು, ಬಾಹಿರದಲ್ಲಿ ಸ್ತ್ರೀಸಂಭೋಗ, ಅಪೇಯಪಾನಾದಿ ಬಹಿಃ ಸುಖ ಗಳನ್ನು ಕೊಟ್ಟು, ಅಸುರರ=ಅಸೂನ್ ಕ್ಷಿಪತಿ ದೇವಾನಾಮಿತ್ಯಸುರಃ=ದೇವತೆಗಳ ಒಡೆಯ ಶ್ರೀ ಅಸು ಪ್ರಾಣದೇವರನ್ನು ತಿರಸ್ಕಾರಮಾಡುವರಾದ ಕಾರಣ ಅಸುರರ=ದೈತ್ಯಾದಿಗಳನ್ನು, ಮತ್ತರನ ಮಾಳ್ಪ=ಉನ್ಮತ್ತರನ್ನು ಮಾಡುವನು.

**ಭಾವಸೂಚನೆ** :- ಮಾಣಿಕೇತಿ ||೬||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಮಾಣಿಕವ ಇತಿ "

## ಕನ್ನಡಾರ್ಥ

ಅಸುರರು ಮಾಡುವ ದಾನ ಯಜ್ಞ ಮುಂತಾದ ಸತ್ಕರ್ಮಗಳ ಫಲ ಗಳನ್ನು ಅಪಹರಿಸಿ, ಸಜ್ಜನರಿಗೆ ಕೊಡುತ್ತಾನೆ. ಅಸರರಿಗೆ ಮಾತ್ರ ಅಸಮೀಚೀನ=ಅತ್ಯಲ್ಪ ಅಸಾರ=ಕ್ಷಣಿಕವಾದ ವೈಷಯಕ ಸುಖಗಳನ್ನು ಕೊಟ್ಟು ಅವರಿಗೆ ಆ ಸತ್ಕರ್ಮಫಲಾಪಹಾರದ ಕಲ್ಪನೆಯಾಗದಂತೆ ಮೋಹಿಸಿ ಅವರನ್ನು ಸಮಾಧಾನಪಡಿಸುತ್ತಾನೆ ಎಂಬುದು ಈ ಪದ್ಯದ ಭಾವ || ೬ ||

**ಅವತರಣಿಕಾ** :- ಹಿಂದಿನ ಪದ್ಯದಲ್ಲಿ ದೈತ್ಯಾದಿಗಳ ಪುಣ್ಯಕರ್ಮಗಳನ್ನ ಪಹರಿಸಿ ಅಹಿತ ಫಲಗಳನ್ನು ಕೊಟ್ಟು ಅವರನ್ನು ಉನ್ಮತ್ತರನ್ನ ಮಾಡುವ ನೆಂದು ಹೇಳಿದರು. ಇನ್ನು ಸದ್ಭಕ್ತರಾದ ದೇವತೆಗಳ ಮತ್ತು ಮುಕ್ತಿಯೋಗ್ಯ ರಾದ ಪುಣ್ಯಜೀವಿಗಳ ಪುಣ್ಯಕರ್ಮ ಸ್ವೀಕರಿಸಿ ಧ್ಯಾನೋಪಾಸನದ್ವಾರಾಜ್ಞಾನ ಭಕ್ತ್ಯಾದಿಗಳನ್ನು ಕೊಡುವನೆಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ಏಣಲಾಂಛನನಮಲ ಕಿರಣ ಕ್ರ ।**
**ಮೇಣ ವೃದ್ಧಿಯನೈದಿ ಲೋಗರ ।**
**ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ ॥**
**ವೈನತೇಯಾಂಸಗನ ಮೂರ್ತಿ ।**
**ಧ್ಯಾನವುಳ್ಳ ಮಹಾತ್ಮರಿಗೆ ಸು ।**
**ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವು ॥ ೭ ॥**

**ಪದ್ಯಾರ್ಥ:-** ಏಣಲಾಂಛನ=ಚಿಗರೆ ಚಿಹ್ನವುಳ್ಳರಾಕಾ (ಪೌರ್ಣಿಮಾ) ಚಂದ್ರನ, ಅಮಲಕಿರಣ=ನಿರ್ಮಲ ಸ್ವಚ್ಛವಾದ ಕಿರಣ ಪ್ರಕಾಶಮಾನವಾಗಿ ಕ್ರಮೇಣ ವೃದ್ಧಿಯನೈದಿ=ಶುದ್ಧಪ್ರತಿಪದವಾರಭ್ಯ ಪೌರ್ಣಿಮೆಯವರೆಗೆ ಚಂದ್ರನ ಕಲೆಗಳು ಹೆಚ್ಚುತ್ತ ಕಿರಣಪ್ರಕಾಶವು ಬೆಳೆದು, ಲೋಗರ=ಲೋಕದ ಜನರಿಗೆ ಕಾಣಗೊಡದಿಹ ಕತ್ತಲೆಯ=ಕಾಳಕತ್ತಲೆಯಿಂದ ಹಬ್ಬಿದ ಕತ್ತಲನ್ನು, ಭಂಗಿಸುವ ತೆರನಂತೆ=ಪ್ರಕಾಶಮಾನ ಚಂದ್ರಕಿರಣಗಳಿಂದ ಕತ್ತಲೆ ಹರಿಸುವಂತೆಯೇ, ವೈನತೇಯಾಂಸಗನ ಮೂರ್ತಿ=ವಿನತಾದೇವಿಯ ಪುತ್ರ ಗರುಡದೇವರ ಹೆಗಲಿನಲ್ಲಿ ವಿರಾಜಮಾನನಾಗಿ ಸಂಚರಿಸುವ ಶ್ರೀಹರಿಯ ಮೂರ್ತಿಯ ಶ್ರೀಕೃಷ್ಣನ (ಧ್ಯಾನ ಗರುಡದೇವರ ಪ್ರಸಾದವೇ ಮುಖ್ಯ) ಧ್ಯಾನವುಳ್ಳ ಮಹಾತ್ಮರಿಗೆ= ಸದಾ ಸರ್ವಕಾಲ ಶ್ರೀಹರಿಯೇ ಸಕಲ ಕ್ರಿಯೆ ಮಾಡಿಸುವನೆಂದು, ನಿಂದಲ್ಲಿ ಕುಳಿತಲ್ಲಿ ತಿರುಗಾಡುವಲ್ಲಿ ಮಲಗಿದಲ್ಲಿ ಸದಾ ಸರ್ವಕಾಲದಲ್ಲಿ ಮತ್ತು ಧ್ಯಾನೋಪಾಸನೆಯನ್ನು ಮಾಡುವಕಾಲ ಮುಖ್ಯ ಹರಿ ಅಧೀನ. ಹರಿಕರ್ತೃತ್ವನೆನೆದು ಸಮರ್ಪಣೆಮಾಡುವ ಪುಣ್ಯವಂತರಿಗೆ ಅಜ್ಞಾನವೆಂಬ ಕತ್ತಲೆಯು ದೂರಗೈಸಿ ಮಹಾ ಪ್ರಕಾಶಮಾನವಾದ, ಸುಜ್ಞಾನ=ಸಮೀಚೀನಜ್ಞಾನ, ಭಕ್ತ್ಯಾದಿಗಳು= ಪರಮಾತ್ಮನಲ್ಲಿ ವಿಶೇಷ ಭಕ್ತಿ ವೈರಾಗ್ಯಗಳು, ವರ್ಧಿಸಿ=ಬೆಳೆದು, ಹೆಚ್ಚಿಸಿ ಸುಖವೆಕೊಡುತಿಹವು=ಆನಂದವನ್ನು ಕೊಡುವವು.

**ಭಾವಸೂಚನ :—ಏಣೇತಿ=ಚಂದ್ರ ॥**

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಏಣ" ಇತಿ ...ಲಾಂಛನ'-ಚಂದ್ರಃ ॥ ೭ ॥

## ಕನ್ನಡಾರ್ಥ

"ಶುಕ್ಲಪಕ್ಷದಲ್ಲಿ ಚಂದ್ರನ ಕಿರಣಗಳು ಕ್ರಮಿಕವಾಗಿ ಅಭಿವೃದ್ಧಿಯನ್ನು ಹೊಂದುವವು, ಮತ್ತು ನಿಬಿಡವಾದ ಕತ್ತಲೆಯನ್ನು ಕಳೆಯುವವು. ಅದರಂತೆ ಭಗವನ್ಮೂರ್ತಿಯ ಧ್ಯಾನದಿಂದ ಜ್ಞಾನಭಕ್ತಿ ಮುಂತಾದವುಗಳು ಅಭಿವೃದಿಯನ್ನು ಹೊಂದುವವು. ಅದರಿಂದ ಅಜ್ಞಾನ ಮುಂತಾದವುಗಳೂ, ಆಪತ್ತುಗಳೂ ನಾಶವಾಗಿ, ಧ್ಯಾನಿಸುವ ಜ್ಞಾನ ಭಕ್ತಿಗುಣಗಳುಳ್ಳ ಮಹಾತ್ಮರಿಗೆ ಸುಖವೃದ್ಧಿಯಾಗುತ್ತದೆ" ಎಂದು ಈ ಪದ್ಯದ ಭಾವ. ॥ ೭ ॥

**ಅವತರಣಿಕಾ :—**"ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸಸ್ವಿದ್ಧನಮ್ । ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ॥ ಏವಂ ತ್ವಯಿ ನಾನ್ಯಥೋಽಸ್ತಿ ನ ಕರ್ಮ ಲಿಪ್ಯತೇ ನರೇ॥ ಈಶಾವಾಸ್ಯ॥ ಶ್ರೀಹರಿಯ ಸ್ವತಂತ್ರ ಗುಣಗಳನ್ನು ಜೀವನು ನನ್ನವೆಂದು ಕದಿಯಲು ಶಿಕ್ಷಿಸುವ ಸರ್ವಸ್ವತಂತ್ರನೆಂದು ಸಕಲವೂ ಹರಿಗರ್ಪಿಸಲು ಪೊರೆವನೆಂದು ದೃಷ್ಟಾಂತಪೂರ್ವಕ ಹೇಳುತ್ತಾರೆ.

**ಜನಪನರಿಕೆಯ ಚೋರಪೊಳಲೊಳು ।**
**ಧನವ ಕದ್ದೊಯ್ದಾಯಿಲವನವ ।**
**ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ ॥**
**ಅನುಚಿತೋಚಿತ ಕರ್ಮ ಕೃಷ್ಣಾ ।**
**ರ್ಪಣವೆನಲು ಕೈಕೊಂಡು ತನ್ನರ ।**
**ಮನೆಯೊಳಿಟ್ಟಾನಂದ ಬಡಿಸುವ ಮಾಧವಾನತರ ॥ ೮ ॥**

**ಪದ್ಯಾರ್ಥ :—**ಜನಪನರಿಕೆಯ=ರಾಜನಿಗೆ ಇವನು ಕದ್ದಕಳ್ಳನೆಂದು ಗೊತ್ತಾಗಿದೆ. ಚೋರಪೊಳಲೊಳು=ಕಳ್ಳನು ಪಟ್ಟಣದಲ್ಲಿ, ಧನವ ಕದ್ದೊಯದು=ದ್ರವ್ಯವನು ಕದ್ದುದನು ತೆಗೆದುಕೊಂಡುಹೋಗಿದ್ದಾನೆ. ರಾಜದೂತರು ಮಹಾರಾಜರೆ ಇವನೆ ಹಣ ತುಡುಗು ಮಾಡಿದ್ದಾನೆಂದು ರಾಜರಿಗೆ ಅರಿಕೆ ಮಾಡುತ್ತಾರೆ. ಆಗ್ಗೆ ಕಳ್ಳನು ತನ್ನನ್ನು ರಾಜನು ಶಿಕ್ಷಿಸುತ್ತಾನೆಂಬ ಭೀತಿಯಿಂದ ರಾಜರೇ ಈ ದ್ರವ್ಯ ಕದ್ದದ್ದು ನಿಜ. ತಮ್ಮ ದ್ರವ್ಯವಿದು, ಈಯೆ=ತಾವು ತೆಗೆದುಕೊಳ್ಳಿರಿ ಎಂದು ತನ್ನ ಕಳ್ಳತನ ಒಪ್ಪಿಕೊಂಡು ಕ್ಷಮಿಸಿರೆಂದು ಧನ

ರಾಜನಿಗೆ ಕೊಡಲು, ರಾಜನು ಅಹೋ ಇವ ಕಳ್ಳನಾದರೂ ನಮ್ಮ ದ್ರವ್ಯ ನಮಗೆ ಕೊಟ್ಟನೆಂಬೋದರಿತು, ಅವನ ಅವಗುಣಗಳೆಣಿಸದಲೆ=ಆ ಕಳ್ಳನ ಕೆಟ್ಟ ಗುಣಗಳನ್ನು ಲೆಕ್ಕಕ್ಕೆ ತಾರದೇ, ಪೊರೆವ=ದಂಡಿಸದೇ ಬಿಟ್ಟುಬಿಡುವ, ಕೊಡದಿರೆ ಶಿಕ್ಷಿಸುವ ತೆರದಿ=ಕಳ್ಳನು ಕಳ್ಳತನ ಒಪ್ಪಿಗೊಳ್ಳದೇ ಕದ್ದ ಧನವನ್ನು ತಂದುಕೊಡದಿದ್ದರೆ ದಂಡನೆ ಮಾಡುವಂತೆಯೇ, (ಇಲ್ಲಿ ಹರಿಯ ಸ್ವತಂತ್ರ ಗುಣಗಳನ್ನು ನನ್ನವೆಂದು ಭ್ರಮದಿಂದ ಕದ್ದ ಕಳ್ಳನು ಜೀವ, ದ್ರವ್ಯಧನ ಸ್ವಾತಂತ್ರ್ಯಹರಿಗುಣ, ರಾಜನೇ ಹರಿ) ಈ ದೃಷ್ಟಾಂತದಿಂದ, ಜೀವನಿಂದ ಮಾಡಿಸಿದ ಅನುಚಿತ=ಪಾಪಕರ್ಮ, ಉಚಿತ ಕರ್ಮ=ಪುಣ್ಯಕರ್ಮಗಳು, ಶ್ರೀಹರಿಯೇ ನೀನು ಸರ್ವತಂತ್ರ ನೀನು ಮಾಡಿಸಿದ ದ್ವಂದ್ವ ಕರ್ಮಗಳು ಕೃಷ್ಣಾರ್ಪಣವೆನಲು=ಶ್ರೀ ಹರೆ ಕೃಷ್ಣಾ ನಿನಗೆ ಭಕ್ತಿಪುರಸ್ಸರವಾಗಿ ಕೊಡುವೆನೆಂದು ಅರ್ಪಿಸಲು, ಕೈಕೊಂಡು=ಸ್ವೀಕರಿಸಿ, ತನ್ನರಮನೆಯೊಳಿಟ್ಟಾನಂದಬಡಿಸುವ=ತನ್ನ ವೈಕುಂಠಾದಿ ತ್ರಿಧಾಮದಲ್ಲಿ ಇಟ್ಟು ಮುಕ್ತರಮಾಡಿ ಆನಂದಕೊಡುವ ಯಾರಿಗೆಂದರೆ, ಮಾಧವಾನತರ=ಲಕ್ಷ್ಮೀಪತಿ ತನ್ನ ಶರಣರನ್ನು ಪೊರೆವ.

**ಭಾವಸೂಚನ**:—ಜನತೇತಿ ಅರಿಕೆ=ಅಪ್ಪಣೆ, ಪೊಳಲೊಳು=ಊರೊಳಗೆ ॥ ೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಜನಪ " ಇತಿ " ಪೊಳಲು " ಊರು ॥

## ಕನ್ನಡಾರ್ಥ

ಕಳ್ಳನ ಕಳ್ಳತನವು ರಾಜನಿಗೆ ತಿಳಿದುಬಂದ ಕೂಡಲೇ ಕಳ್ಳನು ರಾಜನ ಮುಂದೆ ಕಳ್ಳತನದ ಧನವನ್ನು ಇಟ್ಟು ಒಪ್ಪಿಸಿ, ಅಪರಾಧವಾಯಿತೆಂದು ಬೇಡಿಕೊಂಡರೆ ರಾಜನು ಆ ಕಳ್ಳನನ್ನು ಕ್ಷಮಿಸುತ್ತಾನೆ. ಆದರೆ ಹಾಗೆ ಮಾಡದಿದ್ದರೆ ಮಾತ್ರ ರಾಜನು ಉಗ್ರವಾಗಿ ಶಿಕ್ಷಿಸುತ್ತಾನೆ. ಇದರಂತೆ ಸಾಧು, ಅಸಾಧು ಕರ್ಮಗಳನ್ನು ಹರಿಗೆ ಭಕ್ತಿಯಿಂದ ಸಮರ್ಪಿಸಲು, ಅದನ್ನು ಸ್ವೀಕರಿಸಿ ಭಕ್ತರಿಗೆ ಸುಖವನ್ನಿತ್ತು ಸಲಹುವನು. ಹೀಗೆ ಅರ್ಪಣೆಯನ್ನು ಮಾಡದಿದ್ದ ಅಭಕ್ತರನ್ನು ಘೋರವಾಗಿ ದಂಡಿಸುವನು. " ಪರಮಾತ್ಮನು ನನ್ನ ಯೋಗ್ಯತಾ, ಸ್ವಭಾವ, ಕರ್ಮಗಳಿಗನುಸಾರವಾಗಿ ಈ ಕರ್ಮವನ್ನು ಮಾಡಿಸಿದ್ದಾನೆ" ಎಂದು ಸರ್ವಕರ್ಮಗಳಲ್ಲಿ ಪರಮಾತ್ಮನ ಅಧೀನತಾ ಚಿಂತನವೆಂಬುದಾಗಿ ತಿಳಿಯಬೇಕು. ॥೮॥

**ಅವತರಣಿಕಾ**:—ಶ್ರೀಹರಿಯು ತನ್ನ ಸ್ವಸ್ವಾತಂತ್ರ್ಯರೂಪ ಸ್ವಾಂಶ

ಕಲೆಗಳಿಂದ ಜೀವರಲ್ಲಿ ನಿಂತು ಪ್ರೇರಿಸಿ, ಜೀವರಉಪಜೀವ್ಯಶಕ್ತಿ ಕೊಡಲು ತಾನೇ ಅನ್ನನಾಮಕನಾಗಿ ಜೀವರಿಂದ ಸ್ವಶಕ್ತಿದ್ವಾರಾ ಕಾರ್ಯಮಾಡಿಸುತ್ತಾನೆಂದು ಹಿಂದೆ ಹೇಳಿದ ಪ್ರಮೇಯವನ್ನೇ ದಾರ್ಢ್ಯಾರ್ಥವಾಗಿ ಉಪದೇಶಿಸುತ್ತಾರೆ.

**ಅನ್ನದನ್ನಾದನ್ನ ನಾಮಕ ।**
**ಮುನ್ನ ಪೇಳ್ದಪ್ರಕಾರ ಜೀವರೊ ।**
**ಳನ್ನರೂಪ ಪ್ರವೇಶಗೈದವರವರ ವ್ಯಾಪಾರ ॥**
**ಬನ್ನಬಡದಲೆ ಮಾಡಿ ಮಾಡಿಸಿ ।**
**ಧನ್ಯರಿವರಹುರೆಂದನಿಸಿ ತ್ರೈ ।**
**ಗುಣ್ಯವರ್ಜಿತ ತತ್ತದಾಹ್ವಯನಾಗಿ ಕರೆಸುವನು ॥ ೯ ॥**

**ಪದ್ಯಾರ್ಥ** :–ಅನ್ನ=ಅತ್ತೀತ್ಯನ್ನಂ ಸರ್ವಭಕ್ಷಣಮಾಡುವವ, ಅಥವಾ ಅದ್ಯತ ಇತ್ಯನ್ನಂ, ಉಪಜೀವ್ಯಯೆಂತ ಅರ್ಥ, ಅನ್ನದ=ಅನ್ನಕೊಡತಕ್ಕವ, ಅನ್ನಾದ=ಅದ್ ಭಕ್ಷಣೇ ಎಂಬೋ ರೀತ್ಯಾ ಅನ್ನಭೋಜನ ಮಾಡುವವ "ಅದ್ಯತೇತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ" (ತೈತ್ತಿರೀಯ) ಹೀಗೆ ಅನ್ನನಾಮಕನಾಗಿ, ಮುನ್ನ ಪೇಳ್ದ ಪ್ರಕಾರ=ಈ ಮೊದಲಿಗೆ ಸಂಧಿ (೪) ಮತ್ತು ಸಂಧಿಗಳ ರಲ್ಲಿ ಹೇಳಿದ ಪ್ರಕಾರ, ಜೀವರೊಳನ್ನರೂಪ ಪ್ರವೇಶಗೈದವರವರ ವ್ಯಾಪಾರ=ಜೀವರಲ್ಲಿ ತನ್ನ ಸ್ವಾಖ್ಯಗುಣರೂಪಗಳನ್ನು ಪ್ರವೇಶಗೈಸಿ=ಹೊಗಿಸಿ ಇಟ್ಟು ಉಪಜೀವ್ಯನಾಗಿ ಶಕ್ತಿಕೊಟ್ಟು, ಅವರವರ ಸ್ವರೂಪ ಯೋಗ್ಯತೆ ಅನಾದಿ ಕರ್ಮದಂತೆ, ಅವರವರ ಕ್ರಿಯೆಗಳನ್ನು ತಾನು ಹರಿಯು, ಬನ್ನಬಡದಲೆ= ಕ್ಲೇಶಪಡದಲೆ, ನಿರಾಯಾಸದಿಂದ ತಾನು ಮಾಡಿ, ಮಾಡಿಸಿ=ತತ್ವಾಭಿಮಾನಿಗಳ ದ್ವಾರಾ ಜೀವರಿಂದ ಮಾಡಿಸಿ, ಧನ್ಯರಿವರಹುದೆಂದೆನಿಸಿ=ಆಯಾ ಜೀವರುಗಳಲಿ ಕೃಪೆಮಾಡಿ ಧನ್ಯ=ಮಹಾಯೋಗ್ಯ, ಕೃತಾರ್ಥ=ಪುಣ್ಯವಂತನೆಂದಿನಿಸುವನು. ಆದರೂ, ತಾನು ತ್ರೈಗುಣ್ಯ ವರ್ಜಿತನು-ಶ್ರೀ ಹರಿಯು ತ್ರಿವಿಧರಾದ ಜೀವರಲ್ಲಿ ವ್ಯಾಪಾರಮಾಡಿದರೂ, ಸತ್ವ, ರಜ, ತಮೋಗುಣಗಳಿಂದ ದೂರನು. ಪ್ರಕೃತಿ ಜನ್ಯಗುಣದಿಂದ ನಿರ್ಲಿಪ್ತನು, ತತ್ತದಾಹ್ವಯನಾಗಿ ಕರೆಸುವ=ಅವರವರ ಆಯಾನಾಮಗಳಿಂದ ಕರೆಸುತ್ತಾನೆ.

**ಭಾವಸೂಚನ** :—ಅನ್ನೇತಿ=ಮುನ್ನ ಮೊದಲೆ ॥ ೯ ॥

**ಶ್ರೀ ವ್ಯಾಸದಾಸಸಿದ್ಧಾಂತ ಕೌಮುದೀ**

" ಅನ್ನದ " ಇತಿ ॥ " ಮುನ್ನ "-ಹಿಂದೆ ॥ " ತ್ರೈಗುಣ್ಯವರ್ಜಿತ " ॥೯

"ಓಂ ಚಿದಾರತ ದಧಾನಾ ಇಂದ್ರ ಇದ್ದುವಃ ॥ ಉತ ನಃ ಸುಭಗಾಂ ಅರಿರ್ವೋಚೇಯುರ್ದಸ್ಮ ಕೃಷ್ಟಯಃ ॥ ಸ್ಯಾಮೇದಿಂದ್ರಸ್ಯ ಶರ್ಮಣಿ ॥ ಓಂ ॥ ಗುಣಾಃ ಪ್ರಾಣಾಃ ಭ್ರಿಯಂತೇ ಅಸ್ಮಿನ್ ಇತಿ ಗುಣಭೃತ್ ॥ ಗುಣಾಃ ದೇಹಾದಯಃ ನಿರ್ಗಚ್ಛಂತಿ ಅಸ್ಮಾತ್ ಇತಿ ನಿರ್ಗುಣಃ । ಸ ಚಾಸೌ ತಥಾ ॥ ೯ ॥

## ಕನ್ನಡಾರ್ಥ

"ತ್ರೈಗುಣ್ಯವರ್ಜಿತ" ಈ ನಾಮವು "ಗುಣಭೃನ್ನಿರ್ಗುಣ" ಎಂಬ ವಿಷ್ಣು ನಾಮ ಸಹಸ್ರಾಂತರ್ಗತವಾದ ನಾಮದ ಅರ್ಥ ವಿವರಣ ರೂಪವಾಗಿ ಹೊರಟಿರುತ್ತದೆ. ಪ್ರಾಣ ಮೊದಲಾದವರಿಗೆ ಆಧಾರನೂ, ದೇಹ ಮುಂತಾದವುಗಳನ್ನು ದೂರಗೊಳಿಸುವವನೂ ಆದುದರಿಂದ ಗುಣಭೃನ್ನಿರ್ಗುಣವೆನ್ನುತ್ತಾರೆ. ಇವರಲ್ಲಿ ದೇಹ ಮುಂತಾದ ಪ್ರಾಕೃತಗುಣಸಂಬಂಧ ರಹಿತನೆಂಬುವ ಅರ್ಥವು "ತ್ರೈಗುಣ್ಯವರ್ಜಿತ" ಪದದಲ್ಲಿ ಅಡಕವಾಗಿರುತ್ತದೆ ಎಂದು ತಿಳಿಯಬೇಕು ॥ ೯ ॥

**ಅವತರಣಿಕಾ :**—ಪುಣ್ಯವಂತರಾದ ಸತ್ಕುಲಜರ ಕುಕರ್ಮಗಳು ಸತ್ಕರ್ಮಗಳಾಗುವವು ಎಂದು ಉದಕಬಿಂದು ಕ್ಷೀರಾಬ್ಧಿಪೊಂದಿದ ದೃಷ್ಟಾಂತ. "ಪುಣ್ಯಕರ್ಮಫಲಂ ಜ್ಞೇಯಂ ಸುಖಂ ತಚ್ಚ ಹರೌ ಭವೇತ್ । ಕ್ಷೀರಾಬ್ಧೌ ಪತಿತಂ ತೋಯಂ ಯಥಾ ಕ್ಷೀರತ್ವಮಶ್ನುತೇ ॥ ಜೀವಕರ್ಮಸುಖಂ ತದ್ವದ್ಧಾರಾ ವಾನಂದತಾಂ ಭಜೇತ್" ಎಂಬುದನ್ನು ವಿವರಿಸುತ್ತಾರೆ.

**ಸಲಿಲಬಿಂದು ಪಯೋಬ್ಧಿಯೊಳು ಬೀ।**
**ಳಲು ವಿಕಾರವನೈದ ಬಲ್ಲದೆ ।**
**ಜಲವು ತದ್ರೂಪವನೆ ಐದುವದೆಲ್ಲ ಕಾಲದಲಿ ॥**
**ಕಲಿಮಲಾಪಹನರ್ಚಿಸುವ ಸ।**
**ತ್ಕುಲಜರ ಕುಕರ್ಮಗಳು ತಾ ನಿ।**
**ಷ್ಕಲುಷ ಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು ॥೧೦॥**

**ಪದ್ಯಾರ್ಥ :**—ಸಲಿಲಬಿಂದು=ನೀರಿನ ಹನಿಯು, ಪಯೋಬ್ಧಿಯೊಳು=ಕ್ಷೀರಸಾಗರ ಹಾಲಿನ ಸಮುದ್ರದಲ್ಲಿ, ಬೀಳಲು=ಬಿದ್ದರೆ, ಪತನವಾದರೆ ಹಾಕಿದರೆ ಹಾಲಿನ ಸಮುದ್ರದಲ್ಲಿ ಬಿಂದು ನೀರಹನಿಯು, ವಿಕಾರವನೈದಬಲ್ಲದೆ=

ವಿರೂಪಹೊಂದುವದೇ ಎಂದಿಗೂ ಬೇರೆ ರೂಪವಾಗಲಾರದು. ಜಲವು ತದ್ರೂಪ ವನೆ ಐದುವದೆಲ್ಲ ಕಾಲದಲಿ=ಆ ಜಲದ ಬಿಂದು ತದ್ರೂಪ ಆ ಹಾಲಿನ ರೂಪವೇ ನಿರಂತರ ಹೊಂದುವುದು. ಇದರಂತೆಯೇ (ಸಲಿಲಿಬಿಂದು=ಕುಕರ್ಮ, ನಿಷ್ಕಲುಷಕರ್ಮ=ಪಯೋದಧಿಸಮಾನ, (ಸತ್ಕುಲಜರು=ಪುಣ್ಯವಂತರು) ಕಲಿಮಲಾಪಹ=ಕಲಿಯ ಕಲ್ಮಷ ಪಾಪವನ್ನು ದೂರಗೈಸುವ, ಶ್ರೀ ಹರಿಯ ಅರ್ಚಿಸುವ=ಪೂಜಿಸುವವರು, ಸತ್ಕುಲಜರು=ಒಳ್ಳೆ ಪುಣ್ಯವಂತ ಕುಲದಲ್ಲಿ ಪುಟ್ಟಿದವರು, "ಆವ ಕುಲವಾದರೇನು ಶ್ರೀ ವಾಸುದೇವಾನೆಂದವನೆ ಧನ್ಯ" ಸಂತತ ಭಗವಂತನಿಗೆ ದ್ವಂದ್ವ ಕರ್ಮಗಳನ್ನು ಸಮರ್ಪಿಸಿ ಭಗವಂತನ ಸ್ಮರಣೆ ಪೂರ್ವಕ ಕರ್ಮಮಾಡುವವರ ಕುಕರ್ಮಗಳಾದರೂ, ಕಲ್ಲ್ಯಾವೇಶದಿಂಡ ಆಕಸ್ಮಾತ್ ಕೆಟ್ಟಕರ್ಮಗಳು ಆದರೂ, ಭಗವದರ್ಪಿತವಾದವು, ನಿಷ್ಕಲುಷ ಕರ್ಮಗಳಾಗಿ=ಪಾಪರಹಿತ ಪುಣ್ಯಕರ್ಮಗಳಾಗಿ, ಪುರುಷಾರ್ಥಗಳ ಕೊಡು ತಿಹವು=ಚತುರವಿಧ ಧರ್ಮಾರ್ಥ ಕಾಮಮೋಕ್ಷಾದಿ ಪುರುಷಾರ್ಥಗಳ ಕೊಡುತಿಹವು. ಕರ್ಮಕ್ಕೆ ಸ್ವಾತಂತ್ರ್ಯವುಂಟೆ ? ಸತ್ಕರ್ಮ ಫಲವೀವ ಶ್ರೀ ಹರಿಯಾಧೀನವಾಗಿ ಮುಕ್ತಿಗೆ ಕಾರಣವಾಗುವುದು ॥ ೧೦ ॥

**ಭಾವಸೂಚನ** :—ಸಲಿಲೇತಿ ॥ ೧೦ ॥

ವ್ಯಾ. ದಾ. ಸಿ. ಕೌಮುದಿಕಾರರು ಪ್ರಮಾಣದೊಂದಿಗೆ ವಿಶದವಾಗಿ ಬರೆದಿದ್ದಾರೆ. ಮುಂದೆ ನೋಡಿರಿ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸಲಿಲ" ಇತಿ ॥ ಭಕ್ತಾರ್ಪಿತಕರ್ಮಸುಖಂ ಭಗವತ್ಸುಖೇ ಅಂತರ್ಭವತಿ ಇತ್ಯತ್ರ ದೃಷ್ಟಾಂತಃ "ಕ್ಷೀರಾಬ್ಧೌ ಪತಿತೋ ಬಿಂದುಃ ಯಥಾ ಕ್ಷೀರತ್ವ ಮಶ್ನುತೇ ॥ ಏವಂ ಕರ್ಮಫಲಂ ತದ್ವತ್ ಹರೌ ಆನಂದತಾಂ ವ್ರಜೇತ್" ॥ ಇತಿ ವಿಷ್ಣು ರಹಸ್ಯೇ ॥ ೧೦ ॥

## ಕನ್ನಡಾರ್ಥ

ಭಕ್ತರಿಂದ ಹರಿಯಲ್ಲಿ ಸಮರ್ಪಿತವಾದ ಕರ್ಮಗಳಿಂದಾಗುವ ಸುಖವು ಪುರುಷಾರ್ಥರೂಪವಾದ ಭಗವತ್ಸುಖ ಸದೃಶವಾದ ನೈಜ ಸುಖದಲ್ಲಿ ಅಂತರ್ಗತ

ವಾಗುವುದು. ಈ ವಿಷಯದಲ್ಲಿ ದೃಷ್ಟಾಂತವನ್ನು "ಸಲಿಲ ಬಿಂದು"ವೆಂಬ ಪದ್ಯವು ತಿಳಿಸುತ್ತದೆ. ವಿಷ್ಣು ರಹಸ್ಯದಲ್ಲಿ—"ಕ್ಷೀರಸಮುದ್ರದಲ್ಲಿ ಪತಿತವಾದ ನೀರು ಕ್ಷೀರದಲ್ಲಿ ಅಂತರ್ಗತವಾಗುವಂತೆ, ಕ್ಷೀರಸದೃಶವಾಗಿ ವಿಕಾರಾಂತರ ವನ್ನು ಹೊಂದದೆ ಇರುವಂತೆ, ಹರಿಯಲ್ಲಿ ಸಮರ್ಪಿತವಾದ ಜೀವಕರ್ಮ ಸುಖಗಳು ಹರಿಯ ಆನಂದ ಸದೃಶವಾದ ಸ್ವಯೋಗ್ಯ ನೈಜ ಸುಖ ಸುಖದಲ್ಲಿ ಅಂತರ್ಗತವಾಗುವವು." ಎಂದು ಹೇಳಲಾಗುತ್ತದೆ. ॥ ೧೦ ॥

**ಅವತರಣಿಕಾ** :—ಕಾರುಣಿಕನಾದ ಶ್ರೀಹರಿಯು, ಅಲ್ಪರಾದ ಜೀವ ರಿಗೆ ತನ್ನ ಶಕ್ತಿಯನ್ನು ಇತ್ತು ಕರ್ಮಫಲ ಅನುಭೋಕ್ತೃತ್ವ ಮಾಡಿಸುವ ನೆಂಬುವದು, ಜನನಿ ಶಿಶುವಿಗೆ ಮೊಲೆ ಉಣ್ಣಿಸುವ ದೃಷ್ಟಾಂತದಿಂದ ಬಹು ಸ್ವಾರಸ್ಯವಾಗಿ ರಸಭರಿತ ಉಪನಿಷತ್ ಪ್ರಮೇಯವನ್ನು ಉಪದೇಶಿಸುತ್ತಾರೆ. (ಇದು ಜಂಗಮಜೀವರಲ್ಲಿ ಹರಿ ಮಾಡುವ ವ್ಯಾಪಾರ ಸ್ವಶಕ್ತಿ.)

**ಮೊಗದೊಳಗೆ ಮೊಗವಿಟ್ಟು ಮುದ್ದಿಸಿ ।**
**ಮಗುವಿನಂ ಬಿಗಿದಪ್ಪಿ ನೇಹದಿ ।**
**ತೆಗೆದು ತನ್ನಯ ಸ್ತನಗಳುಣಿಸುವ ಜನನಿಯಂದದಲಿ ॥**
**ಅಗಣಿತಾತ್ಮನು ತನ್ನ ಪಾದಾ ।**
**ಬ್ಜಗಳ ಧೇನಿಪ ಭಕ್ತಜನರಿಗೆ ।**
**ಪ್ರಘಟಕನು ತಾನಾಗಿ ಸೌಖ್ಯಗಳೀವ ಸರ್ವತ್ರ ॥ ೧೧ ॥**

**ಪದ್ಯಾರ್ಥ** :—ಜನನಿಯು = ತಾಯಿಯು, ನೇಹದಿ = ಪ್ರೀತಿಯಿಂದ, ತನ್ನ ಮಗುವಿನಂ ಬಿಗಿದಪ್ಪಿ=ತನ್ನ ಶಿಶುವಾದ ಎಳೆಕೂಸು ಹಸಿವೆಯಿಂದ ಅಳು ತ್ತಿರುವಾಗ, ದೂರದಲ್ಲಿ ಕೆಲಸಮಾಡುವದು ಬಿಟ್ಟು, ಓಡಿಬಂದು, ಅಪ್ಪಾ ಮಗುವೇ ಎಂದು ಪ್ರೀತಿಯಿಂದ, ಎಳೆಗೂಸನ್ನು ಎತ್ತಿ ಅಪ್ಪಿಕೊಂಡು, ಮೊಗ ದೊಳಗೆ ಮೊಗವಿಟ್ಟು, ಮುದ್ದಿಸಿ=ಆ ಕೂಸಿನ ಮುಖದಲ್ಲಿ ತನ್ನ ಮುಖವ ನ್ನಿಟ್ಟು, ಚುಂಬಿಸಿ ಮುದ್ದುಕೊಡುತ್ತ, ಆ ಜನನಿಯು ತನ್ನ=ಸ್ತನಗಳನ್ನು ತೆಗೆದು ಪಾಲುತುಂಬಿದ ಕಲಶರೂಪ ಮೊಲೆಗಳನ್ನು ತೆಗೆದು, ಉಣಿಸುವ= ಮೊಲೆ ಶಿಶುವಿನ ಬಾಯಲ್ಲಿಕ್ಕಿ ಶಿಶುವಿಗೆ ಮೊಲೆ ಪಾಲು ಉಣಿಸುವ ಕುಡಿಸುವ ತಾಯಿಯಂತೇ ಶ್ರೀಹರಿಯು, ಅಗಣಿತಾತ್ಮನು=ಅನಂತಾನಂತರೂಪವುಳ್ಳವನು

ಗುಣವುಳ್ಳ ಸಾಮಕ್ರಿಯಾದಿಗಳುಳ್ಳ ಶ್ರೀಹರಿಯು, ತನ್ನ ಪಾದಾಬ್ಜಧೇನಿಪ ಭಕ್ತರಿಗೆ=ಸಂತತ ಶ್ರೀಹರಿಯ ಕರ್ತೃತ್ವಾನುಸಂಧಾನ ಉಳ್ಳ ನಿರವಧಿಕ ಹರಿಯಲ್ಲಿ ಪ್ರೇಮಾತಿಶಯವುಳ್ಳ ನಿಜ ಭಕ್ತಜನರಿಗೆ, ಪ್ರಘಟಕ=ಪ್ರ=ಪ್ರಕರ್ಷೇಣ ಉತ್ಕೃಷ್ಟದಿಂದ ಗತಿ ಕೊಡುವಿಕೆ, ಚಲನೆಮಾಡುವಿಕೆ, ಘಟಕ=ಸೇರಿಸುವನು. ಸಾಧಿಸುವವನು ಅಂದರೆ ಚೆನ್ನಾಗಿ ಜೀವರುಗಳ ಯೋಗ್ಯತೆಯಂತೆ ಕರ್ಮ ಮಾಡಿಸಿ ಘಟನೆಮಾಡಿಸಿ, ಸರ್ವತ್ರ=ಇಹಾಮುತ್ರ, ಇಲ್ಲಿ ಮುಕ್ತಿಯಲ್ಲಿ ಸೌಖ್ಯವನೀವನು=ಆನಂದವನ್ನೀವನು.

ಈ ಪದ್ಯದಲ್ಲಿ ದಾಸರಾಯರು ಜೀವನಲ್ಲಿ ಸ್ವಸ್ವಾತಂತ್ರ್ಯವಿಟ್ಟದು, ಬಹು ಶಾಸ್ತ್ರಾರ್ಥಗರ್ಭಿತ ರಹಸ್ಯವಾಗಿದೆ. ತಾಯಿ=ಕರುಣಾಳುವಾದ ಪರಮಾತ್ಮ, ಮಗು=ಶಿಶು, ಅಸ್ವತಂತ್ರಜೀವರು, ಮಗುಗಳಾದ ಅಸ್ವತಂತ್ರಜೀವರುಗಳಲ್ಲಿ, ತಾಯಿಯಂತೆ ಅಂತಃಕರಣವುಳ್ಳ ಹರಿ ಮಗುವಿನ ಮೊಗದೊಳಗೆ ಮೊಗವಿಟ್ಟು="ಮುಖೇನ ಮುಖಮಾಧಾಯ" ಎಂಬುವಂತೆ ಬಿಂಬರೂಪಿ ಹರಿಯು, ಆ ಶಿಶುವಿನ ಮುಖದಲ್ಲಿ ತನ್ನ ಮುಖ ಅಗ್ನ್ಯಂತರ್ಗತ ಪರುಶುರಾಮ ರೂಪವನ್ನಿಟ್ಟು, ಮುದ್ದಿಸಿ=ಅಲ್ಲಿ ತಾನು ಸ್ವಶಕ್ತಿಯಿಂದ ರಮಿಸಿ ಮೊಲೆಯುಣ್ಣುವ ಶಕ್ತಿ ಕೂಸಿಗೆ ಇತ್ತು, ಜನನಿ ಮೊಲೆಪಾಲು=ಸ್ವರೂಪಯೋಗ್ಯತಕ್ಕ ಆನಂದ ಪೀಯೂಷಾಖ್ಯ ಅಮೃತ ಉಣಿಸಿ ಸೌಖ್ಯವನೀವನು.

ಜನನಿಯಲ್ಲಿಯೂ ತಾನೆ, ಶಿಶುವಿನ ಮುಖದಲ್ಲಿಯೂ ತಾನೆ, ಶಿಶುವಿಗೆ ಉಣ್ಣುವ ಸ್ವರೂಪಶಕ್ತಿ ಇದ್ದರೂ, ಆ ಸ್ವರೂಪಶಕ್ತಿಗೆ ಅಭಿವ್ಯಂಜಕನು ತಾನೇಯಾಗಿ ಸಕಲ ವ್ಯಾಪಾರಮಾಡುವನು. ಇದು ಜಂಗಮಜೀವರಾದ ಚಲನ ಪ್ರಾಣಿಗಳಲ್ಲಿ ಶ್ರೀಹರಿಯ ಸ್ವಸ್ವಾತಂತ್ರ್ಯಪ್ರೇರಕ ಕರ್ತೃತ್ವಶಕ್ತಿ ಪ್ರಕಟಮಾಡಿದದು. ಏಕದೇಶ ದೃಷ್ಟಾಂತ.

ಭಾವಸೂಚನ :—ಮೊಗದೊಳಗೆ=ಮುಖದೊಳಗೆ ॥ ೧೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೊಗ" ಇತಿ ॥ "ಮೊಗ"=ಮುಖ ॥ ೧೧ ॥

## ಕನ್ನಡಾರ್ಥ

"ಹಸುಗೂಸಿನನ್ನು ಹೆತ್ತವಳು ಪ್ರೀತಿಸುತ್ತಿರುವಂತೆ ಭಕ್ತಜನರನ್ನು ಪರಮಾತ್ಮನು ಪ್ರೀತಿಸುತ್ತ, ಅವರಿಗೆ ಯಾವಾಗಲೂ ಪ್ರಕಟನಾಗಿ ತೋರಿ ಸುಖವನ್ನೀಯುವನು" ಎಂಬುದು ಈ ಪದ್ಯದ ಸಾರಾರ್ಥ ॥ ೧೧ ॥

**ಅವತರಣಿಕಾ**:—ಹಿಂದಿನ ಪದ್ಯದಲ್ಲಿ ಜೀವರುಗಳಲ್ಲಿ ಸ್ವರೂಪ ಜ್ಞಾನೇಚ್ಛಾ ಪ್ರಯತ್ನದಲ್ಲಿ ಶ್ರೀಹರಿಯು ತನ್ನ ಸ್ವರೂಪಶಕ್ತಿ ಇತ್ತು ಪ್ರೇರಿಸುವದು ವರ್ಣಿಸಿ, ಈ ಪದ್ಯದಲ್ಲಿ ಜೀವರಿಗೆ ಸ್ವರೂಪಾಭಿವ್ಯಂಜಕ ಶಕ್ತಿ ಇತ್ತುದು, ಮತ್ತು ಸ್ಥಾವರ ಜೀವರನ್ನು ಸೃಷ್ಟಿಗೆ ತಂದು ವ್ಯಾಪಾರಗೈವದುದನ್ನು ದೃಷ್ಟಾಂತ ಪೂರ್ವಕ ವರ್ಣಿಸುತ್ತಾರೆ.

**ತೋಟಿಗನು ಭೂಮಿಯೊಳು ಬೀಜವ ।**
**ನಾಟಬೇಕೆಂದೆನುತ ಹಿತದಲಿ ।**
**ನೋಟಿಯಿಂ ನೀರೆತ್ತಿ ಸಸಿಗಳ ಸಂತೆಯಿಸುವಂತೆ ॥**
**ಪಾಟುಬಡದಲೆ ಜಗದಿ ಜೀವರ ।**
**ಘೋಟಕಾಸ್ಯನು ಸೃಜಿಸಿ ಯೋಗ್ಯತೆ ।**
**ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ ॥ ೧೨ ॥**

**ಪದ್ಯಾರ್ಥ**:—ತೋಟಿಗ=ತೋಟ ಮಾಡತಕ್ಕ ಒಕ್ಕಲಿಗ ಯಜಮಾನನು, ಅಂದರೆ ಜಗತ್ಸೃಷ್ಟಿಮಾಡುವ ಹರಿಯು, ಸರ್ವಕರ್ತೃನು ಭೂಮಿಯೊಳು ಬೀಜವ=ಜಡವಾದ ಸಸಿಗೆ ಮೂಲಕಾರಣವಾದ ಧಾನ್ಯಗಳನ್ನು, ಅಂದರೆ ತೋಟಿಗನಾದ ಹರಿಯು, ಧಾನ್ಯಸಮಾನರಾದ ಸ್ಥಾವರಜೀವರುಗಳನ್ನು, ಭೂಮಿಯಲಿ ನಾಟಬೇಕೆಂದೆನುತ ಬಿತ್ತಿ=ತೋಟದ ಭೂಮಿಯನ್ನು ಹದಮಾಡಿ ಹಸಿಮಾಡಿ, ಅದರಲ್ಲಿ ನಾನಾತರದ ಬೀಜಗಳನ್ನು ಬಿತ್ತಿ, ಇದರಂತೆ ಜಗತ್ತೆಂಬ ಲಕ್ಷ್ಮ್ಯಾತ್ಮಕ ಜಡಪ್ರಕೃತಿ ಭೂಮಿಯಲ್ಲಿ. ಸಕಲ ಸ್ಥಾವರಜೀವರೆಂಬ ಧಾನ್ಯಗಳನ್ನು ಬಿತ್ತಿ=ಸೃಷ್ಟಿಗೆ ತರಲು, ನಾಟಬೇಕೆಂದೆನುತ ಹಿತದಲಿ= ಆಯಾ ಬೀಜಗತವಾದ ಅಂಕುರಸ್ವರೂಪ ಅಭಿವ್ಯಕ್ತಿಮಾಡಲು, ಹಿತದಲಿ ನೋಟಿ ನೀರನು ಎತ್ತಿ=ಬಹು ಜೋಕೆಯಿಂದ ಯಾವಯಾವ ಬೀಜಗಳಿಗೆ ಎಷ್ಟು ನೀರು ಕೊಡಬೇಕೆಂಬದನ್ನು ತಿಳಿದ ತೋಟಿಗ, ಹರಿಯು, ವಾಸುದೇವನು,

ತನ್ನ ಸ್ವೇದ ವೈಬೆವರು ಎಂಬ ರವಾರೂಪ ವೋಟಿ ನೀರಿನಿಂದ ತೋಯಿಸಿ, ಬೀಜರೂಪವಾದ ಜೀವನಿಗೂ ಲಿಂಗ ಉಪಚಯದ್ವಾರಾ ಸಂಬಂಧಗೈಸಿ ಬೀಜಾಂಕುರಗೈಸಿ, ಸಸಿಗಳ=ಎಳೆಪೈರುಗಳ, ಸಂತಯಿಸುವಂತೆ=ರಕ್ಷಿಸುವಂತೆ, ಘೋಟಕಾಸ್ಯ=ಹಯವದನರೂಪಿಯು, ಮುಕ್ತರುಗಳಿಗೂ. ಸೃಜ್ಯಜೀವರುಗಳಿಗೂ ಜ್ಞಾನ ಉಪದೇಶಮಾಡಿ ಸಾಧನಮಾಡಿಸುವ ರೂಪ ಹಯಗ್ರೀವನು, ಪಾಟುಬಡದಲೆ=ಕಷ್ಟಬಡದಲೆ (ಪಾಟು=ಬೀಳುವಿಕೆ; ಇಳಿತಪಡುವಿಕೆ) ನಿರಾಯಾಸದಿಂದ, ಜಗದಿ ಜೀವರ=ಜಗತ್ತಿನಲ್ಲಿ ಜೀವರನ್ನು, ಸೃಜಿಸಿ=ಅನಿರುದ್ಧ ನಾಮಕ ಹರಿಯು, ಬೀಜಾಂಕುರರೂಪವಾಗಿ ಬ್ರಹ್ಮದೇವರ ೨೧ನೇ ವರುಷಾರಂಭಿಸಿ, ೩೪ ವರ್ಷ ಪರಿಯಂತ ಅನಿರುದ್ಧ ದೇಹವನ್ನು ಕೊಟ್ಟು, ಮುಂದೆ ಸ್ಥೂಲದೇಹವನ್ನು ಕೊಟ್ಟು, ಸಾಧನಮಾಡಿಸಲು ಜೀವರ ಯೋಗ್ಯತೆ ದಾಟಗೊಡದಲೆ=ಜೀವನಸ್ವರೂಪ ಯೋಗ್ಯತೆಯಂತೆ ಜೀವಾಂತರ್ಯಾಮಿಯಾಗಿ ಪ್ರೇರಿಸಿ, ಅವರ ಯೋಗ್ಯತೆ ಮೀರದೇ ತಾನಿದ್ದು ಸಾಧನಮಾಡಿಸಿ, ಸಲಹುತಿಪ್ಪನು=ಸ್ಥಿತಿಕರ್ತ ಪಾಲನಕರ್ತನು, ಸರ್ವಕಾಲದಲ್ಲಿ ಅಸೃಜ್ಯ-ಸೃಜ್ಯ-ಮುಕ್ತಿಕಾಲದಲ್ಲಿ ಸಂರಕ್ಷಿಸುವನು. ಇದು ಬಹುಪ್ರಮೇಯ ರಹಸ್ಯ, ಪ್ರಕಾಶ ಸಂಹಿತೆ ಮತ್ತು ಶ್ರೀ ವಿಜಯದಾಸರ ಸೃಷ್ಟಿವಿ॥ ಸುಳಾದಿ ನೋಡುವುದು.

**ಭಾವಸೂಚನ**:—ತೋಟಿಗೇತಿ ॥ ಪಾಟಬಡದಲೆ=ಶ್ರಮಬಡದಲೆ, ಘೋಟಕ=ಅಶ್ವ ॥ ೧೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತೋಟಿಗನು" ಇತಿ ॥ "ಯಥಾ ಶಾಲ್ಯಾ(ಲ್ವಾ) ದಿ ಬೀಜಾನಿ ಗೃಹೀತ್ವಾ ಬೀಜಜಾಂಕುರಾನ್॥ ವಪಂತಿ ಕರ್ಷಕಾಃ ತದ್ವತ್ ಅನಿರುದ್ಧೋಽ ಸೃಜಜ್ಜಗತ್ ॥" ಇತಿ ॥ ೧೨ ॥

## ಕನ್ನಡಾರ್ಥ

ಶಾಲಿ (ಭತ್ತ) ಮುಂತಾದುವುಗಳನ್ನು (ಬೀಜಗಳನ್ನು) ತೆಗೆದುಕೊಂಡು, ಅವುಗಳನ್ನೂ, ಅವುಗಳಿಂದ ಹುಟ್ಟಿರುವ ಸಸಿಗಳನ್ನೂ, ಕೃಷಿ ಕರ್ಮವನ್ನು ಮಾಡುವವನು ನಾಟುವಂತೆ, ಅನಿರುದ್ಧರೂಪಿಯಾದ ಶ್ರೀಹರಿಯು ಈ ಜಗತ್ತನ್ನು ಸೃಷ್ಟಿಮಾಡಿದನು, ಸೃಜಿಸುತ್ತಾನೆ. ॥ ೧೨ ॥

**ಅವತರಣಿಕಾ** :—ಹಿಂದಿನ ಪದ್ಯಗಳಲ್ಲಿ ಪೇಳಿದಂತೆ ಬಿಂಬನಾದ ಶ್ರೀಹರಿಯೇ ಸರ್ವರಂತರ್ಯಾಮಿ ಸರ್ವಕರ್ತಾ ಕಾರಯಿತಾ ಎಂದು ಅರಿಯದೇ ತಪ್ಪು ತಿಳುವಳಿಕೆಯುಳ್ಳ ಹುಚ್ಚ ಜನರು ಶ್ರೀಹರಿಯನ್ನು ಮರೆತು, ಅನ್ಯದೇವತೆಗಳನ್ನು ಪೂಜಿಸುವ ನರರಿಗೆ ಆಗುವ ಫಲ, ಐಹಿಕ ದೃಷ್ಟಾಂತದಿಂದ ವರ್ಣಿಸುತ್ತಾರೆ.

**ಭೂಮಿಯೊಳು ಜಲವಿರೆ ತೃಷಾರ್ತನು ।**
**ತಾ ಮರೆದು ಮೊಗವೆತ್ತಿ ಎಣ್ದೆಶೆ ।**
**ವ್ಯೋಮ ಮಂಡಲದೊಳಗೆ ಕಾಣದೆ ಮಿಡಕುವಂದದಲಿ ॥**
**ಶ್ರೀಮನೋರಮ ಸರ್ವರಂತರಿ ।**
**ಯಾಮಿಯಾಗಿರೆ ತಿಳಿಯಲರಿಯದೆ ।**
**ಭ್ರಾಮಕರು ಭಜಿಸುವರು ಭಕುತಿಯಲನ್ಯದೇವತೆಯ ॥ ೧೩ ॥**

**ಪದ್ಯಾರ್ಥ** :—ಭೂಮಿಯೊಳು=ಭೂ ಪೃಥ್ವಿಯಲ್ಲಿ, ಜಲ=ನೀರು ಬೇಕಾದಷ್ಟು ಕೆರೆ ಭಾವಿ ಹಳ್ಳ ನದಿ ಪ್ರವಾಹದ ನೀರು ಇರಲು, ತೃಷಾರ್ತನು= ನೀರಡಿಕೆಯಿಂದ ಪೀಡಿತನಾದ ಮನುಜನು, ಭೂಮಿಯಲ್ಲಿ ನೀರು ಇದೆ ಎಂಬುದನ್ನು ತಾ ಮರೆದು=ತಿಳಿಯದೇ, ಮೊಗವೆತ್ತಿ=ಮೋರೆ ಮೇಲಕ್ಕೆ ಎತ್ತಿ, ಎಣ್ದೆಶೆ= ಎಂಟು ದಿಕ್ಕುಗಳಲ್ಲಿ, ವ್ಯೋಮಮಂಡಲ= ಆಕಾಶದೊಳಗೆಲ್ಲ ನೀರು ಹುಡುಕಿದರೆ ನೀರು ಸಿಗುವದೇ? ಇಲ್ಲ, ಎಂಟು ದಿಕ್ಕು ಆಕಾಶದಲ್ಲಿ ನೀರು ಕಾಣದೇ, ಮಿಡುಕುವಂದದಲಿ=ಅಳಲಿ-ಬಳಲಿ-ನರಳಿ, ರೋದಿಸುವಂತೆ, ಶ್ರೀಮನೋರಮ=ಶ್ರೀ ಜ್ಞಾನಧನ ಮುಕ್ತಿ ಸಂಪತ್ತಿಗೆ ಕಾರಣಳಾದ ಚಿತ್ಪ್ರಕೃತಿ ಶ್ರೀರಮೆಯ ಮನೋ ಆನಂದದಾಯಕನಾದ ಶ್ರೀಹರಿಯು, ತನ್ನ ಬಿಂಬರೂಪಿಯು, ಸರ್ವರಂತರ್ಯಾಮಿಯಾಗಿರೆ=ಸಕಲರಲ್ಲಿ ಬಿಂಬನಾಗಿ, ಸಕಲರಲ್ಲಿ ಪ್ರೇರಕನೆಂದು ತಿಳಿಯದೇ, ಅರಿಯದೇ, ಎರಡು ಪದಗಳನ್ನಿಟ್ಟಿರುತ್ತಾರೆ ಆರಿಯದೇ ಅರಿವು= ಅಜ್ಞಾನದಿಂದ, ತಿಳಿಯದೇ= ತಿಳುವಳಿಕೆ ಇಲ್ಲದೇ, ಭ್ರಾಮಕರು = ವಸ್ತು ಪರಿಚಯವಿಲ್ಲದವರು, ಭ್ರಮಣಬುದ್ಧಿ, ಹುಚ್ಚರು, ತಪ್ಪು ತಿಳುವಳಿಕೆಯುಳ್ಳವರು, ಅಂತರಂಗದಲ್ಲಿರುವ ಹರಿಯನ್ನು ಮರೆತು ಆಕಾಶದಲ್ಲಿ ನೀರು ಕಾಣದೆ ಬಳಲಿದಂತೆ, ಅನ್ಯದೇವತೆಯ=ಯಲ್ಲಮ್ಮ, ಎಕನಾತಿ, ಬನ್ನದ ಶಂಕರಿ ಮುಂತಾದ ಕ್ಷುದ್ರದೇವತೆಗಳು ಎಂದು (ಶ್ರೀ ವಿಜಯರ ವಚನ) ಈ ಕ್ಷುದ್ರ

ದೇವತೆಗಳನ್ನು ಪೂಜಿಸಿದರೆ, ಫಲ ಕೊಡಬಲ್ಲವೆ? ಕೊಡಲಾರವು. ಅನ್ಯ ದೇವತೆಗಳು ಅಸ್ವತಂತ್ರರು, ಅಲ್ಲದೇ ಐಹಿಕ ಫಲಕ್ಕೆ ಆರಾಧಿಸುವ ಕ್ಷುದ್ರ ದೇವತೆಗಳು. ಫಲ ಕೊಡಲಾರವು.

**ಭಾವಸೂಚನ :**—ಭೂಮೀತಿ ‖ ಎಣ್ದೆಶೆ=ಸರ್ವದಿಶ=ದೇಶ, ದಿಕ್ಕು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭೂಮಿ" ಇತಿ‖ "ಎಣ್ದೆಸೆ"—ಎಣ್=ಎಂಟು - "ವ್ಯೋಮ" - ಆಕಾಶ‖ "ಭ್ರಾಮಕಾಃ"—ಭ್ರಾಂತಾಃ ‖೧೩‖



## ಕನ್ನಡಾರ್ಥ

"ಭೂಮಿಯಲ್ಲಿ ಇರುವ ನೀರನ್ನು ಪಡೆಯುವ ವಿವೇಕವಿಲ್ಲದ ಜನರು ನೀರಿಗೋಸುಗ ದಶದಿಕ್ಕುಗಳಲ್ಲಿ—ಆಕಾಶ ಮಂಡಲದಲ್ಲಿ ಹುಡುಕಿ, ದುಃಖ ಪಡುವಂತೆ, ಸರ್ವಾಂತರ್ಯಾಮಿಯಾಗಿಯೇ ಇರುವ ಶ್ರೀ ಹರಿಯನ್ನು ತಿಳಿಯ ಬೇಕೆಂಬ ವಿವೇಕವಿಲ್ಲದವರು ಅನ್ಯದೇವತೆಗಳನ್ನು ಭಜಿಸಿ, ನೈಜಸುಖವನ್ನು ಪಡೆಯದೇ ಭವಣೆಬಡುತ್ತಾರೆ." ಅಂದರೆ "ಸನ್ನಿಹಿತನಾದ ಪರಮಾತ್ಮನನ್ನು ತಿಳಿಯದೆ ಅನ್ಯದೇವತೆಗಳನ್ನು ಆರಾಧಿಸುವವರು ಮೂಢರು" ಎಂದು ತಾತ್ಪರ್ಯ. ‖೧೩‖

**ಅವತರಣಿಕಾ :**—ಹಿಂದಿನ ಪದ್ಯದಲ್ಲಿ ಹೇಳಿದಂತೆ ಅನ್ಯದೇವತೆಗಳನ್ನು ಭಜಿಸಿದರೆ, ಏನು ಫಲವಿಲ್ಲವೆಂದ ಮೇಲೆ ಮುಖ್ಯ ಫಲ - ಮುಖ್ಯಾಮುಖ್ಯ ಫಲ, ಅಮುಖ್ಯಫಲಗಳಾವವು? ಆರನ್ನು ಭಜಿಸಿದರೆ ಈ ಫಲಗಳು ಹೇಗೆ ದೊರಕುವವು? ಎಂಬುದನ್ನು ಸಪ್ರಮಾಣವಾಗಿ ದಾಸರಾಯರು ಉಪದೇಶಿಸುತ್ತಾರೆ.

**ಮುಖ್ಯ ಫಲ ವೈಕುಂಠ ಮುಖ್ಯಾ।**
**ಮುಖ್ಯ ಫಲ ಮಹರಾದಿ ಲೋಕಾ।**
**ಮುಖ್ಯ ಫಲ ವೈಷಿಕವುಯೆಂದರಿದತಿ ಭಕುತಿಯಿಂದ‖**

**ರಕ್ಕಸಾರಿಯ ಭಜಿಸುಕಲಿ ನಿ ।**
**ದುರ್ಃಖನಾಗು ನಿರಂತರದಿ ವೊರೆ ।**
**ಹೊಕ್ಕವರ ಬಿಡ ಭೃತ್ಯವತ್ಸಲ ಭಾರತೀಶ ಪಿತ ॥ ೧೪ ॥**

**ಪದ್ಯಾರ್ಥ :**—ಮುಖ್ಯ ಫಲ ವೈಕುಂಠ=ಎಂದೆಂದಿಗೂ ತಿರುಗಿಬಾರದ ಅಪುನರಾವೃತ್ತವಾದ ಮುಕ್ತಸ್ಥಾನ ವೈಕುಂಠವಾಗ ಬೇಕಾದರೆ, ಶ್ರೀಹರಿಯೇ ಮದ್ಬಿಂಬ, ಸರ್ವರ ಬಿಂಬ, ಸ್ವತಂತ್ರ, ರಮಾಬ್ರಹ್ಮಾದಿ ಸಕಲರು ಶ್ರೀ ಹರಿಯ ದಾಸರು. ಈತನೊಬ್ಬನೆ ಎಂದು ತಾರತಮ್ಯ ಪಂಚ ಭೇದಜ್ಞಾನದಿಂದ ಸರ್ವೋತ್ತಮನೆಂದರಿತು ಪಾಸನೆ ಮಾಡುವರಿಗೆ, ಬಿಂಬಾಪರೋಕ್ಷ ದ್ವಾರಾ, ಮೋಕ್ಷವಾಗುವದು. ನಿತ್ಯ ಮುಕ್ತಸ್ಥಾನ ವೈಕುಂಠ ಲೋಕವೇ ಸಾಧನಕ್ಕೆ ಮುಖ್ಯ ಫಲ, ಮುಖ್ಯಾ ಅಮುಖ್ಯ ಫಲ ಮಹರಾದಿ ಲೋಕ=ಮಹರ್ಲೋಕ ಜನೋ, ತಪೋಲೋಕ, ಸತ್ಯಲೋಕಗಳು, ಜ್ಞಾನ ಜನ್ಯ ಜ್ಞಾನಪ್ರಾಚುರ್ಯ-ಸಾಧನ ಸಂಪತ್ತು ಪೂರ್ಣರಾದ ಜೀವರು ಬ್ರಹ್ಮ ಪ್ರಳಯದವರೆಗೆ ಈ ಲೋಕಗಳಲ್ಲಿ ವಾಸ ಮಾಡಿದರೂ, ಇವು ನಾಶ ಹೊಂದುವವವಾದರೂ, ಪುನರಾವರ್ತಿ ಜನನವಿಲ್ಲ-ಜ್ಞಾನ ಪ್ರಾಚುರ್ಯ ಸ್ಥಾನಗಳಾದುದರಿಂದ ಮುಖ್ಯ, ಅನಿತ್ಯ=ನಶ್ವರವಾದ ಕಾರಣ ಅಮುಖ್ಯ. ಹೀಗೆ ಮುಖ್ಯ ಅಮುಖ್ಯ ಫಲಕೊಡುವವು. "ಆಬ್ರಹ್ಮಸ್ತಂಬ ಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್ ॥ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ॥" ಎಂಬುವಂತೆ ತತ್ವಾಭಿಮಾನಿಗಳಾದ, ರುದ್ರ, ಶೇಷ, ಗರುಡ, ವಾಯು ಬ್ರಹ್ಮರ ದ್ವಾರಾ ಮುಕ್ತಿಯಾದರೂ, ಸ್ವಾತಂತ್ರ್ಯದಿಂದ ಒಬ್ಬರೂ ಕೊಡಲಾರರೆಂಬುದಕ್ಕೆ ಮುಖ್ಯ, ಅಮುಖ್ಯವೆಂದೂ, ಇನ್ನು ಅಮುಖ್ಯ ಫಲ ವೈಷಿಕವುಯೆಂದರಿದು=ಪುಣ್ಯಕಾಮ್ಯ ಕರ್ಮಗಳನ್ನು ಮಾಡುವದರಿಂದ ಸ್ವರ್ಗಾದಿ ಸುಖ ಪ್ರಾಪ್ತಿ, "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬುವಂತೆ ವೈಷಿಕವೆಂದರಿತು=ವಿಷಯ ಸಂಬಂಧಿ ಇಂದ್ರಿಯ ಜನ್ಯಸುಖವೆಂದು ತಿಳಿದು, "ಜೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಎಂಬುವಂತೆ ಇದು ಅಮುಖ್ಯ ಫಲವೆಂದು ತಿಳಿಯುವದು. "ಅಧಮಃ ಸ್ವರ್ಗ ಲೋಕಾದಿ: ಮಧ್ಯಮೋ ಬ್ರಹ್ಮಣಃ ಪದಮ್ ॥ ಉತ್ತಮೋ ಮೋಕ್ಷಮಾಪ್ನೋತಿ ಪ್ರಸಾದಾಚ್ಚಕ್ರಪಾಣಿನ" ಇತಿ ॥ ಎಂಬ ಶಾಂಡಿಲ್ಯತತ್ವದ

ವಚನದಂತೆ, ರಕ್ಕಸಾರಿಯ ಭಜಿಸುತಿರು=ರಾಕ್ಷಸರ ವೈರಿಯಾದ ಶ್ರೀಹರಿಯನ್ನು ಸ್ತೋತ್ರಮಾಡು ಪೂಜಾ ಮಾಡುತ್ತಲಿರು. ಇಲ್ಲಿ ರಕ್ಕಸಾರಿ ಎಂಬದು, ರಕ್ಕಸರು ಕ್ರೂರ ಪಾಪಕೃತ್ಯರು, ಇವರೆಲ್ಲ ನವವಿಧ ದ್ವೇಷಗಳಿಗೆ ಕಾರಣರಾದವರು. ಇಂಥ ಪಾಪಿಗಳನ್ನು ಸಂಹರಿಸುವ, ಅವರ ಶತ್ರುವಾದ ಪಾಪ ಪರಿಹಾರಕನಾದ ಶ್ರೀ ಹರಿಯನ್ನು ನವವಿಧ ದ್ವೇಷ ತ್ಯಾಗ ಪೂರ್ವಕ, ಭಕುತಿಯಿಂದ=ನವವಿಧ ಭಕುತಿಯಿಂದ ಭಜಿಸಿ, ನಿರ್ದುಃಖನಾಗು=ಲಿಂಗದೇಹಾಖ್ಯ ಅನಿಷ್ಟರೂಪವಾದ ದುಃಖವನ್ನು ಕಳೆದುಕೊಂಡು, ಇಷ್ಟರೂಪವಾದ ನಿತ್ಯ ಮೋಕ್ಷವನ್ನು ಪೊಂದಿ ಸುಖದಿಂದ ಬಾಳು, ಭಾರತೀಶಪಿತ=ಭಕ್ತಿಗೆ ಅಭಿಮಾನಿಯಾದ ಭಾ=ಪ್ರಕಾಶಮಾನನಾದ ಜ್ಞಾನ ಪ್ರಾಚುರ್ಯ ಸತ್ವ, ಸತ್ವಾತ್ಮಕ ದೇಹವುಳ್ಳ ವಾಯುವಿಗೆ ತಂದೆಯಾದ ಹರಿಯು, ಇಂಥ ವಾಯ್ವಂತರ್ಯಾಮಿ ಹರಿಯನ್ನು ಯಾರು ಭಜಿಸುವರೋ, ಇಂಥ ಮೊರೆಹೊಕ್ಕವರ ಬಿಡ=ಅನನ್ಯಭಕ್ತಿಯಿಂದ ನೀನೆ ರಕ್ಷಕನೆಂದು ಭಜಿಸುವ ಭಕ್ತರನ್ನು ಎಂದೆಂದಿಗೂ ಕೈಬಿಡನು, ಭೃತ್ಯವತ್ಸಲನ=ಭೃತ್ಯೇಷು=ಭಕ್ತೇಷು ಸ್ನೇಹವಾನ್ ಭಕ್ತವತ್ಸಲ, ಭಕ್ತರಲ್ಲಿ ಸಂತತ ಪ್ರೀತಿಯುಳ್ಳವನು, ಕಾರಣ ಸಂತತ ರಕ್ಷಣ ಮಾಡುವನೆಂದು ಶ್ರೀ ಹರಿಯನ್ನು ಭಜಿಸುವದೆ ಮುಖ್ಯ ಫಲ.

**ಭಾವಸೂಚನ :**—ಮುಖ್ಯೇತಿ ॥ ಅಮುಖ್ಯೇತಿ ॥

"ವಿಷಯೋತ್ಥಂ ತು ರಾಜಸಮಿತ್ಯುಕ್ತೇಃ ॥ ೧೪ ॥

ವೈಷಯಿಕ ಸುಖ ಬಯಸುವರು ರಾಜಸ ಜೀವರೆಂದು ಹೇಳಿದಂತಾಯಿತು. ॥ ೧೪ ॥

## ವ್ಯಾಸದಾಸ ಸಿದ್ಧಾಂತ ಕೌಮುದೀ

"ಮುಖ್ಯಫಲ" ಇತಿ ॥ ಸಾಧನ ಭೂಮಿತ್ವಾತ್, ಲಯೇ ತತ್ವಾಚ್ಚ ॥ (ಲಯೇ ಸತ್ವಾಚ್ಚ) ॥ ೧೪ ॥

## ಕನ್ನಡಾರ್ಥ

ಈಗ ಯಾರನ್ನು ಹೇಗೆ ಉಪಾಸಿಸಬೇಕು ? ಎಂಬುದನ್ನು ನಿರೂಪಿಸುತ್ತಾರೆ–"ಮುಖ್ಯಫಲ" ಎಂಬ ಪದ್ಯದಿಂದ.

ವೈಷಯಿಕ ಸುಖವು ಅಮುಖ್ಯ ಫಲವೆಂದು ತಿಳಿಯಬೇಕು. ಮಹರಾದಿ ಲೋಕ, ಭೂಲೋಕ ಮುಂತಾದವುಗಳು ಮುಖ್ಯಾಮುಖ್ಯ ಫಲವೆಂದು ಒಗೆಯಬೇಕು. ಭೂ ಮುಂತಾದ ಲೋಕಗಳಲ್ಲಿ ಭಗವಂತನನ್ನು ಹೊಂದಲು - ತಿಳಿಯಲು ಬೇಕಾಗುವ ಜ್ಞಾನ,ಭಕ್ತಿ, ಸತ್ಕರ್ಮ, ದಾನ, ಯಜ್ಞ ಮುಂತಾದ ಸಾಧನಗಳು ದೊರೆಯುವದರಿಂದ ಭೂವ್ಯಾದಿಗಳು ಮುಖ್ಯಫಲಗಳಾಗಿರುತ್ತವೆ. ಲಯವನ್ನು ಹೊಂದುವವಾದುದರಿಂದ ಅನಿತ್ಯಗಳಾಗಿರುವದರಿಂದ ಅಮುಖ್ಯ ಫಲಗಳೂ ಆಗಿವೆ. ಆದುದರಿಂದ ಮಹರಾದಿ ಲೋಕಗಳನ್ನು ವೈವಕ್ಷಿಕವಾಗಿ ಮುಖ್ಯಾಮುಖ್ಯ ಫಲಗಳೆಂದು ಭಾವಿಸಬೇಕು. ವೈಕುಂಠವನ್ನು ಮುಖ್ಯ ಫಲವೆಂದು ಭಾವಿಸಬೇಕು. ಹೀಗೆ ಫಲ ತಾರತಮ್ಯ ಜ್ಞಾನದಿಂದ, ಭಕ್ತಿಯಿಂದ ನಿಷ್ಕಾಮದಿಂದ ಹರಿಯನ್ನು ಭಜಿಸು" ಎಂಬುದು ಈ ಪದ್ಯದ ಭಾವ. ||೧೮||

**ಅವತರಣಿಕಾ:**—ಹಿಂದಿನ ಪದ್ಯದಲ್ಲಿ ಸ್ವರ್ಗಕಾಮಾದಿ ಧರ್ಮಾದಿಗಳು ಅಮುಖ್ಯ ಫಲವೆಂದು ಹೇಳಿದೆ. ಆದರೆ ಭಾಗವತಾದಿ ಗ್ರಂಥದಲ್ಲಿ, ಬಾದರಾಯಣರು ಧರ್ಮಾದಿಗಳೇ ಫಲವೆಂದು ಹೇಳಿದ್ದಾರೆ. ಇದಕ್ಕೆ ಏನು ಉಪಾಯವೆಂದರೆ "ರೋಚನಾರ್ಥಂ ಫಲಶ್ರುತಿಃ" ಎಂಬುವಂತೆ ದೃಷ್ಟಾಂತ ಪೂರ್ವಕವಾಗಿ ವರ್ಣಿಸುತ್ತಾರೆ.

**ವ್ಯಾಧಿಯಿಂ ಪೀಡಿತ ಶಿಶುವಿಗೆ ಗು ।**
**ಡೋದಕವ ನೆರೆದದಕೆ ಔಷಧ ।**
**ತೇದು ಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ ॥**
**ಬಾದರಾಯಣ ಭಕ್ತ ಜನಕೆ ಪ್ರ**
**ಸಾದ ರೂಪಕನಾಗಿ ಭಾಗವ ।**
**ತಾದಿಯಲಿ ಪೇಳಿದನು ಧರ್ಮಾದಿಗಳೆ ಫಲವೆಂದು** ॥ ೧೯ ॥

**ಪದ್ಯಾರ್ಥ :** —ವ್ಯಾಧಿಯಿಂ = ಬೇನೆಯಿಂದ ನಾನಾ ರೋಗದಿಂದ ಪೀಡಿತ ಶಿಶುವಿಗೆ=ಕ್ಲೇಶಬಟ್ಟು ಬಳಲುವ, ಅಜ್ಞಾನಿ ಏನೂ ತಿಳಿಯದ ಕೂಸಿಗೆ ಗುಡೋದಕವ ನೆರೆದದಕೆ=ಮೊದಲಿಗೆ ಬೆಲ್ಲದ ಸಿಹಿಯಾದ ನೀರನ್ನು ಮಗು ಸೀ ಇದೆ ಕುಡಿಯಪ್ಪಾ ಎಂದು ಗುಡೋದಕ ಸೀ ತೋರಿಸಲು ಬಾಯಲ್ಲಿ ಹಾಕಿ, ನಂತರ ರೋಗ ನಿವಾರಣೆಗೋಸುಗ ಕಹಿಯಾದ ಔಷಧ=ವನಸ್ಪತಿಗಳ

ಕಷಾಯ, ಅಥವಾ ಮಾತ್ರೆಗಳನ್ನು ತೇದು ಕುಡಿಸುವ ತಾಯಿಯೋಪಾದೆ ಯಲಿ=ಮಾತ್ರೆ ಅರೆದು ರೋಗ ಬಂದ ಹುಡುಗನಿಗೆ ಅಂತಃಕರುಣದಿಂದ ಕುಡಿ ಸುವ ತಾಯಿಯಂತೆ. ಮಹಾ ಕರುಣಾ ಉಳ್ಳ ಶ್ರೀ ಹರಿಯೆ ಬಾದರಾಯಣ= ಸಾಧನ ಭೂಮಿಯಾದ ಭರತಖಂಡಕ್ಕೆ ಶಿರೋಮುಕುಟವಾದ ಬದರಿಕ್ಷೇತ್ರದಿಪ್ಪ ಬದರಿ ವೃಕ್ಷಗಳ ಸಮೂಹಗಳಿಗೆಲ್ಲ ಆಶ್ರಯವಾದ ವೇದವ್ಯಾಸದೇವರು, ವೇದ ವಿಭಾಗಗೈಸಿ ಸಕಲ ಪುರಾಣ ಭಾರತ ಸಂಹಿತಾದಿ ೪ ಅಬ್ಜ ಮೂವತ್ತೆರಡು ಕೋಟಿ ಗ್ರಂಥ ರಚಿಸಿದ ಶ್ರೀ ಹರಿಯೇ ಈ ಸಾಧನ ಶರೀರವಾದ ವೃಕ್ಷಕ್ಕೆ ಆಶ್ರಯನಾಗಿ, ಬದರಿ=ಬೋರೆ ಹಣ್ಣು ರೂಪವಾದ ಕರ್ಮ ಫಲವನ್ನು ಜೀವರಿ ಗುಣಿಸಿ, ಭಕ್ತ ಜನಕೆ=ಸಾಧನವು ಪ್ರಾರಂಭಿಸಿದ ಮುಕ್ತಿಯೋಗ್ಯ ಜನಕೆ, ಪ್ರಸಾದ ರೂಪಕನಾಗಿ, ಪ್ರಸಾದ್ಯತೇಽನೇನ ಪ್ರಸಾದಃ=ಶರಣರ ಮೇಲೆ ಅನು ಗ್ರಹಮಾಡಲು ಕರುಣಿಸಿ, ಭಾಗವತಾದಿಯಲಿ=ಭಾವಗತವೆಂಬುವ ಗ್ರಂಥದ ಮೊದಲಿಗೆ, ಧರ್ಮಾದಿಗಳೆ ಫಲವೆಂದು ಪೇಳಿದನು=ಕಾಮ್ಯಕರ್ಮಾದಿಗಳೇ, ಸಂಕಟ ಬಂದಾಗ ವೆಂಕಟರಮಣನ್ನ ಭಜಿಸುವದು. ಕಾಮ್ಯಕರ್ಮ-ಫಲ ಇಚ್ಛಾವುಳ್ಳವರಾಗಿ ಧರ್ಮವನ್ನು ಮಾಡಲು ಹೇಳಿದ್ದಾರೆ, ಏಕೆಂದರೆ ಮುಕ್ತಿ ಯೋಗ್ಯರಿಗೆ ಸಾಧನದಲ್ಲಿ ಅಭಿರುಚಿ ತೋರಿಸಲು ದೇವರನ್ನು ಭಜಿಸಿದರೆ, ಸಂಸಾರ ಸುಖ ಧನ ಪ್ರಾಪ್ತಿ ಮುಂತಾದವುಗಳು ಆಗುವವೆಂದು ಸಾಧಕರನ್ನು ಮಾರ್ಗಕ್ಕೆ ಹಚ್ಚಲು ಹೇಳಿದ್ದೆ ಹೊರತಾಗಿ ಧರ್ಮ, ಅರ್ಥಕಾಮ ಮುಕ್ತಿಗೆ ಮುಖ್ಯ ಫಲವಲ್ಲ.

**ಭಾವಸೂಚನ** :— ವ್ಯಾಧೀತಿ ॥ ಭಾಗವತಾದಿಯಲ್ಲಿ ॥ ಧರ್ಮಃ ಪ್ರೋಜ್ಝಿತ ಕೈತವ ಇತ್ಯುಕ್ತೇಃ ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವ್ಯಾಧಿ" ಇತಿ ॥ "ವೇದಸ್ಮೃತಿ ಪುರಾಣೇಷು ಯಾ ಚೋಕ್ತಾ ಫಲ ಚೋದನಾ । ಯೇ ಕರ್ಮವಿಮುಖಾಃ ಮಂದಾಃ ತೇಷಾಂ ಆದೌ ಪ್ರವೃ ತ್ತಯೇ ॥ ರುಚ್ಯರ್ಥಂ ಉದಿತಾಽತಶ್ಚ. ನಿಸ್ಸಂಗಃ ಸರ್ವತಃ ಸುಖೀ । ಯಥಾ ಮಾತಾ ಶರೀರಾದೌ ಮಹಾರೋಗ ಪ್ರಶಾಂತಯೇ ॥ ಔಷಧಂ ದಾತು

ಕಾಮಾ ಸಾ ಗುಡಂ ದತ್ವಾ ತತಃ ಪರಮ್ ॥ ಪ್ರಯಚ್ಛತಿ ಔಷಧಂ ಪಶ್ಚಾತ್ ಯಥಾ ಮಾತಾ ತಥಾ ಶ್ರುತಿಃ ॥ ಶ್ರುತಿ ಸ್ಮೃತಿ ಪುರಾಣೇಷು ಪಶ್ಚಾತ್ ನಿಷ್ಕಾಮ್ಯ ಚೋದನಾ ॥" ಇತಿ ಶಾಂಡಿಲ್ಯತಂತ್ರೇ ॥ "ಧನಂ ಹಿ ಧರ್ಮೈಕ ಫಲಮ್" ಇತ್ಯಾದೌ "ಯಥಾ ಭೈಷಜ್ಯ ರೋಚನಮ್ ಇತ್ಯಾದೌ ಚ (ಏವಮೇವೋಕ್ತಮ್) ॥೧೫॥

## ಕನ್ನಡಾರ್ಥ

ನಿಷ್ಕಾಮವಾಗಿ ಹರಿಯ ಉಪಾಸನೆಯೇ, ಅದರಿಂದ ವೈಕುಂಠ ಲೋಕ (ಮೋಕ್ಷ) ಪ್ರಾಪ್ತಿಯೇ ಮುಖ್ಯ ಫಲವಾಗಿದ್ದರೆ ಶ್ರುತಿಸ್ಮೃತಿ ಪುರಾಣಗಳಲ್ಲಿ ಸ್ವರ್ಗ ಮುಂತಾದವುಗಳಿಗಾಗಿ ಯಾಗ ಮುಂತಾದ ಸಕಾಮ ಧರ್ಮಗಳನ್ನು ಯಾಕೆ ಹೇಳಬೇಕು ? ಎಂದು ಸಂಶಯವು ಬರುತ್ತದೆ. ಇದನ್ನು ಕಳೆಯುತ್ತಾರೆ—"ವ್ಯಾಧಿಯಿಂ" ಎಂಬ ಪದ್ಯದಿಂದ.

ಕರ್ಮಗಳನ್ನೇ ಮಾಡದ ಮಂದರಿಗೆ ಮೊದಲು ಕರ್ಮಾಚರಣದಲ್ಲಿ ಪ್ರವೃತ್ತಿಯಾಗಬೇಕಲ್ಲವೇ? ಅನಂತರ ನಿಷ್ಕಾಮ ಕರ್ಮವನ್ನು ಮಾಡುತ್ತಾರೆ. ಮಂದರಿಗೆ ಕರ್ಮಸಾಮಾನ್ಯದಲ್ಲಿ ಪ್ರವೃತ್ತಿಯಾಗಬೇಕೆಂಬ ಭಾವನೆಯಿಂದ ಆ ಕರ್ಮಾಚರಣದಲ್ಲಿ ಅಭಿರುಚಿಯನ್ನು ಹುಟ್ಟಿಸಲು, ಫಲ ಸಹಿತವಾಗಿ ಕರ್ಮಗಳನ್ನು ಶಾಸ್ತ್ರಗಳು ಹೇಳುತ್ತವೆ. ಕರ್ಮಾಚರಣದಲ್ಲಿ ಪ್ರವೃತ್ತನಾದವನಿಗೆ ಫಲಭಾವನೆಯನ್ನು ಕಳೆಯಲು ಅನಂತರ ನಿಷ್ಕಾಮ ಕರ್ಮಗಳನ್ನೂ ವಿಧಿಸಿ ಅಸಂಗನಾಗುವದರಿಂದ ಸುಖಿಯಾಗುವನೆಂದು ನಿರೂಪಿಸುತ್ತವೆ. ಜ್ವರ ಮುಂತಾದ ರೋಗಗಳನ್ನು ಶಮನ ಮಾಡಲು ತಾಯಿಯು ಔಷಧವನ್ನು ಕೊಡಬಯಸಿ, ಮೊದಲು ಬೆಲ್ಲವನ್ನು ರೋಗಿಗೆ ಕೊಡುತ್ತಾಳೆ. ಅನಂತರ ಕಹಿಯಾಗಿರುವ ಔಷಧವನ್ನು ಕೊಡುತ್ತಾಳೆ. ಅದರಂತೆ ಶ್ರುತಿಸ್ಮೃತಿ ಪುರಾಣಗಳು ಸುಜೀವರ ಭವರೋಗವನ್ನು ಪರಿಹರಿಸಲು, ಮೊದಲು ಕಾಮ್ಯ ಕರ್ಮಗಳನ್ನೂ ಅವುಗಳ ಫಲಗಳನ್ನೂ ನಿರೂಪಿಸಿ ಔಷಧದಲ್ಲಿ ರುಚಿಯನ್ನು ಹುಟ್ಟಿಸುತ್ತವೆ. ನಂತರ ನಿಷ್ಕಾಮ ಕರ್ಮಗಳನ್ನು ವಿಧಿಸುತ್ತವೆ." ಎಂದು ಶಾಂಡಿಲ್ಯ

ತತ್ವದಲ್ಲಿ ಹೇಳಲಾಗಿದೆ. ಧನಕ್ಕೆ ಧರ್ಮವೇ ಮುಖ್ಯಫಲ", "ಔಷಧದಲ್ಲಿ ರುಚಿಯುನ್ನು ಹುಟ್ಟಿಸುವಂತೆ ಕಾಮ್ಯ ಕರ್ಮಗಳ ನಿರೂಪಣೆ" ಎಂದು ಮುಂತಾಗಿರುವ ಪ್ರಮಾಣಗಳಿಗೆ ಇದು ಸಮ್ಮತವಿದೆ. ॥ ೧೫ ॥

ಅವತರಣಿಕಾ :— ಕಾಮ್ಯಕರ್ಮದಿಂದ ಅಮುಖ್ಯವಾದ ಸ್ವರ್ಗಾದಿನಶ್ವರ ಫಲದಿಂದ, ಪುನಃ ಪುನಃ ಸಂಸಾರದಲ್ಲಿ ಜನನ ಮರಣ ಕಾರಣಘೋರ ಸಂಸಾರದಿಂದ ಪಾರಾಗಲು, ಪರ್ವತ ದೃಷ್ಟಾಂತದಿಂದ ಅಸಾರ ಸಂಸಾರ ದಾಟಿಸುವ ಹರಿಯನ್ನು ಆರಾಧಿಸುವದು ಜ್ಞಾನಿಗಳ ಮತವೆಂದು ಶಿಕ್ಷಿಸುತ್ತಾರೆ.

**ದೂರದಲ್ಲಿಹ ಪರ್ವತ ಘನಾ ।**
**ಕಾರ ತೋರ್ಪದು ನೋಳ್ಪ ಜನರಿಗೆ ।**
**ಸಾರೆ ಗೈಯ್ಯಲು ಸರ್ಪ ವ್ಯಾಘ್ರಗಳಿಂದ ಭಯವಿಹದು ।**
**ಘೋರತರ ಸಂಸಾರ ಸೌಖ್ಯಾ ।**
**ಸಾರ ತರವೆಂದರಿತು ನಿತ್ಯ ರ ।**
**ಮಾರಮಣನಾರಾಧಿಸುವರದರಿಂದ ಬಲ್ಲವರು ॥ ೧೬ ॥**

ಪದ್ಯಾರ್ಥ :— ಪರ್ವತವು= ಗುಡ್ಡವು ನಮ್ಮಿಂದ ದೂರದಲ್ಲಿರುವಾಗ್ಗೆ ನೋಡಿದರೆ, ಘನಾಕಾರ ತೋರ್ಪದು. ಘನ=ಮೋಡ ಆಕಾಶದಲ್ಲಿ ಚರಿಪ ಮೋಡಗಳಂತೆ ಗಂಭೀರವಾಗಿ, ನೋಳ್ಪಜನರಿಗೆ ತೋರ್ಪದು=ನೋಡುವ ಜನರಿಗೆ ತೋರುವದು. ಸಾರೆಗೈಯ್ಯಲು=ಆ ಗುಡ್ಡದ ಸಮೀಪಕ್ಕೆ ಹೋಗಿ ನೋಡಲು, ಆ ಪರ್ವತದಲ್ಲಿರುವ ಸರ್ಪ ವ್ಯಾಘ್ರಾದಿಗಳಿಂದ ಭಯವಿಹುದು, ಹಾವು ಹುಲಿ ಮುಂತಾದ ಹಿಂಸ್ರಪ್ರಾಣಿಗಳಿಂದ ಭಯಂಕರವಾಗಿ ತೋರುವುದು, ಅದರಂತೆಯೇ "ದೂರತಃ ಪರ್ವತೋ ರಮ್ಯಃ" ಎಂಬ ವಚನದಂತೆ, ಘೋರತರ ಸಂಸಾರ ಸೌಖ್ಯ=ಕಠಿಣವಾದ ಭಯಂಕರ ಸಂಸಾರದಲ್ಲಿ, ದಾರಾ ಪುತ್ರ ಧನ ಧಾನ್ಯಾದಿ ಸೌಖ್ಯ ಸುಖವು, ಅಸಾರವು ಅನಿತ್ಯ ದಂಶಕರಾದ ದಾರಾ ಪುತ್ರಾದಿಗಳ ಕಾಟ, ಅರಿಷಡ್ವರ್ಗಗಳೆಂಬ ಮಹೋರಗ ವ್ಯಾಘ್ರಾದಿಗಳ ಭಯಂಕರ ಅಂಜಿಕೆಯುಳ್ಳದ್ದು, ದೂರದಿಂದ ನೋಡುವವರಿಗೆ ಸಂಸಾರ ಆಪಾತತಃ ರಮಣೀಯವಾಗಿ ತೋರಿದರೂ, ಸಂಸಾರದಲ್ಲಿ ಶಿಲ್ಕಿ ಒದ್ದಾಡುವನಿಗೇವೆ

ಅನುಭವದಿಂದ, ಬೇಡಪ್ಪಾ ಸ್ವಾಮಿ ಸಂಸಾರ, ಬಹು ಹೆಂಡರ ಮಕ್ಕಳ ಕಾಟ, ಆಪ್ತ ಇಷ್ಟರ ದುರ್ವರ್ತನ, ಬಡತನ ಅನುಭವ ಭಾಗ್ಯವಂತನಾದರೂ ಅನೇಕ ಭಯ ಇತ್ಯಾದಿ.ಸಂಸಾರ ಸೌಖ್ಯ ಅಸಾರತರ=ಸಾರವಿಲ್ಲದ್ದು,ಬಲವಿಲ್ಲದ್ದು. ಧಾರ ವಾದ ಆಯುಧ ಕತ್ತಿಗೆ ಹಚ್ಚಿದ ಜೇನುತುಪ್ಪ ನೆಕ್ಕಿದ ತೆರದಂತೆ ಎಂದು, ಅರಿತು =ತಿಳಿದು, ಸಂಸಾರ ಪಾರು ಮಾಡುವ, ರಮಾರಮಣನನ್ನು=ಶ್ರೀ ಲಕ್ಷ್ಮೀಪತಿ ಯನ್ನು, ಬಲ್ಲವರು=ಬುಧರು. ಜ್ಞಾನಿಗಳು, ಆರಾಧಿಸುವರು=ಪೂಜಿಸುವರು, ಕಾರಣ ಸಾರಾತ್ ಸಾರತರನಾದ ಭಗವಂತನನ್ನೆ ಭಜಿಸಿ ಸಂಸಾರ ದಾಟಿ ಮುಖ್ಯ ಫಲ ವೈಕುಂಠ ಪೊಂದಿರೆಂದು ದಾಸರು ಉಪದೇಶಿಸುತ್ತಾರೆ.

**ಭಾವಸೂಚನ :—** ದೂರೇತಿ ॥ ದೂರಸ್ಥಃ ಪರ್ವತೋ ರಮ್ಯ ಇತಿ ನ್ಯಾಯಾತ್ ॥ ೧೬ ॥




## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೂರ" ಇತಿ ॥ "ಘನ" – ಮೇಘ ॥ ೧೬ ॥

## ಕನ್ನಡಾರ್ಥ

"ಸಂಸಾರವು ಅಪಾರ ರಮಣೀಯ ; ದೂರದಿಂದಲೇ ಚಂದ ಕಾಣುತ್ತದೆ. ಸಂಸಾರದಲ್ಲಿ ದುಃಖವೇ ಬಹಳ ಇರುತ್ತದೆ, ಲವಲೇಶ ಸುಖವಿಲ್ಲ" ಎಂಬುದನ್ನು "ದೂರಸ್ಥಃ ಪರ್ವತಃ ರಮ್ಯಃ" ಎಂಬ ಉಕ್ತಿಯಂತೆ ಬೆಟ್ಟದ ದೃಷ್ಟಾಂತದಿಂದ ವಿಶದಪಡಿಸುತ್ತಾರೆ—"ದೂರದಲ್ಲಿಹ" ಎಂಬ ಪದ್ಯದಿಂದ. ಘನವೆಂಬ ಶಬ್ದಕ್ಕೆ ಮೇಘವೆಂದು ಅರ್ಥವನ್ನು ತಿಳಿಯಬೇಕು. ॥ ೧೬ ॥

**ಅವತರಣಿಕಾ :—**ಸಂಸಾರ ದಾಟಿಸುವ ಸ್ವತಂತ್ರ ಕರ್ತನಾದ ಶ್ರೀ ಹರಿಯನ್ನು ಭಜಿಸದೇ ಅಹಂಕಾರ ಯುಕ್ತನಾಗಿ ಸಕಲವೂ ನಾನೇ ಮಾಡುವ ನೆಂಬ ದುರ್ಬುದ್ಧಿಯುಳ್ಳವನ ಸಕಲ ಸಾಧನ ಕರ್ಮ ಫಲವು, ಸುಡದೇ ಇದ್ದ ಹಸಿ ಮಣ್ಣು ಗಡಿಗೆಯಲ್ಲಿ ತುಂಬಿದ ನೀರು ಸೋರಿ ಹೋಗುವಂತೆ ವ್ಯರ್ಥವಾ ಗುವವೆಂದು ಹೇಳುತ್ತಾರೆ.

**ಕೆಸರ ಘಟಗಳ ಮಾಡಿ ಬೇಸಿಗೆ ।**
**ಬಿಸಲೊಳಗಿಟ್ಟೊಣಗಿಸಿದರದು ಘನ ।**
**ರಸವು ತುಂಬಲು ಬಹುದೆ ಸರ್ವ ಸ್ವತಂತ್ರ ನಾನೆಂಬ ॥**
**ಪಶುಪನರರೇನೇನು ಮಾಳ್ಪಾ ।**
**ನಶನ ದಾನ ಸ್ನಾನ ಕರ್ಮಗ ।**
**ಳೊಸರಿ ಪೋಪವು ಬರಿದೆ ದೇಹಾಯಾಸವನೆ ಕೊಟ್ಟು ॥ ೧೭ ॥**

**ಪದ್ಯಾರ್ಥ** :—ಕೆಸರ ಘಟಗಳ ಮಾಡಿ=ಕುಂಬಾರನು ಮಣ್ಣು ಹದ ಮಾಡಿ ಕೊಡಗಳನ್ನು, ಮಡಿಕೆ ಗಡಿಗೆಗಳನ್ನು ಚನ್ನಾಗಿ ಹಸಿ ಮಣ್ಣಿನಿಂದ ಮಾಡಿದನು, ಮುಂದೆ ಅವನ್ನು ಆವಿಯ ಬೆಂಕಿಯಲ್ಲಿ ಹಾಕಿ ಸುಡದೇ, ಬೇಸಿಗೆ ಬಿಸಲೊಳಗಿಟ್ಟು ಒಣಗಿಸಿದರದು=ಬೇಸಿಗೆ ಕಾಲ ಪ್ರಖರವಾದ ತೀಕ್ಷ್ಣ ಬಿಸ ಲೊಳಗೆ ಸೂರ್ಯ ಕಿರಣದಲ್ಲಿ ಒಣಗಿಸಿದರೆ, ಆ ಘಟವು=ಗಡಿಗೆಯು, ಘನರಸ= ಘನಸ್ಯ ರಸಃ ಘನರಸಃ, ಮೇಘದರಸವು ಯಾವುದೋ ಅದು, ನೀರು ತುಂಬಲು ಬಹುದೆ=ತುಂಬಲಿಕ್ಕೆ ಬರುವದೆ, ಬರುವುದಿಲ್ಲ, ಯಾಕಂದರೆ ಅದರಲ್ಲಿ ನೀರು ತುಂಬಿದರೆ ಎಲ್ಲ ನೀರು ಒಸರಿ ಸೋರಿ ಹೋಗುತ್ತವೆಯೋ, ಅದರಂತೆಯೇ, (ಏಕ ದೇಶಿಯ ದೃಷ್ಟಾಂತ), ಸರ್ವ ಸ್ವತಂತ್ರ ನಾನೆಂಬ=ಯಾವ ಮನುಜನು, ನಾನೇ ಸರ್ವಕರ್ತಾ, ನಾನೇ ಎಲ್ಲ ಮಾಡಲಿಕ್ಕೆ ಸ್ವತಂತ್ರನೆಂಬ ಪಶುಪ= ನಾಲ್ಕು ಕಾಲಿನ ಪ್ರಾಣಿ ದನಗಳು. ಕಟ್ಟಿ ಸಾಕುವ ಪ್ರಾಣಿಗಳಲ್ಲಿ, ಪ=ಶ್ರೇಷ್ಠ, ದ್ವಿಪಾದ ಎರಡು ಕಾಲುಳ್ಳ ಪಶು ಅಜ್ಞಾನಿ ತಿಳುವಳಿಕೆ ಹೀನ, ಅಹಂಕಾರ ಮತಿಯುಳ್ಳ, ನರರೇನೇನು ಮಾಳ್ಪ=ಮನುಜರು ಏನೇನು, ಮಾಡುವ ಕ್ರಿಯ ಗಳು, ಅಶನ=ಹೊಟ್ಟೆ ತುಂಬಲು ಅನ್ನ ತಿಂಬುವದು, ಖ್ಯಾತಿಗೋಸುಗ ದಾನ, ದ್ರವ್ಯದಾನಾದಿಗಳನ್ನು ಮಾಡುವದು, ಸ್ನಾನ ಮಾಡುವದು, ವೈದೊಳೆ ಯುವ, ಎಲ್ಲ, ಕರ್ಮಗೊಳಸರಿಪೋಪವು = ಕ್ರಿಯೆಗಳು ಹಸಿ ಗಡಿಗೆಯಲ್ಲಿ ತುಂಬಿದ ನೀರಿನಂತೆ ಸೋರಿ ಹೋಗುತ್ತವೆ. ಎಲ್ಲವೂ ನಿಷ್ಫಲ. ಬರಿದೆ ದೇಹಾ ಯಾಸವನೆ ಕೊಟ್ಟು=ಏನೂ ಇಲ್ಲದೇ ವ್ಯರ್ಥವಾಗಿ ಕರ್ಮ ಮಾಡಿದಕ್ಕೆ ದೇಹ ದಂಡನೆ ಹೊರತು, ಏನೂ ಫಲವಿಲ್ಲ. ಕಾರಣ ಸಕಲ ಕರ್ಮವು ಭಗವಂತನು ಸರ್ವಸ್ವತಂತ್ರನು, ನನ್ನಲ್ಲಿ ಪ್ರೇರಿಸಿ ನಿಂದು ಮಾಡಿ ಮಾಡಿಸುವನೆಂದರೆ,

ಸಂಸಾರ ನಿವೃತ್ತಿ. "ತಸ್ಯೈವ ಸರ್ವ ಕರ್ತೃತ್ವಂ ತದಧೀನಂ ಚ ಗಾತ್ರಕೇ ॥ ತಸ್ಮಿನ್ ದೇಹೇ ಮಮತ್ವಂ ಚ ತ್ಯಾಜ್ಯಮೇವ ನ ಸಂಶಯ ಇತಿ॥ ಗಾರುಡ ಬ್ರಹ್ಮಕಾಂಡ ॥

**ಭಾವಸೂಚನ :**—ಕೆಸರೇತಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕೆಸರ" ಇತಿ ॥ "ಘಟಕಿರಾಟ ಇವ" ಇತ್ಯುಕ್ತೇಃ ॥ ೧೭ ॥

## ಕನ್ನಡಾರ್ಥ

"ನಾನು ಸ್ವತಂತ್ರನು ; ಮಾಡುವೆನು" ಎಂಬ ಅಹಂಕಾರದಿಂದ ಮಾಡಿದ ಯಾವದೇ ಸ್ನಾನ ದಾನ ಮುಂತಾದ ಕರ್ಮಗಳು ವಿಫಲವಾಗುವವೆಂಬ ವಿಷಯನ್ನು ಸದೃಷ್ಟಾಂತವಾಗಿ ತಿಳಿಸುತ್ತಾರೆ. "ಕೆಸರ" ಎಂಬ ಪದ್ಯದಿಂದ.

ಸುಡದೇ ಇರುವ, ಬರೆ ಬಿಸಿಲಿಗೆ ಮಾತ್ರ ಒಣಗಿದ ಮಣ್ಣಿನ ಕೊಡದಲ್ಲಿ ನೀರು ಹೇಗೆ ನಿಲ್ಲದೆ ಸೋರಿ ಹೋಗುತ್ತದಯೋ ಹಾಗೆ ಅಹಂಕಾರದಿಂದ ಮಾಡಿದ ಕರ್ಮಗಳು ವಿಫಲವಾಗುವವು.

ಭಾಗವತ ಪಂಚಮ ಸ್ಕಂಧದಲ್ಲಿ ಜ್ಞಾನಿಗಳು "ಯಾದೃಚ್ಛಿಕವಾಗಿ ಬಂದಿರುವ ಯೋಗೈಶ್ವರ್ಯಗಳನ್ನು ಅಭಿನಂದಿಸುವದಿಲ್ಲ. ಯೋಗೈಶ್ವರ್ಯ ಪ್ರದರ್ಶನದಲ್ಲಿ ಜ್ಞಾನಿಗಳು ಪ್ರವರ್ತಿಸಿದರೆ ಅವರ ಮನಸ್ಸು ವಿಷಯಾಂತರದಲ್ಲಿ ಆಸಕ್ತಿಯನ್ನು ಹೊಂದಬಹುದು. ಆಗ ಅವರ ಮನಸ್ಸು ಭಗವತ್ತತ್ವವನ್ನು ಬಿಡಬಹುದು. ವಿಷಯಾಂತರದಲ್ಲಿ ಆಸಕ್ತವಾದ ಮನಸ್ಸು ಭಗವತ್ತತ್ವದಲ್ಲಿ ಸ್ಥಿರವಾಗಿ ನಿಲ್ಲಲಾರದು. ಈ ವಿಷಯದಲ್ಲಿ ಸುಡದಿರುವ ಹೊಸ ಗಡಿಗೆಯಲ್ಲಿ ನೀರು ಹೇಗೆ ನಿಲ್ಲಲಾರದೋ ಹಾಗೆ ಮನಸ್ಸು ನಿಲ್ಲಲಾರದು" ಎಂದು ದೃಷ್ಟಾಂತವನ್ನು ಹೇಳಿದ್ದಾರೆ. ಅದನ್ನೇ ಇಲ್ಲಿ ತೋರಿಸಿದ್ದಾರೆ. ॥ ೧೭ ॥

**ಅವತರಣಿಕಾ :**—ಹಿಂದೆ ಹೇಳಿದಂತೆ ಅಹಂಕಾರ ಬುದ್ಧಿ ಹೋಗಲು, ಶ್ರೀ ಸರ್ವಜ್ಞ, ಹರಿ ಸರ್ವಕರ್ತನೆಂಬ ದಿವ್ಯ ಜ್ಞಾನ ಉದಯಿಸಲು ಬಾಹ್ಯ

ಅಂತರ ದೀಕ್ಷೆಗಳನ್ನು ಗುರುಗಳಿಂದ ತಿಳಿದು ಸತ್ ಸಾಧನ ಮಾಡಲು ಬಾಹ್ಯ-ದೀಕ್ಷಾ ಅಂತರ ದೀಕ್ಷಾಗಳನ್ನು ವಿವರಿಸಿ ಶಿಷ್ಯರನ್ನು ಶಿಕ್ಷಿಸುತ್ತಾರೆ.

**ಎರಡು ದೀಕ್ಷೆಗಳಿಹವು ಬಾಹ್ಯಾಂ।**
**ತರವೆನಿಪ ನಾಮದಲಿ ಬುಧರಿಂ।**
**ದರಿತು ದೀಕ್ಷಿತನಾಗು ದೀರ್ಘದ್ವೇಷಗಳ ಬಿಟ್ಟು॥**
**ಹರಿಯೆ ಸರ್ವೋತ್ತಮ ಕ್ಷರಾಕ್ಷರ।**
**ಪುರುಷ ಪೂಜಿತ ಪಾದ ಜನ್ಮಾ।**
**ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥ ೧೮॥**

**ಪದ್ಯಾರ್ಥ :**—ಎರಡು, ದೀಕ್ಷೆಗಳಿಹವು=ಎರಡು ದೀಕ್ಷೆ=ವ್ರತ ನಿಯಮ ಸಂಸ್ಕಾರಗಳಿರುವವು. ಅವು ಯಾವೆಂದರೆ, ಬಾಹ್ಯಾಂತರವೆನಿಪ ನಾಮದಲಿ=ಬಾಹ್ಯ ಹೊರಗಿನ ದೀಕ್ಷಾ, ಅಂತರ=ಒಳಗಿನ ದೀಕ್ಷಾ ಎಂಬ ಹೆಸರಿನಿಂದ ಇರುವವು. ಬುಧರಿಂದರಿತು ದೀಕ್ಷಿತನಾಗು=ಜ್ಞಾನಿಗಳಿಂದ ತಿಳಿದು, ಎರಡೂ, ವ್ರತ ನಿಯಮವನ್ನು ಪಾಲಿಸಲು ದೀಕ್ಷಿತನಾಗು-ನಿಶ್ಚಯದಿಂದ ಮಾಡಲು ದೃಢಮನಸ್ಕನಾಗಿ ದೀಕ್ಷಾ ವಹಿಸು, **ಬಾಹ್ಯ ದೀಕ್ಷಾ ಯಾವುದೆಂದರೆ** ಪರಿಶುದ್ಧವಾದ ಜಲವಲ್ಲಿ ಶಾಸ್ತ್ರೋಕ್ತ ಕಾಲ ದಶವಿಧ ಸ್ನಾನ, ಉತ್ತಮ ವಸ್ತ್ರ ಪರಿಧಾನ, ದೇಹಕ್ಕೆ ಗೋಪಿಚಂದನದಿಂದ ಕೇಶವಾದಿ ದಾಮೋದರಾಂತ ಶುಕ್ಲ ಪಕ್ಷದಿ, ಕೃಷ್ಣಪಕ್ಷದಿ ಸಂಕರ್ಷಣಾದಿ ಕೃಷ್ಣಾಂತಊರ್ಧ್ವ ಪುಂಡ್ರವಿಧಾನದಿಂದ ದ್ವಾದಶ ನಾಮಗಳನ್ನು ಹಚ್ಚಿಕೊಳ್ಳುವದು. ಚಕ್ರ, ಶಂಖ ಗದಾ ಪದ್ಮ, ನಾರಾಯಣ ಮುದ್ರಾ ಶ್ರೀ ಹರಿಯ ಚಿಹ್ನಗಳೆಂದು ಹೃದ್ಯೋಲ್ಕಾದಿ ಪಂಚ ಮೂರ್ತಿಗಳನ್ನೂ ಚಿಂತಿಸಿ ಮುದ್ರಾಗಳನ್ನು ಧರಿಸುವದು. ಕೊರಳಲ್ಲಿ ತುಳಸಿ ಮಾಲಾ, ಶ್ರೀ ಹರಿಗರ್ಪಿಸಿದ ಗಂಧದಿಂದ ನಾಮ ೧೨ ಧರಿಸುವಿಕೆ, ಪಣೆಯಲ್ಲಿ ಅಂಗಾರ, ಧಾಳವಾದ ಅಕ್ಷತೆ ಧರಿಸುವದು. ಮತ್ತು ಹರಿಗರ್ಪಿಸಿದ ತುಲಸಿ ದಳಗಳನ್ನು ಎರಡೂ ಕರ್ಣ, ನಾಭಿಯಲ್ಲಿಡುವದು. ಇದೇ ಮೊದಲಾದ ವೈಷ್ಣವ ಚಿಹ್ನಗಳನ್ನು ಧರಿಸುವದು, ಕಾಲ ವಿಶೇಷಗಳಲ್ಲಿ ಶಾಸ್ತ್ರನಿಯಮದಂತೆ ತಪ್ತ ಮುದ್ರೆಗಳನ್ನು ತೆಗೆದುಕೊಳ್ಳುವದೆಲ್ಲ, ಈ ದೇಹಾಖ್ಯ ವಿಷ್ಣು ರಥಕ್ಕೆ ಅಲಂಕಾರ ಮಾಡುವದೇ ಬಾಹ್ಯ ದೀಕ್ಷೆ ಮತ್ತು ಕಾಲ ಮೀರದಂತೆ ಸಂಧ್ಯಾ ಮಾಡು

ವದು ಏಕಾದಶಿ ಉಪವಾಸ ವ್ರತಾದಿಗಳು. **ಇನ್ನು ಅಂತರಂಗ ದೀಕ್ಷಾ**= ತಾರತಮ್ಯ ಪಂಚ ಭೇದ ಜ್ಞಾನವಾಗಲು ಶ್ರವಣ ಮನನಾದಿಗಳಿಂದ ಶ್ರೀ ಹರಿ ಸರ್ವೋತ್ತಮನೆಂಬ ದಾರ್ಢ್ಯಜ್ಞಾನ, ಶ್ರೀಹರಿಯೆ ಮದ್ಬಿಂಬ, ಸ್ವತಂತ್ರಕರ್ತಾ, ಸರ್ವ ಪ್ರೇರಕ, ಸರ್ವೇಷ್ಟವನ್ನು ಕೊಡುವವ, ಶ್ರೀ ಹರಿಯೆ ಎನ್ನ ಸ್ವಾಮಿ, ಸರ್ವಸ್ವಾಮಿ ಅನಂತ ಜ್ಞಾನಾನಂದ ಗುಣ ಪೂರ್ಣ ಸಕಲ ಕಾಲ ಸರ್ವತ್ರ ಶ್ರೀ ಹರಿಯೇ ರಕ್ಷಕನೆಂಬ ಅಂತರ ದೀಕ್ಷಾನಿಶ್ಚಯವಾಗಿರಬೇಕು. ಹೀಗೆ ಜ್ಞಾನಿಗಳಿಂದ ತಿಳಿದು ದೀಕ್ಷಿತನಾಗಬೇಕು, ದೀರ್ಘದ್ವೇಷಗಳ ಬಿಟ್ಟು, ಎಲ್ಲ ಕಾಲದಲ್ಲಿ ಶ್ರೀಹರಿಯಲ್ಲಿ ದ್ವೇಷ ಮಾಡುವ ದೈತ್ಯಾದಿಗಳು, ಅಹಂ ಬ್ರಹ್ಮಾಸ್ಮಿ ಎಂಬ ಮಿಥ್ಯಾವಾದಿಗಳು ದೀರ್ಘ ದ್ವೇಷಿಗಳು. ಇವರ ಸಹವಾಸ ಬಿಟ್ಟು, ಕುಶಾಸ್ತ್ರ ಬಿಟ್ಟು, ಅಥವಾ ದೀರ್ಘದ್ವೇಷಗಳ ಬಿಟ್ಟು=ಹರಿಯಲ್ಲಿ–ಹರಿ ಭಕ್ತರಲ್ಲಿ ಮತ್ಸರ, ಅಸೂಯೇ, ಈರ್ಷಾ, ನಿಂದಾದಿಗಳನ್ನುಮಾಡುತ್ತ ಬಹು ಕಾಲದವರೆಗೆ ಮತ್ಸರ ಮನದಲ್ಲಿಟ್ಟು, ಹಗೆ ವೈರತನವನ್ನು ಮಾಡುವದು ಬಿಡುವದೇ ಇದು ಅಂತರಂಗ ಸಾಧನಕ್ಕೆ ಮೊದಲನೇ ಮೆಟ್ಟಲು, ಹೀಗೆ ಅಂತರ ದೀಕ್ಷಿತನಾಗಿ, **ಹರಿಯೇ ಸರ್ವೋತ್ತಮ**=ನಿರ್ದುಷ್ಟ ಜ್ಞಾನಾನಂದ ಪೂರ್ಣ, ಬಿಂಬನಾದ ಹರಿಯೇ ಧಾಮತ್ರಯದಿಪ್ಪನು. ಸರ್ವ ಶ್ರೇಷ್ಠ, ಕ್ಷರ=ದೇಹ ನಾಶವುಳ್ಳ ಬ್ರಹ್ಮಾದಿ ಜೀವರು ಅಕ್ಷರಳಾದ ರಮಾದೇವಿ ಮುಕ್ತರು, ಸ್ವರೂಪ ನಾಶರಹಿತರಾದವರು ಅಕ್ಷರರೆಂದು ಹೀಗೆ ರಮಾ ಬ್ರಹ್ಮಾದಿ ಮುಕ್ತಾಮುಕ್ತ ಜೀವ ನಿಯಾಮಕ, ಪುರುಷರೂಪಿ ಹರಿಯು ಕ್ಷರ ಅಕ್ಷರರಿಂದ ಪೂಜೆಗೊಳ್ಳುವ ಪಾದ ಉಳ್ಳವನು. ಜನ್ಮಾಸ್ಮರವಿದೂರ=ಜನನ ಮರಣ-ದೇಹ ಸಂಯೋಗ ವಿಯೋಗಾದಿ, ಜನ್ಮ ಮೃತಾದಿ ದೋಷಗಳಿಂದ ದೂರನಾದವನು, ಸರ್ವಗ=ಸರ್ವ ಸ್ಥಳ,ಸರ್ವ ಕಾಲಗಳಲ್ಲಿ ಶಶ್ವದೇಕ ಪ್ರಕಾರನಾಗಿ, ಸುಖಾತ್ಮಕನೆಂದು ಸ್ಮರಿಸುತಿರು = ಜ್ಞಾನಾನಂದಮಯ ಸಚ್ಚಿನ್ಮಯ ಶರೀರವುಳ್ಳ **"ಸಚ್ಚಿದಾನಂದಾತ್ಮಾದಿ"** ಅನಂತ ಗುಣಪರಿಪೂರ್ಣನೆಂದು ಸದಾ ಚಿಂತನೆ ಮಾಡು, ಧ್ಯಾನ ಮಾಡು.

**ಭಾವಸೂಚನ:**—ಎರಡೇತಿ॥ ಅರಃ ದೋಷಃ ತದುಕ್ತಂ ವಿಷ್ಣುರಹಸ್ಯೇ ದಶಪಾಧ್ಯಾಯೇ ಹಯ ಸ್ಕಂಧೇನ ವಾಸ್ಯೇನ (ಹಯಗ್ರೀವೇಣ) ಚತುರ್ಮುಖಂ ಪ್ರತಿ॥ ದೀಕ್ಷಾಹಿದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಾಂತರ ಭೇದತಃ॥ ಜ್ಞಾನಾಮುಭಯಿಾ ತತ್ರ ಬಾಹ್ಯೇವಾಜ್ಞಾನಿನಾಂ ಭವೇತ್ ॥ ಅಯಂ

ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ ॥ ಸರ್ವೋತ್ತ್ಕೃಷ್ಟೋಽಯಮೇ ವೈಕಃ ತದೀಯೋಽಹಂ ಸ ಮೇ ಪತಿಃ॥ ಇತಿ ಜ್ಞಾನಂ ನಿಶ್ಚಿತಂ ಯತ್ಸಾ ದೀಕ್ಷಾ ಭ್ಯಂತರಾ ಮತಾ। ನಾಮಮುದ್ರಾದಿನಾ ದೇಹಾ ವಹ್ನಿನಾ ಚ ಮೃದಾಂಕಶಮ್॥ ಸ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಂ ಜ್ಞಾನಿನಾಮಪಿ ॥ ೧೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಿಷ್ಣು ರಹಸ್ಯೇ ತು ಪಂಚಮೇ – "ವೇದಾಃ ಶ್ರುತಯ ಇತ್ಯುಕ್ತಾಃ ತಸ್ಯಾರ್ಥಃ ಸ್ಮೃತಯ ಸ್ತ್ವಿತಿ । **ಶ್ರುತಿ ಸ್ಮೃತೀ ಉಭೇ ನೇತ್ರೇವಿಪ್ರಾಣಾಂ ಪರಿಕೀರ್ತಿತೇ ॥ ಏತೇನ ಹೀನಃ ಕಾಣಃ ಸ್ಯಾತ್ ದ್ವಾಭ್ಯಾಂ ಅಂಧಃ ಪ್ರಕೀರ್ತಿತಃ।** ಅತೋ ವಿಪ್ರೇಣ ಕರ್ತವ್ಯಂ ಶೀಲನಂ ವೇದತಂತ್ರ ಯೋಃ ॥ ಅನುಷ್ಠಾನಂ ತಥಾ ಕುರ್ಯಾತ್ ಉಭಯೋಸ್ತು ವಿಶೇಷತಃ । ತಂತ್ರೇಷು ದೀಕ್ಷಿತಾಃ ಏವ ಪ್ರೋಚ್ಯಂತೇ ಹ್ಯಧಿಕಾರಿಣಃ ॥ ದಿಕ್ಷಾ ಹಿ ದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಂತರ ಭೇದತಃ । ಜ್ಞಾನಿನಾಂ ಉಭಯೀ ತತ್ರ ಬಾಹ್ಯೈವಾಜ್ಞಾನಿನಾಂ ಭವೇತ್ ಅಯಂ ಸರ್ವೇಷ್ಟದಾತ ಮೇ ಸರ್ವಾರಿಷ್ಟ ನಿವಾರಕಃ ॥ ಸರ್ವೋತ್ತ್ಕೃಷ್ಟೋಽಯಮೇವೋಕ್ತಃ ತದೀಯೋಽಹಂ ಸ ಮೇ ಪತಿಃ ॥ ಇತಿ ಜ್ಞಾನಂ ನಿಶ್ಚಿತಂ ಯತ್ ಸಾ ದೀಕ್ಷಾಽಭ್ಯಂತರಾ ಮತಾ ॥" ಇತ್ಯುಕ್ತಾಭಿಪ್ರಾಯಮಾಹ– "ಎರಡು" ಇತಿ ॥ ೧೮ ॥

## ಕನ್ನಡಾರ್ಥ

ಶ್ರೀ ವಿಷ್ಣು ರಹಸ್ಯದಲ್ಲಿ ಐದನೆಯ ಅಧ್ಯಾಯದಲ್ಲಿ ವೇದಗಳು ಶ್ರುತಿಗಳೆನಿಸುತ್ತವೆ. ವೇದಗಳ ಅರ್ಥಗಳನ್ನೇ ಸ್ಮೃತಿಗಳು ವಿವರಿಸುತ್ತವೆ. ಈದದರಿಂದ ಶ್ರುತಿ ಸ್ಮೃತಿಗಳೆರಡೂ ಬ್ರಾಹ್ಮಣರಿಗೆ ಎರಡು ಕಣ್ಣುಗಳೆಂದು ಕಳಿಸಿಕೊಳ್ಳುತ್ತವೆ. ಒಂದರಿಂದ ರಹಿತನು ಕಾಣನೆಂದೂ (ಒಕ್ಕಣ್ಣ-ಮೆಳ್ಳ) ಎರಡರಿಂದಲೂ ರಹಿತನು ಅಂಧ (ಕುರುಡ) ನೆಂದೂ ಕರೆಯಲ್ಪಡುತ್ತಾನೆ. ಈದರಿಂದ ವಿಪ್ರನು ವೇದ ಹಾಗೂ ತಂತ್ರಗಳ ಪರಿಶೀಲನವನ್ನು ಅವಶ್ಯಾಗಿ ಮಾಡಲೇಬೇಕು. ಎರಡರಲ್ಲಿ ಹೇಳಿದಂತೆ ಅನುಷ್ಠಾನವನ್ನೂ ಮಾಡಬೇಕು. ತಂತ್ರೋಕ್ತ ಕರ್ಮಾನುಷ್ಠಾನದಲ್ಲಿ ದೀಕ್ಷೆಯುಳ್ಳವರೇ ಅಧಿಕಾರಿಗಳು. ದೀಕ್ಷೆಯಲ್ಲಿ "ಬಾಹ್ಯ" - "ಅಂತರ"ಗಳೆಂದು ಎರಡು ವಿಧವಿದೆ. ಜ್ಞಾನಿಗಳಿಗೆ ಎರೂ ತರಹದ ದೀಕ್ಷೆಗಳಿರುತ್ತವೆ. ಅಜ್ಞಾನಿಗಳಿಗೆ ಬಾಹ್ಯ ದೀಕ್ಷೆಯೇ ಇರುದೆ.

"ಹರಿಯು ಸರ್ವೇಷ್ಟದಾಯಕನು; ಸರ್ವಾರಿಷ್ಟ ನಿವಾರಕನು ; ಸರ್ವೋತ್ತಮನು ಶ್ರೀ ಹರಿಯೇ! ಅವನ ಭಕ್ತನು ನಾನು" ಎಂಬ ದೃಢವಾದ ನಿಶ್ಚಯ ಜ್ಞಾನವು ಅಂತರ್ದೀಕ್ಷೆಯೆನಿಸುತ್ತದೆ" ಎಂದು ಹೇಳಿರುತ್ತದೆ. ಇದರ ಅಭಿಪ್ರಾಯವನ್ನೇ ವಿವರಿಸುತ್ತಾರೆ. "ಎರಡು" ಎಂಬ ಪದ್ಯದಿಂದ ॥ ೧೮ ॥

**ಅವತರಣಿಕಾ :**—ಹಿಂದಿನ ಪದ್ಯದಲ್ಲಿ ವಿವರಿಸಿದ ಅಂತರ ದೀಕ್ಷಾ ಜ್ಞಾನ ಪ್ರದನಾದ ಶ್ರೀ ಹರಿಯು ಅನಂತ ಗುಣೋತ್ಕರ್ಷಮಹಿಮಾ ಪೂರ್ವಕ ಸ್ತೋತ್ರ ಮಾಡಲು ಶ್ರೀ ಹರಿಯು, ಭವಾಬ್ಧಿಯಿಂದ ದಾಟಿಸುವನೆಂದು ದೃಷ್ಟಾಂತ ಪೂರ್ವಕ ಸ್ತೋತ್ರ ಮಾಡುತ್ತಾರೆ.

**ಹೇಯ ವಸ್ತುಗಳಿಲ್ಲ(ಊ)ವು ಉಪಾ ।**
**ದೇಯ ವಸ್ತುಗಳಿಲ್ಲ ನ್ಯಾಯಾ ।**
**ನ್ಯಾಯ ಧರ್ಮಗಳಿಲ್ಲ ದ್ವೇಷಾಸೂಯೆ ಮೊದಲಿಲ್ಲ ॥**
**ತಾಯಿತಂದೆಗಳಿಲ್ಲ ಕಮಲದ ।**
**ಳಾಯತಾಕ್ಷನೆಗೆಯೆನಲು ಈಸುವ (ಈಸೋ) ।**
**ಕಾಯಿಯೆಂದದಿ ಮುಳಗಗೊಡದೆ ಭವಾಬ್ಧಿದಾಟಿಸುವ ॥ ೧೯ ॥**

**ಪದ್ಯಾರ್ಥ:**—"ಹೇಯೋಪಾದೇಯ ರಹಿತಃ" ಹೇಯ=ತ್ಯಾಜ್ಯ ವರ್ಜ್ಯ ಅಸಹ್ಯ, ಹೀನ, ಇತ್ಯಾದಿ ದೋಷಗಳು, ಬಿಡತಕ್ಕವು, ವಸ್ತುಗಳು=ಪದಾರ್ಥಗಳು ಪರಮಾತ್ಮಗೆ ಇಲ್ಲೇ ಇಲ್ಲ. ದೋಷ ದೂರ, ಉಪಾದೇಯ = ಹೊಸದಾಗಿ ಸಂಪಾದನೆ ಮಾಡಿ ಸ್ವೀಕರಿಸಲು ಯೋಗ್ಯ, ಉತ್ತಮವಾದ, ಉಪಯುಕ್ತ ವಸ್ತುಗಳೇ ಇಲ್ಲ. ಏಕೆಂದರೆ, ಶ್ರೀ ಹರಿಯು ಜ್ಞಾನಾನಂದಾದಿ ಪೂರ್ಣನು, ದೋಷ ದೂರ ಸುಖಪೂರ್ಣನು, ನ್ಯಾಯಾನ್ಯಾಯ ಧರ್ಮಗಳಿಲ್ಲ, **ನ್ಯಾಯ**=ಉಚಿತ, ಯೋಗ್ಯ ಸಮಂಜಸ, ನೀತಿ ನಿಯಮಗಳು, **ಅನ್ಯಾಯ**=ಅನುಚಿತ, ಅಯೋಗ್ಯ, ಅಸಮಂಜಸ, ಅನೀತಿ, ಅನಿಯಮಗಳೆಂಬ **ಧರ್ಮಗಳಿಲ್ಲ**=ವಿಹಿತಾ ವಿಹಿತ ಕಾರ್ಯ, ಸ್ವಭಾವ, ಒಬ್ಬರಿಗೆ ಚಲೋಮಾಡುವದು ಒಬ್ಬರಿಗೆ ಕೆಟ್ಟದು ಮಾಡುವ ಸ್ವಭಾವವಿಲ್ಲವೆಂದರೆ, ಶ್ರೀಹರಿ ಶೂನ್ಯನೇ ಹೇಗೆ? ಇಲ್ಲ, ತ್ರಿವಿಧ ಜೀವರ ಸ್ವಭಾವ ಸ್ವರೂಪ ಯೋಗ್ಯತೆಯಂತೆ ಸರ್ವರಿಗೆ ಸಮನಾಗಿ ಯೋಗ್ಯತೆ ತಕ್ಕ ಫಲವನ್ನು ಕೊಡುವವನು. ದ್ವೇಷ ಅಸೂಯೆ

ಮೊದಲಿಲ್ಲ=ಒಬ್ಬರಲ್ಲಿ ದ್ವೇಷ ಇನ್ನೊಬ್ಬರಲ್ಲಿ ಹೊಟ್ಟೆ ಕಿಚ್ಚು ಮಾಡುವದಂತೂ ಶ್ರೀ ಹರಿಯಲ್ಲಿ ಮೊದಲೇ ಇಲ್ಲ. "ಸಮಂ ಸರ್ವೇಷು ಭೂತೇಷು" ಎಂದು ಗೀತಾ ವಾಕ್ಯ, ಕಮಲದಳಾಯತಾಕ್ಷಗೆ = ಕಮಲದೋಪಾದಿ ವಿಸ್ತ್ರತವಾದ ನೇತ್ರ ಉಳ್ಳ ಕರುಣಾ ದೃಷ್ಟಿಯುಳ್ಳ ಶ್ರೀ ಹರಿಗೆ ತಾಯಿತಂದೆಗಳಿಲ್ಲ=ಜನನ ವನ್ನು ಕೊಡುವ ತಾಯಿ ತಂದೆಗಳಿಲ್ಲವೆಂದರೆ ಜನನ ಮರಣ ರಹಿತ ಅನಾದ್ಯ ನಂತ ಕಾಲದಲ್ಲಿ ಒಂದೇ ರೀತಿ ಇರುವ ಸನಾತನ ಪುರುಷನೇ ಎಂದು, ಯೆನಲು=ಸ್ತೋತ್ರ ಮಾಡಲು, ಈಸುವ ಕಾಯಿಯೆಂದದಿ=ನೀರಿಲ್ಲಿ ಮುಳಗ ಗೊಡದೆ ತೇಲಿಸುವ ಕುಂಬಳಕಾಯಿ ಬುರುಡೆಯಂತೆ ಸಂಸಾರ ಭವಾಬ್ಧಿಯಲಿ ಮುಳುಗದಂತೆ ಸಂಸಾರ ಸಮುದ್ರ ದಾಟಿಸುವನು.

**ಭಾವಸೂಚನ:**—ಹೇಯೇತಿ ॥ ಶ್ರೀ ಪರಮ ರಕ್ಷಕ ॥ ಈಸೋ ಕಾಯಿ=ಈಸ ಗುಂಬಳಕಾಯಿ ॥ ೧೯ ॥

## ವ್ಯಾಸದಾಸ ಸಿದ್ಧಾಂತ ಕಮುದೀ

"ಹೇಯ" ಇತಿ ॥ ೧೯ ॥

## ಕನ್ನಡಾರ್ಥ

"ಹೇಯೋಪಾದೇಯ ರಹಿತನು; ಚಿಂತಾ ಸಂತಾಪ ಲೇಪ ಜನ್ಮ-ಮರಣ ಮುಂತಾದ ಸಕಲ ದೋಷ ರಹಿತನು. ನಿರ್ವ್ಯಾಜ ಕರುಣಿಯು, ಭವಾಬ್ಧಿತಾರಕನು" ಎಂದು ಶ್ರೀ ಹರಿಯನ್ನು ಸ್ತುತಿಸುತ್ತಾರೆ, "ಹೇಯ" ಎಂಬ ಪದ್ಯದಿಂದ. ॥ ೧೯ ॥

**ಅವತರಣಿಕಾ:**— ಹಿಂದೆ ೧೮ನೇ ಪದ್ಯದಲ್ಲಿ ಹೇಳಿದ, ಅಜ್ಞಾನಿ ಯಾದರೂ, ಬಾಹ್ಯ ದೀಕ್ಷಾ ಉಳ್ಳವನಾಗಿ, "ಬಾಹ್ಯೇ ವಾಜ್ಞಾನಿನಾಂ ಭವೇತ್" ಎನ್ನುವಂತೆ ಬಾಹ್ಯ ದೀಕ್ಷಾದಿಂದ, ಸರ್ವ ಸ್ವಾಮಿ ಮಮ ಸ್ವಾಮಿ ಎಂದು ಯೆನಲು, ಸಂಸಾರದಿಂದ ತರಣ ಮಾಡಿ ಪೊರವನೆಂದು ಬಾಹ್ಯದೀಕ್ಷಾ ಅತ್ಯಾವಶ್ಯವೆಂದು ಶಿಕ್ಷಿಸುತ್ತಾರೆ.

**ಮಂದನಾದರು ಸರಿಯೆ ಗೋಪೀ ।**
**ಚಂದನ ಶ್ರೀ ಮುದ್ರೆಗಳ ನಲು ।**
**ನಿಂದ ಧರಿಸುತ ಶ್ರೀ ತುಲಸಿ ಪದುಮಾಕ್ಷಿ ಸರಗಳನು ॥**

**ಕಂಥರದ ಮಧ್ಯದಲಿ ಧರಿಸಿ ಮು ।**
**ಕುಂದ ಶ್ರೀ ಭೂರಮಣ ತ್ರಿಜಗ ।**
**ದ್ವಂದ್ಯ[ಸರ್ವ ಸ್ವಾಮಿ ಮಮ ಕುಲ ದೈವವೆನೆ ಪೊರೆವ ॥ ೨೦॥**

**ಪದ್ಯಾರ್ಥ :**—ಮಂದನಾದರು ಸರಿಯೆ=ತಿಳುವಳಿಕೆ ಇಲ್ಲದ ಶಾಸ್ತ್ರಾರ್ಥ ವಿಚಾರವನ್ನರಿಯದ ಅಜ್ಞಾನಿಯಾದರೂ ಆಗಲಿ, ಗೋಪಿಚಂದನ ಶ್ರೀ ಮುದ್ರೆಗಳ=ಬಾಹ್ಯ ದೀಕ್ಷಾವೆನಿಸುವ ವೈಷ್ಣವ ಚಿಹ್ನವುಳ್ಳ ಗೋಪಿಚಂದನದಿಂದ ದ್ವಾದಶನಾಮ, ಚಕ್ರ ಶಂಖಾದಿ ಪಂಚ ಮುದ್ರೆಗಳನ್ನು ನಲುವಿಂದ ಧರಿಸುತ= ಭಕ್ತಿಯಿಂದ ಪ್ರೀತಿಯಿಂದ ಧಾರಣ ಮಾಡಿ, ದ್ವಾದಶನಾಮ ಮುದ್ರೆಗಳನ್ನು ಹಚ್ಚಿಕೊಂಡು, ಕಂಥರದ ಮಧ್ಯದಲಿ=ಕೊರಳಿನ ನಡುವೆ, ಕೊರಳಿನಲ್ಲಿ ಪದುಮಾಕ್ಷಿ=ಕಮಲಾಕ್ಷಿಮಣಿಗಳು, ಶ್ರೀ ತುಲಸಿಮಣಿಯ ಸರಗಳನ್ನು ಧರಿಸಿ= ಧಾರಣ ಮಾಡಿ ಹಾಕಿಕೊಂಡು, ಮೂಢ ಭಕ್ತಿಯಿಂದಾದರೂ, ಹರಿ ಸರ್ವೋತ್ತಮನೆಂದು ಹರಿಯ ಹಾವನ್ನು ಪಿಡಿವೆನೆಂಬ ದೃಢವಾದ ಮೂಢ ಭಕ್ತಿಯಿಂ-ದಾದರೂ, ಮುಕುಂದ=ಮುಕ್ತಿಂ ದದಾತೀತಿ. ಮುಕುಂದ, ಶ್ರೀಭೂರಮಣ= ಶ್ರೀಭೂದೇವಿಯರಿಗೆ ರಮಣದಿಂದ ಸುಖಕೊಡುವ ಹರಿಯು, ತ್ರಿಜಗದ್ವಂದ್ಯ= ಮೂರು ಲೋಕದಿಂದ ಪೂಜಿತನಾದವ ಶ್ರೀ ಹರಿಯೆ, ಸರ್ವಸ್ವಾಮಿ=ಸರ್ವರಿಗೆ ಒಡೆಯನೇ, ಮಮ ಕುಲದೈವವೆನೆ=ಎನ್ನ ವಂಶಕ್ಕೆ ಕುಲಕ್ಕೆ ದೇವನು ಹರಿ ಸರ್ವೋತ್ತಮನೆಂದು ಇಷ್ಟು ಉಚ್ಚಸ್ವರದಿಂದ ಉಚ್ಚಾರಮಾಡಿದರೆ, ಪೊರೆವ= ರಕ್ಷಿಸುವನು, ಬಾಹ್ಯದೀಕ್ಷೆಯೊಡನೆ ಹರಿನಾಮ ಸ್ಮರಣೆಯು ಸಹ ಬಾಹ್ಯ ದೀಕ್ಷೆಯಲ್ಲಿ ಸೇರಿದೆಂದು ದಾಸರ ಹೃದಯ, ಶಾಸ್ತ್ರಸಮ್ಮತ.

**ಭಾವಸೂಚನ :**—ಮಂದೇತಿ ॥ ನಲುವಿಂದ=ಪ್ರೀತಿ. ಯೆನೆ=ಅಂತಿಕಲು (ಅನ್ನುತ್ತಿರಲು) ॥ ೨೦ ॥

**ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ**

"ಮಂದ" ಇತಿ ॥ "ನಲುವಿಂದ"–ಪ್ರೀತಿಯಿಂದ ॥ ೨೦॥

## ಕನ್ನಡಾರ್ಥ

ಜ್ಞಾನಿ-ಅಜ್ಞಾನಿಗಳಿಗೆಲ್ಲರಿಗೂ ಸಾಧಾರಣವಾಗಿರುವ ಬಾಹ್ಯದೀಕ್ಷೆಯನ್ನು ತಿಳಿಸುತ್ತಾರೆ. "ಮುಂದನಾದರು" ಎಂಬ ಪದ್ಯದಿಂದ. ತಪ್ತಮುದ್ರಾಗಳು, ದ್ವಾದಶೋರ್ಧ್ವ ಪುಂಡ್ರಗಳು, ಶ್ರೀ ಮುದ್ರೆಗಳು ಮತ್ತು ಗೋಪಿಚಂದನ ಇವುಗಳನ್ನು ದೇಹದಲ್ಲಿ ಧರಿಸುವದು, ಬಾಹ್ಯದೀಕ್ಷೆಯೆನಿಸುತ್ತದೆ. ಈ ದೀಕ್ಷೆಯು ಜ್ಞಾನಿಗಳಿಗೂ, ಅಜ್ಞಾನಿಗಳಿಗೂ ಅವಶ್ಯವಾಗಿಬೇಕು. ॥ ೨೦ ॥

**ಅವತರಣಿಕಾ** :—ಬಾಹ್ಯ ದೀಕ್ಷೆಯನ್ನು ಧರಿಸಿ ಮುಕುಂದನೆ ಸರ್ವೋತ್ತಮ ರಕ್ಷಕನೆಂದರೆ ಪೊರೆವನಲ್ಲದೇ ಸ್ವತಂತ್ರನಾದ ಹರಿಯೆ ಇಲ್ಲ. ನಾನೇ ಪ್ರಭು, ಸ್ವತಂತ್ರನಾದವನಿಗೆ ದೇಹನಿಷ್ಠ ಧರ್ಮ, ಜೀವನಿಷ್ಠ ಧರ್ಮ ಪ್ರೇರಕನಾದ ಹರಿಯ ಅಧೀನ ಆಗಿಹೆಂಬುದು ದೃಷ್ಟಾಂತದಿಂದ ತೋರಿಸುತ್ತಾರೆ.

**ಪ್ರಾಯ ಧನಮದದಿಂದ ಜನರಿಗೆ।**
**ನಾಯಕ ಪ್ರಭುವೆಂಬಿ ಪೂರ್ವದಿ।**
**ತಾಯಿ ಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯರಲ್ಲೆ ॥**
**ಕಾಯ ನಿನ್ನನು ಬಿಟ್ಟುಪೋಗಲು।**
**ರಾಯ ನೀನೆಂಬುವ ಪ್ರಭುತ್ವ ಪ।**
**ಲಾಯನವನೈದಿತು ಸಮೀಪದಲಿದ್ದರದು ತೋರು ॥ ೨೧ ॥**

**ಪದಾರ್ಥ** :—ಎಲೋ ಮನುಜನೆ ಕೇಳುಎಂದು (ಅಧ್ಯಾಹಾರಮಾಡಿಕೊಂಡು) ಪ್ರಾಯ=ಯೌವನದಿಂದ ದೇಹಕಾಂತಿ, ಧನ=ದ್ರವ್ಯ, ಕನಕ, ಪಶು, ಧಾನ್ಯ, ಮನೆ ಮುಂತಾದವು ದೇವರು ಕೊಟ್ಟಾಗ್ಗೆ, ಇತರ ಜನರಿಗೆ=ನಿನ್ನಗಿಂತಲೂ ಅವರ ಭೃತ್ಯಸೇವಕರು ನಿನ್ನಿಂದ ದ್ರವ್ಯ ಆಕಾಂಕ್ಷಿಸುವರಿಗೆ, ನಾಯಕ=ನಡೆಸುವವ, ಮುಂದಾಳು, ಮುಖ್ಯಸ್ಥ, ಪ್ರಭು=ಸಮರ್ಥ, ಸ್ವಾಮಿ, ಒಡೆಯ, ಎಂಬಿ=ಎನಿಸಿಕೊಳ್ಳುವಿ. ಈ ದೇಹ ಪುಟ್ಟದ್ದಕ್ಕಿಂತ ಮೊದಲಿಗೆ ನೀನು, ತಾಯಿ ಪೊಟ್ಟೆಯೊಳಿರಲು=ತಾಯಿಯ ಗರ್ಭದಲ್ಲಿ ಇದ್ದಾಗ್ಗೆ, ನಿನಗೆ ಜನರು ಪ್ರಭು=ಒಡೆಯ ಸ್ವಾಮಿಯೆಂದು, ಏಕೆ ಕರೆಯರಲ್ಲೆ=ಯಾತಕ್ಕೆ ಪ್ರಭುವೆಂದು ಕರೆಯುವದಿಲ್ಲ ಹೇಳು. ಮತ್ತು ಕಾಯ ನಿನ್ನನು ಬಿಟ್ಟು ಪೋಗಲು ಈ ಸ್ಥೂಲ

ದೇಹ ಬಿಟ್ಟು ನೀನು ಹೋದ ಮೇಲೆ (ಮರಣಾನಂತರ) ರಾಯ ನೀನೆಂಬುವ ಪ್ರಭುತ್ವ=ನೀನು ದೊರೆ, ಅರಸು ಎಂಬುವ ಸ್ವಾಮಿತ್ವ, ಪಲಾಯನವನೈದಿತು= ದೂರ ಓಡಿಯೇ ಹೋಯಿತಲ್ಲವೆ? ಸಮೀಪದಲ್ಲಿದ್ದರದು ತೋರು=ರಾಯ ಪ್ರಭುತ್ವ ನಾಕಯನೆಂಬೋದು ನಿನ್ನ ಹತ್ತಿರ ಇರುವದೇ ತೋರು=ತೋರಿಸು ಹೇಳು ನೋಡುವ, ಮುಖ್ಯ ಜನನ-ಮರಣ-ಸ್ಥಿತಿ ಮೂರು ಶ್ರೀಹರಿಯ ಅಧೀನ. ಸ್ಥಿತಿಕಾಲದಲ್ಲಿ ಹರಿಯ ಪಾಲನೆಯಿಂದ ಸಕಲ ನಾಯಕ ಪ್ರಭುತ್ವ ಪ್ರಾಪ್ತಿ. ಜಡ ದೇಹಕ್ಕೆ, ಜೀವನಕ್ಕೆ ಎಂದೂ ಪ್ರಭುತ್ವವಿಲ್ಲೆಂಬ ಭಾವ.

**ಭಾವಸೂಚನ :—**ಪ್ರಾಯೇತಿ ॥ ಮಯ್ಯೇವ ದತ್ತಸ್ವಾತಂತ್ರ್ಯಂ ಕೇವಲೇಷ್ವಪಿ ಕರ್ಮಸು ॥ ತಾವನ್ಮಾತ್ರೇಣ ಸಮ್ಮುಗ್ಧಾಃ ಮನ್ಮಾಯಾಮುಷ್ಟ ಚೇತನಾಃ ॥ ಎಂಬ ಬಿಂಬಕ್ರಿಯಾನುಸಂಧಾನಪೂರ್ವಕ ನಾನು ಅಸ್ವತಂತ್ರ ನೆಂದು ಸಾಧನಮಾಡು ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಾಯ" ಇತಿ ॥ ೨೧ ॥

## ಕನ್ನಡಾರ್ಥ

ಬಿಂಬರೂಪಿಯಾದ ಪರಮಾತ್ಮನ ಪ್ರಭುತ್ವವನ್ನು ಜೀವನು ಯೌವನ ಧನ ಮುಂತಾದ ಮದ, ಮಮಕಾರ, ಅಹಂಕಾರ ಮೂಲಕವಾಗಿ ತನ್ನಲ್ಲಿ ಆರೋಪಿಸಿಕೊಳ್ಳುತ್ತಾನೆ ಎಂಬುದಾಗಿ ನಿರೂಪಿಸುತ್ತಾರೆ. "ಪ್ರಾಯ" ಎಂಬ ಪದ್ಯದಿಂದ. ॥ ೨೧ ॥

**ಅವತರಣಿಕಾ :—**ಶ್ರೀಹರಿಯೇ ಈಶ ಸ್ವಾಮಿ ಒಡೆಯ ಸರ್ವಸ್ವತಂತ್ರ, ಬ್ರಹ್ಮಾದಿ ಸಕಲ ಜೀವರು ದಾಸರು. ಈಶನ ಆಧೀನರು ಅಸ್ವತಂತ್ರರೆಂದು ತಿಳಿಯುವದೇ ಮುಕ್ತಿ. ಸೋಽಹಂ ಉಪಾಸನೆಮಾಡುವ ನಾನೇ ಸ್ವತಂತ್ರ ನೆಂಬುವ ದೇಹ, ದೇಶ, ಕಾಲಕ್ಲೇಶಗಳು ಬಂದರೆ ಏಕೆ ಪರಿಹರಿಸಲು ಶಕ್ತನಲ್ಲ ವೆಂದು ಉಪದೇಶಿಸುತ್ತಾರೆ.

**ವಾಸುದೇವೇಕಪ್ರಕಾರದಿ ।**
**ಈಶನೆನಿಸುವ ಬ್ರಹ್ಮ ರುದ್ರ ಶ ।**
**ಚೀಶ ಮೊದಲಾದಮರರೆಲ್ಲರು ದಾಸರೆನಿಸುವರು ॥**

**ಈ| ಸುಮಾರ್ಗವ ಬಿಟ್ಟು ಸೋಹ।**
**ಮುಪಾಸನೆಯಗೈವ ನರ ದೇಹಜ।**
**ದೈಹಿಕ ಕ್ಲೇಶಗಳು ಬರಲವನೇಕೆ ಬಿಡಸಿಕೊಳೆ ॥ ೨೨ ॥**

**ಪದ್ಯಾರ್ಥ** :—ವಾಸುದೇವ=ವಾಸನಾದ್ವಾಸುದೇವೋಽಸಿ ಸರ್ವ ಜಗತ್ತಿನಲ್ಲಿ ವಾಸಮಾಡಿರುವನೂ, ಮುಕ್ತಿಪ್ರದಾತನೂ ಆದ ಶ್ರೀಹರಿಯು, ಏಕಪ್ರಕಾರದಿ=ಒಂದೇ ಸಮನಾಗಿ ಸರ್ವ ದೇಶ ಕಾಲ ಸರ್ವಾವಸ್ಥಾಗಳಲ್ಲಿ ಸರ್ವರಿಗೆ, ಈಶ=ಒಡೆಯ ಸ್ವಾಮಿ ಎಂದು ಕರೆಸುತ್ತಾನೆ. ಬ್ರಹ್ಮ=ಚತುರ್ಮುಖ ಬ್ರಹ್ಮದೇವರು, ರುದ್ರ=ಮಹಾದೇವರು, ಶಚೀಶ=ಶಚೀದೇವಿಯ ಪತಿಯಾದ ಇಂದ್ರದೇವರೆ ಮೊದಲಾದಮರರೆಲ್ಲರು= ಮೊದಲಾಗಿ ಸರ್ವದೇವತೆಗಳು, ದಾಸರೆನಿಸುವರು,ಭೃತ್ಯರು ಶ್ರೀಹರಿಯ ಅಧೀನರು ದಾಸರೆಂದು, ದಂಸಯತೇ ದಾಸ=ಒಡೆಯನ ಸೇವೆ ನಿರೀಕ್ಷಣೆ ಮಾಡುವವ, ನೌಕರ=ಚಾಕರ, ಆಳು ಭೃತ್ಯರೆಂದು ಕರೆಸುವರು. "ದಾಸ್ಯಮೇವ ಪರೋ ಧರ್ಮಃ ದಾಸ್ಯಮೇವ ಪರಂ ಹಿತಮ್ ॥ ದಾಸ್ಯೇನೈವ ಪರಾ ಮುಕ್ತಿಃ ಅನ್ಯಥಾ ನಿರಯಂ ವ್ರಜೇತ್ ॥ ಎಂಬಂತೆ, ಈ ಸುಮಾರ್ಗವ ಬಿಟ್ಟು=ಈ ಸುಲಭವಾದ ಒಳ್ಳೇ ಮಾರ್ಗ ಹಾದಿಯನ್ನು ಬಿಟ್ಟು, ಸೋಹಮುಪಾಸನೆಯಗೈವನರ=ನಾನೇ ದೇವರು ಎಂದು "ಸಿದ್ಧೋಽಹಂ ಬಲವಾನಸ್ಮಿ" ಎಂದು ತಿಳಿದು "ಅಹಂ ಬ್ರಹ್ಮಾಸ್ಮಿ" ಎಂದು ಉಪಾಸನೆ ಮಾಡುವ ನರ=ಮನುಜನು, ದೇಹಜ=ದೇಹದಿಂದ ಒದಗುವ ನಾನಾ ರೋಗಗಳು, ದೈಹಿಕ ಕ್ಲೇಶಗಳು=ದೇಹ ಸಂಬಂಧದಿಂದ ಒದಗುವ ನಾನಾ ದುಃಖಗಳು, ಬರಲು=ತನ್ನಿಚ್ಛೆಯಿಂದ ತಾನೆ ಒದಗಲು, ಅವನ್ನು ಏಕೆ ಬಿಡಸಿಕೊಳ=ರೋಗಾದ್ಯುಪದ್ರವಗಳನ್ನು ಯಾತಕ್ಕೆ ಪರಿಹರಿಸಿಕೊಳಲು ಸಮರ್ಥನಾಗುವದಿಲ್ಲ ಹೇಳು ? ಜೀವರು ಅಸ್ವತಂತ್ರರು. ಪರಾಧೀನರಲ್ಲಿ ಈ ಶಕ್ತಿ ಇಲ್ಲೆಂತ ಸಚ್ಛಾಸ್ತ್ರಮರ್ಯಾದಾ.

**ಭಾವಸೂಚನ** :—ವಾಸುದೇವೇತಿ ॥ ೨೨ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈಶಾವಾಸ್ಯಮ್" ಇತ್ಯಸ್ಯಾರ್ಥಮಾಹ—"ವಾಸುದೇವ" ಇತಿ ॥ ೨೨ ॥

### ಕನ್ನಡಾರ್ಥ

"ಈ ಸಮಸ್ತವಾದ ಚೇತನಾಚೇತನಾತ್ಮಕ ವಿಶ್ವವು ಈಶನಾದ ಶ್ರೀಹರಿಯ ಆವಾಸವಾಗಿರುವದು; ಎಲ್ಲವೂ ಆವನ ವಶದಲ್ಲಿಯೇ ಇದ್ದು, ಆವ

ನಿಂದ ಓತಪ್ರೋತವಾಗಿ ವ್ಯಾಪ್ತವಾದುದು" ಎಂದು ಉಪನಿಷತ್ತಿನ ಅರ್ಥವನ್ನು ನಿರೂಪಿಸುತ್ತಾರೆ—"ವಾಸುದೇವನು" ಎಂಬ ಪದ್ಯದಿಂದ. ॥ ೨೨ ॥

**ಅವತರಣಿಕಾ** :—ವಾಸುದೇವನು, ಈಶನಾಗಿರೆ ಆತನಲ್ಲಿರುವ ಗುಣಗಳೇನು ? ಆ ಗುಣಗಳ ವಿವರವೇನು ? ಜೀವರಲ್ಲಿರುವ ಗುಣ ಯಾವವು ? ಎಂಬ ವನ್ನು ಶ್ರೀಹರಿಯ ಗುಣೋತ್ಕರ್ಷಣಪೂರ್ವಕ ಸ್ತೋತ್ರಗೈಯ್ಯುತ್ತಾರೆ.

**ಆ ಪರಬ್ರಹ್ಮನಲಿ ತ್ರಿಜಗ ।**
**ದ್ವ್ಯಾಪಕತ್ವ ನಿಯಾಮಕತ್ವ ।**
**ಸ್ಥಾಪಕತ್ವ ವಶಿತ್ವ ಈಶತ್ವಾದಿ ಗುಣಗಳಿಗೆ ॥**
**ಲೋಪವಿಲ್ಲೇಕಪ್ರಕಾರ ಸ್ವ ।**
**ರೂಪವೆನಿಪವು ಸರ್ವ ಕಾಲದಿ ।**
**ಪೋಪವಲ್ಲವು ಜೀವರಿಗೆ ದಾಸತ್ವದೋಪಾದಿ ॥ ೨೩ ॥**

**ಪದ್ಯಾರ್ಥ** :—ಆ ಪರಬ್ರಹ್ಮನಲಿ = ಆ ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್ ॥ ಎಂಬುವ ವಚನದಂತೆ ಆ ನಿತ್ಯವಾದ ಶ್ವೇತ ದ್ವೀಪ ಅನಂತಾಸನ, ವೈಕುಂಠಾದಿ ಲೋಕಗಳಲ್ಲಿಪ್ಪ, ಪರಬ್ರಹ್ಮ=ಪ್ರಾಧಾನ್ಯೇನ ಚತುರ್ಮುಖಾದಿ ಸ್ರಷ್ಟೃತ್ವ, ಬ್ರಹ್ಮ (ವಿದ್ಯಾಧಿರಾಜೀಯ,) ಪರ=ಉತ್ತಮ ಶ್ರೇಷ್ಠವಾದ ಗುಣಗಳಿಂದ ಪೂರ್ಣನಾದವನು ಬ್ರಹ್ಮನೆಂದೂ, ವೇದದಲ್ಲಿ ಹೇಳುತ್ತದೆ. ಇಂತಹ ಪರಬ್ರಹ್ಮನಲ್ಲಿರುವ ಉತ್ಕೃಷ್ಟವಾದ ಗುಣಗಳು, ತ್ರಿಜಗದ್ವ್ಯಾಪಕತ್ವ=ಮೂರುಲೋಕ, ಸಮಸ್ತ ಜಡಜಂಗಮಜೀವರಲ್ಲಿ ವ್ಯಾಪ್ತನಾಗಿರುವವನು, ನಿಯಾಮಕತ್ವ=ಸಕಲರಿಗೂ ಆಜ್ಞೆ, ಪ್ರೇರಣೆ ಮಾಡುವ ಒಡೆಯತನ, ಸಂಚಾಲಕತ್ವ, ಸ್ಥಾಪಕತ್ವ=ಇರಿಸುವಿಕೆ, ಪಾಲನೆ ಮಾಡುವಿಕೆ, ವಶಿತ್ವ=ತನ್ನ ಅಧೀನದಲ್ಲಿ ಇರಿಸುವಿಕೆ, ಈಶತ್ವ ಒಡೆತನ, ಸರ್ವಸ್ವಾಮಿತ್ವವೇ, ಆದಿ=ಮೊದಲಾದ ಗುಣಗಳು (ಹರಿಯ ಸರ್ವಸ್ವತಂತ್ರತೆ ನಿರ್ದೋಷಿತ್ವ ಗುಣಗಳು) ಇವುಗಳಿಗೆಲ್ಲ ಲೋಪವಿಲ್ಲ. ಏಕಪ್ರಕಾರ=ಒಂದೂ ಕಾಲವಲ್ಲಿ ಈ ಅನಂತ ಗುಣಗಳಿಗೆ, ಲೋಪ=ಕೊರತೆ ಕುಂದುಗಳಿಲ್ಲದೆ, ಏಕಪ್ರಕಾರದಿ=ಒಂದೇಸಮವಾಗಿ ಸರ್ವಗುಣಗಳು, ಶ್ರೀಹರಿಗೆ ಸ್ವರೂಪವೆನಿಪವು=ನಿಜರೂಪವೆನಿಸುತ್ತವೆ, ಪರಮಾತ್ಮನಿಗೂ, ಪರಮಾತ್ಮನ ಗುಣಗಳಿಗೂ ಅತ್ಯಂತ ಅಭೇದ, ಸರ್ವ ಕಾಲದಿ=ಎಲ್ಲಾ ಕಾಲದಲ್ಲಿ, ಪೋಪವಲ್ಲವು=ಎಂದೂ ಪರಮಾತ್ಮನಿಂದ ಬಿಟ್ಟು

ಹೋಗುವವಲ್ಲ, ಸಕಲ ದೇಶ ಕಾಲಗಳಲ್ಲಿ ಶಶ್ವದೇಕಪ್ರಕಾರವಾಗಿ ಇರುವವು. ನಿತ್ಯವಾದವು. ಹೇಗಂದರೆ ಜೀವರಿಗೆ ದಾಸತ್ವದೋಪಾದಿ=ಜೀವರಿಗೆ ಸದಾ ಹರಿ ಅಧೀನತ್ವ, ತತ್ ಸದೃಶತ್ವ, ಅಲ್ಪತ್ವ, ಅಸ್ವತಂತ್ರತ್ವಾದಿ ದಾಸ್ಯಗುಣಗಳು ನಿತ್ಯವಾಗಿರುವಂತೆಯೇ ಜೀವರು ಸದಾ ದಾಸರು, ಶ್ರೀಹರಿ ಈಶನೆಂಬ ಜ್ಞಾನ ಮುಖ್ಯ ಸಂಪಾದಿಸಬೇಕೆಂದು ದಾಸಾರ್ಯರು ಉಪದೇಶಿಸುತ್ತಾರೆ.

**ಭಾವಸೂಚನ :—ಆ ಪರಬ್ರಹ್ಮೇತಿ ॥ ೨೩ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನೀಶತ್ವಂ ಅದುಃಖತ್ವಂ ಈಶತ್ವಂ ತದ್ವಿಪರ್ಯಯಃ" ॥ ಇತ್ಯುಕ್ತಾರ್ಥಮಾಹ—"ಆ ಪರ" ಇತಿ ॥ "ಬ್ರಹ್ಮ" ಓಂ ಉರಾಮಧಿರಾ ವಯುನೇಷು ಭೂಷತಿ ಸೋಮಂ ನಃ ಸ್ತೋಮಂ ಜುಜುಷಾಣ ಆಗಹೀಂದ್ರ ಪ್ರಚಿತ್ರಯಾ ಧಿಯಾ (ತದೂನ್ನಸ್ಯ) ॥ ಓಂ ॥ ವಿಚಿತ್ರ ಬುದ್ಧ್ಯಾ ಬ್ರಹತಿ ಬ್ರಂಹಯತಿ ಇತಿ ಬ್ರಹ್ಮಾ ॥ "ಗುಣಗಳಿಗೆ ಲೋಪವಿಲ್ಲವು" ಇತ್ಯಾದಿ ॥ ಓಂ ಚಿದಾರತ ದಧಾನಾ ಇಂದ್ರ ಇದ್ದುವಃ ಉತ ನಃ ಸುಭಗಾಂ ಅರಿರ್ವೋಚೇಯುರ್ದಸ್ಮತ್ರಷ್ಟಯಃ ॥ ಸ್ಯಾಮೇದಿಂದ್ರಸ್ಯ ಶರ್ಮಣಿ ॥ ಓಂ ॥ ಗುಣಾಃ ಪ್ರಾಣಾಃ ಭ್ರಿಯಂತೇ ಅಸ್ಮಿನ್ ಇತಿ ಗುಣಭೃತ್. ಗುಣಾಃ ದೇಹಾದಯಃ ಅಸ್ಮಾತ್ ನಿರ್ಗಚ್ಛಂತಿ ಇತಿ ನಿರ್ಗುಣಃ. ಸ ಚಾಸೌ ಸ ತಥಾ ॥ ೨೩ ॥

## ಕನ್ನಡಾರ್ಥ

ಜೀವನಿಗೆ ಪಾರತಂತ್ರ್ಯವೂ ದುಃಖಾನುಭವವೂ ಇರುತ್ತವೆ. ಇವು (ಈ ದೋಷಗಳು) ಜೀವನ ಧರ್ಮಗಳು. ಪರಮಾತ್ಮನಿಗೆ ಇದರ ವಿರುದ್ಧವಾದ ಗುಣಗಳು ಇರುತ್ತವೆ ಎಂದು ಹೇಳಿದುದನ್ನೇ ಹೇಳುತ್ತಾರೆ. "ಆ ಪರ ಬ್ರಹ್ಮನು" ಎಂಬ ಪದ್ಯದಿಂದ.

"ಬ್ರಹ್ಮ" ಇದು ಸಹಸ್ರನಾಮಾಂತರ್ಗತವಾದ ನಾಮವು. ಅಚಿಂತ್ಯವಾದ ಜ್ಞಾನ, ಆನಂದ ಮುಂತಾದ ಗುಣಗಳಿಂದ ಸದಾ ಪೂರ್ಣನು, ಅಭಿವೃದ್ಧನು ; ಅದರಂತೆ ಜಗತ್ತಿನಲ್ಲಿ ವ್ಯಾಪಿಸುವವನು ಎಂದು ಬೃಹತೀ ಮಂತ್ರಾನುಗುಣವಾದ ಅರ್ಥ.

"ಈಶತ್ವಾದಿ ಗುಣಗಳ ಲೋಪವಿಲ್ಲ" ಎಂದು ಮುಂತಾಗಿರುವ ವಚನಗಳು. "ಗುಣಭೃನ್ನಿರ್ಗುಣ" ಎಂಬ ನಾಮಾರ್ಥಾನುವಾದಕಗಳಾಗಿರುತ್ತವೆ. "ಗುಣಭೃತ್" ಎಂಬುದು ಬ್ರಹ್ಮಶಬ್ದಾರ್ಥ ವಿವರಣರೂಪವೂ ಆಗಿರುತ್ತದೆ.

ಈ ಮಂತ್ರ ಸಂಸೂಚಿತವಾದ ಅರ್ಥವನ್ನು ಇದೇ ಸಂಧಿಯ ೯ನೆಯ ಪದ್ಯದಲ್ಲಿ ಹೇಳಲಾಗಿರುತ್ತದೆ. || ೨೩ ||

**ಅವತರಣಿಕಾ :**—ಮತ್ತೂ ಶ್ರೀಹರಿಯ ಅಸಾಧಾರಣಗುಣಗಳನ್ನು ಸ್ತೋತ್ರ ಮಾಡುತ್ತ ಶ್ರೀ ಪರಮಾತ್ಮನ ಅಗಣಿತ ಮಹಿಮೆ ಬಣ್ಣಿಸಿ ಶ್ರೀಹರಿಯನ್ನು ನಲಿಸುತ್ತಾರೆ.

**ನಿತ್ಯ ನೂತನ ನಿರ್ವಿಕಾರ ಸು ।**
**ಹೃತ್ತಮ ಪ್ರಣವಸ್ಥ ವರ್ಣೋ ।**
**ತ್ಪತ್ತಿಕಾರಣ ವಾಙ್ಮನೋಮಯ ಸಾಮಗಾನರತ ॥**
**ದತ್ತಕಪಿಲ ಹಯಾಸ್ಯರೂಪದಿ ।**
**ಪೃಥಪೃಥಗ್ಜೀವರೊಳಗಿದ್ದು ಪ್ರ ।**
**ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥**

**ಪದ್ಯಾರ್ಥ :**—ನಿತ್ಯನೂತನ=ಶ್ರೀ ರಮಾದೇವಿಯರು, ಪ್ರಾಣದೇವರು ಸದಾ ಶ್ರೀಹರಿಯ ರೂಪ ಗುಣಗಳನ್ನು ನೋಡಿ ಸ್ತುತಿಸುತಿದ್ದರೂ, ಅವರಿಗೂ ಸಹ ಪ್ರತಿ ಕ್ಷಣಕ್ಕೆ, ತನ್ನ ರೂಪ ಗುಣಗಳನ್ನು ಹೊಸಹೊಸದಾಗಿ ತೋರುವ ನಿತ್ಯನೂತನನು. "ಹೊಸಪರಿಯೊ ರಂಗ ಹೊಸಪರಿಯೊ" ಎಂದು ಪುರಂದರ ಉಪನಿಷತ್ತು, ನಿರ್ವಿಕಾರ= ಚಿನ್ಮಯರೂಪನು, ಸಚ್ಚಿದಾನಂದರೂಪನಿಗೆ, ವಿಕಾರ, ಬಾಲ್ಯ, ಯೌವನ, ಜರೆ ಮುಪ್ಪು ಮುಂತಾದವುಗಳು ಇಲ್ಲೇ ಇಲ್ಲ. ವಿಕಾರವು ಪ್ರಕೃತ್ಯಾತ್ಮಕ ದೇಹಕ್ಕೆ ಹೊರತು ಜೀವನಿಗೆ ವಿಕಾರಿತ್ವ ಇಲ್ಲವೆಂದ ಮೇಲೆ ಪರಮಾತ್ಮನಿಗೆ ವಿಕಾರಹೊಂದುವದೆಲ್ಲಿ? ಸುಹೃತ್ತಮ=ಪರಮಸ್ನೇಹಿತ ಮಿತ್ರ, ರಮಾ, ಬ್ರಹ್ಮಾದಿ ಜೀವರಿಂದ ಒಂದು ಅರಲವತೃಟಿಯಾದರೂ ಅಗಲದೇ ಇದ್ದ ಆಪ್ತ ಮಿತ್ರ, ಪ್ರಣವಸ್ಥ ವರ್ಣೋತ್ಪತ್ತಿಗೆ ಕಾರಣ=ಓಂಕಾರ ಪ್ರತಿಪಾದ್ಯನಾಗಿ, ಓಂಕಾರಗತ ಅಷ್ಟವರ್ಣಗಳಿಂದ ಅಜಾದಿ ೫೧ ವರ್ಣಗಳ

ಉತ್ಪತ್ತಿ=ಅಭಿವ್ಯಕ್ತಿಗೆ ಮೂಲಕಾರಣನಾದ ಹರಿಯೇ, ವಾಙ್ಮಯ, ಮನೋಮಯ=ಸರ್ವ ವೇದಗಳನ್ನು ಉಚ್ಚಾರಶಕ್ತಿ ಇತ್ತುದರಿಂದ ವಾಙ್ಮಯ, ಸರ್ವವನ್ನು ತಿಳಿಯುವ ಸ್ವರೂಪನಾದುದರಿಂದ ಮನೋಮಯನೆಂತಲೂ, ಸಾಮಗಾನರತ=ವಾಙ್ಮಯನೆನಿಸಿ, ವೇದಾಭಿಮಾನಿಗೆ ಸಾಮಗಾನ ಶಕ್ತಿಪ್ರದನಾದ ಶ್ರೀಹರಿಯು ಸಾಮವೇದಗಳಿಂದ ಈಡ್ಯ ಸ್ತುತ್ಯನಾದವ. ದತ್ತ, ಕಪಿಲ, ಹಯಾಸ್ಯ ಈ ಮೂರು ಜ್ಞಾನಪ್ರದರೂಪಗಳಿಂದ, ಪೃಥಪೃಥಗ್ಜೀವರೊಳಿದ್ದು=ಬೇರೆಬೇರೆ ಜೀವರಲ್ಲಿ ತಾನಿದ್ದು, ಆ ಜೀವರ ಸ್ವಭಾವ, ಅವರ ಅನಾದಿ ಕರ್ಮಯೋಗ್ಯತೆಯನುಸಾರವಾಗಿ, ಪ್ರವೃತ್ತಿಸುವ=ಪ್ರೇರಿಸುವ ಕಾರ್ಯನಡೆಸುವ,

**ಭಾವಸೂಚನ** :—ನಿತ್ಯೇತಿ ॥ ೨೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಿತ್ಯ" ಇತಿ। "ನೂತನ" ದ್ರಷ್ಟೄಣಾಮ್ ॥ ೨೪ ॥

## ಕನ್ನಡಾರ್ಥ

ಹರಿಯ ಅಸಾಧಾರಣವಾದ ಗುಣಗಳನ್ನೂ, ರೂಪಗಳನ್ನೂ ಹೇಳಿ ಸ್ತುತಿಸುತ್ತಾರೆ. "ನಿತ್ಯ" ಎಂಬ ಪದ್ಯದಿಂದ.

"ನಿತ್ಯದಲ್ಲಿ ನೂತನನಾಗಿರುವನು" ಎಂದರೆ—ನೋಡುವವರ ದೃಷ್ಟಿಯಲ್ಲಿ ಹೊಸಹೊಸ ವಿಶೇಷಾಕಾರಗಳಿಂದ ಗೋಚರನಾಗುತ್ತಾನೆ ಎಂದು ಅಭಿಪ್ರಾಯವನ್ನು ತಿಳಿಯಬೇಕು. ॥ ೨೪ ॥

**ಅವತರಣಿಕಾ** :—ಜೀವನು ಸರ್ವದಾ ಅಸ್ವತಂತ್ರನಾದರೂ, ಜೀವನು ಸ್ವರೂಪಜ್ಞಾನೇಚ್ಛಾ ಶಕ್ತಿಯುಳ್ಳವ, ಭಗವತ್ಪ್ರೇರಣೆ ವಿನಾ, ಜೀವನ ಸ್ವರೂಪ ಜ್ಞಾನೇಚ್ಛಾದಿಗಳು ಚಲಿಸಲಾರವು. ಆದರೂ ಹರಿ ಮಾಡಿದ ವ್ಯಾಪಾರ ತಿಳಿಸಿದರೆ ತಿಳಿವುದು ಜೀವನಸ್ವರೂಪವಾದ ಕಾರಣ, ವಿಧಿ ನಿಷೇಧಗಳು ಹರಿ ಪ್ರೇರಿಸಿದಂತೆ ಮಾಡಲು ಶಿಕ್ಷಿಸುತ್ತಾರೆ.

ಶ್ರುತಿಗಳಾತನಮಾತು ವಿಮಲ।
ಸ್ಮೃತಿಗಳಾತನ ಶಿಕ್ಷೆ ಜೀವ।
ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳುತಿಹವು ॥

**ಇತರ ಕರ್ಮಗಳೆಲ್ಲ ಲಕ್ಷ್ಮೀ।**
**ಪತಿಗೆ ಪೂಜೆಗಳೆಂದು ಸ್ಮರಿಸುತ।**
**ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ॥ ೨೫॥**

**ಪದ್ಯಾರ್ಥ** :—ಶ್ರುತಿಗಳಾತನಮಾತು=ಸಕಲ ವೇದರಾಶಿಗಳು ವೇದಗಳು, ಆತನ=ಶ್ರೀಹರಿಯ, ಮಾತು=ನುಡಿ, ಹೇಳಿಕೆ, ವಚನ, ವಾಕ್ಯ, ವಿಮಲ ಸ್ಮೃತಿಗಳಾತನ ಶಿಕ್ಷೆ=ನಿರ್ದುಷ್ಟವಾದ ಸತ್ವ ಪುರಾಣಾದಿಗಳಿಂದ ಬೋಧಿಸುವ ಶ್ಲೋಕಬದ್ಧವಾಗಿರುವ ಸ್ಮೃತಿಗಳು ಆತನ ಶಿಕ್ಷೆ=ಶ್ರೀಹರಿಯ ಆಜ್ಞೆಯೆಂದು (ನನಗೆ) ಹರಿಗೆ ಪ್ರೀತಿಕರವಾದ ಧರ್ಮ ಮಾಡು. ಹರಿಗೆ ಅಪ್ರೀತಿಯಾದ ನಿಷಿದ್ಧ ಧರ್ಮವನ್ನು ಮಾಡಬೇಡ. "ಯೇಸ್ಸ್ಯುರ್ವಿಧಿ ನಿಷೇಧೇಭ್ಯೋ ಬಹಿರ್ಭೂತಾಃಗದಾದಯಃ। ತೇಷಾಂ ಸುಖಭೋಕ್ತಾರೋ ವಿಷ್ಣ್ವಾದ್ಯಾ ಭಾಗಶೋಖಿಲಾಃ॥ ದುಃಖಸ್ಯ ತತ್ವದೈತ್ಯಾಸ್ಯುರ್ಜೀವಸ್ತು ಭಯ ಭಾಗವೇತ್॥ ಏವಂ ವಿಧಿನಿಷೇಧಾನಾಂ ಪಾತ್ರಂ ಜೀವಂ ಪ್ರಕಲ್ಪ್ಯ ಸಃ॥ ಉಪಾದಿಶನ್ನಿಜಾಜ್ಞೇತಿ ಹರಿಃ ಸಾಕ್ಷಾತ್ ಶ್ರುತಿಃಸ್ಮೃತಿಃ॥ ವಿಷ್ಣುರಹಸ್ಯ ೨೧ನೇ ಅಧ್ಯಾಯ ಇದಕ್ಕೆ ಪ್ರಮಾಣ. ಜೀವಪ್ರತತಿ=ಜೀವರುಗಳ ಸಮೂಹ, ಪ್ರಕೃತಿ= ಜಡಪ್ರಕೃತಿ ಅವ್ಯಕ್ತಾದಿ ಪ್ರಥಿವ್ಯಾಂತ ೨೪ ಜಡತತ್ವಗಳು. ಮೂಲ ಜಡ ಪ್ರಕೃತಿ, ಜೀವ ಮತ್ತು ಪ್ರಕೃತಿ ಇವೆರಡು ಶ್ರೀಹರಿಗೆ ಪ್ರತಿಮೆ=ಮೂರ್ತಿಗಳು. ಗೊಂಬೆ, ಚಲಪ್ರತಿಮಾ ಜೀವ, ಅಚಲಪ್ರತಿಮಾ=ಜಡಪ್ರಕೃತಿ, ಇತರ ಕರ್ಮಗಳೆಲ್ಲ=ಬೇರೆ ವಿಧವಾದ, ಮಾನಸಿಕ, ವಾಚನಿಕ, ಕಾಯಿಕ. ಕರ್ಮಗಳು, ಗ್ರಹಕರ್ಮಾದಿಗಳು, ಲಕ್ಷ್ಮೀಪತಿಗೆ ಪೂಜೆಗಳೆಂದು ಸ್ಮರಿಸುತ=ಶ್ರೀ ರಮಾದೇವಿಯ ಒಡೆಯನಿಗೆ, ಪೂಜಾ=ಸತ್ಕಾರ ಆದರದ ಅರ್ಚನೆಗಳೆಂದು ಚಿಂತಿಸುತ್ತಾ, ಶ್ರೀ ಪ್ರೀತಿಗೋಸುಗ ಹರಿಸ್ಮರಣೆಪೂರ್ವಕ, ಹರಿ ಪ್ರೇರಿಸಿದಂತೆ ಸಕಲ ವಿಧಿನಿಷೇಧ ಕರ್ಮಗಳನ್ನು ಹರಿಗೆ ಸಮರ್ಪಿಸುತ್ತಾ ಫಲರಹಿತನಾಗಿ, ಚತುರವಿಧ ಪುರುಷಾರ್ಥಗಳನ್ನು=ಧರ್ಮ-ಅರ್ಥ-ಕಾಮ-ಮೋಕ್ಷವನ್ನೂ ಸಹ, ಸ್ವಪ್ನದಲ್ಲಿ ಸಹ ಬೇಡದಿರು=ಬೇಡಬೇಡ, ಇಂಥ ಪೂಜೆಗೆ ಇಂತು ಫಲಕೊಡಪ್ಪಾ ಹರಿಯೆಂದು ಕೇಳಬೇಡ. ಹೀಗೆ ನಿಷ್ಕಾಮ್ಯದಿಂದ ಹರಿ ಆಜ್ಞೆಯೆಂದು ಹರಿ ಪ್ರೇರಿಸಿದಂತೆ ಮಾಡಿದ್ದು ಹರಿಗೆ ಸಮರ್ಪಿಸಿದರೆ ಜೀವನು ಕರ್ಮಬಂಧನಕ್ಕೊಳಗಾಗುವದಿಲ್ಲ.

**ಭಾವಸೂಚನ** :—ಶ್ರುತೀತಿ ॥ ತದುಕ್ತಂ ವಿಷ್ಣುರಹಸ್ಯೇ ಷಷ್ಠಾಧ್ಯಾಯೇ ॥ "ಶ್ರುತಿಸ್ಮೃತೀ ಮಮೈವಾಜ್ಞೇ ಕುರ್ಯಾತ್ತದನುಸಾರತಃ ॥ ಇತಿ ವಾಯುಪುರಾಣೆ ಚ ॥ ಶ್ರುತಿಸ್ಮೃತೀ ಹರೇರಾಜ್ಞೇ ತಸ್ಯಾಹಮನುಗಃ ಸದೇತಿ ॥ ಪ್ರತತಿ ಸಮುದಾಯ ॥ ೨೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರುತಿ" ಇತಿ ॥ "ಶ್ರುತಿಸ್ಮೃತೀ ಮಮೈವಾಜ್ಞೇ ಕುರ್ಯಾತ್ ತದನುಸಾರತಃ ॥ ಸತ್ಕರ್ಮಾಣಿ ದದಾಮ್ಯಸ್ಮೈ ಫಲಂ ಕರ್ಮಾನುಸಾರತಃ ॥ ಶ್ರವಣಂ ಮನನಂ ಧ್ಯಾನಂ ಕುರ್ವನ್ ಸಾಕ್ಷಾತ್ಕರೋತಿ ಮಾಮ್ ॥ ಯಃ ತಸ್ಮೈ ಮೋಕ್ಷದಾತಾಹಂ ಯೋ ದ್ವೇಷ್ಟಿ ಸತತಂ ಹಿ ಮಾಮ್ ॥ ತಮೋಂಧೇ ಪಾತಯಿಷ್ಯಾಮಿ ನಿವೃತ್ತಿಃ ನ ಯತೋ ಭವೇತ್ ॥" ಇತಿ ವಿಷ್ಣುರಹಸ್ಯೇ ॥ ಶಾಂಡಿಲ್ಯಪಂಚಕೇ ಚ "ಸೇವಾರ್ಥಂ ಭಗವಾನ್ ವಿಷ್ಣುಃ ದೇಶಕಾಲಕ್ರಿಯಾಶ್ರಯಾನ್ ॥ ಸ್ರಷ್ಟವಾನ್ ಭಗವಾನಾದೌ ತಸ್ಮಾತ್ ಪರಿಚರೇತ್ ನಿಜಮ್ ॥ ಇತಿ ಸಂಕಲ್ಪ್ಯ ಚೋತ್ಥಾಯ ಸರ್ವಕರ್ಮ ಸಮಾರಭೇತ್ ॥ ವಿಷ್ಣೋರರ್ಥೇ ಕರಿಷ್ಯಾಮಿ ಚಾಹರಾಮಿ ದದಾಮಿ ಚ ॥ ನಾತ್ಮಾರ್ಥೇ (ರ್ಥಂ) ಇತಿ ಚ ಕ್ವಾಪಿ ವದನ್ ಕರ್ಮ ಕರೋತಿ ಯಃ ॥ ಶ್ರುತಿಸ್ಮೃತೀ ಹರೇರಾಜ್ಞೇ ತಸ್ಯಾಹಂ ಅನುಗಃ ಸದಾ ॥ ತಸ್ಮಾದಾಜ್ಞಾಧರೋ ಭೂತ್ವಾ ಯಾವಜ್ಜೀವಂ ವಸಾಮ್ಯಹಮ್ ॥ ಇತ್ಥಂ ಜಪಂ ಸದಾ ಕುರ್ವನ್‌ಧ್ಯಾಯೇತ್ ವಿಷ್ಣುಂ ಅತಂದ್ರಿತಃ ॥" ಇತಿ ॥ ೨೫ ॥

## ಕನ್ನಡಾರ್ಥ

"ಶ್ರುತಿಸ್ಮೃತಿಗಳು ನನ್ನ ಆಜ್ಞೆಗಳು. ಇವುಗಳನ್ನನುಸರಿಸಿ ಸತ್ಕರ್ಮಗಳನ್ನು ಮಾಡಬೇಕು. ಅವರ ಕರ್ಮಾನುಸಾರವಾಗಿ ಫಲಗಳನ್ನು ಕೊಡುತ್ತೇನೆ. ಶ್ರವಣ, ಮನನ, ಧ್ಯಾನಗಳಿಂದ ನನ್ನ ಸಾಕ್ಷಾತ್ಕರಿಸಿಕೊಳ್ಳುವವನಿಗೆ ಮೋಕ್ಷವನ್ನು ನಾನು ಕೊಡುತ್ತೇನೆ. ನನ್ನನ್ನು ದ್ವೇಷಿಸುವವರನ್ನು ಅಂಧತಮನಸ್ಸಿನಲ್ಲಿ ನುಗ್ಗಿಸುವೆನು. ಅಲ್ಲಿ ಬಿದ್ದರೆ ಪುನಃ ಅಲ್ಲಿಂದ ಮರಳುವದಾಗುವದಿಲ್ಲ" ಎಂದು ವಿಷ್ಣುರಹಸ್ಯದಲ್ಲಿ ಪರಮಾತ್ಮನ ವಚನವಿರುತ್ತದೆ.

"ಭಗವಾನ್ ವಿಷ್ಣುವು ತನ್ನ ಸೇವೆಗಾಗಿ ದೇಶ ಕಾಲ ಕ್ರಿಯೆಗಳೊಡನೆ ಜೀವರನ್ನು ಸೃಜಿಸಿದ್ದಾನೆ; ಆದುದರಿಂದ ಅವನನ್ನು ಆರಾಧಿಸಬೇಕಾಗಿದ್ದು"

ಎಂದು, ಬೆಳಿಗ್ಗೆ ಎದ್ದನಂತರ ಸಂಕಲ್ಪವನ್ನು ಮಾಡಿ, ಕರ್ಮಗಳನ್ನಾಚರಿಸ ಬೇಕು. "ಶ್ರೀ ವಿಷ್ಣುಪೂಜಾರ್ಥವಾಗಿಯೇ ಹೊರತು ನನ್ನ ಸ್ವಾರ್ಥಕ್ಕಲ್ಲ" ಎಂದು ಸಂಕಲ್ಪಿಸು. ಅದರಂತೆ ದಾನ ಪ್ರತಿಗ್ರಹ ಮುಂತಾದವುಗಳನ್ನು ಮಾಡುತ್ತೇನೆ. "ಯಾಕಂದರೆ, ಶ್ರುತಿಸ್ಮೃತಿಗಳು ಶ್ರೀಹರಿಯ ಆಜ್ಞೆಗಳು. ನಾನು ಆ ಪರಮಾತ್ಮನ ಅನುಚರನು. ಆದುದರಿಂದ ಜೀವವಿಡುವವರೆಗೂ ಅವನ ಆಜ್ಞಾಧಾರಕನಾಗಿಯೇ ಉಳಿಯುವೆನು-ಇರುವೆನು." ಹೀಗೆ ತಿಳಿದು ವಿಷ್ಣುವಿನನ್ನು ಸದಾ ಆಲಸ್ಯವಿಲ್ಲದೇ ಜಪಿಸತಕ್ಕದ್ದು ಹಾಗೂ ಧ್ಯಾನಿಸತಕ್ಕದ್ದು ಎಂದು ಶಾಂಡಿಲ್ಯ ತತ್ವದಲ್ಲಿ ಹೇಳಲಾಗಿರುತ್ತದೆ. ॥ ೨೫ ॥

**ಅವತರಣಿಕಾ :**—ಫಲರಾಹಿತ್ಯನಾಗಿ, ನಿಷ್ಕಾಮ್ಯದಿಂದ ಹರಿ ಮಾಡಿ ಮಾಡಿಸಿದ ದ್ವಂದ ಕರ್ಮಗಳನ್ನು ಶ್ರೀಹರಿಗೆ ಪೂಜಾರೂಪವೆಂದು, ಸೇವೆ ಸಮರ್ಪಿಸಲು, ಶ್ರೀಹರಿಯು ಸುಪ್ರೀತನಾಗಿ ಇಹಪರದಲ್ಲಿ ಆನಂದವನ್ನು ಕೊಡುವನೆಂದು ರಾಜಭೃತ್ಯರ ದೃಷ್ಟಾಂತದಿಂದ ತೋರಿಸುತ್ತಾರೆ.




**ಭೂತಳಾಧಿಪನಾಜ್ಞಾಧಾರಕ ।**
**ದೂತರಿಗೆ ಸೇವಾನುಸಾರದಿ ।**
**ವೇತನವ ಕೊಟ್ಟವರ ಸಂತೋಷಿಸುವತೆರದಂತೆ ॥**
**ಮಾತರಿಶ್ವಪ್ರಿಯನು ಪರಮ ।**
**ಪ್ರೀತಿಪೂರ್ವಕ ಸದ್ಗುಣಂಗಳ ।**
**ಗಾಥಕರ ಸಂತೋಷಬಡಿಸುವ ಇಹಪರಂಗಳಲಿ ॥ ೨೬ ॥**

**ಪದ್ಯಾರ್ಥ :**—ಹೇಗೆ, ಭೂತಳಾಧಿಪ=ಪೃಥ್ವಿಗೆ ಅಧಿಪನಾದ ರಾಜನು, ತನ್ನ ಆಜ್ಞಾಧಾರಕರಾದ, ರಾಜನ ಆಧೀನರಾಗಿ ರಾಜನ ಅಪ್ಪಣೆಯನ್ನು ಪರಿ ಪಾಲನಮಾಡುವ ದೂತರಿಗೆ= ರಾಜಸೇವಕರಿಗೆ, ಸೇವಾನುಸಾರದಿ = ರಾಜ ದೂತರ ಸೇವಾ ಹೇಗೆ ಇರುವದೋ ಅವರವರ ಸೇವೆಗೆ ತಕ್ಕ ಪ್ರತಿಫಲರೂಪ ವಾಗಿ, ವೇತನ=ಸಂಬಳ ವರಮಾನ-ವರ್ಷಾಶನ, ಜಾಹಗೀರಾದಿಗಳನ್ನು, ಕೊಟ್ಟವರ ಸಂತೋಷಿಸುವ ತೆರದಂತೆ, ರಾಜನು ದೂತರಿಗೆ ವೇತನಾದಿಗಳನ್ನು ಕೊಟ್ಟು ಸೇವಕರನ್ನು ಆನಂದಪಡಿಸುವಂತೆಯೇ, ಮಾತರಿಶ್ವಪ್ರಿಯನು=ಮಾತ ರಿಶ್ವದತೀತಿ ಮಾತರಿಶ್ವ=ಅಂತರಿಕ್ಷದಲ್ಲಿ ಸಂಚಾರಮಾಡುವ ವಾಯು, ಈ

ವಾಯುದೇವರಿಗೆ ಪ್ರೀತ್ಯಾಸ್ಪದನಾದ ಶ್ರೀಹರಿಯು, ಪ್ರೀತಿಪೂರ್ವಕ=ಪರಮ ಅನನ್ಯಭಕ್ತಿಯಿಂದ, ತನ್ನ ಸದ್ಗುಣಂಗಳಗಾಥಕರ= ಶ್ರೀಹರಿಯ ಉತ್ತಮ ಜ್ಞಾನಾನಂದಾದಿ ಐಶ್ವರ್ಯಬಲಪೂರ್ಣನ ಅನಂತ ಗುಣಗಳಲ್ಲಿ ತಮ್ಮ ಯೋಗ್ಯತಾನುಸಾರ ಗುಣಗಳಿಂದ ಶ್ರೀಹರಿಯಸ್ತೋತ್ರಮಾಡುವರ, ಸಂತೋಷ ಬಡಿಸುವ ಇಹಪರಂಗಳಲಿ=ಈ ಲೋಕದಲ್ಲಿ, ಪರ=ವೈಕುಂಠಾದಿ ಲೋಕಗಳಲ್ಲಿ, ಆನಂದಕೊಡುವನು. ರಾಜನು ಅಮಾತ್ಯರದ್ವಾರಾ ಸಂಬಳ ಕೊಡಿಸುವಂತೆ; ಶ್ರೀಹರಿಯು ವಾಯುದ್ವಾರದಿಂದ ಮುಕ್ತಿ ಕೊಡುವನು. ವಾಯ್ವಂತರ್ಯಾಮಿ ಹರಿಯ ಪೂಜೆ ಮುಖ್ಯ.

**ಭಾವಸೂಚನ:**—ಭೂತಳೇತಿ॥ ಭೂತಳಾಧಿಪನು ಇತಿ ಪದಚ್ಛೇದ॥ ವೇತನ ಸಂಬಳ॥ ಮಾತರಿಶ್ವಾವಾಯು ॥೨೬॥

"ಸ್ವಾಮಾತ್ಯೇಷು ಯಥಾ ರಾಜಾ ಯಥಾ ಸ್ವಾತಂತ್ರ್ಯಮಾಕ್ಷತೇ ॥
ಕಾರ್ಯಸಿದ್ಧಿಂ ಕಾರ್ಯಹಾನಿಂ ತಥಾಯಂ ಪುರುಷೋತ್ತಮಃ ॥
ಯಸ್ಯಸ್ಯಾದ್ಯಾವತೀಶಕ್ತಿಃ ಶಾರೀರೀಧನಜಾಪಿವಾ ॥
ಪುಣ್ಯಪಾಪನಿವೃತ್ತಿಂಚ ತಾವತ್ಕುರ್ಯಾದ್ಧರಿಂ ಸ್ಮರನ್ ॥

(ವಿಷ್ಣುರಹಸ್ಯ—೨೧ ಅ.)

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಭೂತಲ" ಇತಿ॥ "ಯಥೈವ ಲೋಕೇ ಪದ ಪಾಲಾಃ ಶಿಕ್ಷಯಂತಿ. ನಿಜಾನ್ ಜನಾನ್॥ ಮಮ ಸೇವಾಂ. ಇಮಾಂ. ಕುರ್ಯಾ(ತ್)ಃ ಚೇತ್ ವೇದನಮಿದಂ ತವ ॥ ದಾಸ್ಯಾಮಿ ನೋ ಚೇತ್ ನೋ ದದ್ಯಾಮ್ "॥ ಇತಿ ಚೋಕ್ತೇಃ ॥೨೬॥

## ಕನ್ನಡಾರ್ಥ

"ನನ್ನ ಈ ಸೇವೆಯನ್ನು ಮಾಡಿದರೆ ನಿನಗೆ ಈ ವೇತನ (ಸಂಬಳ)ವನ್ನು ಕೊಡುತ್ತೇನೆ. ಇಲ್ಲವಾದರೆ ಇಲ್ಲ." ಎಂದು ಲೋಕದಲ್ಲಿ ಆ ಆ ರಾಜರು ತಮ್ಮ ತಮ್ಮ ಭೃತ್ಯ ಜನರನ್ನು ಶಿಕ್ಷಿಸುವಂತೆ ನಿಯಮಿಸುವಂತೆ ಹರಿಯೂ ಸಹ ತನ್ನ ಸದ್ಗುಣಗಾಯಕರನ್ನು ನಿಯಮಿಸಿ ಅವರಿಗೆ ಪ್ರಸನ್ನನಾಗುತ್ತಾನೆ ಎಂದು ಶ್ರೀವಿಷ್ಣುರಹಸ್ಯದಲ್ಲಿ ಹೇಳಲಾಗಿರುತ್ತದೆ. ॥೨೬॥

**ಅವತರಣಿಕಾ:**—ಹರಿಪ್ರೀತಿಕರವಾದ ಧರ್ಮಮಾಡುವದು ಹೇಗೆನ್ನು ವದನ್ನು ಹಗಲು ನಂದಾದೀಪದ ದೃಷ್ಟಾಂತದಿಂದ ವಿವರಿಸುವದಲ್ಲದೇ ಸಜ್ಜನರ ಪಾಪಕರ್ಮವು ಪುಣ್ಯವೆನಿಸುವವು, ಪಾಪಿಷ್ಟರ ಸತ್ಪುಣ್ಯಗಳಾದರೂ ಪಾಪವೇ ಎನಿಸುತ್ತವೆಂಬ ರಹಸ್ಯ ಉಪದೇಶಿಸುತ್ತಾರೆ.

**ದೀಪದಿವದಲಿ ಕಂಡರಾದಡೆ ।**
**ಲೋಪಗೈಸುವರಾಕ್ಷಣ ಹರಿ ಸ ।**
**ಮೀಪದಲ್ಲಿರೆ ನಂದನಾಮಸುನಂದವೆನಿಸುವವು ॥**
**ಔಪಚಾರಿಕವಲ್ಲ ಸುಜನರ ।**
**ಪಾಪಕರ್ಮವು ಪುಣ್ಯವೆನಿಪವು ।**
**ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವವು ॥ ೨೭ ॥**

**ಪದ್ಯಾರ್ಥ :**—ದಿವದಲಿ=ಸೂರ್ಯಪ್ರಕಾಶಮಾನವಾಗಿರುವ ಹಗಲಿನಲ್ಲಿ, ದೀಪ=ರಾತ್ರಿಕಾಲ ಕತ್ತಲೆ ಹರಿಸಿ ಪ್ರಕಾಶಮಾನವಾದರೂ, ಹಗಲಿನಲ್ಲಿ ಸೂರ್ಯನ ಬೆಳಕಿನ ಮುಂದೆ ದೀಪ ಪ್ರಕಾಶವೇನುಬೆಳಕು ಎಂದು. ಆಕ್ಷಣಕೆ ಲೋಪಗೈಸುವರು=ಆ ದೀಪವನ್ನು ತ್ವರೆಯಿಂದ ಆರಿಸಿಬಿಡುವರು. ಆದರೆ ಅದೇ ಹಗಲಿನಲ್ಲಿ, ಅದೇ ದೀಪವು ಹರಿ ಸಮೀಪದಲ್ಲಿ=ದೇವರ ಗುಡಿಯಲ್ಲಿ ದೇವರೆದುರಿಗೆ ಅಥವಾ ದೇವರಮನೆಯಲ್ಲಿ ಹರಿ=ಬಿಂಬರೂಪಿಯಾದ ಹರಿ (ಪ್ರತಿಮಾಂತರ್ಗತನಾಗಿ ಇರುವನೆಂದು ತಿಳಿದು) ಆ ದೀಪವು ಸಮೀಪದಲ್ಲಿದ್ದರೆ ದೇವರೆದುರಿಗೆ ಇರಲು, ನಂದನಾಮ=ಆನಂದನಾಮದಿಂ "ಸಮೃದ್ಧೋ ನಂದ" ನಂದಾದೀಪವೆಂದು, ಸುನಂದವೆನಿಸುವದು=ಹರಿಪ್ರೀತಿ ಪುಣ್ಯಕರವಾಗಿ ಸಮೀಚೀನ ಆನಂದ ಕೊಡುವದು. ಇದರಂತೆ ಇದು ಔಪಚಾರಿಕವಲ್ಲ= ಉಪಚಾರದ ಮಾತಲ್ಲ. ಸುಜನರ ಪಾಪಕರ್ಮವು ಪುಣ್ಯವೆನಿಪವು=ಬಿಂಬ ಕ್ರಿಯಾನುಸಂಧಾನಪೂರ್ವಕ ಸುಜನರಿಂದ ಆಚರಿಸಿದ ಪಾಪ ನಂದಾದೀಪವತು, ತನ್ನ ಸಮೀಪದಲ್ಲಿಟ್ಟು ಪುಣ್ಯ ಮಾಡುತ್ತಾನೆ, ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವವು=ಮಿಥ್ಯಾಜ್ಞಾನಿ-ಅನ್ಯಥಾ ಜ್ಞಾನಿ ಅಹಂಮತಿಯಿಂದ ಮಾಡಿದ ಪುಣ್ಯವಾದರೂ, ಹರಿ ವಿಸ್ಮರಣೆ ನಾನೇ ಕರ್ತಾ ಎಂಬ ಅಹಂಮತಿಯುಳ್ಳವನ ಒಳ್ಳೇ ಕಾರ್ಯವಾದರೂ ಪಾಪವೇ ಎನಿಸುತ್ತವೆ.

**ಭಾವಸೂಚನೆ**:—ದೀಪೇತಿ || ಕಂಡರಾದಡೆ || ಕಂಡದ್ದಾದರೆ | ನಂದೇತಿ || ಆನಂದೋನಂದದೋನಂದಃ || ಇತ್ಯುಕ್ತೇಃ || ಪಾಪೇತಿ || ಪಾಪಂ ಭವತಿ ಧರ್ಮೋಽಪಿ ಇತ್ಯುಕ್ತೇಃ || ೨೭ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದೀಪ" ಇತಿ || "ನಂದ ದೀಪ" ಇತಿ || ಸುನಂದ ಸುಖಪ್ರದಃ || ಧರ್ಮಂ ಭವತಿ ಇತಿ ಚ || ೨೭ ||

## ಕನ್ನಡಾರ್ಥ

"ಅಭಕ್ತರ ಧರ್ಮಗಳು ಅಧರ್ಮಗಳಾಗುತ್ತವೆ. ಭಕ್ತರ ಅಧರ್ಮಗಳು ಧರ್ಮಗಳಾಗುತ್ತವೆ. ಇದು ಭಗವಂತನ ಮಹಾಮಹಿಮೆ" ಎಂದು ಹೇಳಿದುದನ್ನು ವಿವರಿಸುತ್ತಾರೆ. "ದೀಪ" ಎಂಬ ಪದ್ಯದಿಂದ.

"ಧರ್ಮೋಽಭವತ್ಯಧರ್ಮೋಽಪಿ" ಎಂಬ ವಾಕ್ಯಗಳು ಈ ವಿಷಯದಲ್ಲಿ ಪ್ರಮಾಣಗಳಾಗಿರುತ್ತವೆ. || ೨೭ ||

**ಅವತರಣಿಕಾ**:—ಸಮೀಚೀನ ಜ್ಞಾನ ಪುಟ್ಟಬೇಕಾದರೆ ಕುಳಿತಲೆ ಕುಳಿತರೆ ಜ್ಞಾನ ಬರುವದಿಲ್ಲ, ಜ್ಞಾನಿಗಳಿದ್ದಲ್ಲಿ ಪೋಗಿ ಅವರ ಮನೆ ಹೆಬ್ಬಾಗಿಲು ಕಾಯ್ದು ಜ್ಞಾನ ಸಂಪಾದಿಸು. ದುರ್ಜನರನ್ನು ಕೂಡಿ ಕೆಡಬೇಡವೆಂದು ಶಿಷ್ಟರನ್ನು ಶಿಕ್ಷಿಸುತ್ತಾರೆ.

**ಧನವ ಸಂಪಾದಿಸುವ ಪ್ರದ್ರಾ |**
**ವಣಿಕರಂದದಿ ಕೋವಿದರ ಮನೆ |**
**ಮನೆಗಳಲಿ ಸಂಚರಿಸು ಶಾಸ್ತ್ರಶ್ರವಣಗೋಸುಗದಿ ||**
**ಮನನಗೈದುಪದೇಶಿಸುತ ದು |**
**ರ್ಜನರಕೂಡಾಡದಿರು ಸ್ವಪ್ನದಿ |**
**ಪ್ರಣತಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ || ೨೮ ||**

**ಪದ್ಯಾರ್ಥ**:—ಧನವ ಸಂಪಾದಿಸುವ=ದ್ರವ್ಯವನ್ನು ಗಳಿಸಲು ಅಪೇಕ್ಷವುಳ್ಳ, ಪ್ರದ್ರಾವಣಿಕರಂದದಿ=ವೈಶ್ಯರು ವ್ಯವಹಾರಮಾಡುವ ವರ್ತಕರು,

ಎಲ್ಲೆಲ್ಲಿ ಯಾವ ತರದ ಪದಾರ್ಥಗಳು ಸಿಗುತ್ತವೊ ತಂದು ಮಾರಿದರೆ ಹೆಚ್ಚು ಕ್ರಯ ಬರುವದೋ ತಿಳಿದು ಅಲ್ಲಲ್ಲೆ ಸಂಚರಿಸಿ– ವ್ಯಾಪಾರ ಮಾಡಿ ದ್ರವ್ಯ ಸಂಪಾದನೆ ಮಾಡುವಂತೆ, ನೀನು ಶಾಸ್ತ್ರಶ್ರವಣಗೋಸುಗದಿ=ಹರಿ ಸರ್ವೋತ್ತಮ ಪಂಚಭೇದ ತಾರತಮ್ಯಜ್ಞಾನ ಮಧ್ವಶಾಸ್ತ್ರದಿಂದಲೇ ಪುಟ್ಟುತ್ತದೆ. ಇಂತಹ ಅಬಾಧಿತ ಸುಜ್ಞಾನಾಖ್ಯ, ಅವ್ಯಯ ಧನ ಸಂಪಾದಿಸಲು ಶಾಸ್ತ್ರ ಶ್ರವಣ ಬೇಕು. ಇಂಥ ಶಾಸ್ತ್ರಶ್ರವಣ ಮಾಡಲೋಸುಗ, ಕೋವಿದರ=ಜ್ಞಾನಿಗಳ, ಪಂಡಿತರ, ಮನೆಮನೆಗಳಲಿ ಸಂಚರಿಸು=ಮುಖ್ಯ ಕೋವಿದರು ತತ್ವಾಧಿಪತಿಗಳಾದ ಬ್ರಹ್ಮಾದಿ ೨೪ ತತ್ವದೇವತೆಗಳು, ಆ ತತ್ವದೇವತೆಗಳು ನಮ್ಮ ದೇಹದಲ್ಲಿ ಯಾವ ಸ್ಥಾನದಲ್ಲಿದ್ದು, ಏನೇನು ಕಾರ್ಯ ಮಾಡುವರೋ ಇದನ್ನು ತಿಳಿಯಲು, ದೇಹದಲ್ಲಿ ಪಂಚಜ್ಞಾನೇಂದ್ರಿಯ ಕರ್ಮೇಂದ್ರಿಯಾಧಿಪತಿಗಳು ಮನೋಭಿಮಾನಿಗಳಿಪ್ಪ ಮನೆಮನೆ ಪ್ರತಿ ಪ್ರತಿ ದೇವತೆಗಳಿರುವ ಸ್ಥಾನದಲ್ಲಿದ್ದು ಇಂದ್ರಿಯಾಭಿಮಾನಿಗಳನ್ನು ಮೊರೆಹೊಕ್ಕರೆ ಸುಜ್ಞಾನ ಕೊಡುವರು. ತತ್ವ ನಿಯಾಮಕರ ಪ್ರಸಾದ ಕಾರಣ– ಇಂಥ ತಾತ್ವಿಕರಿಗೆ ಶ್ರೇಷ್ಠರಾದ ಜ್ಞಾನಪ್ರದ ವಾಯುದೇವರ ಮಹಿಮೆ ತಿಳಿಯಲು, ಮಧ್ವಶಾಸ್ತ್ರವೇ ತಾರಕ. ಮುಖ್ಯ ಮಧ್ವಶಾಸ್ತ್ರ ಅರಿತ ಕೋವಿದರು=ಅಪರೋಕ್ಷಿ ಜ್ಞಾನಿಗಳ ಮನೆಗಳಿಗೆ ಸಂಚರಿಸು=ಹೋಗು, ಅವರಿಂದ ಅನುಗ್ರಹ ಪಡೆದು ಶಾಸ್ತ್ರಾರ್ಥಶ್ರವಣ ಮಾಡು, ಮನನ ನಿಜಧ್ಯಾಸನ ಮಾಡು, ಆ ಶಾಸ್ತ್ರಶ್ರವಣ ಮನನಗೈದುದನ್ನು, ಉಪದೇಶಿಸುತ=ಸಜ್ಜನರಿಗೆ ತನ್ನಕಿಂತಲೂ ಅವರರಾದ ಭಕ್ತರಿಗೆ ಉಪದೇಶಮಾಡು. "ಕೋವಿದರ ಸದನ ಹೆಗ್ಗದವಕಾಯ್ವುದಿದೆ" ಫಲವಿದು ಬಾಳ್ದುದಕೆ" ಎಂದು ದಾಸರ ವಚನ. ಕೋವಿದರ ಸದನ ಮನೆಗಳಲ್ಲಿ ಭಗವಂತನ ಮಹಿಮಾಗಳೇ ನಡಿಯುತ್ತವೆ. ಇಂತಹ ಸುಜ್ಞಾನಿಗಳ ಸಂಗ ಮಾಡು. ಮತ್ತು "ಸಾದರದಿಂ ಜ್ಞಾನಿಗಳ ಮುಖದಲಿ ದಿನೇದಿನೇ ಕೇಳಿ ವಿಜ್ಞಾನ ಗಳಿಸುವದೆ" | ಸಜ್ಜನರ ನಡತಿಇದು (ಶ್ರೀ ಪ್ರಾಣೇಶವಿಠಲರು) ದುರ್ಜನರ ಕೂಡಾಡದಿರು ಸ್ವಪ್ನದಿ= ಕೆಟ್ಟ ಜನರು ಸ್ತ್ರೈಣರು. ನಿಂದಕರು ಚಾಡಿಕೋರರು ಪರಹಿಂಸಕರು ಇವರೇ ದುರ್ಜನರು ಸಾಮಾನ್ಯರಲ್ಲದೇ, ಮಿಥ್ಯಾವಾದಿಗಳು, ಮಾಯಾವಾದಾದಿ ಕುಶಾಸ್ತ್ರದಿಂದ ಕೆಟ್ಟಗತಿ ಆಗುವದು. ಇಂತಹ ಕುಜನರ ಸಹವಾಸ ಸ್ವಪ್ನದಲ್ಲಿ ಸಹ ಇಚ್ಛಾ ಮಾಡಬೇಡ. ಪ್ರಣತಕಾಮದ=ಶರಣರಿಗೆ ಇಷ್ಟಾರ್ಥವನು

ಕೊಡುವ ಹರಿಯು, ಇಹಲೋಕ, ಪರ=ಪಾರತ್ರಿಕ ಮುಕ್ತಿಯಲ್ಲಿ ಸಹ, ಸೌಖ್ಯವ ಕೊಡುವ, ಆನಂದವನ್ನು ಕೊಡುವನು.

**ಭಾವಸೂಚನ :**—ಧನವೇತಿ ॥ ಪ್ರದ್ರಾವಣಿ=ವೈಶ್ಯ ॥ ೨೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಧನವ" ಇತಿ ॥ "ಪ್ರದ್ರಾವಣಿಕ" ವೈಶ್ಯಃ ॥ ೨೮ ॥

## ಕನ್ನಡಾರ್ಥ

"ಪ್ರವ್ರ್ಯಾಜನೆಯಲ್ಲಿ ಕ್ಷಣಕ್ಷಣವನ್ನೂ ವಿಫಲಗೊಳಿಸದ ಸತತ ದ್ವೀಪ ಸಂಚಾರಿ-ವೈಶ್ಯ ವರ್ತಕನಂತೆ ಶಾಸ್ತ್ರಶ್ರವಣದ ಸಲುವಾಗಿ—ಮನೆಮನೆಗೆ ತಿರುಗಿ, ಬುಧರಿಂದ ಉಪದೇಶಪಡೆದು, ಮನನಮಾಡು. ದುರ್ಜನರನ್ನು ಕನಸಿನಲ್ಲಿಯಾದರೂ ಹೊಗಳಬೇಡ ಪರಮಾತ್ಮನು ಇಹಪರ ಸುಖಗಳನ್ನು ದಯಪಾಲಿಸುವ ಮಹಾ ಭಕ್ತಕಾಮದನಿರುತ್ತಾನೆ" ಎಂದು ಉಪದೇಶಿಸುತ್ತಾರೆ.

"ಪ್ರದ್ರಾವಣಿಕ"—ವೈಶ್ಯ ವರ್ತಕ ॥ ೨೮ ॥

**ಅವತರಣಿಕಾ :**—ಕೋವಿದರ ಮನೆ ಸಂಚರಿಸಿ ಶಾಸ್ತ್ರಶ್ರವಣಮಾಡಿ ಜ್ಞಾನ ಸಂಪಾದಿಸಬೇಕು. ಬರೆ ಜ್ಞಾನ ಸಂಪಾದಿಸಿದರೆ ಸಾಕು ಇಷ್ಟೇ ಅಲ್ಲ, ಆ ಜ್ಞಾನ ಅನುಭವದಲ್ಲಿ ತಂದು ಭ್ರಾಮುಕತ್ರಯವಾದ ಮೋಹ ಅಜ್ಞಾನ ವನ್ನು ದೂರ ಓಡಿಸಿ ಭಗವಂತನ ಕರ್ತೃತ್ವಾನುಸಂಧಾನ ಸರ್ವತ್ರ ಚಿಂತಿಸಲು ಶಿಕ್ಷಿಸುತ್ತಾರೆ.

**ಕಾರಕಕ್ರಿಯ ದ್ರವ್ಯವಿಭ್ರಮ ।**
**ಮೂರುವಿಧ ಜೀವರಿಗೆ ಬಹು ಸಂ ।**
**ಸಾರಕಿವು ಕಾರಣವೆನಿಸುವವು ಎಲ್ಲ ಕಾಲದಲಿ ॥**
**ದೂರವೋಡಿಸಿ ಭ್ರಾಮುಕತ್ರಯ ।**
**ಮಾರಿಗೊಳಗಾಗದಲೆ ಸರ್ವಾ ।**
**ಧಾರಕನ ಚಿಂತಿಸುತಲಿರು ಸರ್ವತ್ರ ಮರೆಯದಲೆ ॥ ೨೯ ॥**

:—೧. ಕಾರಕಭ್ರಮಃ = ಜ್ಞಾನಕ್ರಿಯಾಸಾಧಕಗಳಾದ

ಇಂದ್ರಿಯಗಳು ನನ್ನವು ನನ್ನ ಅಧೀನವೆಂದು ತಿಳಿಯುವದು ಕಾರಕಭ್ರಮ. ಮರಳು-ಭ್ರಾಂತಿ ವಿಪರೀತವಾದ ತಿಳುವಳಿಕೆಯು, ೨. **ಕ್ರಿಯಾ ವಿಭ್ರಮಃ** ಅಹಂಕರ್ತಾ ನಾನೇ ಮಾಡುವನೆಂದು ತಿಳಿಯುವದು, ಕ್ರಿಯಾ ಅಜ್ಞಾನ, ೩. ದ್ರವ್ಯ ವಿಭ್ರಮಃ, ಆತ್ಮಭಾವ ಶರೀರೇತು ದ್ರವ್ಯವಿಭ್ರಮಃ=ಶರೀರವು ನಾನೆ ಎಂದು ಬಗೆಯುವದು, ಧನ ದಾರಾ ಪುತ್ರಾದಿಗಳು ನನ್ನವು ಎಂಬುದು ದ್ರವ್ಯ ವಿಭ್ರಮಃ=ವಿಶೇಷ ಭ್ರಾಂತಿ ಇವುಗಳು, ಮೂರು ವಿಧ ಜೀವರಿಗೆ= ಸತ್ವ-ರಜ-ತಮೋ ಜೀವರುಗಳಿಗೆ ಬಹುಸಂಸಾರಕಿವು ಕಾರಣವೆನಿಸುವವು= ಬಹು ದೀರ್ಘಕಾಲವಾದ ಎಷ್ಟೋ ಜನ್ಮಗಳಾದ ಸಂಸಾರದಲ್ಲಿ ಬರಲಿಕ್ಕೆ ಕಾರಣ ವೆನಿಸುತ್ತವೆ. ಹೇ ಸ್ವಾಮಿ ಎಲ್ಲ ಕಾಲದಲ್ಲಿ, ದೂರ ಓಡಿಸಿ ಭ್ರಾಮಕತ್ರಯ= ನಾನು ಅಸ್ವತಂತ್ರ, ಸ್ಥೂಲ ಇಂದ್ರಿಯಗಳು ನನ್ನವೆಂದೂ, ಭ್ರಾಂತಿ ತಿಳುವಳಿಕೆ, ದೇಹವೇ ನನ್ನದು ದಾರಾ ಪುತ್ರಾದಿಗಳೇ ನನ್ನವರು, ನಾನೇ ಕರ್ತೃನೆಂಬುವ ಈ ಮೂರು ವಿಧ ಭ್ರಾಂತಿಗಳನ್ನು ದೂರ ಓಡಿಸಲು ನೀನೇ ಸಮರ್ಥನು ಎಂದು ಪ್ರಾರ್ಥನೆ. ಅಥವಾ ಭ್ರಾಮಕ ಮೂರನ್ನು ದೂರಟ್ಟು ದೂರ ಓಡಿಸುವದು ಎಂದು ಶಿಷ್ಟ ಶಿಕ್ಷಣ, ಮಾರಿಗೊಳಗಾಗದಲೆ= ಮೃತ್ಯುವಿಗೆ ಸಿಕ್ಕದಲೆ ಜನನ ಮರಣ ಬಾಧೆ ತಪ್ಪಿಸಿಕೊಳ್ಳುವ ಉಪಾಯವೇನೆಂದರೆ, ಸರ್ವಾಧಾರಕನ ಚಿಂತಿಸುತಲಿರು=ಸಕಲ ಜಗತ್ತಿಗೆ ಆಧಾರನಾಗಿ ಧಾರಣ-ಪೋಷಣ-ಪ್ರೇರಣ ಕರ್ತಾ ಶ್ರೀಹರಿಯೆ ಎಂಬು ಸರ್ವತ್ರ ಮರೆಯದಲೇ= ಸರ್ವ ಕಾಲ ದೇಶಗಳಲ್ಲಿ ಹರಿಯ ಸ್ಮರಣೆ ಮರೆಯದೇ ಸಂತತ ಸರ್ವಕರ್ತಾ-ಕಾರಯಿತಾ ಎಂದು ಚಿಂತಿಸು. ಪಂಡಿತರು ಜ್ಞಾನಿಗಳಿಗಾದರೂ ಈ ವಿಭ್ರಮತ್ರಯ ಹರಿಯ ಇಚ್ಛೆಯಿಂದ ಇರುವವು. ಸಾಧಕ ಭಕ್ತರಲ್ಲಿ ಅನುಗ್ರಹಿಸಿ ಹರಿಯೇ ದೂರಗೈಸುವನು.

**ಶ್ರೀ ಪುರಂದರ ದಾಸಾರ್ಯರ ಸುಳಾದಿ** ॥ ನಾನೇವೇ ಕರ್ತೃನೆಂಬೋ **ಕಾರಕಭ್ರಮವೈಯ್ಯಾ** । ದೈನಂದಿನದಿ ಕರಣ ಕಾರ್ಯ ಮಾಡುವದೆಂಬೊ **ಕ್ರೀಯೊಭ್ರಮವೈಯ್ಯಾ** । ಅನಪೂರ್ವಕವಾಗಿ ಧನದಾರಾಪತ್ಯರೆನಗೆ । ಅನಿಸಿಕೊಡುವರು ಸತ್ಪಥವೆಂಬಂಥಾ **ದ್ರವ್ಯವಿಭ್ರಮವೈಯ್ಯಾ** । ಸಾನುರಾಗದಿಯೆನ್ನ ಬಹುಬಾಧಿಬಡಿಸುತಿದೆ। **ನೀನಾಗಿ ಬಿಡಿಸುತ ತವ ಧ್ಯಾನ ನೀಡಯ್ಯಾ** । ಹೀನಜನಮಂದಾರ ಪುರಂದರ ವಿಠಲನೆ। ಆ ನಮಿಸಿ

ಬೇಡುವೆ ನಿನಪಾದಯುಗಕ್ಕೆ|| ಎಂದು ಜ್ಞಾನಿಗಳು ವಿವರಿಸಿದ್ದಾರೆ. ಭ್ರಾಮಕಗಳು ಬರುವದು ಹರಿಯಾಧೀನ. ಇವುಗಳನ್ನು ಬಿಡಿಸುವದು ಹರಿಯಾಧೀನವೆಂದು ನಿಶ್ಚಯವಾಗಿ ತಿಳಿಯುವದು.

**ಭಾವಸೂಚನ** :—ಕಾರಕೇತಿ || ಕಾರಕವಿಭ್ರಮಾ=ಇಂದ್ರಿಯಗಳೇ ಜ್ಞಾನಜನಕಾ ಎಂಬ ಭ್ರಮ. ನಾನೇ ಹೋಗುತ್ತೇನೆ ಎಂಬ ಕ್ರಿಯಾಭ್ರಮ। ಪುತ್ರಾದಿಗಳಿಂದ ಸದ್ಗತಿಯೆಂತ ದ್ರವ್ಯಭ್ರಮ. || ೨೯ ||

## ಶ್ರೀವ್ಯಾಸದಾಸ ಸಿದ್ಧಾಂತ ಕೌಮುದೀ

"ಕಾರಕ" ಇತಿ || "ದ್ರವ್ಯಕ್ರಿಯಾಕಾರಕ ವಿಭ್ರಮಾಃ" ಇತಿ ಭಾಗವತೇ ದೇಹಾತ್ಮಭಾವಭ್ರಮಃ ದ್ರವ್ಯಭ್ರಮ || "ಅಹಂಕರ್ತಾ" ಇತಿ ಕ್ರಿಯಾಭ್ರಮಃ|| "ಮದೀಯಾನಿ ಇಂದ್ರಿಯಾಣಿ" ಇತಿ ಕಾರಕಭ್ರಮಃ|| "ಆತ್ಮಭಾವಃ ಶರೀರೇತುದ್ರವ್ಯಭ್ರಮಃ ಉದಾಹೃತಃ" || "ಕ್ರಿಯಾಭ್ರಮಸ್ತ್ವಹಂ ಕರ್ತಾ" ಮದೀಯಾನೀಂದ್ರಿಯಾಣಿ ತು|| ಕಾರಕಭ್ರಮ ಇತ್ಯುಕ್ತೇಃ ತ ಏತೇ ವಿಭ್ರಮಾ ಯದಾ|| ಶ್ವಾಸಾದಿ ವೃತ್ತಿಲೋಪೇನ ಪ್ರಾಣ ಉದ್ಯೋಗಿನಃ ಸದಾ|| ವಿಲೀಯಂತೇ ಪ್ರಾಣತಮ" ಇತಿ || ೨೯ ||

## ಕನ್ನಡಾರ್ಥ

ಸಂಸಾರಕ್ಕೆ ಕಾರಣಗಳಾದ ಮೂರು ಭ್ರಮಗಳನ್ನೂ ದೂರಗೊಳಿಸಿ, ನಿರಂತರ ಭಗವದ್ಧ್ಯಾನತತ್ಪರನಾದವನನ್ನು ಶ್ರೀಹರಿಯು ಭವದಿಂದ ಬಿಡಿಸಿ-ಸುಖವನ್ನೀಯುವನೆಂದು ಹೇಳುತ್ತಾರೆ. "ಕಾರಕ" ಎಂಬ ಪದ್ಯದಿಂದ.

ಶ್ರೀಮದ್ಭಾಗವತದಲ್ಲಿ—"ದ್ರವ್ಯಕ್ರಿಯಾಕಾರಕ ವಿಭ್ರಮಗಳನ್ನು ವಿಶದಪಡಿಸುತ್ತಾರೆ. ಶರೀರವನ್ನೇ ಆತ್ಮವೆಂದು ಬಗೆಯುವದು ದ್ರವ್ಯಭ್ರಮವೆನಿಸುತ್ತದೆ. "ನಾನು ಮಾಡುವವನು-ಕರ್ತನು" ಎಂದು ಬಗೆಯುವದು ಕ್ರಿಯಾಭ್ರಮವೆನಿಸುತ್ತದೆ. "ಜ್ಞಾನಕ್ರಿಯಾ ಸಾಧನಗಳಾದ ಇಂದ್ರಿಯಗಳು ನನ್ನವು ನನ್ನ ಅಧೀನಗಳು" ಎಂದು ಬಗೆಯುವದು ಕಾರಕವಿಭ್ರಮವೆನಿಸುತ್ತದೆ" ಎಂದು ಮುಂತಾಗಿ ನಿರೂಪಿಸಿರುತ್ತಾರೆ. || ೨೯ ||

**ಅವತರಣಿಕಾ**: ಇಂದ್ರಿಯಗಳಿಂದ ತತ್ವಪತಿಗಳ ದ್ವಾರಾ ಶ್ರೀಹರಿ ಕರ್ಮ ಮಾಡಿಸದಿರಲು, ಜೀವನು ಜಡತುಲ್ಯ, ಇಂದ್ರಿಯಗಳೇ ಜ್ಞಾನಜನಕವೆಂಬದು

ಇತ್ಯಾದಿಗಳು ಹರಿಯಾಧೀನವೆಂದೂ, ಇಂದ್ರಿಯಗಳೇ ಕರ್ಮ ಮಾಡಲು ಶಕ್ತ ವಾದರೆ ಸುಷುಪ್ತಿಯಲ್ಲಿ ಸುಮ್ಮಗಿರುವದೇಕೆ? ನೀನೆ ಕರ್ತೃನಾದರೆ ಮರಣ ಬಂದರೆ ಏಕೆ ಪರಿಹರಿಸಿಕೊಳ್ಳದಿರುವಿ ಎಂದು ಶಿಕ್ಷಿಸುತ್ತಾರೆ

**ಕರಣ ಕರ್ಮವ ಮಾಡಿದರೆ ವಿ ।**
**ಸ್ಮರಣೆ ಕಾಲದಿ ಮಾತುಗಳಿಗು ।**
**ತ್ತರವ ಕೊಡದಲೆ ಸುಮ್ಮನಿಪ್ಪನು ಜಾಗರಾವಸ್ಥೆ ॥**
**ಕರುಣಿಸಲು ವ್ಯಾಪಾರ ಮಾಡುವ ।**
**ಬರಲು ನಾಲ್ಕಾವಸ್ಥೆಗಳು ಪರಿ ।**
**ಹರಿಸಿಕೊಳನೇತಕೆ ಸ್ವತಂತ್ರನು ತಾನೆಯೆಂಬುವನು ॥೩೦॥**

**ಪದ್ಯಾರ್ಥ :—**ಕರಣಕರ್ಮವ ಮಾಡಿದರೆ=ಕರಣ= ಇಂದ್ರಿಯಗಳಳೇ ಕರ್ಮಮಾಡಲು ಶಕ್ತರಾದರೆ ವಿಸ್ಮರಣೆಕಾಲದಲ್ಲಿ=ಮೈಮೇಲೆ ಎಚ್ಚರವಿಲ್ಲದಾಗ್ಗೆ ನಿದ್ರಾವಸ್ಥಾ, ಮತ್ತು ಮೂರ್ಛಾವಸ್ಥೆಯಲ್ಲಿ ಯಾರಾದರೂ ಮಾತಾಡಿಸಿದರೆ, ನಿನ್ನ ಕಿವಿಗಳಾದ ಇಂದ್ರಿಯಗಳು ಸ್ವತಂತ್ರವಾದರೆ, ಯಾಕೆಕೇಳಿಸುವದಿಲ್ಲ. ನೀನು ಮುಖ ವಾಗೇಂದ್ರಿಯದಿಂದ, ಯಾಕೆ, ಉತ್ತರವ ಕೊಡದಲೆ ಸುಮ್ಮನಿಪ್ಪನು= ಮಾತಾಡಿಸಿದವರಿಗೆ ಪ್ರತಿಮಾತು ಹೇಳದೆ ಉತ್ತರ ಕೊಡಲಿಕ್ಕೆ ನೀನು ನಿನ್ನ ಇಂದ್ರಿಯಗಳು ಸ್ವತಂತ್ರಗಳೇ ಹೇಳು? ಜಾಗರಾವಸ್ಥೆ ಕರುಣಿಸಲು ವ್ಯಾಪಾರ ಮಾಡುವ=ಶ್ರೀಹರಿಯು ವಿಶ್ವನಾಮಕನು ಬಲಗಣ್ಣಿಗೆ ಬಂದು ಜಾಗ್ರತೆ ಎಚ್ಚರಿಕೆ ಕೊಡಲು, ಸಕಲ ಕ್ರಿಯೆಗಳನ್ನು ವಿಶ್ವನಾಜ್ಞೆಯಂತೆ ಮಾಡುವ, ಈ ಅವಸ್ಥಾತ್ರಯಗಳಲ್ಲಿಯೂ ಶ್ರೀಹರಿಯ ಆಧೀನವಿರಲು, ತಿಳಿಯದ್ದೇ ತಾನೇ ಸ್ವತಂತ್ರನೆಂಬುವನು. ಬರಲು ನಾಲ್ಕಾವಸ್ಥೆಗಳು ಪರಿಹರಿಸಿಕೊಳನೇತಕೆ= ನಾಲ್ಕನೇ ಅವಸ್ಥೆ ಮರಣಾವಸ್ಥೆ ಬಂದರೆ=ಜೀವನು ಸ್ವತಂತ್ರ ದೇಹವೇ ತನ್ನದಾದರೆ ಆಯುಸ್ಸು ಮುಗಿವಡೆ. ಯಮದೂತರು ಬಂದು ಮೃತ್ಯುಪಾಶವನ್ನು ಹಾಕಿ ಎಳೆಯುತ್ತಾರೆ. ಜೀವಾಂತರ್ಯಾಮಿ ವಾಯುವಾಹನ ಹರಿಯು ಜೀವನನ್ನು ದೇಹದಿಂದ ವಿಯೋಗಗೊಳಿಸುತ್ತಾನೆ. ಈ ನಾಲ್ಕನೇ ಅವಸ್ಥೆಯಲ್ಲಿ ದೇಹ ನಿನ್ನದಾದರೆ ಮೃತ್ಯು ಏತಕ್ಕೆ ಪರಿಹಾರ ಮಾಡಕೊಳ್ಳದಿರುವಿ.

ನಿನ್ನ ಸ್ವತಂತ್ರ ಎಲ್ಲಿ ಪೋಯಿತು ಹೇಳು? ವಿಸ್ಮರಣೆ=ಮೂರ್ಛಾ ಅವಸ್ಥಾ ನಿದ್ರಾ ಸುಷುಪ್ತಿಯಲ್ಲೇ ಗಣನೆ ಎಂದು ಜ್ಞಾನಿಗಳ ಮತ.

**ಭಾಸೂಚನ :**—ಕರಣೇತಿ ॥ ಇಂದ್ರಿಯ ॥೩೦॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಂ ಯುಕ್ತ್ಯಾ ದೃಢಯತಿ—"ಕರಣ" ಇತಿ ॥ "ನಾಲ್ಕು"—ಮೋಹೇನ ಸಹ ॥ ೩೦ ॥

## ಕನ್ನಡಾರ್ಥ

ಹಿಂದಿನ ಪದ್ಯದಲ್ಲಿ ಹೇಳಿದುದನ್ನು ಯುಕ್ತಿಯಿಂದ ಸಮರ್ಥಿಸುತ್ತಾರೆ—"ಕರಣ" ಎಂಬ ಪದದಿಂದ. ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಮೂರು ಅವಸ್ಥೆಗಳು. ಮೋಹವೆಂಬುದು ನಾಲ್ಕನೆಯ ಅವಸ್ಥೆ ಎಂದು ಇಲ್ಲಿ ಅಭಿಪ್ರಾಯವನ್ನು ತಿಳಿಯಬೇಕು. ॥ ೩೦ ॥

**ಅವತರಣಿಕಾ :**—ದಾಸಾರ್ಯರು ಬಹುಕರುಣಾಳುಗಳು. ಹಿಂದೆ ಹೇಳಿದ ಎಲ್ಲ ವಿಚಾರಗಳು, ನನ್ನ ಸ್ವಬುದ್ಧಿಯಿಂದ ಪೇಳಿದ ಯುಕ್ತಿಯ ಮಾತುಗಳಲ್ಲ ವೇದ ಉಪನಿಷತ್ ಸ್ಮೃತಿ ವಾಕ್ಯಗಳು ಇವನ್ನು ವಿಚಾರಿಸಿ ನಂಬಿರಿ ಸ್ವತಂತ್ರನಾದ ಹರಿಯ ಭಜಿಸಿರಿ. ಮುಕ್ತಿಪಥಕ್ಕೆ ಸೋಪಾನವೆಂದು ಶಿಷ್ಯರನ್ನು ಶಿಕ್ಷಿಸುತ್ತಾರೆ.

**ಯುಕ್ತಿ ಮಾತುಗಳಲ್ಲ ಶ್ರುತಿಸ್ಮೃ।**
**ತ್ಯುಕ್ತ ಮಾತುಗಳಿವು ವಿಚಾರಿಸೆ।**
**ಮುಕ್ತಿಗಿವು ಸೋಪಾನವೆನಿಪವು ಪ್ರತಿ-ಪ್ರತಿ ಪದವು॥**
**ಭಕ್ತಿಪೂರ್ವಕ ಪಠಿಸುವವರಿಗೆ।**
**ವ್ಯಕ್ತಿ ಕೊಡುವ ಸ್ವರೂಪಸುಖ ಪ್ರವಿ।**
**ವಿಕ್ತರನ ಮಾಡುವನು ಭವಭಯದಿಂದ ಬಹುರೂಪ ॥೩೧॥**

**ಪದ್ಯಾರ್ಥ :**—ಯುಕ್ತಿ ಮಾತುಗಳಲ್ಲ=ಹಿಂದೆ ಹೇಳಿದ ಎಲ್ಲ, ವಿಷಯಗಳು ಬರೇ, ಅನುಮಾನ=ಮನಬಂದ ತರ್ಕಗಳಲ್ಲ. ಶ್ರುತಿ-ಸ್ಮೃತ್ಯುಕ್ತ ಮಾತುಗಳಿವು=ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ಹೇಳಿದ ವಚನಗಳು

೩ವು, ಶ್ರುತಿಯಲ್ಲಿ ಇಂದ್ರಿಯಗಳಿಗೆ ಪ್ರೇರಕನಿಯಾಮಕ ಹರಿಯೆಯೆಂದು ಹೇಳಿವೆ. ಕಾರಣ ವಿಚಾರಿಸೆ=ಜ್ಞಾನಿಗಳಾದವರ ಮುಖದಿಂದ ವಿಚಾರಿಸಿರಿ. ನಿಮ್ಮ ಬುದ್ಧಿಗೆ ಹರಿಪ್ರೇರಿಸಿ ತಿಳಿಸಿದಷ್ಟು ತಿಳಿಯರಿ, (ಜೀವನು ಜ್ಞಾನಸಿಷ್ಟ ವಾದ ಕಾರಣ ಜ್ಞಾನಕ್ಕೂ ಹರಿಬೋಧಕನಾದುದರಿಂದ) ಹರಿಯು ತಿಳಿಸಿದಷ್ಟು ತಿಳಿಯಿರಿ. ಮುಕ್ತಿಗಿವು ಸೋಪಾನವೆನಿಪವು ಪ್ರತಿಪ್ರತಿ ಪದವೂ॥ ಹಿಂದೆ ಪೇಳಿದ ಪ್ರತಿಯೊಂದು ಶಬ್ದ, ಪದಗಳು. (ಒಂದು ಅರ್ಥವನ್ನು ಕೊಡುವ ಅಕ್ಷರಗಳ ಗುಂಪಿಗೆ ಪದವೆಂದು ಸಾಮಾನ್ಯ ಅರ್ಥವೇದದಲ್ಲಿಯೂ ಪದಕ್ರಮಾದಿ ವಿಭೇದ) ಮೋಕ್ಷವನ್ನು ಹೊಂದಲು. ವೈಕುಂಠ ಮಾರ್ಗಕ್ಕೆ ಒಂದೊಂದು ಪದಗಳು, ಸೋಪಾನ=ಒಂದೊಂದು ಪಾವಟಿಗೆಗಳೆಂದೆನಿಸುವವು. ಭಕ್ತಿಪೂರ್ವಕ ಪಠಿಸುವವರಿಗೆ=ಯಾರು ಭಗವಂತನೆ ಸರ್ವಕರ್ತಾ ಸ್ವತಂತ್ರ ನೆಂಬ ಸುಜ್ಞಾನ ದೃಢ ನಂಬಿಕೆಯಿಂದ ಪಠಿಸುವರೋ, ಅವರಿಗೆ, ಸ್ವರೂಪಸುಖ ವ್ಯಕ್ತಿ ಕೊಡುವ=ಸ್ವರೂಪಾನಂದ ಆವಿರ್ಭಾವ ಮಾಡುವನು. ಅಲ್ಲದೇ, ತಾನು ಬಹುರೂಪದಿಂದ ಅನೇಕ ರೂಪದಿಂದ ಭವಭಯದಿಂದ=ಸಂಸಾರಕ್ಕೆ ಕಾರಣ ವಾದ ಭಯ. ಲಿಂಗದೇಹದಿಂದ, ಪ್ರವಿವಿಕ್ತರನ ಮಾಡುವ=ಭಿನ್ನ ಪ್ರತ್ಯೇಕ, ಬೇರೆ ಮಾಡುವನು. ಲಿಂಗದೇಹ ಭಂಗಮಾಡಿ ಸ್ವರೂಪಾನಂದ ಸುಖ ವ್ಯಕ್ತಿ ಮಾಡುವನು.

**ಭಾವಸೂಚನ:—ಯುಕ್ತೇತಿ॥ ಸೌಪಾನ॥ ಪಾವುಟಗೀ ॥೩೧॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಕ್ತಸ್ಯ ನಿರ್ಮೂಲತ್ವ ಚೋದ್ಯಂ ನಿರಾಹ—"ಯುಕ್ತಿ" ಇತಿ॥ ಜ್ಯೋತಿ ರಾದ್ಯಧಿಷ್ಠಾನಸೂತ್ರಂ ಪ್ರಾಣವತಾ" ಇತಿ ಚ॥ "ಶ್ರೋತ್ರೇಣ ಶ್ರಾವಯತಿ" ಇತ್ಯಾದೇಃ॥ "ತಿಳಿವಳಿ(ಡೆ)" ಇತಿ॥ "ತಿಳಿವಿಕೆಯು ನೀನಾಗಿ" ಇತ್ಯುಕ್ತೇಃ॥ ಗೋಪಾಲದಾಸರಾಜೋಕ್ತೇಃ॥ ತ್ರಯೋದಶಗೀತಾತಾತ್ಪರ್ಯೇ ಚ "ಕರ್ತೃಕರ್ಮವಿರೋಧವಾದಿಮತಂ ನಿರಾಕರೋತಿ ಉತ್ತರಜ್ಞೇಯ ಶಬ್ದೇನ॥ "ಸ್ವವೇತ್ತಾ ವೇದನಂ ಚ ಸ್ವಂ ಸ್ವೇನ ವೇದ್ಯಶ್ಚ ಕೇಶವಃ॥ ಪರಸ್ಯ ನೇತ್ತಾ ವಿತ್ತಿಶ್ಚ. ವೇದ್ಯಶ್ಚ ಸ್ಯಾತ್ ಪರೈಃ ಕ್ವಚಿತ್॥ ತತ್ಪ್ರಸಾದಂ ವಿನಾ ಕಶ್ಚಿತ್ ನೈವ ವೇತ್ತುಂ ಹಿ ಶಕ್ನುಯಾತ್॥ ಸ್ವವೇದನೇಽನ್ಯ ವಿತ್ತೌವಾ ನಾಸಾವನ್ಯಹ ಪೇಕ್ಷತೇ"॥ ॥ಇತಿ॥ ॥೩೧॥

## ಕನ್ನಡಾರ್ಥ

ಹಿಂದೆ ಹೇಳಿದುದು ನಿರಾಧಾರವಲ್ಲ, ಎಂದು. ಹಿಂದೆ ಹೇಳಿದ ವಿಷಯಗಳ ಬಗ್ಗೆ ಪ್ರಮಾಣಗಳನ್ನು ಹೇಳಿ, ನಿರ್ಮೂಲತ್ವ ಸಂಶಯವನ್ನು ಪರಿಹರಿಸುತಾರೆ—"ಯುಕ್ತಿ" ಎಂಬ ಪದ್ಯದಿಂದ.

"ಜ್ಯೋತಿರಾದ್ಯಧಿಷ್ಠಾನಂ ತದಾ ಮನನಾತ್" "ಪ್ರಾಣವತಾ ಶಬ್ದಾತ್" ಎಂಬ ಸೂತ್ರಗಳಲ್ಲಿ—"ಅಗ್ನಿ ಮುಂತಾದವುಗಳಿಗೆ ಪ್ರೇರಕನಾದ ಶ್ರೀಹರಿಯೇ ಚಕ್ಷುರಾದಿ ಇಂದ್ರಿಯಗಳಿಗೆ ಪ್ರೇರಕನು. "ಯಃ ಚಕ್ಷುಷಿ ತಿಷ್ಠನ್" ಎಂಬ ಶ್ರುತಿಗಳಲ್ಲಿ ಹೀಗೆ ಹೇಳಲಾಗಿರುತ್ತದೆ. ಪರಮಾತ್ಮನು (ತನ್ನಿಂದ ಪ್ರೇರಿತವಾದ) ತನ್ನ ಇಂದ್ರಿಯ(ಕರಣ)ಗಳಿಂದ ಪರಾಧೀನ ಕರ್ತೃನಾದ ಜೀವನಿಂದ ದರ್ಶನ ಮುಂತಾದ ಕ್ರಿಯೆಗಳನ್ನು ಮಾಡಿಸುತ್ತಾನೆ. ಯಾಕಂದರೆ "ಏಷ ಹ್ಯನೇನ" ಎಂದು ಶ್ರುತಿಯು ಹೀಗೇ ಹೇಳುತ್ತದೆ." ಎಂಬುದಾಗಿ ಪರಮಾತ್ಮನೇ ಸರ್ವೇಂದ್ರಿಯ ಪ್ರೇರಕನು. ಅವನು ಜೀವರನ್ನು ದರ್ಶನಾದಿಗಳಲ್ಲಿ ಪರ್ವರ್ತಿಸುವನು" ಎಂದು ಹೇಳಲಾಗಿರುತ್ತದೆ. ತನ್ನ ಇಂದ್ರಿಗಳಿಂದ ತನ್ನ ಸ್ವರೂಪಭೂತವಾದ ಜ್ಞಾನವನ್ನು ತಾನೇ ಹುಟ್ಟಿಸಿಕೊಳ್ಳುತ್ತಾನೆ. ತನಗೆ ತಾನು ಜ್ಞೇಯವೆಂದು ತಿಳಿಯಬೇಕು. ಗೋಪಾಲದಾಸಾರ್ಯರು ತಮ್ಮ ಸುಳಾದಿಯಲ್ಲಿ ಭಗವಂತನನ್ನು ಹಾಗೆ ಸ್ತುತಿಸಿರುತ್ತಾರೆ.

೧೩ನೆಯ ಅಧ್ಯಾಯ ಗೀತಾತಾತ್ಪರ್ಯದಲ್ಲಿ ಜ್ಞಾನಜ್ಞೇಯಗಳ ವಿಷಯವಾಗಿ ಹೀಗೆ ನಿರೂಪಿತವಾಗಿದೆ.

"ಸ್ವಯಮೇವಾತ್ಮನಾತ್ಮಾನಂ ವೇತ್ಥೇತಿ. ಸ್ವಜ್ಞೇಯತ್ವಾತ್ ಸ್ವಜ್ಞೇಯತ್ವಾತ್ ಜ್ಞೇಯಮ್ ಅನ್ಯಜ್ಞೇಯತ್ವಸ್ಯ ಜ್ಞೇಯಂ ಯತ್‌ತದಿತಿ ಪೂರ್ವಮೇವೋಕ್ತತ್ವಾತ್ ॥ ಎಂಬ ವಚನಗಳಿಂದ ಪರಮಾತ್ಮನು—"ತನಗೆ ತಾನು ಜ್ಞೇಯ" ಎಂದು ಹೇಳಲಾಗಿರುತ್ತದೆ. ಹಾಗಾದರೆ ಒಂದೇ ಜ್ಞಾನದಲ್ಲಿ ಪರಮಾತ್ಮನೇ ವಿಷಯ; ಅವನೇ ಕರ್ತ-ಆಶ್ರಯ; ಅಂದರೆ ತಾನೆ ತಿಳಿಯುವವನು; ಮತ್ತು ತಿಳಿಯಲ್ಪಡತಕ್ಕನು." ಎಂದು ಹೇಳಿದಂತೆ ಆಗುತ್ತದೆ. ಇದು ವಿರುದ್ಧವಾದುದು. ಹೀಗೆ ಕರ್ತೃಕರ್ಮ ಭಾವ ವಿರೋಧವಾದಿಗಳ ಪೂರ್ವಪಕ್ಷವನ್ನು ನಿರಾಕರಿಸಲು ಮುಂದೆ-ಉತ್ತರದಲ್ಲಿ ಜ್ಞಾನಶಬ್ದವನ್ನು ಉಪಯೋಗಿ

ಸಿರುತ್ತಾರೆ. ಜ್ಞಾನಕರ್ಮತ್ವ ಹಾಗೂ ಜ್ಞಾತೃತ್ವ ; ಇವೆರಡೂ ಪರಮಾತ್ಮ ನೊಬ್ಬನಲ್ಲಿ ಸಂಮಿಳಿತವಾಗಿರುತ್ತವೆ. ಈ ವಿಷಯದಲ್ಲಿ ಪ್ರಮಾಣಗಳನ್ನು ತೋರಿಸಿರುತ್ತಾರೆ.

" ತಾನೇ ತಿಳಿಯುವವನು ; ತಾನೇ ಜ್ಞಾನರೂಪನು ; ತಾನೇ ಜ್ಞಾನ ದಿಂದ ತಿಳಿಯಲ್ಪಡತಕ್ಕವನು " ಕೇಶವನು ಹೀಗೆ ಜ್ಞಾತೃ-ಜ್ಞಾನ-ಜ್ಞೇಯ ರೂಪನು. ಎರಡನೆಯವರನ್ನೂ ತಿಳಿಯುತ್ತಾನೆ. ಭಗವಂತನ ಪ್ರಸಾದದಿಂದ ಒಮ್ಮೊಮ್ಮೆ ಪರರೂ ಭಗವಂತನನ್ನು ತಿಳಿಯಬಹುದು. ಅವನ ಅನುಗ್ರಹ ವಿಲ್ಲದೆ ಯಾರೂ ಆ ಹರಿಯನ್ನು ತಿಳಿಯಲು ಶಕ್ತರಾಗುವುದಿಲ್ಲ. ಆದರೆ-ಪರ ಮಾತ್ಮನು-ತನ್ನ ಜ್ಞಾನದಲ್ಲಿಯಾಗಲೀ ಪರರ ಬಗ್ಗೆಯ ಜ್ಞಾನದಲ್ಲಿಯಾಗಲೀ ಜೀವರಂತೆ. ಪರರನ್ನು ಅವಲಂಬಿಸುವುದಿಲ್ಲ " ಎಂದು ಹೇಳಲಾಗಿರುತ್ತದೆ.

ಆದುದರಿಂದ ಹಿಂದೆ ಹೇಳಿದುದೆಲ್ಲವೂ ಪ್ರಮಾಣ ಪ್ರಮಿತವೆಂಬುದಾಗಿ ಭಾವಿಸಬೇಕು. ॥ ೩೧ ॥

**ಅವತರಣಿಕಾ :—**ಶ್ರೀ ಲಕ್ಷ್ಮೀಪತಿಯ ಅನಂತ ಜ್ಞಾನಾನಂದ ಮಾಣಿಕ್ಯಮಣಿಗಳನ್ನು ವಾಯುಜ್ಞಾನವೆಂಬ ದಾರದಿಂದ ಪೋಣಿಸಿದ ಮಾಲೆಯು ಶ್ರೀ ವಾಙ್ಮಯಹರಿಗೆ ಅರ್ಪಿಸಿದುದು. ಇದು ಜ್ಞಾನಿಗಳಿಗೆ ಸುಖಕರ ಕಾಣುವುದಲ್ಲದೆ ಅಜ್ಞಾನಿಗಳಿಗೆ ಸಹಿಸಲಾಗದು ಎಂದು ಮರ್ಕಟ ಮಾಣಿಕ್ಯ ದೃಷ್ಟಾಂತದಿಂದ ಹೇಳುತ್ತಾರೆ.

**ಶ್ರೀನಿವಾಸನ ಸುಗುಣ ಮಣಿಗಳ ।**
**ಪ್ರಾಣಮತ ವಯುನಾಖ್ಯ ಸೂತ್ರದಿ ।**
**ಪೋಣಿಸಿದ ಮಾಲಿಕೆಯು ವಾಙ್ಮಯನಂಸಗರ್ಪಿಸಿದ ॥**
**ಜ್ಞಾನಿಗಳ ದೃಗ್ವಿಷಯಯವಹುದ ।**
**ಜ್ಞಾನಿಗಳಿಗೆ ಅಸಹ್ಯ ತೋರ್ಪದು ।**
**ಮಾಣಿಕವ ಮರ್ಕಟನ ಕೈಯಲಿ ಕೊಟ್ಟ ತೆರದಂತೆ ॥ ೩೨ ॥**

**ಪದ್ಯಾರ್ಥ :—**ಶ್ರೀನಿವಾಸನ=ಶ್ರೀ ಲಕ್ಷ್ಮೀಹೃದಯದಿ ವಾಸಮಾಡಿ ಶ್ರೀದೇವಿಗೆ ಬಿಂಬನಾದ ಶ್ರೀರೂಪಿ ವಿಜ್ಞಾನಮಯ, ಸುಗುಣಮಣಿಗಳ=

ಸಮೀಚೀನವಾದ ಸಚ್ಚಿದಾನಂದ ಜ್ಞಾನಾದಿ, ಮಾಣಿಕ್ಯ ಬೆಲೆ ಬಾಳುವ ಅಮೌಲ್ಯವಾದ, ಶ್ರೇಷ್ಠವಾದ ಗುಣ ಮಾಣಿಕ್ಯಗಳನ್ನು, ಪ್ರಾಣಮತ=ಪ್ರಾಣ ವಾಯುದೇವರ ನಿಜಮತವಾದ ವಾಯುವೇ ಜ್ಞಾನವಿಜ್ಞಾನಿಗಳು ಇಂಥ ವಯುನಾಖ್ಯ=ಜ್ಞಾನವೆಂಬ ಸೂತ್ರದಿ=ದೃಢತರವಾದ ಜ್ಞಾನವೆಂಬ ದಾರ ದಲ್ಲಿ ಪೋಣಿಸಿದ ಮಾಲಿಕೆಯು=ಜೋಡಿಸಿದ ಈ ಮಾಣಿಕ್ಯ ಮಣಿಹಾರವು, ವಾಂಙ್ಮಯ=ವಾಗಭಿಮಾನಿ ಉಮಾರುದ್ರಾಂತರ್ಗತ ಪ್ರಾಣಾಂತರ್ಯಾಮಿ ವಾಂಙ್ಮಯ ಶ್ರೀಹರಿಯ, ಅಂಸ=ಸ್ಕಂದಕೊರಳಿಗ, ಅರ್ಪಿಸಿದ=ಭಕ್ತಿಪೂರ್ವಕ ಶ್ರೀಕೃಷ್ಣ ಪ್ರೀತನಾಗಲೆಂದು ಕೊರಳಲ್ಲಿ ಹಾಕಿ ಶ್ರೀಶನೆ ಸ್ವೀಕರಿಸು ಎಂದು ಕೊಟ್ಟ ಈ ನವರತ್ನಗುಣಗಳ ಮಾಲೆಯು, ಜ್ಞಾನಿಗಳಿಗೆ ದೃಗ್ವಿಷಯವಹದು= ಸೂಕ್ಷ್ಮಜ್ಞಾನಿಗಳು ಜ್ಞಾನಯೋಗಿಗಳಿಗೆ ಕಾಣಲು ಯೋಗ್ಯ, ತಿಳಿಯಲು ಉಚಿತವಾದದ್ದು, ಜ್ಞಾನೈಕ ಲಭ್ಯವಾದದ್ದು. ಹರಿಯ ಗುಣಮಾಲೆಯು, ಅಜ್ಞಾನಿಗಳಿಗೆ ಅಸಹ್ಯತೋರ್ಪುದು=ಮಂದಮತಿಗಳು ನಿಜವಾದ ತಾರತಮ್ಯ ಪಂಚಭೇದವರಿಯದ ಅಜ್ಞಾನಿಗಳಿಗೆ ಇದು ಅಸಹ್ಯ=ಕೆಟ್ಟಕಾಣಿಸುವದು, ಸಹಿಸಲಾರದದು. ಹೇಗಂದರೆ ಮಾಣಿಕವ=ಬೆಲೆ ಬಾಳುವ ಕೆಂಪುರತ್ನವನ್ನು, ಮರ್ಕಟ=ಚಂಚಲವೃತ್ತಿಯುಳ್ಳ ಕೋತಿಯ ಕೈಯಲ್ಲಿ ಕೊಟ್ಟ ತೆರದಂತೆ, ಮರ್ಕಟ=ಮರ್ಕತೀತಿ ಮರ್ಕಟಃ=ಫಲಾದಿಗಳನ್ನು ಗ್ರಹಣಮಾಡುವ ಚಂಚಲವೃತ್ತಿ ಮಂಗ್ಯಾಗೆ, ರತ್ನಾಹಾರ ಕೊಡಲು, ಕಡಿದು ಬಿಸಾಡುತ್ತದೆ. ಮರ್ಕಟನಂತೆ ಅಜ್ಞಾನಿಗಳು ಚಂಚಲವೃತ್ತಿಗಳು.

**ಭಾವಸೂಚನ :—**ಶ್ರೀತಿ ॥ ವಯುನಜ್ಞಾನದಿಂದ ॥ ತ್ವದ್ದತ್ತಯಾ ವಯುನೇತ್ಯತ್ರ ತಸ್ಯ ಜ್ಞಾನೇ ಪ್ರಯೋಗಾತ್ ॥ ೩೨ ॥

**ಸೂಚನೆ :—**ಹಿಂದೆ ಸಂಧಿ ೭ ಪದ್ಯ ೬ರಲ್ಲಿ ವಾಂಙ್ಮಯರೂಪ ವಿವರಿ ಸಿದೆ. ವಾಗೀಂದ್ರಿಯದಲ್ಲಿದ್ದು ವಚನವ್ಯಾಪಾರಗಳನ್ನು ಮಾಡಿ ನಿರ್ವಹಿಸಿ ಕೊಡುವುದರಿಂದ ವಾಂಙ್ಮಯನೆಂದು ಶ್ರೀಹರಿಯ ನಾಮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ ॥ "ವಯುನ"-ಜ್ಞಾನಂ ॥ "ತ್ವದ್ದತ್ತಯಾ ವಯುನಯಾ" ಇತಿ ಭಾಗವತೇ ॥ ೩೨ ॥

## ಕನ್ನಡಾರ್ಥ

"ಈ ಗ್ರಂಥಮಾಲಿಕೆಯು ಜ್ಞಾನಿಗಳಿಗೆ ಮೆಚ್ಚಿಗೆಯಾಗುವದು ; ಅಜ್ಞರಿಗೆ ಇದರ ಮಹತ್ವವು ತಿಳಿಯಲಾರದು" ಈ ವಿಷಯವನ್ನು ದೃಷ್ಟಾಂತದಿಂದ ಉಪಪಾದಿಸುತ್ತಾರೆ "ಶ್ರೀನಿವಾಸನ" ಎಂಬ ಪದ್ಯದಿಂದ.

"ವಯುನ"—ಜ್ಞಾನ. ಭಾಗವತದಲ್ಲಿ "ನಿನ್ನಿಂದ ಕೊಡಲ್ಪಟ್ಟ ವಯುನದಿಂದ-ಜ್ಞಾನದಿಂದ" ಎಂದು ಒಂದು ಶ್ಲೋಕದಲ್ಲಿ ಹೇಳಲಾಗಿರುತ್ತದೆ. ॥ ೩೨ ॥

**ಅವತರಣಿಕಾ :—**ಈ ವಾಙ್ಮಯರೂಪಿಯು, ಶ್ರೀಹರಿಯೇ ಬಿಂಬರೂಪಿಯು, ಸಕಲರಿಂದ ಪೂಜ್ಯ ಸರ್ವೋತ್ತಮೋತ್ತಮನೆಂದು ಶ್ರೀಹರಿಯ ಗುಣಾತಿಶಯಗಳನ್ನು ಪುನಃಪುನಃ ಸ್ತೋತ್ರಗೈಯ್ಯುತ್ತಾರೆ.

**ಶ್ರೀ ವಿಧೀರ ವಿಪಾಹಿಪೇಶ ಶ।**
**ಚೀವರಾತ್ಮಭವಾರ್ಕ ಶಶಿ ದಿ।**
**ಗ್ದೇವ ಋಷಿ ಗಂಧರ್ವಕಿನ್ನರ ಸಿದ್ಧಸಾಧ್ಯಗಣ ॥**
**ಸೇವಿತ ಪದಾಂಭೋಜ ತ್ವತ್ಪಾ।**
**ದಾವಿಲಂಬಿಗಳಾದ ಭಕ್ತರ।**
**ಕಾವ ಕರುಣಾಸಾಂದ್ರ ಲಕ್ಷ್ಮೀಹೃತ್ಕುಮುದಚಂದ್ರ ॥ ೩೩ ॥**

**ಪದ್ಯಾರ್ಥ :—**ಶ್ರೀ=ಇಂದಿರಾ, ರಮಾ, ವಿಧಿ=ಬ್ರಹ್ಮ ಈರ=ವಾಯು, ವಿಪ=ಪಕ್ಷಿ ಶ್ರೇಷ್ಠ ಗರುಡ, ಅಹಿಪ=ಸರ್ಪಗಳ ಒಡೆಯ ಶೇಷ, ಈಶ=ಇಷ್ಟೇ ಇತಿ ಈಶ=ಸಮರ್ಥನಾವನೋ ಈಶ, ಇಲ್ಲಿ ದೇವತೆಗಳಿಗೆ ಈಶ ಮಹದೇವ ರುದ್ರ, ಶಚಿವರ=ಶಚಿ ಪತಿ ಇಂದ್ರ, ಆತ್ಮಭವ=ತನ್ನಿಂದ ಹರಿಯಿಂದ ಪುಟ್ಟಿದ ಕಾಮ, ಅರ್ಕ=ಸೂರ್ಯ, ಶಶಿ=ಚಂದ್ರ, ದಿಗ್ದೇವ=ದಿಕ್ಕಿಗೆ ಅಭಿಮಾನಿಗಳಾದ ಸಮಸ್ತ ದೇವತೆಗಳು, ಋಷಿ=ನಾರದಾದಿ ಶತಕೋಟಿ ಋಷಿಗಳು, ಅಂತರಜ್ಞಾನ ಉಳ್ಳವರು, ಗಂಧರ್ವರು=ಗಾನಕಲೆಯಲ್ಲಿ ಕುಶಲರು, ಕಿನ್ನರ=ಕುತ್ಸಿತೋನರಃ ಕಿನ್ನರಃ ದೇವಯೋನಿಯಲ್ಲಿ ಅವರರಾದವರು, ದೇವಸೇವಕರು. ಇವರಮುಖ ಕುದುರೆಮೋರೆ, ಕೆಳಗಿನ

ದೇಹ ಮನುಜಾಕೃತಿ ಕಾರಣ ಕಿನ್ನರರೆಂದು ಹೆಸರು, ಸಿದ್ಧಸಾಧ್ಯದೇವ= ಪರಿಚಾರಕ ಒಂದು ಗಣಗಳು, ಇವರೆಲ್ಲರಿಂದ ಸೇವಿತಪದಾಂಬುಜ=ಸೇವೆ ಮಾಡಿಸಿಕೊಳ್ಳುವಂತಹ ಪಾದಪದ್ಮಗಳುಳ್ಳ ಶ್ರೀಹರಿಯು, ತತ್ಪಾದಾವಿಲಂಬಿ ಗಳಾದಭಕ್ತರ=ತನ್ನ ಪಾದದಲ್ಲಿ ಮಹಾಭಕ್ತಿಯುಳ್ಳವರು, ಹರಿಯಪಾದಾಶ್ರಿತ ಮಾಡಿದ ನಿಜಭಕ್ತರನ್ನು, ಕಾವ=ಕಾಯುವ, ಸಂವರಕ್ಷಿಸುವ, ಕರುಣಾ ಸಾಂದ್ರ=ಅಂತಃಕರುಣ ರಾಶಿಯಿಂದ ತುಂಬಿದವ, ದಯಾಮಯ, ಲಕ್ಷ್ಮೀ ಹೃತ್ಕುಮುದಚಂದ್ರ=ಶ್ರೀರಮಾದೇವಿಯ ಹೃದಯಕಮಲ, ಕೆನ್ನೈದಿಲೆಗೆ ಚಂದ್ರನಂತೆ ಆನಂದ ಕೊಡುವನು, ಆನಂದವಿಜ್ಞಾನಮಯನು.

**ಭಾವಸೂಚನ :**—ಶ್ರೀತಿ || ಈರ ವಾಯು ವಿಪ ಗರುಡ ಅಹಿಪ ಶೇಷ, ಆತ್ಮಭವ, ಮುಖಬ್ರಹ್ಮ, ಅಮುಖ್ಯದಿಂದ ಕಾಮನ್ನ ತೆಗೆದುಕೊಳ್ಳ ಬೇಕು ಕಾಮಜನಕ || ೩೩ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ || "ಈರ" ವಾಯು || "ವಿಪ"-ಗರುಡ || "ಆತ್ಮಭವ"-ಕಾಮ || ೩೩ ||

## ಕನ್ನಡಾರ್ಥ

ಭಕ್ತರಕ್ಷಕನೆಂದು ಪರಮಾತ್ಮನನ್ನು ಸ್ತುತಿಸುತ್ತಾರೆ. "ಶ್ರೀ" ಎಂಬ ಪದ್ಯದಿಂದ. (ಪದ್ಯಾರ್ಥವು ಸುಗಮವಿರುತ್ತದೆ) || ೩೩ ||

**ಅವತರಣಿಕಾ :**—ಹಿಂದೆ ೩೨ನೇ ಪದ್ಯದಲ್ಲಿ ಅಜ್ಞಾನಿಗಳಿಗೆ ಅಸಹ್ಯ ತೋರ್ಪದೆಂದು ಪೇಳಿದ್ದಾರೆ. ಅಜ್ಞಾನಿಗಳೆಂದರೆ ಯಾರು ಪಂಡಿತಮನ್ಯ ಮಾನರಾದ-ಭಗವದ್ಗುಣಗಳನ್ನು ತಿಳಿಯದವರು. ಇದು ಪ್ರಾಕೃತ ಗ್ರಂಥ ವೆಂದು ಬಿಡುವರು. ಭಾಷೆಯ ಭೇದವಾದವಾದರೂ ಜ್ಞಾನಕ್ಕೆ ಕೊರತೆ ಇಲ್ಲವೆಂದು ದೃಷ್ಟಾಂತದಿಂದ ಹೇಳುತ್ತಾರೆ.

**ಆದರಿಸ ಅಗತಾಕ್ಷ ಭಾಷಾ ।**
**ಭೇದದಿಂವಲಿ ಕರೆಯುಲವನು ನಿ ।**
**ಷೇಧಗೈಸವಲೋಕಿಸದೆ ಬಿಡುವರೆ ವಿವೇಕಿಗಳು ॥**

**ಮಾಧವನ ಗುಣ ಪೇಳ್ವ ಪ್ರಾಕೃತ ।**
**ವಾದರೆಯು ಸರಿ ಕೇಳಿ ಪರಮಾ ।**
**ಲ್ಹಾದ ಬಡದಿಪ್ಪರೆ ನಿರಂತರ ಬಲ್ಲ ಕೋವಿದರು ।೩೪॥**

**ಪದ್ಯಾರ್ಥ** :—ಆದರಶ=ಆದರ್ಶ, ದರ್ಪಣ, ಕನ್ನಡಿ, ಅಗತಾಕ್ಷ= ಹೋಗದೇ ಇದ್ದ ಕಣ್ಣು ಉಳ್ಳವ, ನೇತ್ರವಾನ್, ಕಣ್ಣುಳ್ಳವನು, ಭಾಷಾ ಭೇದದಿಂದಲಿ, ಎರಡನೇ ಭಾಷೆಯಲ್ಲಿ, ಕನ್ನಡಿಯೆಂದು, ಕರೆಯಲದನು= ಆದರ್ಶಕ್ಕೆ ಕನ್ನಡಿ (ಆರಸಾ-ಆಯನಾ)ಎಂದು ಹೇಳಲು, ಶಬ್ದಜ್ಞಾನವುಳ್ಳ ವಿವೇಕಿಗಳು ತಿಳಿದವರು, ಆ ಕನ್ನಡಿಯಲ್ಲಿ ಮುಖ ಸ್ವಚ್ಛ ಕಾಣಿಸುವದೆಂದು, ನಿಷೇಧಗೈಸಿ=ಅದನ್ನು ತಿರಸ್ಕರಿಸಿಬಿಟ್ಟು ಅವಲೋಕಿಸದೆ ಬಿಡುವರೆ=ಮುಖ ವನ್ನು ನೋಡಿಕೊಳ್ಳದೇ ಬಿಡುವರೇ, ಎಂದಿಗೂ ಬಿಡುವುದಿಲ್ಲವೋ, ಅದರಂತೆಯೇ, ಮಾಧವನ ಗುಣಪೇಳ್ವ=ಮಾಯಾಯಾಃ ಶ್ರೀಧವಃ ಪತಿಃ ಮಾಧವ ಶ್ರೀಪತಿ ತ್ವಾಚ್ಯ ಮಾಧವ ಇತಿ ವಚನಾತ್ ॥ ವಿದ್ಯೇಶ್ವರತ್ವಾಚ್ಛ ಮಾಧವಃ ॥ ಮಾ ವಿದ್ಯಾ ಚ ಹರೇಃ ಪ್ರೋಕ್ತಾ ತಸ್ಯಾ ಈಶೋಯತೋ ಭವಾನ್ ತಸ್ಮಾನ್ ಮಾಧವನಾಮಾಸಿ ಧವಃ ಸ್ವಾಮಿನಾತಿ ಶಬ್ದತಃ ಇತಿ ಹರಿವಂಶೇ ॥ (ವಿದ್ಯಾಧಿರಾಜೀಯ)—ಇಲ್ಲಿ ಮಾಧವ ಶಬ್ದ ಬಹು ಸಾರ್ಥಕ್ಯ ವಾದುದು. ಮಾ=ವಿದ್ಯಾ ತಿಳುವಳಿಕೆ ಜ್ಞಾನರೂಪಿಯಾದ ಹರಿಯ ಜ್ಞಾನ ಆನಂದಾದಿ ಗುಣಗಳು, ಪೇಳ್ವ=ಹೇಳುವ, ಪ್ರಾಕೃತಃ=ಪ್ರಕೃತೋಭವಃ ಪ್ರಾ ಕೃತಃ ಮೂಲರೂಪಕ್ಕೆ ಸಂಬಂಧಿಸಿದ-ಎರಡನೇ ಭಾಷೆ ಕನ್ನಡ ಭಾಷೆ ಯಾದರೂ ಇದನ್ನು ಕೇಳಿ ಬಲ್ಲ ಕೋವಿದರು=ತಿಳಿದ ಜ್ಞಾನಿಗಳು, ನಿರಂತರ ಪರಮಾಲ್ಹಾದ ಬಡದಿಪ್ಪರೆ ?=ನಿತ್ಯದಲ್ಲಿ ಬಹು ಸಂತೋಷ ಹೊಂದದೆ ಇರುವರೆ ? ಸಂತೋಷಬಟ್ಟೆಬಡುವರು. ಭಾಷೆ ಭೇದವಾದರೂ, ಜ್ಞಾನಕ್ಕೆ ತಿಳುವಳಿಕೆಗೆ ಭೇದವಿಲ್ಲ, ಜ್ಞಾನದಿಂದಲೇ ಮುಕ್ತಿ ॥

**ಸೂಚನೆ :**—ಆದಿಸೃಷ್ಟಿಯಲ್ಲೇ ವರ್ಣಗಳಲ್ಲಿ ಸರ್ವಭಾಷಾ ಅಭಿ ವ್ಯಂಜಕ ಶಕ್ತಿರಿಷ್ಯತೇ ॥ ಎಂದು ಪ್ರಕಾಶಸಂಹಿತಾ ॥ ೧೩ನೇ ಸಂಧಿಸಾರ ಪುಟ ೧೩೭೫ರಲ್ಲಿ ವಿವರಿಸಿದೆ. ಅನಾದಿಯಿಂದ ಸರ್ವದೇಶ-ಭಾಷೆಗಳಿವೆ, ಆದರೆ ಪಕ್ಕೆ ಕಾಲ ಗತಿ-ಪ್ರಕಾರ ಏರು ಇಳುವಿಕೆ ಪೊರ್ತು-ಯಾವಯಾವ ದೇಶದ

ಭಾಷಾಜ್ಞಾನವೂ ಇದೆ. ಅಲ್ಲಿ ಹರಿಯ ಭಕ್ತರೂ ಇರುವರು. ಅವರವರ ಭಾಷೆಗೆ ಹರಿಯೊಲಿಯುವನು. ಯಾವ ಭಾಷೆಯಾದರೇನು. ಶ್ರೀಹರಿಯ ಜ್ಞಾನವೇ ಮುಖ್ಯವು. **ಶ್ರೀವಿಜಯದಾಸರು** ಸುಳಾದಿ ೨೪ ಪ್ರಮೇಯ ಭಾಗ ಪುಟ ೭೦ ಅಟ್ಟತಾಳದಲ್ಲಿ ॥ **ದೇಶಕಾಲಕರ್ಮ-ಗುಣವಿಚಾರಾಚಾರ । ಭಾಷೆರೂಪಕ್ರೀಯ ಭೇದವಾದ**ವಾದರೇನು । ದೋಷದೂರರೆ ನೀವು ತತ್ತ್ರಸ್ಥಾನದಲ್ಲಿ ವಾಸವಾಗಿದ್ದು ನಂಬಿದ ಜನರ ಮನೋ । ವಾಸನೆ ಪ್ರಕಾರದಲ್ಲೀಸುತಿರಲಿಕ್ಕೆ । ಏಸು ಬಗೆಯಿಂದ ಚಿಂತಿಸೆ ಸಲ್ಲದು ॥ ಎಂದು ಹೇಳಿದ್ದಾರೆ. ಎಲ್ಲ ಭಾಷೆಗಳಲ್ಲಿ ದೇಶದಲ್ಲಿ ವರ್ಣಾಭಿಮಾನಿ ದೇವತೆಗಳೇ ಇದ್ದು ಜ್ಞಾನ ಕೊಡುವರು. ॥ ಗುಹ್ಯೈಃಪ್ರಾಕೃತೈರಪಿ ॥ ಎಂದು ಭಾಗವತ ವಚನವಿದೆ. ಪ್ರಾಕೃತ ಸ್ತೋತ್ರಗಳಿಂದಲೂ ಹರಿ ಪ್ರೀತನಾಗುವನು. ಜ್ಞಾನ ಮುಖ್ಯ ಕಾರಣ ಭಾಷಾ ಮುಖ್ಯವಲ್ಲ. ಸಂಸ್ಕೃತ ಭಾಷಾ ಬೆಡಗೇನೆಂದು ಕರ್ಜಗಿ ದಾಸರೂ ಹೇಳಿದ್ದಾರೆ. ಇದರ ನಿಜಾರ್ಥವನ್ನು ತಿಳಿಯದ-ಸಂಸ್ಕೃತ ಪಂಡಿತರಿಗೆ ಬಹಿರ್ ಘಟಪಟಾದಿ ಜ್ಞಾನ ಉಳ್ಳವರಿಗೆ ಪರಮಾತ್ಮನ ಮಹಿಮೆ ಗೊತ್ತಾಗುವದೇ ಸಂಸ್ಕೃತವೇ ತಾರಕವೇ, ಜ್ಞಾನ ತಾರಕವೇ ಹೇಳಿ ? ದೇಶಭೇದ - ಯುಗ - ಕಾಲಭೇದ - ಜೀವರ ಭೇದ ಯೋಗ್ಯತಾ ಭೇದ ತಕ್ಕಂತೆ ದೇಶಭಾಷಾ ಅನುಸಾರಿಯಾಗಿ ಜೀವರುಗಳ ಜ್ಞಾನವೂ ಮುಖ್ಯವೆಂದು ತಾತ್ಪರ್ಯ.

**ಭಾವಸೂಚನ :—**ಆದರಿಶವೇತಿ ॥ ಕನಡಿ ॥ ೩೪ ॥

**ಇಲ್ಲಿ ಇನ್ನೊಂದು ವಿಸಂತಿ :—**ಮೂಲಪದ್ಯದಲ್ಲಿ ಆದರಶ ಅಗತಾಕ್ಷ ಎಂದು ಹಳೇ ಪ್ರತಿಗಳಲ್ಲಿ ಇದೆ. ಇದರಂತೆ ವ್ಯಾಸದಾಸ ಸಿ. ಕೌ. ಕಾರರೂ, ಅಗತಾಕ್ಷ= ನೇತ್ರಉಳ್ಳವನೆಂತೇ ಬಹು ಸ್ವಾರಸ್ಯ ಅರ್ಥ ಬರೆದಾರೆ. ನೇತ್ರ ಉಳ್ಳವಗೇವೇ ಪದಾರ್ಥಜ್ಞಾನ, ಹಿಂದೆ ಅಚ್ಚಾದ ಮೂಲ ಎಲ್ಲ ಪ್ರತಿ ೩-೪ ವ್ಯಾಖ್ಯಾನಕಾರರು ಇದನ್ನು ಅರಿಯದೇ ತಾವು ಗತಾಕ್ಷರಾಗಿ ಆದರ್ಶವ ಗತಾಕ್ಷ=ನೆಂದು ಟೀಕಾ ಬರೆದಾರೆ. ಕುರುಡನಿಗೆ ವಸ್ತುಜ್ಞಾನವೆಲ್ಲಿಂದ ? ಇದು ಶಾಸ್ತ್ರಸಮ್ಮತವೆ ? ಕಣ್ಣುಳ್ಳವನಿಗೇವೆ ವಸ್ತು ಪರಿಚಯ ಉಂಟು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಆದರ್ಶ " ಇತಿ ॥ " ಅಗತಾಕ್ಷ "-ನೇತ್ರವಾನ್ ॥ ಭೇದ-ಪ್ರಾಕೃತ " ಕನ್ನಡಿ " ॥ ೩೪ ॥

### ಕನ್ನಡಾರ್ಥ

ಪ್ರಾಕೃತ ಭಾಷೆಯಲ್ಲಿ ಇದ್ದರೂ ಇದು ಸರ್ವಮಾನ್ಯವೆಂದು ದೃಷ್ಟಾಂತ ಪೂರ್ವಕವಾಗಿ ನಿರೂಪಿಸುತ್ತಾರೆ-" ಆದರ್ಶ " ಎಂಬ ಪದ್ಯದಿಂದ ॥

ಇಲ್ಲಿ " ಅಗತಾಕ್ಷ " ಎಂದು ಪದಗಳನ್ನು ಬಿಡಿಸಬೇಕು. ಭಾಷಾಭೇದ ಅಂದರೆ ಪ್ರಾಕೃತಭಾಷೆ " ಕನ್ನಡಿ " ಎಂದು ಪ್ರಾಕೃತ ಪದ ಎಂದು ತಿಳಿಯ ಬೇಕು ॥೩೪ ॥

**ಅವತರಣಿಕಾ :—** ಈ ಮಹಾಕಾವ್ಯ ವೇದೋಪನಿಷತ್ ಅರ್ಥಬೃಂಹಿತ ನೆಂದು ತಿಳಿಯದೇ ಇದು ಸಂಸ್ಕೃತ ಗ್ರಂಥವಲ್ಲೆಂದು ತಿರಸ್ಕರಿಸುವನು, ತಸ್ಕರ ಸಮಾನನೆಂದು, ಕಳ್ಳನು ತನ್ನ ವ್ಯಾಪಾರ ಪ್ರತಿಬಂಧಕನಾದ ಸೂರ್ಯನನ್ನು ನಿಂದಿಸಿದರೆ ಸೂರ್ಯನಿಗೇನು ಕುಂದುಬರುವನೆಂಬ ದೃಷ್ಟಾಂತದಿಂದ ಶಿಷ್ಯ ರನ್ನು ಶಿಕ್ಷಿಸುತ್ತಾರೆ.

**ಭಾಸ್ಕರನ ಮಂಡಲವ ಕಂಡು ನ ।**
**ಮಸ್ಕರಿಸಿ ಮೋದಿಸದೆ ದ್ವೇಷದಿ ।**
**ತಸ್ಕರನು ನಿಂದಿಸಲು ಕುಂದಹದೇ ದಿವಾಕರಗೆ ॥**
**ಸಂಸ್ಕೃತವಿದಲ್ಲೆಂದು ಕುಹಕ ತಿ ।**
**ರಸ್ಕರಿಸಲೇನಹುದು ಭಕ್ತಿ ಪು ।**
**ರಸ್ಕ(ಸ್ಸ)ರದಿ ಕೇಳ್ವರಿಗೆ ವೊಲಿವನು ಪುಷ್ಕರಾಕ್ಷಸದಾ ॥ ೩೪ ॥**

**ಪದ್ಯಾರ್ಥ :—** ಭಾಸ್ಕರಃ=ಭಾ ಕರೋತೀತಿ ಭಾಸ್ಕರಃ=ಪ್ರಕಾಶ ವನ್ನು ಮಾಡುತ್ತಾನಾದುದರಿಂದ ಸೂರ್ಯನಿಗೆ ಭಾಸ್ಕರನೆಂದು ಹೆಸರು. ಇಂಥ ಸುಪ್ರಕಾಶವಾದ ಸೂರ್ಯಮಂಡಲ ಬಿಂಬವನ್ನು ಕಂಡು=ನೋಡಿ, ಕಾಲ ಪ್ರವರ್ತಕನೆಂದು ತಿಳಿಯುವ, ಸೂರ್ಯನಲ್ಲಿರುವ ನಾರಾಯಣನ ಮಹಾತ್ಮೆ

ಯನ್ನರಿಯದೆ, ನಮಸ್ಕರಿಸಿ ಮೋದಿಸದೆ= ನಮನಮಾಡಿ ಸಾಷ್ಟಾಂಗಪ್ರಣಾಮ ಮಾಡಿ ಸೂರ್ಯನಿಗೆ ನಮಸ್ಕಾರ ಹಾಕದೇ, ಮೋದಿಸದೆ=ಸೂರ್ಯಾಂತರ್ಗತ ವಾಯು ಹರಿಯ ಮಹಾತ್ಮೆ ತಿಳಿಯದೆ ಆನಂದ ಹೊಂದದೇ, ದ್ವೇಷದಿ=ಹಗೆ ತನದಿಂದ, ವೈರದಿಂದ, ತಸ್ಕರನು=ತತ್ಕರೋತೀತಿ ತಸ್ಕರಃ ॥ ಕಳವು ಮಾಡು ವವನು, ತಸ್ಕರ ಕಳ್ಳನು, ರಾತ್ರಿ ಕಾಲದಲ್ಲೆಲ್ಲ ತುಡುಗು ಮಾಡುತ್ತಿರಲು, ಸೂರ್ಯೋದಯವಾಗಲು, ತನ್ನ ಕಳ್ಳತನಕ್ಕೆ ಅಡ್ಡಿಯಾಯಿತೆಂದು, ಅಯ್ಯೋ ಸೂರ್ಯ ಬಂದನೇ ನನ್ನ ಕಳವಿಗೆ ವಿಘ್ನ ಮಾಡಿದನೆ ಎಂದು ಆ ಕಳ್ಳನು ಸೂರ್ಯನನ್ನು ನಿಂದಿಸಲು=ಸೂರ್ಯನಿಗೆ ದೋಷಯುಕ್ತನಾದವನೆಂದು ನಿಂದಾ ಮಾಡಲು, ದಿವಾಕರಗೆ=ಸೂರ್ಯನಿಗೇನಾದರೂ, ಕುಂದಹದೇ= ಕೊರತೆಯಾಗಿ ಕ್ಷೀಣಿಸುವನೇ, ಸೂರ್ಯನಲ್ಲಿ ಏನಾದರೂ ಪ್ರಕಾಶ ಕಡಿಮೆ ಯಾದೀತೇ ? ಇಲ್ಲ. ಅದರಂತೆಯೇ ಕುಹಕ=ಕಪಟ, ವಂಚನೆ ಮಾಡುವ ಮೋಸಕಾರ, ಕೆಟ್ಟಮನಸ್ಸುಳ್ಳವ, ಕಳ್ಳನ ಸಮಾನನು, ಸಂಸ್ಕೃತವಿದಲ್ಲೆಂದು= ಮಾಧವನ ಗುಣ ಪೇಳುವ ಈ ಹರಿಕಥಾಮೃತಸಾರವು ಕನ್ನಡವಿದೆ, ಇದರ ಲ್ಲೇನಿದೆಂಬುದು ತಿಳಿಯದ ಹರಿಗುಣಕದ್ದ ಅಜ್ಞಾನಿ, ಕೆಟ್ಟ ಮನವುಳ್ಳ, ಕಳ್ಳ, ಸಂಸ್ಕೃತವಿದಲ್ಲೆಂದು=ಇದು ಸಂಸ್ಕೃತ ಭಾಷೆಯಲ್ಲಿ ಇಲ್ಲ ಎಂದು. ತಿರಸ್ಕರಿಸ ಲೇನಹುದು=ಬಿಟ್ಟರೆ ಏನಾಗುವದು ? ಇವನು ಸೂರ್ಯನಿಗೆ ಪ್ರಕಾಶವನ್ನು ಕೊಡುವ ಹರಿಯ ಗುಣಗಳನ್ನು ಕದ್ದ ಕಳ್ಳ ಅಜ್ಞಾನಿಯೇ ಸರಿ, ಹರಿಗುಣ ಗಳಿಗೇನು ಕುಂದುಕೊರತೆ ಬರುವುದೆ ? ಇಲ್ಲ, ಆದರೆ ಇದನ್ನು ಭಕ್ತಿ ಪುರಸ್ಕರದಿ ಕೇಳ್ವರಿಗೆ=ಶಾಸ್ತ್ರದಿ ವಿಶ್ವಾಸ ನಂಬಿಕೆ, ಶಾಸ್ತ್ರಾರ್ಥ, ವೇದಾರ್ಥ ತುಂಬಿದೆ ಹರಿಗುಣಗಣಗಾನ ಮಾಡುವ ಗ್ರಂಥವಿದು ಎಂದು ಹರಿಗುಣ ಕೇಳು ವರಿಗೆ ಸದಾ=ಸರ್ವಕಾಲದಲ್ಲಿ, ಪುಷ್ಕರಾಕ್ಷ–(೧) ಪುಷ್ಕರೇ ಕಮಲೇ ಇವ ಅಕ್ಷಿಣೀ ಯಸ್ಯೇತಿ ಪುಷ್ಕರಾಕ್ಷಃ॥ (೨) ಆಕಾಶವದ್ವ್ಯಾಪ್ತ ಇತಿ ವಾ ಪುಷ್ಕ ರಾಕ್ಷಃ ॥ ಆಕಾಶ ಶರೀರಂ ಬ್ರಹ್ಮೇತಿ ಶ್ರುತೇಃ ॥ (ವಿದ್ಯಾಧಿರಾಜೀಯ) ವ್ಯಾಪ್ತನಾದ ಕಮಲೇಕ್ಷಣ ಕರುಣಾದೃಷ್ಟಿಯುಳ್ಳ ಹರಿಯು ಒಲಿವನು= ಪ್ರಸನ್ನನಾಗುವನು, ಭಕ್ತಾಧೀನನಾಗಿ ವಶನಾಗುವನು.

**ಭಾವಸೂಚನ :—**ಭಾಸ್ಕರೇತಿ ॥ ಕುಹಕ-ಕಪಟ ॥ ೩೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಭಾಸ್ಕರ " ಇತಿ ॥ "ಕುಂದು" ನ್ಯೈಚ್ಯ ॥ (ನೀಚತಾ) ॥ ೩೫ ॥

## ಕನ್ನಡಾರ್ಥ

ಸಂಸ್ಕೃತ ಭಾಷೆಯಿರದಿದ್ದರೂ ಇದು ಕಡಮೆಯದಲ್ಲ; ಶ್ರೀಹರಿಯ ಪ್ರೀತಿಪಾತ್ರವಾದ ಮಹಾಪ್ರಬಂಧನೆಂಬುದಾಗಿ ಹೇಳುತ್ತಾರೆ " ಭಾಸ್ಕರ " ಎಂಬ ಪದ್ಯದಿಂದ.

ಭಾಸ್ಕರನ ಮಂಡಲಕ್ಕೂ ಈ ಗ್ರಂಥಕ್ಕೂ ದೃಷ್ಟಾಂತ. ಬಿಂಬ ಪ್ರತಿಬಿಂಬ ಭಾವ. ತಸ್ಕರರಿಗೂ ಕುಹಕರಿಗೂ ಬಿಂಬ ಪ್ರತಿಬಿಂಬ ಭಾವ. ಎರಡರಲ್ಲಿಯೂ ನ್ಯೂನತೆಯಿಲ್ಲದಿರುವದು. ಸಾಧಾರಣ ಧರ್ಮ ಅಂದರೆ ವಸ್ತುಸಾಮ್ಯ, ಇತ್ಯಾದಿಗಳನ್ನು ಅಲಂಕಾರಜ್ಞರು ಊಹಿಸಬೇಕು. ॥ ೩೫ ॥

**ಅವತರಣಿಕಾ :—**ಇತರ ಕವಿಗಳಾದ ಅಭಕ್ತರಿಂದ ರಚಿತ ಸಂಸ್ಕೃತನಾದ ಲೌಕಿಕ ಶೃಂಗಾರ ವರ್ಣನಾದಿ ಕುಕಾವ್ಯಗಳು ಜ್ಞಾನಿಗಳಿಂದ ಅಗ್ರಾಹ್ಯವೆಂಬುದನ್ನು ಪತಿತನ ಕಪೋಲದಲ್ಲಿದ್ದ ಜಲದ ಉಪಮೆಯಿಂದ ವರ್ಣಿಸಿ, ತದ್ವಿರುದ್ಧ, ಹರಿಗುಣಗಳಿಂದ ಭರಿತವಾದ ಪ್ರಾಕೃತ ಭಾಷೆಯಾದರೂ, ಸಂಸ್ಕೃತ ಭಾಷೆ ಸುಕಾವ್ಯವೆನಿಸುತ್ತಸೆಂದು ಹೇಳುತ್ತಾರೆ.

**ಪತಿತನ ಕಪಾಲದೊಳು ಭಾಗೀ।**
**ರಥಿಯ ಜಲವಿರೆ ಪೇಯವೆನಿಪು(ಪ)ದೆ।**
**ಇತರ ಕವಿ ನಿರ್ಮಿತ ಕುಕಾವ್ಯ ಶ್ರಾವ್ಯ ಬುಧರಿಂದ ॥**
**ಕೃತಿಪತಿ ಕಥಾನ್ವಿತವೆನಿಪ ಪ್ರಾ।**
**ಕೃತವೆ ತಾ ಸಂಸ್ಕೃತವೆನಿಸಿ ಸ।**
**ದ್ಗತಿಯನೀವುದು ಭಕ್ತಿಪೂರ್ವಕ ಕೇಳಿಪೇಳ್ವರಿಗೆ ॥ ೩೬ ॥**

**ಪದ್ಯಾರ್ಥ :—**ಪತಿತಃ = ಕುಲಗೇಡಿ, ಭ್ರಷ್ಟ, ಚಾಂಡಾಲನ, ಕಪಾಲದೊಳು = ನೀರು ತುಂಬುವ ತೊಗಲ ತಿತ್ತಿಯಲ್ಲಿ, ಭಾಗೀರಥಿಯ ಜಲವಿರೆ = ಪವಿತ್ರವಾದ ಗಂಗಾನದಿಯ ನೀರು ಜಲವಿದ್ದರೆ, ಚಾಂಡಾಲ ಬಿಕ್ತರವನ

ತೊಗಲ ತಿತ್ತಿಯ ಭಾಗೀರಥಿ ಉದಕವು, ಪೇಯವೆನಿಪುದೆ=ಕುಡಿಯಲಿಕ್ಕೆ ಯೋಗ್ಯ ಹೇಗೆ ಆಗುವುದಿಲ್ಲವೋ ಅದು ಅಪವಿತ್ರವೋ ತೊಗಲ ತಿತ್ತಿಯಲ್ಲಿ ತರಲಾಗದು ಉದಕ|ವೆಂದು ಶ್ರೀ ವಿಜಯದಾಸರ ಸುಳಾದಿ ಅದರಂತೆಯೇ, ಇತರ ಕವಿ ನಿರ್ಮಿತ ಕುಕಾವ್ಯ=ಭಗವದ್ಭಕ್ತರಾಗದೇ ಇರುವ ಇತರ ಬೇರೆ ಅಭಕ್ತರು. ಸ್ತ್ರೀಕಚಕುಚಾದಿಗಳ ವರ್ಣನೆ ಕಾವ್ಯ ಕರ್ತೃರ ಕುಕಾವ್ಯ=ಕೆಟ್ಟ ಕಾವ್ಯ, ಛಂದಸ್ಸು ಅಲಂಕಾರದಿಂದ ಮನೋಹರವಾಗಿದ್ದರೂ, ಭಗವದ್ಗುಣಾನುವಾದವಿಲ್ಲದೆ ಕೇವಲ ನರರ ಸ್ತೋತ್ರ, ಮನೋಹರ ನಾಟಕ, ಕಾದಂಬರಿ ಇತ್ಯಾದಿ ಕಾವ್ಯರೂಪವಾದ ಕುರುಚಿಯಾದ ಕುಕಾವ್ಯಗಳು, ಬುಧರಿಂದ=ಜ್ಞಾನಿಗಳಿಂದ, ಶ್ರಾವ್ಯವೆನಿಪುದೆ=(ಎರಡೆಡೆ ಆವರ್ತನ) ಕೇಳಲಿಕ್ಕೆ ಯೋಗ್ಯವಾಗುವದೆ ? ಜ್ಞಾನಿಗಳಿಂದ ಕೇಳಲು ಯೋಗ್ಯವಲ್ಲ. ಕೃತಿಪತಿ ಕಥಾನ್ವಿತವೆನಿಪ=ವೇದಾಭಿಮಾನಿಯಾದ ಶ್ರೀಕೃತಿದೇವಿಲಕುಮಿದೇವಿಯಪತಿ ಪ್ರದ್ಯುಮ್ನದೇವನ ಕಥಾ, ಲೀಲಾಃ ಅನ್ವಿತ=ತುಂಬಿದ, ಹರಿಯಗುಣಗಳಿಂದ ತುಂಬಿದ, ಪ್ರಾಕೃತವೆ=ವೇದಭಾಷೆಯಲ್ಲದೆ ಇತರ ಬೇರೊಂದು ಭಾಷೆ ಪ್ರಾಕೃತವಾದರೂ, ಕನ್ನಡ ಭಾಷೆಯಾದರೂ, ಅಜಾದಿ ೫೧ ಅಕ್ಷರಗಳಿಂದ ಕೂಡಿದದು, ಭಗವಂತನ ಲೀಲಾ ಕಥಾದಿಂದ ಸೂಸುವ ಪ್ರಾಕೃತ ಭಾಷೆಯು ಸಂಸ್ಕೃತ ಭಾಷೆಯೆನಿಸಿ ಶಬ್ದ ವ್ಯತ್ಯಾಸವಾದರೆ ಅರ್ಥವ್ಯತ್ಯಾಸವಾಗದ ಕಾರಣ ಇದು ಸಂಸ್ಕೃತ ಭಾಷೆ. ಭಕ್ತಿಪೂರ್ವಕ ಕೇಳಿಪೇಳ್ವರಿಗೆ=ಪರಮಾತ್ಮನಲ್ಲಿ ಅತ್ಯಂತ ದೃಢತರವಾದ, ಪ್ರೇಮಪೂರ್ವಕದಿಂದ, ಪೇಳ್ವರಿಗೆ=ಹೇಳುವವರಿಗೆ, ಕೇಳುವವರಿಗೆ=ವಕ್ತ್ರಶ್ರೋತೃಗಳಿಗೆ, ಸದ್ಗತಿಯನೀವುದು=ಸಮೀಚೀನವಾದ ಗತಿ, ಮುಕ್ತಿಯೇ ಸದ್ಗತಿಯನ್ನು ಕೊಡುವದು. ಪರಮಾತ್ಮನ ಗುಣಾನುವಾದ ಯಾವ ಭಾಷೆಯಲ್ಲಿ ಆದರೂ, ಅದು ಸುಸಂಸ್ಕೃತವೇ ಅದು ವೇದಾರ್ಥವೆಂದು ಕರೆಸುತ್ತದೆ.

**ಭಾವಸೂಚನ :**—ಪತಿತೇತಿ ॥ ಚಾಂಡಾಲಃ ॥ ೩೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಪತಿತ " ಇತಿ ॥ " ಇತರಃ " ಅಭಕ್ತಃ ॥ ಗಾರುಡೇ-ಚ ಏಕತ್ರಿಂಶಾಧ್ಯಾಯೇ-ಯದಾಹ ಭಗವಾನ್ "ಅಭಕ್ತ ಪತಿತಂ ನಾಮ ಭಕ್ತೇನ ಚ

ಚ ಶ್ರುತಂ ಯದಿ ॥ ದುಃಖಂ ಸುಬಹುಂ ವೀಂದ್ರ ನರಕೇ ಭಜತೇ ಪುಮಾ್ಣ॥ ಅಭಕ್ತ ಪಠಿತಂ ನಾಮ ಅಭಕ್ತ ಪಠಿತಾ ಕಥಾ ॥ ಅಭಕ್ತ ಪಠಿತಾಃ ವೇದಾಃ ಹ್ಯಭಕ್ತ ಪಠಿತಾ ಸ್ತುತಿಃ ॥ ಅಭಕ್ತ ಪಠಿತಃ ಮಂತ್ರಃ ಹ್ಯಭಕ್ತ ಪಠಿತಂ ವಚಃ॥ ಅಭಕ್ತ ಪಾಚಿತಂ ಹ್ಯನ್ನಂ । ಹರಿಭಕ್ತಸ್ಯ ಐಹಿಕ ಪಾರತ್ರಿಕ ದುಃಖದಮ್ ॥" ಇತ್ಯುತ್ತರಂ " ಸುಗಾಯನಂ ಹ್ಯಭಕ್ತೈಃಶ್ಚೇತ್ ಸುಖಂ ದುಃಖದಮ್ " ಇತ್ಯುತ್ತರಂ-"ಅವೈಷ್ಣವ ಕ್ರತಂ ದಾನಮಪಿ ತಥಾ " ಇತ್ಯುತ್ತರಮ್ || ೩೬ ||

## ಕನ್ನಡಾರ್ಥ

ಪ್ರಾಕೃತವಾದರೂ ಈ ಗ್ರಂಥವು ಸಂಸ್ಕೃತದ ಸತ್ಪ್ರಬಂಧಗಳಂತೆ, ಸೇವಿಸಿದವರಿಗೆ ಸದ್ಗತಿಯನ್ನೀಯುವುದೆಂಬುದನ್ನು ನಿದರ್ಶನದಿಂದ ತೋರಿಸುತ್ತಾರೆ. " ಪಠಿತನ " ಎಂಬ ಪದ್ಯದಿಂದ.

ಇತರರೆಂದರೆ ಅಭಕ್ತರೆಂದು ತಿಳಿಯಬೇಕು. ಗರುಡ ಪುರಾಣದಲ್ಲಿ ೩೧ನೆಯ ಅಧ್ಯಾಯದಲ್ಲಿ ಪರಮಾತ್ಮನ ವಚನವು ಹೀಗೆ ಇರುತ್ತದೆ—"ಅಭಕ್ತರಿಂದ ಪಠಿತವಾದ (ಉಚ್ಚರಿಸಲ್ಪಟ್ಟ) ನಾಮವನ್ನು ಭಕ್ತನು ಕೇಳಿದರೆ ನರಕದಲ್ಲಿ ದುಃಖವಾಗುತ್ತದೆ. ಗರುಡನೆ! ಅಭಕ್ತರು ಉಚ್ಚರಿಸುವ ನಾಮಗಳು, ಅಭಕ್ತರು ಹೇಳುವ ಕಥೆಗಳು, ಅಭಕ್ತರು ಉಚ್ಚರಿಸುವ (ಅನ್ನುವ) ವೇದಗಳು, ಅಭಕ್ತರು ಮಾಡುವ ಸ್ತುತಿ ಪಠನ, ಅಭಕ್ತರ ಮಂತ್ರೋಚ್ಚಾರಣ, ಅಭಕ್ತರ ವಚನಗಳು, ಅಭಕ್ತನು ಮಾಡಿದ ಅನ್ನ-ಅಡಿಗೆ, ಇವುಗಳು ಇಹ-ಪರಗಳಲ್ಲಿ ದುಃಖವನ್ನು ಕೊಡುತ್ತವೆ." ಎಂದು ಹೇಳಿ–ಅದರ ಮುಂದೆ–ಮತ್ತೆ " ಅಭಕ್ತನು ಒಳ್ಳೇ ಸುಶ್ರಾವ್ಯ ಗಾಯನವನ್ನು ಮಾಡಿದರೂ ಅದು ದುಃಖಕಾರಿಯಾಗುವದು ", ಎಂದು ಹೇಳಿರುತ್ತಾನೆ. ಇದಲ್ಲದೆ " ಅವೈಷ್ಣವ ದಾನವೂ ಸಹ ಅದರಂತೆ ದುಃಖವನ್ನು ಕೊಡುವದು." ಎಂದೂ ಶ್ರೀಕೃಷ್ಣನ ವಚನವಿರುತ್ತದೆ. || ೩೬ ||

**ಅವತರಣಿಕಾ :—**ಇನ್ನು ದಾಸಾರ್ಯರು ಈ ದತ್ತ ಸ್ವಾತಂತ್ರ್ಯ ಸಂಧಿಯನ್ನು, ಸ್ವಹಂಕಾರ ಖಂಡನ ಪೂರ್ವಕ, ಶ್ರೀಹರಿಗುರುಗಳ ಅನುಗ್ರಹದಯದಿಂದ ರಮಾಧವನಾದ ಮದ್ಬಿಂಬರೂಪಿ ಜಗನ್ನಾಥವಿಠಲ ಸ್ವಾಮಿಯು

ಎಷ್ಟು ತಿಳಿಸಿ ಹೇಳಿಸಿದನೋ ಅಷ್ಟು ಪೇಳಿದೆನೆಂದು ಬಿಂಬಾರ್ಪಿಸಿ ಸಂಧಿ ಮುಗಿಸುತ್ತಾರೆ.

**ವೇದ ಶಾಸ್ತ್ರ ಸಯುಕ್ತಿ ಗ್ರಂಥಗ।**
**ಳೋದಿ ಕೇಳ್ದವನಲ್ಲ ಸಂತತ।**
**ಸಾಧುಗಳ ಸಹವಾಸ ಸಲ್ಲಾಪಗಳು ಮೊದಲಿಲ್ಲ॥**
**ಮೋದ ತೀರ್ಥಾರ್ಯರ ಮತಾನುಗ।**
**ರಾದವರ ಕರುಣದಲಿ ಪೇಳ್ದೆ ರ।**
**ಮಾಧವ ಜಗನ್ನಾಥ ವಿಠ್ಠಲ ತಿಳಿಸಿದದರೊಳಗೆ॥ ೩೭ ॥**

ಅಂತು ಸಂಧಿ ೧೭ಕ್ಕೆ ಪದ ೫೨೪ಕ್ಕೆ ದತ್ತಸ್ವಾತಂತ್ರ್ಯ ಸಂಧಿ ಸಮಾಪ್ತ
ಮಂಗಳಮಾಹ ಶ್ರೀಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

**ಪದ್ಯಾರ್ಥ :—** ಈ ಪದ್ಯದ ಅಭಿಪ್ರಾಯ ಹಿಂದಿನ ಸಂಧಿ (೧೦) ೧೮ನೆ ಪದ್ಯದಲ್ಲಿ ವಿವರಿಸಿದ್ದಾರೆ. ಪುನಃ ಇಲ್ಲಿ ಸ್ವಹಂಕಾರ ಖಂಡನೆ ಪೂರ್ವಕ, ವೇದಶಾಸ್ತ್ರ ಸಯುಕ್ತಿ ಗ್ರಂಥಗಳೋದಿ ಕೇಳ್ದವನಲ್ಲ=ನಾನು ಸ್ವತಃ ವೇದ ಮಧ್ವಶಾಸ್ತ್ರ ಸಯುಕ್ತಿಕವಾದ ವೇದಕ್ಕೆ ಅನುಕೂಲವಾದ ತರ್ಕಾದಿಶಾಸ್ತ್ರಗಳು ಓದಿದವನಲ್ಲ. ಕೇಳಿದವನಲ್ಲ. ನಾನು ಸ್ವಬುದ್ಧಿಯಿಂದ ಓದಲಿಲ್ಲ, ಕೇಳಲಿಲ್ಲ. ನಮ್ಮ ತಂದೆಗಳಾದ ಶ್ರೀ ನೃಸಿಂಹದಾಸರು ಶ್ರೀ ವರದೇಂದ್ರರಲ್ಲಿ ಸೇವೆಗೆ ಇಡಲು ಶ್ರೀ ವರದೇಂದ್ರರ ಅನುಗ್ರಹದಿಂದ ಅವರು ವೇದ ಮಧ್ವಶಾಸ್ತ್ರಾದಿಗಳನ್ನು ಸರ್ವಸ್ವತಂತ್ರ ಹರಿ ತಾ ನಿಂತು ಅವರಲ್ಲಿ ಪ್ರೇರಿಸಿ ಪೇಳಿದಷ್ಟು ನನ್ನಲ್ಲಿ ನಿಂತು ಎಷ್ಟು ತಿಳಿಸಿದನೋ ನಾನು ಕೇಳಿದೆನೆ ಹೊರತಾಗಿ ನಾನು ಸಂತ್ವತ್ರನಲ್ಲ. ಕೇಳಿಹೇಳಲಿಕ್ಕೂ ಸಮರ್ಥನಲ್ಲ. ಸಾಧುಗಳ ಸಹವಾಸ ಮೊದಲಿಲ್ಲ= ಪೂರ್ವವಯಸ್ಸಿನಲ್ಲಿಯೇ ಸಾಧುಗಳಾದ ಶ್ರೀ ವಿಜಯಗೋಪಾಲದಾಸಾರ್ಯರ ಸಹವಾಸವಂತೂ ಇದ್ದೇ ಇಲ್ಲ. ಮೋದತೀರ್ಥಾರ್ಯರ ಮತಾನುಗರಾದವರ=ಆನಂದದಾಯಕ ಶಾಸ್ತ್ರವನ್ನು ರಚಿಸಿದ ಶ್ರೀ ಮಧ್ವರ ಸೇವಕರಾದವರ ಶ್ರೀ ವಿಜಯಗೋಪಾಲರ ಅನುಗ್ರಹದಿಂದ ಸಾಧುಸಹವಾಸದಿಂದ—ನಾನು ಕರ್ತೃನಲ್ಲವೆಂಬ ಅಹಂಭಾವ ಹೋಗಿ, ಶ್ರೀ ವ್ಯಾಸರಾಜರು ಪುರಂದರದಾಸರ

ಒಲುಮೆಯಿಂದ ಅವರ ಕರುಣದಲಿ=ಅಂತಃಕರುಣ ಅನುಗ್ರಹದಿಂದ ಶ್ರೀಧವ ಜಗನ್ನಾಥವಿಠಲ=ಲಕ್ಷ್ಮೀಪತಿಯಾದ ಜಗತ್ತಿಗೆ ಒಡೆಯನಾದ, ಬಿಂಬನಾದ ವಿಠ್ಠಲನಾಮಕ ಹರಿಯು, ಅಜ್ಞ ಜನರ ಅಜ್ಞಾನವನ್ನು ದೂರಗೈಸಿ ಸುಜ್ಞಾನ ವನ್ನು ಕೊಡುವ ವಿಠ್ಠಲನಾಮಕನು ತಾನು, ತಿಳಿಸಿದದರೊಳಗೆ ಪೇಳ್ದೆ=ಶ್ರೀ ಹರಿ ಪ್ರೇರಿಸಿ ಎಷ್ಟು ತಿಳಿಸಿದನೋ ಅಷ್ಟು ಪೇಳಿಸಿದಷ್ಟು ಪೇಳಿದೆ. ನಾನು ಪೇಳಲು ಸ್ವತಂತ್ರನಲ್ಲವೆಂದು ದಾಸರ ಇಂಗಿತ. ಇದೇ ದತ್ತ ಕರ್ತೃತ್ವ ಸಂಧಿಯ ಮುಖ್ಯ ಸಾರಾಂಶ.

ಶ್ರೀ ದತ್ತ ಸ್ವಾತಂತ್ರ್ಯ ಸಂಧಿ ಪದ್ಯಾರ್ಥವನ್ನು ಮುಂದನಲ್ಲಿ ನಿಂತು ಶ್ರೀ ವರದೇಂದ್ರರು ಬರೆಸಿದ್ದು ಅವರಂತರ್ಗತ ಹರಿಯ ಪಾದಕ್ಕೆ ಕೃಷ್ಣಾರ್ಪಣ ಪೂರ್ವಕ ಅರ್ಪಿತವಾಗಲಿ.

**ಭಾವಸೂಚನ :—** ವೇದೇತಿ ||೩೨|| ಇತಿ ಶ್ರೀಮದ್ಧರಿಕಥಾಮೃತ ಸಾರ ವ್ಯಾಖ್ಯಾನೇ ಭಾವಸೂಚನೆ ದತ್ತ ಸ್ವಾತಂತ್ರ ಸಂಧಿ ಸಮಾಪ್ತಃ || ಶ್ರೀ ಕೃಷ್ಣಾರ್ಪಣಮಸ್ತು||

ಶ್ರೀ ವಾದಿರಾಜ ಗುರ್ವಂತರ್ಗತ ಶ್ರೀ ಹಯವದನಾಯ ನಮೋನಮಃ

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—" ವೇದ " ಇತಿ || ೩೭ ||

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ
ದತ್ತ ಸ್ವಾತಂತ್ರ್ಯ ಸಂಧಿಃ ಸಮಾಪ್ತಃ || ಶ್ರೀರಸ್ತು ||

## ಕನ್ನಡಾರ್ಥ

ಈ ಸಂಧಿಯನ್ನು ಮುಗಿಯಿಸುತ್ತಾರೆ " ವೇದ " ಎಂಬ ಪದ್ಯದಿಂದ. ಇದರಲ್ಲಿ ಸ್ವಾಹಂಕಾರಖಂಡನೆಯೂ ಭಗವದ್ಭಕ್ತರ ಕರುಣಾಬಲವೂ ಶ್ರೀ ಹರಿಗುರುಗಳ ಅನುಗ್ರಹ ಪಾತ್ರತೆಯೂ ಇರುವದೆಂದು ಈ ಪದ್ಯದ ತಾತ್ಪರ್ಯ.

ಇಲ್ಲಿಗೆ ಹರಿಕಥಾಮೃತಸಾರ ಟೀಕಾ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯ ಅನುವಾದದಲ್ಲಿ ೧೭ನೆಯ ದತ್ತ ಸ್ವಾತಂತ್ರ್ಯ ಸಂಧಿಯು ಮುಗಿದುದು.

ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ

ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ
ಶ್ರೀ ಗುರುರಾಜೋ ವಿಜಯತೇ

# ೧೮ನೆಯ ಬಿಂಬಾಪರೋಕ್ಷ ಸಂಧಿಯ ಸಾರ

## ಪ್ರಾರ್ಥನಾ ಉಗಾಭೋಗ



ಘನ್ನಶಕ್ತನೆ ನೀನು ಅಶಕ್ತತರ ನಾನು । ಉನ್ನತ ಮಹಿಮನೆ ಬಿನ್ನೈಸುವೆ। ಅನಾದಿಕಾಲದಿಂದ ಅರಘಳಿಗೆ ಅಗಲಾದೆ। ಎನ್ನೊಳು ನೀನಿದ್ದು ಒಮ್ಮೆಗನ್ನಾ । ಕಣ್ಣಿಗೆ ಕಾಣಿಸದೇ ಅವ್ಯಕ್ತನಾಗಿರೆ। ಇನ್ನು ಮಿದ(ಇದ) ಕಿಂತಾವುದು ಶುಕತೀ । ತನ್ನ ಕೈವೊಳಗಿದ್ದ ಬೊಕ್ಕ ಚಿನ್ನದ ಘಟ್ಟ। ಕಣ್ಣಿಲಿ ಕಾಣದೆ ಮಿಡುಕಿದಂತೆ। ಎನ್ನೊಳಗಿಪ್ಪ ನಿನ್ನ ಪರಮ ಸುಂದರ ಮೂರ್ತಿ। ಕಣ್ಣಿಗೆ ಕಾಣದೆ ಬಳಲೂವೇನೋ। ಇನ್ನು ಇದಕಿಂತ ಅಶಕ್ತಿಯಾವುದೋ। ಮನ್ನದಿ ನೋಡಯ್ಯಾ ಮಹಾರಾಯನೇ। ಚಿನ್ನುಮಯನೆ ಎನ್ನ ಜಯ ವೆಂಬಿಯಲೋ। ತನ್ನನೆನಿಸಿ (ತನ್ನವನೆನಿಸಿ) ಬ್ಯಾರೆನಿಲಜಯಿಪ್ಪೇ ? । ಘನ್ನ ಅವಿದ್ಯ ಪಟಲ ಮತಿಬಂಧವಾದೆಂಬಾ। ಇನ್ನುಂಟೆ ಚಿತ್ತಿಗೆ ಜಡನಿರೋಧ। ಇನ್ನೊಂದು ಕಾರಣ ಮುಖ್ಯ ನಾನೊಂದು ಕಾಣೆ। ನಿನ್ನ ಇಚ್ಛೆಯು ಒಂದೆ ಒಂದೆ ಒಂದೇ। ಎನ್ನನುದ್ಧರಿಪೆನೆಂಬ ಮನದಲಿತ್ತೆ ಪ್ರ। ಸನ್ನವಾಗುವುದೊ ಪ್ರಾಣೇಶವಿಠಲಾ ||೧|| ಪ್ರಾಣೇಶವಿಠ್ಠಲ ಕೀರ್ತನ ಮಾಲಾ ಪುಷ್ಪ ೧೨ ಪುಟ (೨) ಈ ಉಗಾಭೋಗವನ್ನು ನಿತ್ಯ ಪಠಿಸಿ ಶ್ರೀಗುರ್ವಂತರ್ಗತ ಶ್ರೀ ಹರಿಯ ಪ್ರಾರ್ಥಿಸಿದರೆ ಅಪರೋಕ್ಷ ಜ್ಞಾನಿಗಳ ನುಡಿ ಸತ್ಯಮಾಡಿ ಸಾಧಕನ ಧ್ಯಾನಕ್ಕೆ ವೊಲಿವಲ್ಲಿ ಸಂದೇಹವಿಲ್ಲ. ಮತ್ತು, ಪ್ರಾಣಾಂತರ್ಯಾಮಿ ಹರಿ ಯನ್ನು ಉಪಾಸಿಸಬೇಕೆಂದು ನಿಯಮ. ಪ್ರಾಣದೇವರ ಪ್ರಾರ್ಥನೆಯನ್ನೂ ಮಾಡುವದೆಂದು ಶ್ರೀ ವಿಜಯದಾಸರು ಅಪ್ಪಣೆಕೊಡಿಸುತ್ತಾರೆ.

## ಪ್ರಾಣದೇವರ ಪ್ರಾರ್ಥನಾ

ನಂಬಿದೇ ನಿನ್ನಯ ಪಾದ ಮುಖ್ಯಪ್ರಾಣಾ। ನಂಬಿದೆ ನಿನ್ನಯ ಪಾದಾ। ಡಂಬರ ತೊಲಗಿಸಿ ಡಿಂಬದೊಳಗೆ ಹರಿಯ। ಬಿಂಬ ವೊಳೆವಂತೆ

ಮಾಡೊ ॥ ಪಲ್ಲವಿ ॥ ಪಂಚಪರಣರೂಪನೆ ಸತ್ವಕಾಯಾ । ಪಂಚೇಂದ್ರಿಗಳ ಲ್ಲೋಪನೇ (ಅಪ್ಪನೆ) ಮುಂಚಿನ ಪರಮೇಷ್ಟಿ । ಸಂಚಿತಾಗಾಮಿ ಬಿಡಿಸಿ । ಕೊಂಚ ಮಾಡೋ ಪ್ರಾರಬ್ಧ । ವಂಚನೆ ನೆನದೋ । ಅಂಚಿಗಂಚಿಗೆ ಪರ ಪಂಚವೇ ಓಡಿಸಿ । ಪಂಚವಕ್ತ್ರ ಹರಿಮಂಚದ ಗುರುವೆ ॥ ೪ ॥

ಇಂತು ಶ್ರೀ ಹರಿಯನ್ನು ಶ್ರೀ ಮುಖ್ಯಪ್ರಾಣದೇವರನ್ನು ಸ್ತೋತ್ರ ಗೈದು, ಪ್ರಾರ್ಥಿಸಿ, ಶ್ರೀ ಬಿಂಬೋಪಾಸನೆ ಸಕ್ರಮವಾಗಿ ಗುರೂಪದೇಶದಿಂದ ಮಾಡಲು, ಬಿಂಬ ಪೊಳೆವನು.

ಈ ಬಿಂಬಾಪರೋಕ್ಷ ೧೮ನೇ ಸಂಧಿಯಾರಂಭಿಸಿ ಕೊನೆಯ ೩೨ನೇ ಸಂಧಿಯ ಪರಿಯಂತರವಾಗಿ, ೧೫ ಸಂಧಿಯಲ್ಲಿ ಕೇವಲ ಬಿಂಬಲಕ್ಷಣ, ಧಾರಣ ಧ್ಯಾನ, ಯೋಗ, ಸಮಾಧಿಯಿಂದ ಆರೋಹಣ ಅವರೋಹಣ ಕ್ರಮದಿಂದ ಸ್ಥೂಲ-ಸೂಕ್ಷ್ಮೋಪಾಸನಾ-ಬಿಂಬಪ್ರತಿಬಿಂಬ-ಭಾವಲಕ್ಷಣ ವರ್ಣಿಸುತ್ತಾರೆ.

ಹಿಂದೆ ೧೬-೧೭ನೇ ಸಂಧಿಯಲ್ಲಿ ಸ್ವಗತ, ದತ್ತಸ್ವಾತಂತ್ರ್ಯ ಈ ಎರಡೂ ಶ್ರೀ ಹರಿಯ ರೂಪಗಳೇ ಜೀವನಲ್ಲಿಟ್ಟು ಕಾರ್ಯ ಪ್ರವರ್ತಿಸುವನೆಂದು ಹೇಳಿದರು. ಸಕಲ ಕ್ರಿಯಾ ಪುಣ್ಯಪಾಪಗಳು ಶ್ರೀಹರಿಯೇ ಜೀವಾಂತರ್ಯಾ ಮಿಯಾಗಿ ನಿಂದು, ಮಾಡಿ ಮಾಡಿಸುತ್ತಾನೆಂಬ ನಿಶ್ಚಯ ಜ್ಞಾನ ಉಳ್ಳವರಾಗಿ ದಾರ್ಢ್ಯ ಮನಸ್ಸಿನಿಂದ "ಪ್ರವೃತ್ತಕರ್ಮ ತ್ಯಾಗಪೂರ್ವಕ, ನಿವೃತ್ತಕರ್ಮ ಕರ್ತವ್ಯಮಿತ್ಯಭಿಹಿತಂ ದೇಶಃ ಕಾಲೋ ದೇಹಶ್ಚ ಪ್ರಶಸ್ತ ಇತಿ ಪ್ರತಿಪಾದಿತಂ। ತದಿಪಾನೀಂ ಶ್ರೀಹರೇರುಪಾಸನಂ ಸಮುವಹಿತ್ಯೈಃ ಸದೈವ ಸಂಪಾದ್ಯಮಿತಿ ವಕ್ತು ಮಿದಂ ಧ್ಯಾನ ಪ್ರಕರಣಂ ॥"

**"ತತ್ರಾಣಿಷ್ಟರೂಪೋಪಾಸನ ಮುಕ್ತಿರಿತಿ ತಾವ** ನ್ನಿಷ್ಕರ್ಷಃ । ಬಿಂಬೋಪಾಸನಂ ವಿನಾ ಸಾಧನಾ ಸಹಸ್ರೇಣಾಪಿ ಮುಕ್ತಿರಯೋಗಾತ್ ಬಿಂಬಸ್ಯ ಚಾಣಿಷ್ಟತ್ವೇ ಸಂದೇಹಾಭಾವಾತ್ । ಉಪಾಸನಂ ಚ ಮನೋ ವೃತ್ತೇಃ ತತ್ರಾಪ್ರದ ಧಾನಮೇವ " ॥ ವಿಷ್ಣುತೀರ್ಥೀಯ ಧ್ಯಾನಪ್ರಕರಣೇ ॥

ಜೀವಾಂತರ್ಯಾಮಿಯಾದ ಅಣುರೂಪನಾದ ಬಿಂಬರೂಪ ಅಪರೋಕ್ಷ ವಿನಾ ಮುಕ್ತಿಯಾಗುವದಿಲ್ಲ ಕಾರಣ ಬಿಂಬೋಪಾಸನವು ಅತ್ಯಾವಶ್ಯವು ಎಂದು ಸಾರೋದ್ಧಾರ ಭಾಗವತ.

ಇದನ್ನೇ ಶ್ರೀ ವಿಜಯದಾಸಾರ್ಯರು ಉ.ಸು. ಪುಟ ೨೦ ತ್ರಿವಿಡಿ ತಾಳದಲ್ಲಿ "ಬಿಂಬೋಪಾಸನೆ ಮಾಡು ಭಕುತಿ ಪೂರ್ವಕದಿಂದ । ಡಂಬಕವ ತೊರೆದು ತೀವ್ರದಲ್ಲಿ । ಡಿಂಬದೊಳಗೆ ಇಪ್ಪ ಹೃದಯಸ್ಥಮೂರ್ತಿಯ । ಬೆಂಬಿಡದೆ ನೋಡುವದು ಬಹು ಪ್ರಕಾರ । "ವೆಂದು ಹೇಳಿ, ಮುಂದೆ ಸುಳಾದಿ ೩೮ ಪುಟ ೧೨೫ ತ್ರಿವಿಡಿ ತಾಳದಲ್ಲಿ ಶ್ರೀಹರಿ ಬಾಹಿರದಲ್ಲಿ ಶೂದ್ರ ರೂಪದಿಂದ ದರ್ಶನವಿತ್ತಾಗ್ಗೆ. ಇದು ಈ ಬಹಿರಂಗ ರೂಪವು ಮುಕ್ತಿಗೆ ಕಾರಣವಲ್ಲ. " ಮುಚಕುಂದ ಪಾಲಕನೆ ಎನ್ನ ಹೃದಿಸ್ಥಮಂದಿರದೊಳು । ಮುಖ್ಯ ಪ್ರಾಣಾಧಿಷ್ಠಾನ । ದಿಂದಲಿ ಆ ಪರಿಯಲಿ ಪೊಳೆವದು । ಕುಂದದೆ ಭ್ರಾಂತಿಯನ್ನುಗೊಳಿಸುವದೇನೊ ? " । ಎಂದು ಹೇಳುತ್ತಾ ಮುಂದೆ ತ್ರಿವಿಡಿ ತಾಳದಲ್ಲಿ " ಇದೇ ರೂಪದಲ್ಲಿ ಮುಕುತಿಯಾಗದು ಜೀಯಾ । ಪದುಮನಾಭನೆ ಕೇಳೋ ನಿತ್ಯ ಎನ್ನ । **ಹೃದಯದೊಳಗೆ ಬಂದು ಪೊಳೆವ ರೂಪವೇ ತೋರು । ಪದವಿಗೆ ಇದೇ ಅಲ್ಲದೇ ಇನ್ನೊಂದುಂಟೆ ?** । ಬದಿಯಲ್ಲಿ ನಿಂತು ಮಾತಾಡಿದ ಕಾಲಕ್ಕೂ ನಿದರುಶನ ನಿನ್ನ ಮೂರ್ತಿ ಬೇರೆ । ಅದರಿಂದ ಮೋಕ್ಷಕೆ ತೀವ್ರಗತಿಯುಂಟು । ಇದೆ ಇದೇಯಾದರೆ ಪಾಪನಾಶ । ಇದೆ ...............। ಇದೆ ಇದೇ ಸಿದ್ಧವು ಎನಗೆ ನಿಶ್ಚಯವಾವುದು । ಮೊದಲು ಕಂಡದ್ದು ಈಗ ನೋಡುವುದೋ । ಎದುರಿಲಿ ನಿಂದು ಕುಣಿದಾಡಿ ಬಾಹಿರದಲ್ಲಿ । ಬದಿಯಲ್ಲಿ ಓಡ್ಯಾಡುತಲಿ ಇರಲು। **ಮದನಾರಿಗಾದರೂ ಅಪರೋಕ್ಷವಲ್ಲೆಂದು** ।ಒದಗಿ ಶಾಸ್ತ್ರಗಳಲ್ಲಿ ಸಾರುತಿದಕೋ । ಪದುಮನಾಭನೆ ಕೇಳು **ಎಂಥವರಿಗೆ ತನ್ನ** । ಹೃದಯದಲ್ಲಿಯ ಮೂರ್ತಿ ಕಾಣದನಕಾ । **ಹದುಳಿ ಸೇರರು ಕಾಣೊ** ಸ್ಪಷ್ಟತ್ವದಲಿ ಭೇದ । ತದನಂತರದಲಿ ಪ್ರಾಚುರ್ಯ ನಿತ್ಯಾ । ಬುಧರು ಇಂತೆಂದು ಪೇಳುವರು ಗ್ರಂಥದಲ್ಲಿ । ಪದ ಶ್ಲೋಕಂಗಳು ಶೋಧಿಸಿ ಶೋಧಿಸೀ । ಮಧುವೈರಿ **ವಿಜಯ ವಿಠ್ಠಲರೇಯ ಎನಗಿಂದು । ಹದನವಾವುದು** ತಿಳಿಸೊ ಲಿಂಗಭಂಗಕ್ಕೆ ವೇಗಾ ॥೩॥ ಎಂದು.

" ಹೃದಯಸ್ಥಹರೇಃ ಮೂರ್ತಿರ್ಜೀವೋ ಯತ್ಪ್ರತಿಬಿಂಬಗಃ " ಎಂಬ ವಿಚಾರವನ್ನೇ ಸವಿಸ್ತರವಾಗಿ ವರ್ಣಿಸಿದ್ದಾರೆ. ಕಾರಣ ಬಿಂಬಾಪರೋಕ್ಷವೇ ಮುಕ್ತಿಗೆ ಸಾಧನವೆಂದು ಶಾಸ್ತ್ರ ನಿರ್ಣಯ. ಮತ್ತೂ ಬಿಂಬನ ಲಕ್ಷಣವನ್ನು ಹೇಳುತ್ತಾರೆ.




ಜ್ಞಾನಂ ವಿಶುದ್ಧಂ ಪರಮಾರ್ಥಮೇಕ-
ಮನಂತರಂ ನ ಬಹಿರ್ಬ್ರಹ್ಮ ಸತ್ಯಂ ॥
ಪ್ರತ್ಯಕ್ ಪ್ರಶಾಂತಂ ಭಗವಚ್ಛಬ್ದ ವಾಚ್ಯಂ
ಯದ್ವಾಸುದೇವಂ ಕವಯೋ ವದಂತಿ ॥ ೫-೧೨-೧೧ (ಭಾಗವತ)

ಯತ್ಪರಮಾರ್ಥಂ ಸರ್ವೋತ್ತಮಂ ಏಕಂ ವಿಶುದ್ಧ ಜ್ಞಾನರೂಪಂ ಸತ್ಯಂ ನಿತ್ಯಂ ಪ್ರಶಾಂತಂ ಬ್ರಹ್ಮಪದ ವಾಚ್ಯಂ ತಥಾ ಭಗವತ್‌ಚ್ಛಬ್ದ ವಾಚ್ಯಂ ವಾಸುದೇವ ಪದಾಭಿಧೇಯಂ ಚ ವಸ್ತು ಕವಯಃ ವದಂತಿ ತದ್ವಸ್ತು ಬಹಿರ್ಜೀವಸ್ಯ ರೂಪಾದಿತು ನ ಮಂತವ್ಯಂ ನಾಪಿ ಅಂತಃ ಜೀವಹೃದಯಾಂತರೇವಸ್ಥಿತ್ವಾ ವಿಷಯ ಭೋಗ ಕುರ್ವದಿತ್ಯುಕ್ತವಮ್ ॥ ಭಾಗವತ ಸಾರೋದ್ಧಾರ.

ಇಂತಹ ಸನಾತನ ಜೀವಾಂತರ್ಯಾಮಿ ಭಗವಂತನೇ ಪ್ರತ್ಯಕ್ ಶಬ್ದವು ಜೀವ ಪರಪ್ರಸಿದ್ಧವಾದರೂ, ಸರ್ವಥಾ ಅನಾದ್ಯನಂತಕಾಲದಿಂದಲೂ, ಕದಾಚಿತ್ ಒಂದಾನೊಂದು ಕಾಲದಲ್ಲಾದರೂ, ಯಾವ ಕಾರಣದಿಂದಲೂ, ಜೀವನಿಂದ ಅಗಲದೇ ಕರಪಾದಾದಿ ಅವಯುವಗಳಿಂದ ಜೀವನನ್ನು ಅಗಲದೇ ಹೊರಗೆ ಹೋಗದೇ ಜೀವಾಂತರ್ಯಾಮಿಯಾಗಿಯೇ ಇದ್ದೇ ಇರುತ್ತಾನೆ. ತದ್ಬಿಂಬರೂಪ ವಿಯೋಗವಾಗುವುದೇ ಇಲ್ಲ. ವಿಯೋಗವಾದರೆ, ಜೀವನು ಸ್ವರೂಪದಿಂದಲೇ ಇರುವನಾಗುವದಿಲ್ಲ. ಜೀವನ ಶಿರದಲ್ಲಿ ಶಿರ, ಮುಖೇ ಮುಖ, ಇತ್ಯಾದಿ ಕ್ರಮದಿಂದ ಜೀವನ ಸ್ವರೂಪೇಂದ್ರಿಯ ಸಮಾನಾಕೃತಿಯಾಗಿ ಜೀವನ ಸರ್ವಾವಯವಗಳಲ್ಲಿ ಇದ್ದು, ತನ್ನ ಸ್ವರೂಪಭೂತ ಸ್ವಾವಯವಗಳಿಂದ ಸ್ವಾಖ್ಯರಸಭೋಗವನ್ನು ಅನುಭವಿಸುತ್ತಾನೆ. ಬಿಂಬಸನ್ನಿಧಾನದಿಂದ "ಪ್ರತ್ಯಗಿತಿ ಪ್ರಸಿದ್ಧೋ ಜೀವಃ ॥ ಜೀವನು ಬಿಂಬನಿಂದ ಪ್ರತ್ಯಗಾತ್ಮ ಭಿನ್ನಃ ಪ್ರತಿಬಿಂಬ ದಾಸನೆಂದು ಪ್ರಸಿದ್ಧ. ಹೇಗೆ ಸ್ಥೂಲ ದೇಹದಲ್ಲಿ (ಆತ್ಮ) ಜೀವನ ಸನ್ನಿಧಾನದಿಂದ ದೇಹವೂ ಆತ್ಮನೆಂದು ಕರಿಸುತ್ತದೆಯೋ, ಹಾಗೆಯೇ ಜೀವಾಂತರ್ಯಾಮಿ ಹರಿಯು ಜೀವನಿಂದ ಭಿನ್ನನೂ ಉಪಾಸ್ಯನೂ ವಿಶುದ್ಧ ಜ್ಞಾನಾನಂದ ಸಚ್ಚಿದಾನಂದ ಆತ್ಮನೆಂದು ಉಪಾಸನೆ

ಮಾಡುವದೇ ಮೋಕ್ಷಕ್ಕೆ ಕಾರಣವು ಎಂದು ಶ್ರೀ ವಿಜಯರ ವಚನಗಳು ವಿಪುಲವಿರುತ್ತವೆ. ಇಂತಹ ಬಿಂಬೋಪಾಸನವು ಲಭಿಸಬೇಕಾದರೆ,

## ಅಪರೋಕ್ಷ ಜ್ಞಾನಿಗಳಾದ ಗುರೂಪದೇಶವು ಮುಖ್ಯವು

ಶ್ರೀ ವಿಷ್ಣುತೀರ್ಥರು ಸಾರೋದ್ಧಾರ ಬಿಂಬೋಪಾಸಕ ಗುರುಪ್ರಾಪ್ತಿ ಪ್ರಕರಣದಲ್ಲಿ ಅಪ್ಪಣೆ ಕೊಡಿಸಿರುವರೇನೆಂದರೆ "ತದೇತಸ್ಯ ಸರ್ವಸ್ಯ ಪ್ರದರ್ಶಕಶ್ಚ । ಬಿಂಬೋಪಾಸಕೋ ಗುರುರೇವ ಪ್ರದರ್ಶಕ ಇತಿ ಭಾವೇನ । **ದೈವಾತ್ ಲಭ್ಯಮಾನೋಽಪಿ । ಬಿಂಬೋಪಾಸಕಃ ವೈಷ್ಣವೋತ್ತಮಃ ಗುರುಃ ।** ಈದೃಶ ಇತಿ ತಲ್ಲಕ್ಷಣ ಮಾಹ ॥

ಇಂತು ಬಿಂಬೋಪದೇಶಕ ಗುರುಲಕ್ಷಣ ಭಾಗವತದಲ್ಲಿ ಹೇಳಿರುವುದೇನೆಂದರೆ

**"ತ್ರಿಭುವನ ವಿಭವಹೇತುಭಿರ್ವಿಕುಂಠ ।**
**ಸ್ಮೃತಿಭಿರಜೇಶಸುರಾದಿಭಿಃ ವಿಮೃಗ್ಯಾತ್ ॥**
**ನ ಚಲತಿ ಭಗವತ್ಪದಾರವಿಂದಾ ।**
**ಲ್ಲವನಿಮಿಷಾರ್ಧಮಪಿ ಸ್ಮ ವೈಷ್ಣವಾಗ್ರ್ಯಃ ॥**

ಭಾಗವತ ೧೧।೨।೫೩

"ವಿಕುಂಠಾ ಅಕುಂಠಿತಾ ಸ್ಮೃತಿಃ ಭಗವದ್ವಿಷಯಿಣೀ ಏಷಾಂತೈ । ಅಜಶ್ಚ ಈಶಶ್ಚ ಸುರಾಶ್ಚ । ಯಃ ನ ಚಲತಿ ವೈಷ್ಣವೇಷು ಅಗ್ರ್ಯಃ । ಸ್ಮೇತಿ ಪ್ರಸಿದ್ಧಂ ಏತದಿತಿದ್ಯೋತ ಯತಿ । ನಿಮಿಷಾರ್ಧಮಪೀತ್ಯಾದಿನಾ । ಕಿಮುತ ತೋಧಿಕೇ । ಕಾಲೇ ಯಃ ಭಗವತ್ಪದಾರವಿಂದಾತ್ ನ ಚಲತಿ ಸ ವೈಷ್ಣವಾಗ್ರ್ಯ ಇತಿ ವಕ್ತವ್ಯಮಿತಿ ಸೂಚಯತಿ ॥ ಮತ್ತು

**ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ-**
**ದ್ಧರಿರವಶಾಭಿ ಹಿತೋಽಪ್ಯಘೌಘನಾಶಃ ॥**
**ಪ್ರಣಯರಶನಯಾ ಧೃತಾಂಘ್ರಿಪದ್ಮಃ ।**
**ಸ ಭವತಿ ಭಾಗವತ ಪ್ರಧಾನ ಉಕ್ತಃ ॥**

೧೧ । ೨ । ೫೫ ಭಾಗವತ

ಯಥಾ ಅವಶೇನ ಅಭಿಹಿತೋಪಿ ಅಘೌಘನಾಶಕಃ । ಅತಃ ಸಾಕ್ಷಾತ್ **ಹರಿಶಬ್ದಾರ್ಥೇಷು** ಮುಖ್ಯ ಭಗವಾನ್ ಯಸ್ಯ ಹೃದಯಂ ನ ವಿಸೃಜತಿ ಸ ಭಾಗವತಾನಾಂ ಪ್ರಧಾನಃ॥ ನಾಸ್ಮಾಭಿರೇವ ತಥಾ ಉಚ್ಯತೇ ॥ ಇತ್ಯಾದಿ.

ಇದರ ಸಾರಾಂಶವೇನೆಂದರೆ ಕ್ಷಣ, ತೃಟ, ಲವ ಕಾಲದಲ್ಲಿಯಾದರೂ, ಭಗವದ್ವಿಷಯಕ, ಬಿಂಬನಾದ ಹರಿ ವಿಷಯವಾದ ಸ್ಮೃತಿಯು ತ್ರಿಲೋಕಗಳಿಗೂ ಸಂಪತ್ತು ಅಭಿವೃದ್ಧಿಯಾದ ಬ್ರಹ್ಮ ರುದ್ರನೇ ಮೊದಲಾದ ದೇವತೆಗಳಿಂದ ಸಂತತ ಸ್ಮರಣಪೂರ್ವಕ ಸೇವ್ಯಮಾನವಾದ ಬಿಂಬನಾದ ಶ್ರೀಹರಿಯ ಭಗವತ್ಪಾದಾರವಿಂದದಲ್ಲಿ ನಿಮಿಷಾರ್ಧವೂ, ಸ್ವಲ್ಪವಾದರೂ ತಪ್ಪದಂತೆ ಸ್ಥಿರವಾದ ಭಕ್ತಿಯಿಂದ ನಿಲ್ಲಿಸಿದ ಮನಸ್ಸುಳ್ಳವನೇ ವೈಷ್ಣವೋತ್ತಮ. ಅನ್ಯ ವಿಷಯಗಳಲ್ಲಿ ಮನಸ್ಸಿಡದೇ ದೇಹಾದಿಗಳಲ್ಲಿ ಪರವಶರಾಗಿ ಪಾಪಸಮೂಹವನ್ನು ನಾಶನ ಮಾಡುವ ಸಾಕ್ಷಾತ್ ಹರಿಶಬ್ದ ವಾಚ್ಯನಾದ ಬಿಂಬರೂಪಿ ಮುಖ್ಯ ಷಡ್ಗುಣೈಶ್ವರ್ಯ ಭಗವಂತನನ್ನು ತಮ್ಮ ಹೃದಯದಲ್ಲಿ "(ನ ವಿಸೃಜತಿ)" ನೋಡದೇ ಸ್ಮರಿಸದೇ ಎಂದಿಗೂ ಬಿಡುವುದಿಲ್ಲ, ಸಂತತವಾಗಿ ಬಿಂಬ ಸ್ಮರಣೆಯುಳ್ಳವರೇ ಭಾಗವತರಲ್ಲಿ ಪ್ರಧಾನ ಉತ್ತಮರು. ಇಂಥವರ ಉಪದೇಶವೇ ಮುಖ್ಯವೆಂದು ಪೂರ್ವಜ ಜ್ಞಾನಿಗಳು ಹೇಳುವರು. ಮತ್ತು ಸಾರೋದ್ಧಾರ ಬಿಂಬೋಪಾಸನಾ ಪ್ರಕರಣದಲ್ಲಿ ಶ್ರೀ ವಿಷ್ಣುತೀರ್ಥರು ದಾರ್ಢ್ಯಾರ್ಥವಾಗಿ ಪುನಃಪುನಃ ಬಿಂಬೋಪಾಸಕ ಗುರುಗಳ ಅನುಗ್ರಹ ವಿನಾ ಲಭಿಸುವುದಿಲ್ಲವೆಂದು ಹೇಳುತ್ತಾರೆ.

"ರಹೂಗಣೈ ತತ್ತಪಸಾ ನ ಯಾತಿ ನ ವಿದ್ಯಯಾ ನಿರ್ವಸನಾದ್ಗೃಹಾದ್ವಾ ।। ನ ಛಂದಸಾ ನೋತ ಜಲಾಗ್ನಿ ಸೂರ್ಯೈರ್ವಿನಾ ಮಹತ್ಪಾದ ರಜೋಭಿಷೇಕಾತ್ ।। ೫।೧೨।೧೨ ॥

ಇಂಥಾ ಬಿಂಬರೂಪನಾದ ಹರಿಯು ಸಾಕ್ಷಾತ್ಕಾರನಾಗಿ ಲಭಿಸಬೇಕಾದರೆ ತಪಸ್ಸಾದಿ ಯಾವ ಸಾಧನದಿಂದಲೂ ದೊರೆಯುವದಿಲ್ಲ. ಲಭ್ಯನಾಗುವದಿಲ್ಲವಾದರೂ ಬಿಂಬಜ್ಞಾನಿಗಳಾದ ಮಹಾತ್ಮರ ಸೇವಾ ತತ್ಪ್ರಸಾದದಿಂದಲೇ ದೊರೆಯುವನು ಹೊರತಾಗಿ, ಬಿಂಬಜ್ಞಾನವು ದುರ್ಲಭವು. ನಿನ್ನ ಜನ್ಮಾಂತರ ಅರ್ಜಿತ ಪುಣ್ಯದಿಂದ ಶ್ರೀ ಹರಿಯು ಅನಾಯಾಸೇನ ನಿನ್ನ

ಸಮಾಗಮವನ್ನು ಮಾಡಿಸಿ ನಿನ್ನ ಮೇಲಿನ ಕರುಣೆಯಿಂದ ಶ್ರೀ ಹರಿಯು ಈ ಸದುಪದೇಶವನ್ನು ಮಾಡಿಸುತ್ತಾನೆಂದು ಜಡಭರತ ಮಹಾರಾಜನು ರಹೂ ಗಣರಾಜನಿಗೆ ಉಪದೇಶಿಸಿದ್ದಾನೆ. ಕಾರಣ ಬಿಂಬಾಪರೋಕ್ಷಿಗಳಾದ ಗುರು ಪ್ರಸಾದವೇ ಬಿಂಬಜ್ಞಾನಕ್ಕೆ ಮುಖ್ಯವಾದುದು.

ಇದೇ ವಿಷಯವನ್ನೇ ಶ್ರೀ ವಿಜಯದಾಸಾರ್ಯರು ಉಪಾಸನಾ ಭಾಗ ಸುಳಾದಿ (೩೯)೧೨೭-೧೨೮ ಪುಟದಲ್ಲಿ ಆಜ್ಞಾ ಕೊಡಿಸಿದ್ದೇನೆಂದರೆ "ಗುರು ಮಂತ್ರವನ್ನೆ ಮಾಡು ಗುಣವಂತನಾಗಿ ಮನುಜಾ । ಗುರುತು ನಿನಗೆ ಪೇಳುವೆ ಗುಪ್ತವಿಟ್ಟು । ಗುರು ಲಘು ಪಾಪಂಗಳು ದಹಿಸಿಪೋಗುವವು ನಿತ್ಯ ॥ ಗುರುವೆ ಮುಖ್ಯನು ಕಾಣೋ ಸದ್ಗತಿಗೆ । ಗುರುಭಕುತಿ ಬೇಕೋ ವೈದೀಕ ಲೌಕಿಕಕ್ಕೆ । **ಗುರು ಉಪದೇಶವಿಲ್ಲದೇ ವಿದ್ಯಾವಿಲ್ಲ ।** ಗುರುವೆ ಜಗದ್ಗುರು ತಾನಾದ ಕಾಲಕ್ಕೆ । ಭರತ ವರ್ಷದಲ್ಲಿ ಜನ್ಮ ಧರಿಸಿದಾಗ । ನರ ಯಃಕಶ್ಚಿತನಾಗೆ ಅವನಿಂದ ಉಪದೇಶ । ಗುರು ಭಾವದಿಂದ ಕೊಂಡು ನಮಿಸಬೇಕು । ಗುರು **ಮುಖದಿಂದ ವಿದ್ಯಾಪ್ರಾಪ್ತವಾಗುವದೆಂದು** ವರಶ್ರುತಿ ತತಿಯಲ್ಲಿ ಪೇಳು ತಿದಕೋ ಸುರನರೋರಗ ಲೋಕದಲ್ಲಿದ್ದ ಕಾಲಕ್ಕು ಗುರುವೆ ಕಾರಣ ಕರ್ತಾ ಶಿಕ್ಷಿಪುದಕೆ । ಹರಿ-ಬ್ರಹ್ಮ ಮರುತಗೆ ಮರುತ ಗರುಡಾಹಿ ಶಿವಗೆ । ಹರಿ ಇಂದ್ರ ಪ್ರದ್ಯುಮ್ನಗೆ । ಸುರಪ ಚಂದ್ರಾರ್ಕ ಯಮಗೆ । ತರಣಿ ವರುಣ ಮುನಿಗೆ । ತರಣಿ ಭೃಗ್ವಾದಿಗೆ ಹೀಗೆ । ಗುರುವೆನಿಸಿಕೊಂಬುವರು ನಿಜ ಸ್ವರೂಪಾ । ತರತಮ್ಯ ಇದೆ ವ್ಯತ್ಯಾಸ ಇಲ್ಲ ಸತ್ಯ । ಧರೆಯೊಳು ಸಂಸಾರ ಪ್ರವೇಶಿಸೆ । ತರತಮ್ಯ ಪ್ರಯೋಜನವಲ್ಲ ವಿದ್ಯಾಮಾತ್ರ । ಇರಬೇಕು ಉಪ ದೇಶಕೊಳಬೇಕಲ್ಲಿ । ತರತಮವಿಲ್ಲ ನೀಚ ಉತ್ತಮ, ಉತ್ತ । ಮರು ಪೇಳು ವರು ನೀಚಗೆ ಉಪದೇಶ । ಉರುಕಾಲ ಇನಿತು ಇಪ್ಪ ಆಮೇಲೆ ಪಕ್ವಕಾಲ । ಬರಲಾಗಿ ತನಗಿಂದ ಒಂದೆರಡು ಗುಣದ । ಗುರುವು ಮೊದಲುಮಾಡಿ ಅಧಿಕಾ ಧಿಕವಾಗಿ । ಗುರುದೊರಕುವನಯ್ಯಾ ಉಪದೇಶಕ್ಕೆ । ಸರಿಯನ್ನಿ ಇಲ್ಲಿಗೆ ಸಂಚಿತಾಗಾಮಿನಾಶ । ಪರಿಪರಿ ಪ್ರಾರಬ್ಧ ಭುಂಜಿಸುವ ಸಮಯ । ಬರಲಾಗಿ ನಿಜಗುರು ಪ್ರಾಪ್ತನಾಹ । ಕರುಣಾದಿಂದಲಿ ಇವನ ಯೋಗ್ಯತೆ ತಿಳಿದು ಸು। ಸ್ಥಿರವಾದ ಮಾರ್ಗ ಭಜನೆ ತೋರಿಕೊಡುವಾ....। ತರತಮ್ಯ ಜ್ಞಾನ ತತ್ವ ಓದಲೇಕೆ ನಿಜ । ಗುರು ಕರುಣದಿಂದಲಿ ಸಾಧ್ಯವಹದು । ಸರುವ ಧರ್ಮವ

ತೊರೆದು । ಗುರುಧರ್ಮ ನಡೆಸುತಿಪ್ಪ । ನರಗೆ ಆವಾವ ಭಯವಿಲ್ಲ ಕಾಣೋ। ಪರಮಪುರುಷ ನಮ್ಮ ವಿಜಯವಿಠ್ಠಲರೇಯನ್ನ । ಚರಣ ಕಾಂಬುವಡಕ್ಕೆ ಗುರುದ್ವಾರ ಸಂಪಾದಿಸು ॥೧॥ ಇಂತು ಗುರುಪ್ರಸಾದ ಮುಖ್ಯವೆಂದು ಹೇಳಿ ಜತೆಯಲ್ಲಿ ಗುರುದ್ವಾರವಿಲ್ಲದೇ ಸಾಧ್ಯ ಸಿದ್ಧನಾಗುವನೆ । ಗುರುವಾಯು ವಿಜಯ ವಿಠಲಗೆ ವಂದಿಸಬೇಕು ॥೬॥

ಮುಖ್ಯವಾಗಿ ಬ್ರಹ್ಮ ವಿದ್ಯಾಸಂಪಾದನೆಗೆ ಗುರು ಉತ್ತಮರ ಉಪದೇಶ ಬೇಕೆಂದು ತ್ರಿವಿಡಿ ತಾಳದಲ್ಲೂ ಹೇಳಿದ್ದಾರೆ.

ಇದಕ್ಕೆಲ್ಲ ಮೂಲಾಧಾರವಾಗಿರುವ ಶ್ರುತಿಗಳು ಬ್ರಹ್ಮಸೂತ್ರಗಳಿವೆ.

**"೩ಂ ಪ್ರದಾನವದೇವ ೩ ತದುಕ್ತಮ್ ॥೩ಂ॥**

**ಅರ್ಥ :** ಪ್ರದಾನವತ್ – ಸಮ್ಯಕ್ ಪ್ರೀತಿಪೂರ್ವಕ ಗುರೂಪದೇಶ ಯುಕ್ತಮೇವ ಶ್ರವಣಾದಿಕಂ ಜ್ಞಾನ ಸಾಧನಂ ನ ಕೇವಲಂ । ಕುತ ಹಿ ಯತಃ। ತದುಕ್ತಂ ತಸ್ಯ ಜ್ಞಾನಸ್ಯ ಗುರು ಪ್ರಸಾದಾಧೀನತ್ವಂ । ಆಚಾರ್ಯವಾನಿತಿ ॥ ಸೂತ್ರ ದೀಪಿಕಾ (ಛಾಂಧೋಗ್ಯ-೬-೧೪-೨)

**ಶ್ರೀ ಸರ್ವಜ್ಞರ ಭಾಷ್ಯ** ೧) ನ ಚ ಶ್ರವಣಾದಿ ಮಾತ್ರೇಣ ಬ್ರಹ್ಮ ದೃಷ್ಟಿರ್ಭವತಿ ಕಿಂ ತು ಸ್ಯೇತಿ ಕರ್ತವ್ಯೇನ ಯಥಾ ಗುರೂಕ್ತಂ ತಥೈವ ಭವತಿ ೨) ಆಚಾರ್ಯವಾನ್ ಪುರುಷೋ ವೇದ (ಛಾ ೬–೧೪–೨)

೧) ಗುರೂಪದೇಶವಿಲ್ಲದೆ ಲಿಖಿತ ಪುಸ್ತಕ ಪಾಠಗಳಿಂದ ವಾಚನ ಶ್ರವಣಾದಿಗಳಿಂದಲೇ ಬ್ರಹ್ಮಾಪರೋಕ್ಷವು ಆಗುವದಿಲ್ಲ. ಇತಿ ಕರ್ತವ್ಯತಾರೂಪ ಗುರುಪ್ರಸಾದ ಪೂರ್ವಕವಾದ ಗುರೂಪದೇಶದಿಂದ ಸಾಧ್ಯವಾದ ಶ್ರವಣಾದಿಗಳಿಂದಲೇ ಅಗುತ್ತದೆ. ಹೇಗೆ ಗುರೂಪದೇಶವೋ ಹಾಗೆಯೇ ಗುರುಗಳ ಉಪದೇಶಾನುಸಾರವಾಗಿ ಫಲವೂ ಲಭಿಸುವುದು.

೨) ಜ್ಞಾನವು ಗುರುಗಳ ಪ್ರಸಾದಾಧೀನವೆನ್ನುವದು ಹೇಗೆ ಎಂದರೆ ಗುರುವನುಗ್ರಹವುಳ್ಳ ಪುರುಷನೇ ಪರಬ್ರಹ್ಮನನ್ನು ತಿಳಿಯುತ್ತಾನೆಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಉಕ್ತವಾಗಿದೆ. ಶ್ರೋತವ್ಯೋ ಮಂತವ್ಯೋ ನಿಜಧ್ಯಾಸಿತವ್ಯ ಇತ್ಯಾದಿ ಶ್ರುತಿಗಳೂ ಇವೆ. ಇಂತು ಗುರುಗಳ ಅನುಗ್ರಹ ಸಂಪಾದಿಸಿದರೆ ಬಿಂಬರೂಪಿ ಹರಿಯು ಲಭಿಸುವನು.

ಶ್ರೋತವ್ಯ–ಗುರುಗಳಿಂದ ಶ್ರವಣ ಮಾಡಬೇಕು. ಶ್ರವಣ ಮಾಡಿದ್ದು ಮನನ ಮಾಡಬೇಕು. ಮನನ ಮಾಡಿದ್ದು ನಿಜಧ್ಯಾಸಿತವ್ಯ=ನಿಜಧ್ಯಾಸ, ಸಮಾಧಿ ಯೋಗ, ಧ್ಯಾನೋಪಾಸನೆ, ಮೆಟ್ಟಲು ಇವೆ.

## ಸಾಮಾನ್ಯ ಧ್ಯಾನದ ವಿವರ

ಶ್ರೀ ವಿಜಯದಾಸಾರ್ಯರು ಉ. ಭಾಗ ಸು. (೯) ಸಾಮಾನ್ಯ ಧ್ಯಾನ ವಿದು. ಮಾನ್ಯವಂತರು ಕೇಳಿ ಎಂಬ ಸುಳಾದಿಯಲ್ಲಿ ಮೊದಲಿಗೆ ಕಾಮ ಕ್ರೋಧಗಳು ಅಳಿಯಬೇಕು. ಚಿತ್ತಕ್ಕೆ ಸುಖಸ್ತೋಮವಾಗುವ ಸೂಚನೆ ಗ್ರಹಿಸಬೇಕು। ನೇಮವಾದ ಭೋಜನ ಆಹಾರ, ನೇಮವಾದ ನಿದ್ರಾ, ನಿಯಮವಾದ ಇತರ ವ್ಯಾಪಾರದಿಂದಿದ್ದರೆ ಧ್ಯಾನಕ್ಕೆ ನಿರ್ಭಯವೇ ಸರಿ. ನಿಜ ವಾದ ತಾರತಮ್ಯ ಜ್ಞಾನದಿಂದ ಹರಿ, ನಾರಾಯಣ, ರಾಮ, ಕೃಷ್ಣ, ಅಚ್ಯು ತಾನಂತ ಗೋವಿಂದನೆಂಬೋ ನಾಮಾಮೃತದಲ್ಲಿ ಲೋಲಾಡುತ್ತಿರಬೇಕು. ಹೇಮ ರಜತ ರತುನ ಧನಧಾನ್ಯ ಪಶುವ್ರಾತ ಧಾಮ ಸತಿಸುತರಲ್ಲಿ ಕೇವಲ ವಾದ ಪ್ರೇಮ ಬಿಡಬೇಕು, ನಶ್ವರವಾದ ದೇಹವು ಪೋಗುವದೆಂದು ನಿಶ್ಚಯ ವಾಗಿ ತಿಳಿದು ಅನುದಿನದಲ್ಲಿ ಶ್ರೀಮನ್ನಾರಾಯಣನ ಪಾದ ಏಕಾಗ್ರಚಿತ್ತದಿಂದ ಪ್ರೇಮ ಉಳ್ಳವನಾಗಿ ಶ್ರೀಹರಿ ಪರಬೊಮ್ಮ ರಮಾಬ್ರಹ್ಮಾದಿಗಳ ಒಡೆಯ ಸುಲಭ, ವೇದಾತೀತ ಸರ್ವಭವತಾರಕನೆಂದು ತಿಳಿದು ಸಮಸ್ತ ಶಾಸ್ತ್ರವಿರೋಧ ವಾಕ್ಯವನ್ನು ಪರಿಹಾರಗೈಸಿ, ಸರ್ವೋತ್ತಮಹರಿಯೆಂದು ತಿಳಿದು, ನಿತ್ಯ ನಿಷ್ಕಾಮದಲ್ಲಿ ಪ್ರಮೋದದಿಂದ ರೋಮಾಂಚನ ಉಬ್ಬಿ ಸ್ನೇಹದಿಂದ ಬಿಡದೆ, ಹರಿಯಲ್ಲಿ ಮನಸ್ಸು ಮಾಡಿದರೆ ಯಾಮಿನೀನಾಥವರ್ಣ, ವಿಜಯ ವಿಠಲ ರೇಯನು ಕಾಮಿಸಿದ ಫಲವನ್ನು ತನ್ನ ಭಕ್ತರಿಗೆ ಕೊಡುವನು.

ಇಂತು ದೃಢ ಮನಸ್ಕರಾಗಿ, ಪುಣ್ಯದೇಶ ಪುಣ್ಯ ಕಾಲದಲ್ಲಿ, ಆಸನ ಶುದ್ಧಿಯಿಂದ ಕುಳಿತು, ದೇಹವನ್ನು ಕದಲಿಸದೆ, ಹರಿಗುರುಗಳಿಗೆರಗಿ, ದೇಹ ದಲ್ಲಿದ್ದ ಸಕಲ ಭಗವದ್ರೂಪಗಳನ್ನು ಸ್ಮರಿಸಬೇಕು. (ಸಪ್ತಾವರಣದೇಹ ಸತತ ಸಾಧನ ಗೇಹ) ಈ ಸುಳಾದಿ ನೋಡಿ, ಧ್ಯಾನರೂಪಗಳ ವಿವರ ತಿಳಿಯುವದು.

## ಧ್ಯಾನೋಪಾಸನಕ್ಕೆ ಸಲ್ಲಕ್ಷಣವಾದ ಮೂರ್ತಿ

ಶ್ರೀಮದ್ಭಾಗವತ ದ್ವಿತೀಯ ಸ್ಕಂದದಲ್ಲಿ ಸ್ಥೂಲೋಪಾಸನೆ ಪೇಳಿದಂತೆ ಶ್ರೀ ವಿಜಯಗೋಪಾಲ ಪ್ರಾಣೇಶದಾಸಾರ್ಯರ ಉಕ್ತಿಗಳಿವೆ. ಶ್ರೀ ಪ್ರಾಣೇಶವಿಠಲ ಕೀರ್ತನೆ ಪುಟ ೧೫೦ "ಅಲ್ಲಿದ್ದ (ಹೃದಯಾಷ್ಟದಳದಲ್ಲಿ) ಹರಿ ಗಾತ್ಮ ಜೀವ ಹೃದಯಂಬುವರು | ಬಲ್ಲವರು ಸ್ಥೂಲಾಂಗ ಹೃತ್ಸರಸಿಜಾ || ದಲ್ಲೆಷ್ಟದಳ ಮಧ್ಯ ರತ್ನ ಮೌಕ್ತಿಕ ಕಾಂತಿ | ಯಲ್ಲಿಹುದು ಹೇಮ ಮಂಟಪ ಮಾತ್ಮಕಾ || ೧೨ || ಆ ಮಂಟಪದಲ್ಲಿ ಹನ್ನೆರಡು ಮೂಲ್ಯುಳ್ಳ ಭಾ | ನೂ ಮಂಡಲದಲಿ ಬಡುವಾಗಿ ಇಹದೂ || ಸೋಮಮಂಡಲದಲಿ ತ್ರಿಕೋಣಾಗ್ನಿ ಮಂಡಲದಿ | ಭೂಮಿಧರ ಶೇಷ ಪರ್ಯಂಕದಲ್ಲಿ || ೧೬ || ಮುತ್ತುರತ್ನಗಳಿಂದ ದಟಿತವಾದಾಸನ ವಿ | ಚಿತ್ರ ರತ್ನಖಚಿತದ ಉಪಬರ್ಹಣಾ | ಉತ್ತಮ ಶಿತ ದ್ವೀಪಗತ ವಿಷ್ಣು ಅಲ್ಲಿಹನು ನಿತ್ಯ ಪರಮಾತ್ಮನೆಂಬರು ಆತಗೆ || ೧೭ ||

### ಬಿಂಬಮೂರ್ತಿ ಲಕ್ಷಣ

ಬಿಂಬನಾಮನ ರೂಪವೇನು ವರ್ಣಿಪೆನುದಿತ | ಅಂಬುಜಾಪ್ತಾಭ ಚಿತ್ ಸುಖ ವಿಗ್ರಹಾ | ಕಂಬುರವಿಗದಕಂಜ ಸಿರಿಧರಣಿ ಸಹಿತ | ಹೇಮಾಂಬರದಿ ವಧ್ಯಾಣದಿಂದೊಪ್ಪುವಾ || ೧೮ || ಕಟಿಪ್ರದೇಶನು ಗುಂಭನಾಭಿಕೌಸ್ತುಭವಕ್ಷ | ಪಟುತರ ಭುಜದಿ ಭೂಷಣದಲೊಪ್ಪುವಾ | ದಟಿತ ರತ್ನದ ಮುಕುಟ ನೀಲಾ ಳಕನು ಬ್ರಹ್ಮ | ನಿಟಿಲಾಕ್ಷ ಮುಖ ಸೈನ್ಯ ಶ್ರುತಿ ಭೂಷಣಾ || ೧೯ || ಪವಳ ಮೌಕ್ತಿಕ ಹಾರ ಅರವಿಂದಾಕ್ಷ | ಸುವಿಶಾಲ ಹೃದಯ ಮಂದಸ್ಮಿತ ಮುಖಾ | ಸುವರ್ಣ ಕಡೆಯು ನೂಪುರ ಗೆಜ್ಜೆಯುಕ್ತಪದ | ದಿವಿಷತ್ಪತಿಯ ಪೊಗಳ ಲಾಸಕ್ತನೆ || ೨೦ || ಸ್ಥಾನತ್ರಯದೊಳಿದ್ದ ಹೃತ್ಪದ್ಮದೊಳಗಿದ್ದ | ನಾನಾ ಜೀವ ಜಡದೊಳಹೊರಗಿರುತಿಹ್ಯಾ | ಶ್ರೀನಿವಾಸನ ರೂಪಕತ್ಯಂತ ಐಕ್ಯವನು | ಸಾನು ರಾಗದಲಿ ಚಿಂತಿಪುದೇ ಪೂಜೆ || ೨೧ ||

ಈ ಬಿಂಬಮೂರ್ತಿ ಹರಿರೂಪನು, ಜೀವಾಂತರ್ಯಾಮಿಯಾಗಿಹನು, ಅಂತರಾತ್ಮನೆಂದು ಕರೆಸುತ್ತಾನೆ. ಇದು ನೆನಪಿನಲ್ಲಿ ಇಡತಕ್ಕದ್ದು. ಇನ್ನು ಆತ್ಮರೂಪಿ ಹರಿಯು ಜೀವಾಕಾರನಾಗಿ ಜೀವನಂತೆ ಇರುವನು. ಅಂತ ರಾತ್ಮನಿಗೆ ಪ್ರತಿಬಿಂಬನು. ಆತ್ಮನೆಂದು ಕರೆಸಿಕೊಳ್ಳುತ್ತಾನೆ. ಈತನೆ ಪ್ರಾಜ್ಞ.

ಇಂತಹ ಬಿಂಬದರ್ಶನಕ್ಕೆ ಧ್ಯಾನೋಪಾಸನ ಮೆಟ್ಟಿಲುಗಳು. ಶ್ರೀ ಭಾಗವತ ಸಾರೋದ್ಧಾರ ಪ್ರಕರಣದಲ್ಲಿ ಹೇಳಿರುವಂತೆ

## ಧ್ಯಾನಯೋಗ ಲಕ್ಷಣಗಳನ್ನು ಮೊದಲಿಗೆ ಹೇಳುತ್ತಾರೆ

"ಅತ್ರಾಪರೋಕ್ಷ ಜನಿಕಾಃ ತಿಸ್ರಃ ಮನೋವೃತ್ತಯ
೧) ಧಾರಣಾ ೨) ಧ್ಯಾನಂ ೩) ಸಮಾಧಿರಿತಿ,
ತತ್ರಾದೌ ಧಾರಣಾಂ ತಾವದಾಹ || ಕೇಚಿದಿತಿ |

೧) ಕೇಚಿತ್ ಸ್ಥೂಲೇ ಜಿತಮನಸ್ಕಾಃ ಸೂಕ್ಷ್ಮಾವಧಾನ ಯೋಗ್ಯಾ ಪ್ರಾದೇಶ ಪರಿಮಾಣಂ | ಅವಕಾಶೇ ಆಕಾಶೇ ವಸಂತಮ್ ಅತ ಏವ ಪುರುಷಂ ರಥಾಂಗಂ ಚಕ್ರಂ ಧಾರಣಯಾ ಖಂಡಿತಯಾ ಮನೋವೃತ್ತ್ಯಾ | ಸ್ಮರಂತಿ ವಿಷಯಿಾ ಕುರ್ವಂತಿ | ಆದೌ ಧಾರಣಂ ಸಂಪಾದ ಇತಿ ಭಾವಃ ||

೨) ಖಂಡಸ್ಮೃತಿರ್ಧಾರಣಾಸ್ಯಾದಖಂಡೋ ಧ್ಯಾನಮುಚ್ಯತೇ ಅಪ್ರಯತ್ನಾ ಸಮಾಧಿಸ್ತು" ಇತಿ ತಂತ್ರಸಾರೇ ||

೩) ನೈರಂತರ್ಯೇ ಮನೋವೃತ್ತೇಃ ಧ್ಯಾನಮಿತ್ಯುಚ್ಯತೇ ಬುಧೈಃ ಇತಿ ಭಾಷ್ಯೇ ||

೪) ಭಗವದುಪಾಸನಾ ಪ್ರಕಾಶ ಬಾಹುಲ್ಯೇನ ಉಪಾಸನಾ(ಕಾ) ಬಾಹುಲ್ಯಾತ್ ಕೇಚಿದುಕ್ತಿಃ (ಅಧಿಕಾರಿಬೇಧೇನ)

೫) ಸಮಸ್ತಾವಯವ ಧಾರಣಾಯಮಶಕ್ತೇನ ಪಂಚಷಾಣಾಂ ವಾ ತ್ರಿ ಚತುರಾಣಾಂ ವಾ ದ್ವಿತ್ರಾಣಂ ವಾಂಗಾನಾಂ ಧಾರಣಾ ಕರ್ತವ್ಯಾ|ತತ್ರಾ ವ್ಯಕ್ತೇನ ತು ಏಕೈಕಾವಯವಸ್ಯ ಧಾರಣಾ ಕಾರ್ಯೇತಿ ||

ಅನೇನ ಸ್ಮರಣಾಖ್ಯೋ ಭಾಗವತೋ ಧರ್ಮಃ ಉಕ್ತೋ ಭವತಿ ಸ್ಫುಟಂ. ಧಾರಣ ಧ್ಯಾನ ಯೋಗ ಮಾಡು ಮನುಜಾ ಎಂಬ ಸುಳಾದಿ ಅರ್ಥವು ಇದೇ ಇವೆ. ಹೀಗೆ ಶಾಸ್ತ್ರಾಪರೋಕ್ಷ ಸ್ಮರಣಾಖ್ಯ ಭಾಗವತ ಧರ್ಮವು. ಸ್ಥೂಲ ಶಾಸ್ತ್ರಾಪರೋಕ್ಷವು.

೧) ತಲ್ಲಕ್ಷಣ ಮೂರ್ತಿ ನಿಲ್ಲುವಿಕೆ ಸ್ಥೂಲಾಪರೋಕ್ಷವು.
೨) ಸ್ಥೂಲಾಪರೋಕ್ಷದಂತೆ ವಾಸನಾಮಯ ಅಪರೋಕ್ಷ ಆಗುವಿಕೆ.

೩) ಈ ವಾಸನಾಮಯನು ಮುಂದೆ ಜೀವಾಕಾರನಾದ ಆತ್ಮಬಿಂಬ.

೪) ನಂತರ ನಿಯತ ಗುರು ಉಪದೇಶದಿಂದ ಮೇಲೆ ವರ್ಣಿಸಿದಂತೆ ಜೀವಾಂತರ್ಯಾಮಿ ಬಿಂಬಾಪರೋಕ್ಷವಾಗುವದು. ಈ ಬಿಂಬಾಪರೋಕ್ಷದಿಂದಲೇ ಸಂಚಿತಾಗಾಮಿ ಕರ್ಮನಾಶ, ಪ್ರಾರಬ್ಧ, ಅನುಭೋಕ್ತೃತ್ವ—ಹೀಗೆ ಅಪರೋಕ್ಷದ ಮೆಟ್ಟಲು.

## ಧ್ಯಾನೋಪಾಸನ ಅಪರೋಕ್ಷ ಮೆಟ್ಟಲುಗಳು

ಶ್ರೀ ವಿಜಯದಾಸಾರ್ಯರು ಅದೇ (೯) ಸುಳಾದಿ-ಮಟ್ಟ ತಾಳದಿಂದ ಕೊನೆಯವರೆಗೆ ಬಹು ರಹಸ್ಯವಾಗಿ ಉಪದೇಶಿಸಿದ್ದಾರೆ. ಉಪಾಸನಾ ಸುಳಾದಿ ಪುಟ ೨೨-೨೩.

## ಮಟ್ಟತಾಳದಲ್ಲಿ ಸ್ಥೂಲಬಿಂಬ ಮೊದಲಿಗೆ ಧ್ಯಾನಸಾಧನ ಬಗೆ ವಿವರಿಸುತ್ತಾರೆ

ತನಗಿಷ್ಟವಾದ ಪ್ರತಿಮೆಯನು ಸುಲ । ಕ್ಷಣ ಉಳ್ಳದೊಂದು ಕ್ಷಿಪ್ರಮತಿಯಲ್ಲಿ । ದಣಿದಣಿ ನೋಡುತ್ತ ಮುಂಭಾಗದಲ್ಲಿ ಇಟ್ಟು । ಮಣಿಮುಕುಟ ಕಾಂಚನ ತೊಡಗಿಯ ತೊಡಿಸಿ । ಗುಣಗಣ ಪರಿಪೂರ್ಣ ಸಾಕಾರನೆಂದು । ಇನಿತು ಚಿಂತಿಸಿ ಪ್ರತೀಕದೊಳಗೆ ಇದೆ । ನೆನೆದು ತದ್ಗತವಾದ ಮೂರ್ತಿಯ ಮಧ್ಯದಲ್ಲಿ । ಅನಿಲದೇವನ ಸ್ಮರಿಸಿ ಇದರಂತೆ ಯೋ । ಚನೆ ಮಾಡು ಒಳಗೆ ಚಿನುಮಯಕಾಯನ । **ನಿನಗೆ ನೀನೆ ತಿಳಿದ್ವಯ ಬಿಂಬವ** ತರುವಾಯ । ಸನುಮಾರ್ಗವನೆ ಸುಜ್ಞಾನದಿಂದಲಿ (ಸಜ್ಜನರಿಂದಲಿ) ಇನಿತು ಗೋಳಕವೆಂದು ನುಡಿಯದಿರೋ ಮಂದ । ಜನರಿಗೆ ಮಾತುರ ಪೇಳಿದೆ ನೋಡಿರೋ । ಘನಜ್ಞಾನಿಗಳೊಡೆಯ ವಿಜಯ ವಿಠ್ಠಲರೇಯಾ । ಅನುದಿನ ಯೋಗ್ಯರಿಗೆ ಗೋಚರಿಸುವ ಕಾಣೋ ॥ ೨ ॥

## ತ್ರಿವಿಡಿ ತಾಳ

ಎದುರಿಲಿ ಮೂರ್ತಿಯ ಇಟ್ಟು ಪೂಜಿಸಿ ತನ್ನ । ಸದಮಲ ದೃಷ್ಟಿಯಲಿ ನೋಡಿ ನೋಡಿ । ಪದಮೂಲವಿಡಿದು ಕಿರಿಟ ಪರಿಯಂತ ಇದೆ ಇದೇ

ಪರಿಯಲ್ಲಿ ನಿರೀಕ್ಷಿಸುತ್ತ । ಸುಧೆಯನ್ನು ಕುಡಿದಂತೆ ಇದ್ದ ಮೂರ್ತಿಯ ಬಾಹಿ । ರದ ಧ್ಯಾನ ಚನ್ನಾಗಿ ನಿಲ್ಲಲಾಗಿ, ।

೨) ಒದಗಿ **ವಾಸನಮಯ** ಜಡದಿಂದ ನಿರ್ಮಾಣ ಹೃದಯ ದೊಳಗೆ ಬೇಗ ಮಾಡಿಕೊಂಡು । ಅದನೆ ಪೂಜಿಸಬೇಕು ಮರಳೆ ಮರಳೆ ಚಿತ್ತದಲ್ಲಿ । ನಿಂದಲ್ಲಿ ಕುಳಿತಲ್ಲಿ ಮಲಗಿದರೆ । ಇದೆ ಇದೇ ಅಭ್ಯಾಸ ಮಾಡಲು ಬಲು ಜ । ನ್ಮದಲ್ಲಿದ್ದ ವಾಸನಾಮಯ ಮೂರುತಿ । ಪದೊಪದಿಗೆ ಸಾಂಗೋ ಪಾಂಗದಿಂದತಿಪೊಳೆವ । ಇದುರಿಲಿ ಇಟ್ಟದ್ದ ದ್ರವ್ಯದಂತೆ । ಮದನಜನಕ ನಮ್ಮ ವಿಜಯ ವಿಠ್ಠಲರೇಯ । ಇದನೆ ಹಿಂದುಮಾಡಿ ಹೊಸಪರಿ ತೋರಿಸುವಾ ॥ ೩ ॥

ಮುಂದೆ **ಅಟ್ಟತಾಳದಲ್ಲಿ** ಈ ವಾಸನಾಮಯ ಮೂರ್ತಿಯೆ ಗುರು ಕೃಪೆಯಿಂದ ಜೀವಾಕಾರನಾದ ಆತ್ಮಬಿಂಬರೂಪನಾಗಿ ತೋರುತ್ತಾನೆಂದು ಉಪದೇಶಿಸುತ್ತಾರೆ.

**॥ ಅಟ್ಟತಾಳ ॥**

೩) ನಿರುತವಾಸನಮೂರ್ತಿ ಪೂಜಿಸಲು ಕಾಲ । ಪರಿಪಕ್ವ ಬರಲಾಗಿ ಹರಿ ಕರುಣದಿಂದ ಗುರುಕೃಪೆಮಾಡುವ । ಸರನೆ ಈ ಮೂರ್ತಿ ಇವನ ಕಣ್ಣಿಗೆ ಗೋ । ಚರಿಸೋದು ಈತನೇ ತೋರುವ **ಪ್ರಾಜ್ಞಾಕ್ಷಿ ಪೆ । ಸರು ಉಳ್ಳ ಆತ್ಮ ಬಿಂಬ ನಾಮಕನೆಂದು ।** ಕರೆಸಿಕೊಳ್ಳುತಲಿಪ್ಪ ಕಡೆ ಮನೆ ಧೊರೆ ಯೆಂದು । ಶರಣರಿಗೆ ಮಿರಗುವ ಅಂತರಂಗದಲ್ಲಿ । ಅರಿದೆ ಅವನ ಯೋಗ್ಯತ ವನ್ನೆ ಪಸರಿಸಿ । ಪರಮ ಪುರುಷ ನಮ್ಮ ವಿಜಯ ವಿಠ್ಠಲ ಮುಂದೆ ಕುರುಹ ತೋರುವ **ನಿಜಸ್ವರೂಪ ದೇವನ್ನಾ** ॥ ೪ ॥

**ಆದಿತಾಳ (ಜೀವಾಂತರ್ಗತ ಬಿಂಬಮೂರ್ತಿ)**

೪) **ಜೀವಾಂತರ್ಗತನಾದ ಮೂರ್ತಿಯೇ ತಾನಾಗಿ ।** ಆವಾಗ ಪೊಳೆಯಲು **ಸಂಚಿತಾಗಾಮಿಕರ್ಮ ।** ಬೇವೋದು ಅನುಭವಿಪ **ಪ್ರಾರಬ್ಧ ಕರ್ಮಂಗಳಿಲ್ಲ** । ನೋವು ಸುಖವಾದರೂ ಉಂಡು ತೀರಿಸಬೇಕು । ಆ ವಿರಜಾ ನದಿಯಲ್ಲಿ ಮುಳುಗುವ ಪರಿಯಂತ । ತ್ರೀವಿಧ ಎನಿಸುವ ದೇಹ

(ಲಿಂಗ) ನಾಶವಿಲ್ಲಾ। ದೇವನ ಲೀಲೆಯಂತೋ ಅಧಿಕಾರ ಭೇದದಿಂದ ತಾವೊಳಗಿದ್ದು ಸರ್ವಬಗೆಯನ್ನು ಮಾಡಿಸುವ। ಪಾವನ ಜೀವನಕ್ಕೆ ತಮಸ್ಸು ಎಂದಿಗು ಇಲ್ಲ। ಕೋವಿದರು ಕೇಳಿ ಕೌತುಕವೆನ್ನದಿರಿ। ಶ್ರೀವಲ್ಲಭ ನಮ್ಮ ವಿಜಯ ವಿಠ್ಠಲರೇಯ। ಜೀವನ ಸ್ವರೂಪದಂತೆ ಧ್ಯಾನವ ಕೊಡುವ ॥ ೫ ॥

**ಜತೆ**

ಆಚಾರವಂತನಾಗಿ ಧ್ಯಾನಮಾಡಲಿಬೇಕು। ರೋಚನ ಪ್ರಿಯ ವಿಜಯ ವಿಠಲನ್ನ ಮೂರ್ತಿಗಳ ॥ ೬ ॥

ಈ ಪ್ರಕಾರ ಧ್ಯಾನ ಎಷ್ಟು ಕಾಲದವರೆಗೆ ಮಾನುಷೋತ್ತಮರು ಹೇಗೆ ಮಾಡುವದೆಂದರೆ ಉ. ಸು. (೧) **ಧ್ರುವತಾಳದಲ್ಲಿ** ॥ ಅನಂತ ಕಲ್ಯಾಣ ಗುಣ ಪರಿಪೂರ್ಣ ನಿರ್ದೋಷಾ। ಜ್ಞಾನಾನಂದಾತ್ಮಕ " **ವಿಷ್ಣುರ್ಮೇ ಸ್ವಾಮಿ** " ತ್ರಿಲೋಕಕರ್ತಾ। ನೀನೇ ಸ್ವಾತಂತ್ರ ಬೊಮ್ಮಾದಿಗಳು ನಿನ್ನ ದಾಸಾನುದಾಸರು। ಅನಂತ ಅನಂತ ಕಾಲದಲ್ಲಿ ನಿಜವೆಂದು ಪೇಳುತ್ತ ಮಾನುಷೋತ್ತಮರು **ಹೀಗೆ ಬಲು ಕಾಲವರ್ಚಿಸಲು**। ಮನದೊಳಗೆ ವಿಜಯ ವಿಠ್ಠಲನು ಕೃಪೆಯಿಂದ ಧ್ಯಾನಕ್ಕೆ ಪೊಳೆವ ॥ ೪ ॥

**ಧ್ಯಾನ-ಕಾಲ ವಿವರ ತ್ರಿವಿಡಿ ತಾಳದಲ್ಲಿ** ಪೇಳುತ್ತಾರೆ. ಚತುರ ಗುಣದಲ್ಲಿ (ಸಚ್ಚಿದಾನಂದ ಆತ್ಮೇತಿ) ಚತುರ ಸಾಸಿರ। ಚತುರ ನೂರು ವರುಷ (೪೪೦೦) ಧ್ಯಾನಂಗಳ। ಚತುರದಿಂದಲಿ ಮಾಳ್ಪ ಮತಿಗೆ ದೇವೋತ್ತಮ। ಚತುರವೇದ ವಿಜಯ ವಿಠಲನು। ಚತುರನಾಗಿ ಬಿಂಬ ಮೂರುತಿ ಸುಳಿದು। ಚತುರತನದಲ್ಲಿ ಬಂದು ಚರಿಸುವನು ॥ ೫ ॥

ಮುಂದೆ ಅಟ್ಟತಾಳ, ಶ್ರೀಹರಿಯ ಬಿಂಬಾಪರೋಕ್ಷಕ್ರಮ ಹೇಳುತ್ತಾರೆ.

**ಅಟ್ಟತಾಳ**

ಹೊನ್ನೆ ಹುಳುವಿನಂತೆ (ಖದ್ಯೋತ) ಕಣ್ಣಿಗೆ ಸುಳಿವನು। ತನ್ಮಯ ಗುಣನಿಧಿ ತನ್ನಾಮಕದೇವ। ತನ್ನಿಚ್ಛೆ ಸ್ವಭಾವ ಮುನ್ನೆ ಧ್ಯಾನದಲ್ಲಿ। ಜನ್ನಿತ ಜ್ಞಾನಕ್ಕೆ ಮನ್ನಿಸುವನು ಇವನ। ಮುನ್ನಿನ ಮಾರ್ಗಕ್ಕೆ ಮಾನ್ಯ-

ವಿಜಯ ವಿಠ್ಠಲ ದಯದಿಂದಾ । ಪನ್ನನಿವನೆಂದು ಚನ್ನಾಗಿ ಪೊಲಿದು ॥ ೬ ॥
ಮುಂದೆ.

**॥ ಆದಿತಾಳದಲ್ಲಿ ॥**

ಆಗಮ ಸಂಚಿತ ಹರಿಸಿ । ಆಗುವ ಪ್ರಾರಬ್ಧಗಳ । ವೇಗಾನುಸಾರ ತೀರಿಸಿ । ತಾಗಿದ ದುಃಖಸ್ಪರುಶ ಪೋಗಲಾಡಿಸಿ ಅವರವರ । ಯೋಗ್ಯತ ವರಿದು ಸುಖವ ಪಾಲಿಸಿ । ಭಾಗವತರನ ಮಾಡಿ ಶ್ರೀ ಗುರು ವಿಜಯ ವಿಠಲ । ಮೂಗುತಿಯ (ಮುಕುತಿಯ) ನೀವ ॥ ೭ ॥

**ಜತೆ**

ಧ್ಯಾನದಿಂದಲಿ ಮನಸು ನಿಲಿಸಿ ಜ್ಞಾನವ ಪಡೆದು ।
ಆನಂದ ವಿಜಯವಿಠಲನ ಲೋಕವ ಸೇರೋ ॥ ೮॥

ಮುಂದೆ ೨ನೇ ಸುಳಾದಿ ಜತೆಯಲ್ಲಿ

ಸ್ಥೂಲ ಸೂಕ್ಷ್ಮ ಧ್ಯಾನಬೇಧವೆನಿಸೋದು । ನೀಲವರ್ಣ ವಿಜಯ ವಿಠಲ ಪ್ರಾಕೃತ ರಹಿತ ॥ ಎಂದು ವಿವರಿಸಿ ಬೋಧಿಸಿದ ಜ್ಞಾನಾಮೃತವನ್ನು ಬೇಸರದೆ ಸವಿದು ಧ್ಯಾನಂಗತರಾಗುವದು.

ಕರುಣಾಳುಗಳಾದ ಶ್ರೀ ವಿಜಯದಾಸಾರ್ಯರು ನಾನಾ ವಿಧವಾದ ಧ್ಯಾನೋಪಾಸನೆಯನ್ನು ಅಧಿಕಾರಿಗಳ ವಿವಕ್ಷಾ ಭೇದದ ೪೭-೪೮ ಸುಳಾದಿ ಯಲ್ಲಿ ವಿವರಿಸಿದ್ದಾರೆ. ಅದನ್ನೆ ಶ್ರೀಮಜ್ಜಗನ್ನಾಥದಾಸಾರ್ಯರು, ಅವ ರೋಹಣ ಆರೋಹಣ ಧ್ಯಾನಕ್ರಮದಿಂದ ಮುಂದಿನ ಸಂಧಿಗಳಲ್ಲಿ ವರ್ಣಿಸಿ ದ್ದಾರೆ. ಆಯಾ ಸಂಧಿಗಳ ಸಾರದಲ್ಲಿ ಆಯಾ ಸುಳಾದಿಗಳ ಸಾರವನ್ನು ದಾಸರು ಪ್ರೇರಿಸಿದಂತೆ ವಿವರಿಸುವ.

ಇಂತು ೧೮ನೆಯ ಬಿಂಬಾ ಅಪರೋಕ್ಷ ಸಂಧಿಯ ವಿವರ

ಪೀಠಿಕಾರೂಪವಾಗಿ ವಿಸ್ತರಿಸಿ, ಈ ೧೮ನೇ ಸಂಧಿಯಲ್ಲಿ ವಿವರಿಸಿ ದಂತೆ ಶ್ರೀ ಹರಿಶಬ್ದ ವಾಚ್ಯನಾದ ಬಿಂಬನು ಒಬ್ಬನೇಯಾದಾಗ್ಯೂ ಅನಂತ ಜೀವರು. ಅನಂತಕಾಲದಿಂದ, ಮುಕ್ತರು, ಜೀವನ್ಮುಕ್ತರು. ಸೃತಿ- ಸಂಸಕ್ತರು. ಅಸ ಜ್ಜರಲ್ಲಿ ಇರುವ ಬಿಂಬರೂಪಗಳ ನಾಮವೇನು ? ಸೃಷ್ಟಿ

ಪ್ರಾರಂಭಿಸಿ, ಲಿಂಗ ಉಪಚಯ ದ್ವಾರಾ ಸರ್ವಲೀಲಾ ಸೃಷ್ಟಿಸ್ಥಿತಿ ಲಯಾದಿ ವ್ಯಾಪಾರಗಳಲ್ಲಿ ಶ್ರೀ ಹರಿಯು ಯಾವ ರೂಪಗಳಿಂದ ಬಿಂಬನಾಗಿದ್ದು ಕಾರ್ಯ ಮಾಡಿಸುವನೆಂದು ದಾಸಾರ್ಯರು ಉಪದೇಶಿಸಿದಂತೆ; ಷೋಡಸಿ ಮುಂತಾದ ಗ್ರಂಥಗಳ ಆಧಾರ ಮೇಲಿಂದ ಬಿಂಬಾಪರೋಕ್ಷ ರೂಪಗಳಾವು ತತ್ತ ತ್ಕಾರ್ಯವೇನೆಂಬುದನ್ನು ಮಂದನಮತಿಯಲ್ಲಿ ದಾಸರು ನಿಂತು ಪ್ರೇರಿಸಿ ಬರೆಸಿದಂತೆ ಬರೆಯಲು ಮುಂದುವರಿವ. ಪಾಣ್ಯಾಭಿಮಾನಿ ದಕ್ಷಾಂತ ರ್ಯಾಮಿ ಭಾ.ರ. ಮುಖ್ಯ ಪ್ರಾಣಾಂತರ್ಗತ ಪದ್ಮನಾಭನ ಪಾದಕ್ಕೆರಗುವೆ. ಶ್ರೀ ವಿಷ್ಣುತೀರ್ಥರು ಷೋಡಶೀಗ್ರಂಥ ಬಿಂಬ ಪ್ರತಿಬಿಂಬ ಭಾವಪ್ರಕರಣದಲ್ಲಿ ಆಜ್ಞಾಪಿಸಿರುವುದನ್ನೇ ಸಂಕ್ಷಿಪ್ತವಾಗಿ ದಾಸರಾಯರು ವರ್ಣಿಸಿದ್ದಾರೆ.

**ಬಿಂಬ ಪ್ರತಿಬಿಂಬ ಭಾವ** (ವಿಷ್ಣುತೀರ್ಥಿಯ) "ತದೇವಂ ಮನೋ ವೃತ್ತೇಃ ಶ್ರೀಹರಿ ಪ್ರವಣತ್ವಮೇವ ಪರಮಸಾಧನಂ ಪರಮ ಮುಕ್ತಾವಿತಿ ಸಿದ್ಧಂ ॥ ಏತದೇವ ಚಾಧಿಕಾರಿಣಾ ಮವಸ್ಥಾತಾರತಮ್ಯೇನ ಪ್ರವೃತ್ತ ನಿವೃತ್ತಧರ್ಮತಯಾ ಶ್ರುತಿ ಸ್ಮೃತಿಷು ಗೀಯತೇ ॥ ತಥಾ ಹಿ ಕರ್ಮಿಣಾಂ ಯತ್ಸ್ನಾನ ಸಂಧ್ಯಾವಂದನ, ಬ್ರಹ್ಮಯಜ್ಞ ಜಪದೇವಾರ್ಚನ ವೈಶ್ವದೇವಾ ತಿಥಿಪೂಜನ ವ್ರತವಿಶೇಷಾನುಷ್ಠಾನ ಯಜನ ದಾನಾದಿ ಯಚ್ಚ ಜಿಜ್ಞಾಸುನಾ ನಿತ್ಯಾನಿತ್ಯ ವಸ್ತುವಿವೇಕ ಇಹಾಮುತ್ರಾರ್ಥ ಫಲಭೋಗ ವಿರಾಗಃ ಶಮದ ಮೋಪರ ತಿತಿಕ್ಷಾ ಸಮಾಧಾನ ಭಕ್ತ್ಯಾದಿ ಯದ(ದ್ಯ)ಪಿ ಜ್ಞಾನಿನಾ ಮೇತ ದುಭಯ ಲೋಕಸಂಗ್ರಹಾದ್ಯರ್ಥಂ ॥ **ಯಚ್ಚಾಧ್ಯಾತ್ಮವಿದಾ** ಮನಿರುದ್ಧಾದಿ ರೂಪಧ್ಯಾನ ತ್ರಿವಿಧ ಪೂಜಾ ಶರಣಾಗತಿ ಸರ್ವಸಮರ್ಪಣಾದಿ ತತ್ಸರ್ವಂ ಸಾಧನಜಾತಮ್ ತದೇವ ॥

ಯಥಾ ಖಲು ರೋಗಿಣೋ ರುಚ್ಯುತ್ಪಾದನಾಯ ತಂಡುಲಾದಿ ಪ್ರಕೃತಿ ದ್ರವ್ಯಮೇವ ಅನೇಕಧಾ ವ್ಯಪದಿಶಂತಿ....ಉತ್ಪಾದಯಂತಿ ಚ ॥ ತತ್ರ ರುಚಿಂ ತದ್ವದೇವೋಕ್ತ ವಿಧಯಾನೇಕಧಾ ಪ್ರತಿಪಾದಯಂತಿ ॥ ಭವ ರೋಗಿಣಾಂ ರುಚಿ ಮುತ್ಪಾದಯಂತಿ ಪುರಾಣವಚನಾನಿ ಏತದೇವ ಚಾಭಿ ವ್ಯಕ್ತಿ ಸಾಕ್ಷ್ಯಪೋದ್ಬಲಿತಂ ವಿರೋಧಿಪ್ರಮಾಣ ಸಹಸ್ರೇಣಾಪಿ ನ ಚಾಲ್ಯತೆ ॥ ಏತದೇವ ಹಿ ಸಾಧನ ಸಂಪತ್ತೇಃ ಪರಾಕಾಷ್ಟಾ। ಏತದೇವ ಚ ನಿವೃತ್ತಿ

ವೈಕಲ್ಯೇ ಸಾಕ್ಷಿಣ್ಯೇವ ವರ್ತಮಾನಂ ಸಾಧ್ಯರೂಪಮಪಿ ಭೂತ್ವಾ ವಿಜಯತೇ ॥

ಯಥಾ ಚೈತತ್ತಥೈವ ಚಾಯಂ ಶ್ರೀಹರಿರಪಿ ಕರ್ಮಿಣಾಂ ದೇವಋಷಿ ಪಿತ್ರಾದಿತಯಾ ಜಿಜ್ಞಾಸೂನಾಂ ಶರೀರೇಂದ್ರಿಯ ದೇವತಾ ಭಾವೇನ ಜ್ಞಾನಿನಾಂ ರಾಮಕೃಷ್ಣಾದಿತ್ವೇನಾಧ್ಯತ್ಮವಿದಾಮನಿರುದ್ಧಾದಿ ಪಂಚರೂಪ ತಯಾ ಅಸ್ಯಾಮೇವ ಹೃದಯ ಗುಹಾಯಾಂ ಸರ್ವವ್ಯವಹಾರ ನಿರ್ವಾಹಕ ತಯಾ ಪೂಜ್ಯತಯಾ ಚ ಗೀಯತೇ ಶಾಸ್ತ್ರೇಷು ॥

॥ ತದತ್ರ ಲೇಶತಃ ಪ್ರದರ್ಶಯಿಷ್ಯಾಮಃ ॥

ತಥಾ ಹಿ॥ ಜೀವಸ್ತಾವಲ್ಲಿಂಗ ಶರೀರೇ ನೀರಸಂವಿಳಿತ ಕ್ಷೀರವ ದ್ವರ್ತತೇ ಇತಿ ಉಕ್ತಂ॥ ತಸ್ಮಿಂಶ್ಚ ಜೀವೇ ವಿಷ್ಣುಃ **ಹರಿನಾಮಕೇನ ಬಿಂಬರೂಪೇಣ** ಮುಖೇ ಮುಖ ಮಿತ್ಯನೇನ ಕ್ರಮೇಣ ವರ್ತತೇ ॥ ತಸ್ಯೋಪಾಧಿಃ ಪ್ರತಿಬಿಂಬಶ್ಚ ಜೀವ ಏವ॥ ಸ ಚ ಪ್ರತಿಬಿಂಬ ಸ್ವಾಭಾ ವ್ಯಾತ್ ಸ್ವಾತ್ಮಾನಂ ಬಿಂಬಾಭಿ ಮುಖೇನೈವ ಪಶ್ಯತಿ ॥ ಪಶ್ಯನ್ನಪಿ ಸ್ವಸ್ಯೈ ವೋಪಾಧಿತಯಾ ಸ್ವಸ್ಮಿನ್ನೇವ ಪಶ್ಯತಿ ॥

ಬಿಂಬೋಪ್ಯಯಂ ನ ತು ಸಾಕ್ಷಾತ್ ಕಿಂ ತು ಪುಷ್ಕರೋ ನಾಮ ಸರ್ವಾವರೋ ದೇವಃ॥ ಸ ಚ ಸಾಕ್ಷಾದ್ಬಿಂಬೋ ಮುಖೇ ಮುಖ ಮಿತ್ಯಾದಿ ಕ್ರಮೇಣಾಸ್ತೇ ॥ ತಸ್ಮಿನ್ ದೇವೇ ಶನೈಶ್ಚರಸ್ತೇನೈವ ಬಿಂಬೋ ಭೂತ್ವಾ ವರ್ತತೇ ॥ ತಸ್ಮಿನ್ ಶನೈಶ್ಚರೇ ಚೋಷಾ ತಸ್ಯಾಂ ಚೋಷಸಿ ಬುಧಃ। ತಸ್ಮಿನ್ ಬುಧೇ ಸ್ವಾಹಾ ತಸ್ಯಾಂ ಪರ್ಜನ್ಯನಾಮದೇವಃ॥ ಪರ್ಜನ್ಯೇ ಚ ವಿಷ್ನೇಶಾಶ್ವಿ ಕುಬೇರಾಃ॥ ತಸ್ಮಿಂಚ ಮಿತ್ರನಿಋರತಿ ತಯೋಶ್ಚಾಗ್ನಿಸ್ತತ್ರ ವರುಣಃತಸ್ಮಿಶ್ಚಂದ್ರ ಸೂರ್ಯ ಧರ್ಮ ಶತರೂಪಾಃ॥ ತೇಷು ಪ್ರವಾಹಃ ತತ್ರಾನಿರುದ್ಧ ಸ್ವಾಯಂಭುವ ಬ್ರಹಸ್ಪತಿ ದಕ್ಷರತಿಶಚ್ಯಃ। ತತ್ರಾಹಂಕಾರಿಕಃ। ತತೇಂದ್ರಕಾಮೌ॥ ತಯೋರುಮಾದಿತ್ರಯಂ॥ ತತ್ರರುದ್ರಾದಿತ್ರಯಂ ತತ್ರ ಸರಸ್ವತೀ ಭಾರತ್ಯಾ॥ ತತ್ರ ಬ್ರಹ್ಮವಾಯೂ ತತ್ರ ಮಹಾಲಕ್ಷ್ಮೀ॥ ತತ್ರ ಹರಿರಿತ್ಯೇವಂ ಪರಂಪರಯಾ।

ಯದ್ಯಪಿ ಶ್ರೀಹರಿಃ ಮಹಾಲಕ್ಷ್ಮೀಂ ಅಧಿಷ್ಠಾಯ ಅನಾದಿತೋ ಜೀವಬಿಂಬತಯಾ ಆಸ್ತೇ ತಥೈವ ಚ ತೇಷಾಂ ಸಾಧನ ಸಂಪತ್ತಿಂ ಪ್ರಾಪ್ಯ ಮೋಚಯಿತುಂಸಮರ್ಥಃ । ತಥಾಪಿ ಪುಷ್ಕರಾದಿಷು ಬ್ರಹ್ಮಾಂತೇಷು ಪರಮಾನುಗ್ರಹೇಣಾನ್ಯಗತಮಪಿ ಭಾಗವತ ಧರ್ಮಜ್ಞಾನಫಲಂ ಮುಕ್ತಾತ್ವಾನಂದಾತಿಶಯ ಲಕ್ಷಣಂ ದಾತುಂ ತೈಃ ಸಪ್ರಾಪ್ತನ್ನ ವಿದ್ಯೋಪಾಸನಾದಿ ಸಾಧನಾನಿ ಸುಚಿರಕಾಲಂ ಕಾರಯಿತ್ವಾ ತತ್ಫಲಂ ಪರಮಪುರುಷ ಪ್ರವೇಶಾದಿ ಮಹಿಮಾನಂ ದತ್ವಾ ಪ್ರಾಯೋಸ್ಮಿನ್ನೇವ ಕಲ್ಪೇಷು ಮುಚ್ಯಮಾನಾಂಸ್ತಾನ್ ತಸ್ಮಿನ್ನೇವ ಕಲ್ಪೇ ಮುಚ್ಯಮಾನೇಷು ಜೀವೇಷು-ಸೃಷ್ಟ್ಯಾದೌ ಪ್ರವೇಶಯಿತ್ವಾ ಸ್ವಯಂ ಲಕ್ಷ್ಮೀದ್ವಾರಾ ತೇಷು ಸ್ಥಿತ್ವಾ ಉಕ್ತದ್ವಾರಾ ಜೀವೈಃ ಸಾಧನಾನಿ ಕಾರಯಿತ್ವಾ ತತ್ಫಲಂ ಶರೀರೇಂದ್ರಿಯಾದಿ ಸ್ವಾತಂತ್ರ್ಯಾಧಿಕ್ಯ ತಾರತಮ್ಯೇನ ಕರ್ತಾರಂ ಜೀವಮಾರಭ್ಯ ಬ್ರಹ್ಮಪರಿಯಂತ ಮುತ್ತರೋತ್ತರಮಧಿಕಂ ದತ್ವಾ ವಿಜಯತೇ ॥

ತದೇವಂ ಲಕ್ಷ್ಮ್ಯಾದಿಭಿಃ ಪುಷ್ಕರಾಂತೈಃ ಕ್ಷೀರಂ ನೀರೇಣೈವ ಸಂವಳಿತೋಪಿ ತೇಷಾಂ ಬಾಹ್ಯಾಂತರ ಭಾವಮಾಪದ್ಯ ಸ್ವಯಂ ಸರ್ವಾಂತರಃ ಸನ್ನೇವ ಮುಖೇ ಮುಖಮಿತ್ಯಾದಿ ಕ್ರಮೇಣ ಜೀವಂ ವ್ಯಾಪ್ಯ ತಿಷ್ಟತೀತಿ ॥ ಅಯಮೇವ ಹಿ ದ್ರವ್ಯಬಿಂಬ ಪ್ರತಿಬಿಂಬಭಾವ ಇತ್ಯುಚ್ಯತೇ ॥

ಏವಂ ಪಂಚಾಶದ್ವರ್ಣಾತ್ಮಕಃ ಷಡ್ಜಾದ್ಯನೇಕ ವಿಧ ಸ್ವರಾತ್ಮಕ ಇತಿ ಮಧುರ ಶಬ್ಧಃ ಶಿತೋಷ್ಣಾದಿ ರೂಪೋತಿ ಸುಖದಃ ಸ್ಪರ್ಶಃ ಶುಕ್ಲಾದ್ಯನೇಕ ವಿಧರೂಪಂ ಮಧುರಾದ್ಯನೇಕ ವಿಧ ಸುರಸಃ । ಸುರಭಿರೇವಾನೇಕ ವಿಧೋ ಗಂಧಃ । ಜ್ಞಾನಾನಂದೇಚ್ಛಾಕೃತಿ ವೀರ್ಯೌದಾರ್ಯ ಪ್ರಾಗಲ್ಭ್ಯ ಪ್ರಮುಖಾ । (ದಾ) । ಸ್ತಥಾ ವಿರಾಗಶಮದಮಾದಯಶ್ಚ ಯೇ ಜೀವ ಸ್ವರೂಪಭೂತಗುಣಾಃ ತೇಷ್ವಪಿತ್ತಾದೃಶ ಏವ ಬಿಂಬಗುಣಾ ಉಕ್ತಾನೇಕ ದೇವತಾಗುಣದ್ವಾರಾ ಬಿಂಬತಯಾ ವರ್ತಂತೇ ॥ ಸ ಏಷ ಏವಗುಣ ಬಿಂಬ ಪ್ರತಿಬಿಂಬ ಭಾವ ಇತ್ಯುಚ್ಯತೇ ॥ ಏವಮೇವ ಗಮನಾಗಮನ ಗ್ರಹಣೋದ್ಧರಣಾ ನಯನಾದ್ಯನೇಕ ವಿಧಕ್ರಿಯಾ· ಸುಖರೂಪಭೂತಾ ಸು ತಾದೃಶ ಏವೋಕ್ತಾನೇಕ ದೇವತಾ ಕ್ರಿಯಾದ್ವಾರೇಣ ಬಿಂಬಕ್ರಿಯಾ ವಿಜಯತೇ.

ಸ ಏಷ ಏವ ಕ್ರಿಯಾ ಬಿಂಬ ಪ್ರತಿಬಿಂಬ ಭಾವತಯಾ ಗೀಯತೇ ॥ ಇತಿ ಶ್ರೀವಿಷ್ಣುತೀರ್ಥ ವಿರಚಿತೇ ಬಿಂಬ ಪ್ರತಿಬಿಂಬ ಭಾವ ಪ್ರಕರಣಂ ಸಂಪೂರ್ಣಂ ಶ್ರೀಗುರುಮಧ್ವೇಶಾರ್ಪಣಮಸ್ತು ॥ ಸಾಮಾನ್ಯವಾಗಿ ಇದರ ಅರ್ಥವು ಸುಲಭವಿದೆ. ಗ್ರಂಥ ಬಾಹುಲ್ಲ್ಯ ಭಯದಿಂದ ಕನ್ನಡ ಅರ್ಥ ಬರೆದಿಲ್ಲವಾದರೂ,

ಶ್ರೀ ದಾಸಾರ್ಯರು ಈ ಸಂಧಿಯಲ್ಲಿ ಮೇಲಿನ ವಿಷಯವನ್ನೇ ವಿಶದೀ ಕರಿಸಿರುತ್ತಾರೆ. ಬಿಂಬನಾದ ಶ್ರೀ ಹರಿಯು ಕರ್ಮಜ ದೇವತೆಗಳು, ದೇವ ಋಷಿ ಪಿತೃ ಗಂಧರ್ವನರ, (೧) ಜಿಜ್ಞಾಸುಗಳಿಗೆ ಶರೀರೇಂದ್ರಿಯ ದೇವತೆಗಳ ಭಾವದಿಂದಲೂ, (೨) ಜ್ಞಾನಿಗಳಿಗೆ ರಾಮ ಕೃಷ್ಣಾದಿ ರೂಪದಿಂದಲೂ (೩) ಅಧ್ಯಾತ್ಮ ಜ್ಞಾನಿಗಳಿಗೆ ಅನಿರುದ್ಧಾದಿ ಪಂಚರೂಪಗಳಿಂದ ಇವರುಗಳ ಹೃದಯ ಗುಹೆಯಲ್ಲಿ ಸರ್ವ ವ್ಯವಹಾರ ನಿರ್ವಾಹಕರ್ತನಾಗಿಯೂ, ಪೂಜ್ಯ ನಾಗಿಯೂ, ವರ್ತಿಸುತ್ತಾನೆ. ಅನಿರುದ್ಧಾದಿ ಪಂಚರೂಪ ನಾಮಭೇದದಿಂದ ಶ್ರೀಹರಿಯು, ಅನಿರುದ್ಧನೆ ಜಾಗ್ರದ ಪ್ರದವಿಶ್ವನು. ಕಂಠಗತ ಸ್ವಪ್ನಾವಸ್ಥಾ ಪ್ರೇರಕ ಪ್ರದ್ಯುಮ್ನನೆ ತೈಜಸನು ಹೃದಯಸ್ಥಿತ ಸುಪ್ತಿಪ್ರದ ಸಂಕರ್ಷಣನೆ ಪ್ರಾಜ್ಞನೆಂದು ಉಪನಿಷತ್ ವಾಕ್ಯದಂತೆ ಮಾನಸ ಸ್ಮೃತಿಯಲ್ಲಿ ಹೇಳಿದ್ದಾರೆ ಮುಕ್ತನಿಯಾಮಕ, ವಾಸುದೇವನೇ ತುರ್ಯ—

ಇದರಂತೆಯೆ ದಾಸರು ಮುಕ್ತಬಿಂಬನು, ವಾಸುದೇವನೆ ತುರ್ಯ-ಜೀವನ್ಮುಕ್ತರಾದ ಅಪರೋಕ್ಷ ಜ್ಞಾನಿಗಳ ಬಿಂಬ ವಿಶ್ವ ಅನಿರುದ್ಧ, ಸಂಸೃತಿ ಸಕ್ತ ಜೀವರುಗಳ ಬಿಂಬ ಪ್ರದ್ಯುಮ್ನನೆ, ತೈಜಸ, ಅಸೃಜ್ಯರಾದವರಿಗೆ ಸಂಕರ್ಷಣ ಹರಿಯೇ ಪ್ರಾಜ್ಞನಾಮಕಬಿಂಬನೆಂದು ಜೀವರ ಹೃದಯಾಂತಸ್ಥ-ಬಿಂಬ ನಾಮಗಳನ್ನು ಹೇಳಿ ; ಸೃಷ್ಟಿಗೆ ತರಲು ಜೀವರ ಲಿಂಗ ಉಪ ಚಯಕ್ಕೆ ನೀರು ಮಿಶ್ರಿತ ಕ್ಷೀರದಂತೆ ಇರುವ ಲಿಂಗ ಪ್ರಕೃತಿಯಲ್ಲಿ ಪ್ರಾಜ್ಞ ಬ್ರಹ್ಮಾದಿ ಜೀವರಲ್ಲಿ ತೈಜಸ, ಅನ್ನದ ಪಾಲನಕರ್ತಾವಿಶ್ವನೆ ಭಿನ್ನಕ್ರಿಯಾ ಗಳಿಂದ ಇರುವ ಸಪ್ತಾನ್ನ ವಿದ್ಯಾ ಉಪಾಸಿತನಾಗಿ, ಅನ್ನ-ಅನ್ನದ ಅನ್ನಾದ ನಾಮ ಭೇದದಿಂದ ವಿಷ್ಣು, ಬ್ರಹ್ಮ, ಶಿವರೂಪದಿಂದ, ಬ್ರಹ್ಮಾಶಿವರುದ್ರರ ಅಂತರ್ಯಾಮಿಯಾಗಿ ಇರುವನು. ಅಂದರೆ, ಸೃಷ್ಟಿ, ಸ್ಥಿತಿ ಪಾಲನೆ ಯಲ್ಲಿಯೂ, ಇದೇ ರೂಪಬಿಂಬ ಕ್ರಿಯಾ ಹೇಳಿ ಮುಂದೆ ಏವಂ ಈ ಪ್ರಕಾರ

ವಾಗಿ, ಲಿಂಗ ಉಪಚಾಯಕ ಕ್ರಿಯಾಪ್ರವೃತ್ತಿ ಸದ್ಗುಣಗಳಲ್ಲಿ, ಪಂಚಾ ಶದ್ವರಣಾತ್ಮಕನಾದ ಹರಿಯು ನಾದ-ಬಿಂದು-ಘೋಷ-ಶಾಂತ-ಅತಿಶಾಂತ ರೂಪಗಳಿಂದ (ಇವುಗಳಿಂದಲೇ ಪಂಚಾಶದ್ವರಣಗಳ ಉತ್ಪತ್ತಿ ಎಂದು ಹಿಂದೆ ವಿವರಿಸಿದೆ) ಅಂತೂ, ಅಕಾರ ವಿಶ್ವ, ಉಕಾರ ತೈಜಸ, ಮಕಾರ ಪ್ರಾಜ್ಞ, ನಾದಾದಿ ೫ ಒಟ್ಟಿಗೆ ಪಂಚಾಶದ್ವರಣ ರೂಪ ಕಾರ್ಯಗಳನ್ನು ಚಿಂತಿಸಬೇಕು. ಇಂತು ವೇದಾಭಿಮಾನಿ, ರಮಾದೇವಿಯಿಂದ ಉಪಾಸ್ಯನಾದ ಹರಿಯೇ ಮುಂದೆ ದೇವಗಣ ತತ್ವಾಭಿಮಾನಿ ದೇವತೆಗಳು. ಇಂದ್ರಿಯ ಗಣಾಧಿ ಪತಿಗಳಲ್ಲಿದ್ದು ತತ್‌ಕಾರ್ಯ ಪ್ರವೃತ್ತಿಸಿ ಕಾರ್ಯ ಮಾಡುವನೆಂಬ ಭಾವ ೫ನೇ ಪದ್ಯದಲ್ಲಿ ಸೂಚಿಸಿದ್ದಾರೆ. ಮಾಯಾಪತಿ ವಾಸುದೇವನು ಪುರುಷರ ದೇಹ ದಲ್ಲಿ, ಮಹತತ್ವದಲ್ಲಿ, ಬ್ರಹ್ಮಾಂಡಬಹಿರದಲ್ಲಿ ಮೂರು ಸ್ಥಳಗಳಲ್ಲಿದ್ದು, ಸ್ತ್ರೀ ಪುರುಷರ ದೇಹೇಂದ್ರಿಯಾದಿ, ಏಕೋತ್ತರ ದಶ ೧೧ ಇಂದ್ರಿಯ, ಪಂಚ ತನ್ಮಾತ್ರಾದಿ ಷಡ್ಜಾದ್ಯನೇಕ ವಿಧ ಸ್ವರಾತ್ಮಕ ಶಬ್ದ. ಶೀತೋಷ್ಣಾದಿ ರೂಪ ಸುಖಸ್ಪರ್ಶ-ಶುಕ್ಲಾದಿ ಅನೇಕ ವಿಧ ರೂಪ ಮಧುರಾದಿ ಅನೇಕ ವಿಧ ಸುರಸ ಸುರಭಿ ಸುಗಂಧ ಮೊದಲಾದ ಅನೇಕ ವಿಧ ಗಂಧ ಹೀಗೆ, ಮತ್ತು ಶರೀ ರೇಂದ್ರಿಯಗಳಿಗೆ ಉಪಚಾಯಕವಾದ ಪಂಚಭೂತಾದಿಗಳನ್ನು ಸೃಷ್ಟಿಕ್ರಮವಾಗಿ ನಿರ್ಮಾಣ ಮಾಡಿ, ಲಿಂಗ ಶರೀರದಲ್ಲಿ ಶ್ರೀಸಹ ತಾನಿದ್ದು, ಜೀವರಿಗೆ ಆಶಾ, ಲೋಭ, ಅಜ್ಞಾನ, ಮದ, ಮತ್ಸರ, ಕುಮೋಹ, ಕ್ಷುದ, ಹಾಸ, ಹರ್ಷ, ಸುಪ್ತಿ, ಪಿಪಾಸಾ, ಜಾಗ್ರತಿ, ಜನ್ಮ, ಸ್ಥಿತಿ, ಮೃತಿ, ಪಾಪ, ಪುಣ್ಯ, ಜಯಾಪ ಜಯಗಳನ್ನು ದ್ವಿವಿಧವಾಗಿ ಕಲ್ಪಿಸಲು ಕಾರಣವಾದುದು. ಬಿಂಬರೂಪಿ ಹರಿಯ ಕ್ರಿಯಾ ವರ್ಣಿಸುತ್ತ ಈ ಪ್ರಕಾರ ತ್ರಿವಿಧ ಲಿಂಗಪ್ರಕೃತಿಯಿಂದ ಜೀವ ರನ್ನು ಬದ್ಧರನ್ನ ಮಾಡುವನು. ಮಾಯಾ ಕವಿಸಿ ಸಂಸಾರಕ್ಕೆ ಕಾರಣನನ್ನಾಗಿ ಮಾಡುವ ಹರಿಯೇ ಏನಂ ಮೋಚಯಾಮಿ ಎಂದು ಸ್ವೇಚ್ಛೆಯಿಂದ ಸೃಷ್ಟಿಸಿದ ಈ ಕಲ್ಪದಲ್ಲೇ ಮುಕ್ತರಾಗುವ ಜೀವರಲ್ಲಿ ಅನುಗ್ರಹಿಸಿ ಗುರುದ್ವಾರಾ, ಸಂ ಶ್ರವಣ ಮನನವನ್ನು ಮಾಡಿಸಿ, ಜ್ಞಾನಾನಂದಾದಿ ಇಚ್ಛಾಕ್ರಿಯಾ ವೀರ್ಯ ಔದಾರ್ಯ ಪ್ರಾಗಲ್ಭ್ಯ ಆತ್ಮವಿಶ್ವಾಸ ನಿರ್ಧಾರ ನೈಪುಣ್ಯ ವಿರಾಗ ಶಮ ದಮಾದಿ ಜೀವಸ್ವರೂಪ ಭೂತ ಗುಣಗಳಲ್ಲಿ ಹರಿಯು ತಾನೇ ಪ್ರವರ್ತಕನಾಗಿ

ನಿಂದು, ದೇವತೆಗಳ ದ್ವಾರದಿಂದ, ತಾದೃಶರೂಪ ಬಿಂಬಗುಣ ವ್ಯಕ್ತ ಮಾಡು ತ್ತಾನೆ. ಹೀಗೆ ಗುಣಗಣ ಬಿಂಬನೆಂದೆನಿಸಿ, ವ್ಯಕ್ತಮಾಡಿ, ಲಿಂಗಭಂಗ ಮಾಡಿ, ಸಂಸಾರದಿಂದ ಮೋಚನ ಮಾಡುತ್ತಾನೆ. ಗುಣವ್ಯಕ್ತನು. ಜೀವರು ಗಳಲ್ಲಿ ಸಾಶನ, ಅಶನ ರೂಪದಿಂದ ಉಪಾಸಿಸುವರಿಗೆ ವ್ಯಕ್ತನಾಗಿ ಬಿಂಬ ರೂಪ ತೋರುವ. ಹೇಗೆ ಕನ್ನಡಿ ಸಾಲುಗಳ ಮನೆಯಲ್ಲಿ ತನ್ನ ನಿಜರೂಪ ಎಲ್ಲಿ ನೋಡಿದಲ್ಲಿ ಕಾಣಿಪುದೋ ಹಾಗೆ ಹರಿಯ ರೂಪಗಳು ಅನೇಕವಾಗಿ ಎತ್ತ ನೋಡಿದರತ್ತ ಕಾಣುತಿಹವು. ಇಲ್ಲಿ ಪರಿಯಂತ ಶ್ರೀ ಹರಿಯ **ಗುಣ ಬಿಂಬವನ್ನು ವರ್ಣಿಸಿ ಮುಂದೆ ೧೧ನೇ ಪದ್ಯದಲ್ಲಿ ಹರಿಯು ಕ್ರಿಯಾ ಬಿಂಬವನ್ನು** ವಿಶದೀಕರಿಸುತ್ತಾರೆ.

ಗಮನಾಗಮನ ತೆಗೆದುಕೊಳ್ಳೋಣ-ಕೊಡೋಣ ಕಣ್ಣಿನಿಂದ ಆಗುವ ಕ್ರಿಯಾ ಸುಖರೂಪ ಕ್ರಿಯಾ ಅಭಿವ್ಯಕ್ತಿ ಅನೇಕ ದೇವತೆಗಳ ಕ್ರಿಯಾದ್ವಾರ ದಿಂದ ಬಿಂಬಕ್ರಿಯ ಮಾಡಿಪನೆಂದು ಸ್ತೋತ್ರ ಮಾಡಿಸಿಕೊಳ್ಳುತ್ತಾನೆ. ಅದು ಹೇಗಂದರೆ ಲಿಂಗ ಪ್ರಕೃತಿ ಕ್ರಿಯಾಗಳಲ್ಲಿ, ವಿಶ್ವ, ತೈಜಸ, ಪ್ರಾಜ್ಞಾ ಮತ್ತು ದಾರೇಷಣ, ಪುತ್ರೇಷಣ, ವಿತ್ತೇಷಣ ಈ ಮೂರರಲ್ಲಿ ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ, ಸ್ವರೂಪದಿ ತುರಿಯಾತ್ಮ ಹೀಗೆ ಎಂಟು ರೂಪ ಗಳಿಂದ ಕ್ರಿಯಾಬಿಂಬನೆಂದು ಹೊಗಳಿಸಿಕೊಳ್ಳುತ್ತಾನೆಂದು ೧೧ನೆಯ ಪದ್ಯ ದಿಂದ ವಿವರಿಸಿದ್ದಾರೆ.

ಇಲ್ಲಿ ಮತ್ತೊಂದು ರಹಸ್ಯ ಶ್ರೀ ವಿಷ್ಣುತೀರ್ಥರು ವರ್ಣಿಸಿದಂತೆ ಜೀವ ನಿಗೆ ಶ್ರೀಹರಿಯು ಸಾಕ್ಷಾತ್ ಬಿಂಬರೂಪನಲ್ಲ. ದೇವತೆಗಳ ದ್ವಾರಾ, ಬಿಂಬ ಬಿಂಬರೊಳಗೆ ಕೇವಲ ಬಿಂಬನಾದ ಹರಿಯು ಗುಣ, ರೂಪ, ಕ್ರಿಯಾದಿಗಳಲ್ಲಿ ತಾ ನಿಂದು ಬಿಂಬಕಾರ್ಯ ಮಾಡಿಸುತ್ತಾನೆಂದು ಹಿಂದೆ ಹೇಳಿದಂತೆ

ಬಿಂಬನಾದ ಹರಿಯು ಸಾಕ್ಷಾತ್ತಾಗಿ ಬಿಂಬನಾಗಿಲ್ಲ, ಸಕಲ ಷುನಿವೇದಿತ ಕರ್ಮಾಭಿಮಾನಿ ದೇವತೆಗಳಲ್ಲಿ ಅವರನಾದ, ಪುಷ್ಕರನಾಮದೇವತೆಯು ತನ್ನ ಅವರ ಜೀವರುಗಳಿಗೆ ಸಾಕ್ಷಾತ್ ಬಿಂಬನಾಗಿ ಮುಖದಲ್ಲಿ ಮುಖ ಇತ್ಯಾದಿ ಕ್ರಮದಿಂದ ಇರುವನು. ಈ ಪುಷ್ಕರನಿಗೆ ಶನೇಶ್ಚರ ಬಿಂಬ, ಶನೇಶ್ಚರನಿಗೆ ಉಷಾದೇವಿ, ಉಷಾದೇವಿಗೆ ಬುಧ, ಬುಧನಿಗೆ ಸ್ವಾಹಾದೇವಿ, ಸ್ವಾಹಾದೇವಿಗೆ

ಪರ್ಜನ್ಯ, ಪರ್ಜನ್ಯನಿಗೆ ವಿಘ್ನೇಶ ಅಶ್ವಿನೀ ದೇವತೆಗಳು ಕುಬೇರನು, ಇವರಿಗೆ ಮಿತ್ರನಾಮಕ ಸೂರ್ಯ ನಿಋರತಿ, ಇವರಿಗೆ ಅಗ್ನಿ, ಅಗ್ನಿಗೆ ವರುಣ, ವರುಣನಿಗೆ ಚಂದ್ರ ಸೂರ್ಯ ಧರ್ಮ ಶತರೂಪಾದೇವಿ, ಇವರಿಗೆ ಪ್ರವಾಹ ವಾಯುದೇವರು, ಈತನಿಗೆ ಅನಿರುದ್ಧ ಸ್ವಾಯಂಭುವ ಮನು ಗುರು, ದಕ್ಷ ಶಚಿ ರತ್ಯಾದಿ (೬) ಜನ ದೇವತೆಗಳು, ಇವರಿಗೆ ಅಹಂಕಾರಿಕ ಪ್ರಾಣದೇವ, ಈತನಿಗೆ ಇಂದ್ರ ಕಾಮರು, ಇಂದ್ರ ಕಾಮರಿಗೆ ಉಮಾ ವಾರುಣಿ ಸೌಪರಣಿ, ಇವರಿಗೆ ರುದ್ರ ಶೇಷ ಗರುಡರು, ಇವರಿಗೆ ಭಾರತೀ ಸರಸ್ವತಿಗಳು, ಇವರಿಗೆ ವಾಯು ಬ್ರಹ್ಮದೇವರು ಇವರಿಗೆ ಶ್ರೀ ಮಹಾಲಕ್ಷ್ಮಿ, ಶ್ರೀಲಕ್ಷ್ಮೀ ದೇವಿಗೆ ಶ್ರೀಹರಿ ಬಿಂಬನಾಗಿ ಕೇವಲ ಬಿಂಬನೆಂದು ಕರೆಸುತ್ತಾ ಈ ದೇವತೆಗಳ ದ್ವಾರಾ ಸಕಲ ಕ್ರಿಯಾ ರೂಪ ಗುಣ ಬಿಂಬನಾಗಿ ತೃಣಾದಿ ಬ್ರಹ್ಮ ಪರಿಯಂತ ಪರಮಾನುಗ್ರಹ ಮಾಡಿ ಮುಕ್ತರನ್ನು ಮಾಡುವನೆಂದು ಶ್ರೀಹರಿಯ ಮಹಿಮೆ ಕೊಂಡಾಡಿದ್ದಾರೆ.

ಇದೇ **ವಿಷಯವನ್ನೇ ಶ್ರೀ ವಿಜಯದಾಸಾರ್ಯರು** ಉಪಾಸನಾ ಭಾಗ ಸುಳಾದಿ (೩೬) ಪುಟ ೧೧೬-೧೧೭-೧೧೮ ಬಿಂಬೋಪಾಸನೆ (ಸುಳಾದಿ) "ಆಪ್ತ ಅಖಿಳ ಮುಕ್ತಿ ಯೋಗ್ಯ ಜನಕೆ ನಿತ್ಯ" ಎಂಬ ಸುಳಾದಿಯಲ್ಲಿ ಬಿಂಬ ರೂಪವನ್ನು ವರ್ಣಿಸಿದ್ದಾರೆ. ಜ್ಞಾನಾನಂದರೂಪನಾದರೂ ದೈತ್ಯಾವಳಿಗೆ ತಪ್ತನಾಗಿ ಕಾಣಿಸುವನೆಂದು ಹೇಳುತ್ತಾ ಮಟ್ಟ ತ್ರಿವಿಡಿ ತಾಳದಲ್ಲಿ ಶ್ರೀಹರಿಯು ಗುಣಬಿಂಬನಾಗಿರುವ ಕ್ರಮ. ಇದರಂತೆ ಶ್ರೀ ಹರಿಯ ಗುಣೋಪಾಸನೆ ಮಾಡಲು, ಪದ್ಧತಿ ತಪ್ಪದಲೆ ಮಾಡಿದರಂತೇ ಇದ್ದಲ್ಲಿ ಕೊಡುವನು ಹೆಪ್ಪೈವ ವಿಜಯ ವಿಠ್ಠಲ ಸರ್ವದಾ ಸರ್ವ ವಿದ್ಯಾತೀತನು ಕಾಣೋ ಎಂತೆಂತು ಇದ್ದರೂ ॥ ಎಂದು ಹೇಳಿ, ಮುಂದೆ ಅಟ್ಟ ತಾಳದಲ್ಲಿ "ಪರಮೇಷ್ಠಿ ಪವಮಾನ ಗುರುಡಾಹಿ ಶಿವ ಇಂದ್ರ । ಸ್ಮರಪ್ರಾಣ ಅನಿರುದ್ಧ ರವಿ ಚಂದ್ರ ಮೊದಲಾದ । ಸುರರು ತಾತ್ವಿಕರು ಚತುರವಿಂಶತಿ ತತ್ವ । ಧರಿಸಿ ಇದ್ದವರು ಮಿಕ್ಕಾದ ಜೀವ ರಾಶಿ । ಪರಿಯಂತ ನೆನೆದು ಒಂದೊಂದಧಿಷ್ಠಾನದಲ್ಲಿ । ಹರಿಯ ಧ್ಯಾನವ ಮಾಡೆ ತತ್ಕಾರ್ಯವ । ಅರುಹಿ ಕೊಡುವನಯ್ಯಾ ಕ್ರಮದಿಂದ ನೇಮಿಸಿ । ಮರಿಯಾದೆ ತಪ್ಪದು ತಮ್ಮ ಯೋಗ್ಯತದಷ್ಟು । ಕಿರಿಯ ಜನಕೆ ಶಕ್ತಿ ಉತ್ತ । ಮರಿಗೆ ಸರ್ವಸಾಧ್ಯವಾಗಿಪ್ಪದು ಕೇಳಿ । ಸರಸಿಜ ಗರ್ಭಂಗೆ ಇತರ ಸಂಶಯ

ವಿಲ್ಲ । ಹರಿಕರುಣ ಒಂದೇ ಪ್ರಧಾನ ಸಾಧನ । ಸಿರಿ ವಿಜಯ ವಿಠ್ಠಲ ತನ್ನ । ಶರಣರಿಗೊಂದೊಂದು ಕ್ಲಿಪ್ತ ಮಾಡಿಯಿಪ್ಪಾ ॥ ೪ ॥

ಮುಂದೆ ಆದಿತಾಳದಲ್ಲಿ ಕೇವಲ ಹರಿಬಿಂಬ ರೂಪಧ್ಯಾನ ಉಪದೇಶಿಸುತ್ತಾರೆ. " ಬಿಂಬಿ ಪ್ರತಿಬಿಂಬ ಬಿಂಬಭಾವದಲ್ಲಿ ಹರಿಯಾ । ಬಿಂಬವೆ ಕಾಂಬುವರು ಮುಕ್ತಿ ಯೋಗ್ಯರು ಎಲ್ಲ । ವೆಂಬೋದೆ ಸಿದ್ಧವೆನ್ನಿ ಸ್ಪಷ್ಟತ್ವದಲಿ ಭೇದ । ಕುಂಭಿನಿವಿಡಿದು ಅಧಿಕಾರಿಗಳ ವ್ಯಾಪ್ತಿ । ತುಂಬಿಕೊಂಡಿಪ್ಪದು ನೋಡುವದು ತಿಳಿವುದು । ಹಂಬಲಿಸುವದು ಉನ್ನತ ಉನ್ನತ ಮನಸು । (ಪ್ರತಿಬಿಂಬರ ವಿವರ) ಅಂಬುಜಾಕ್ಷಗೆ ಅಜನು, ಅಜಗೆ ಶಿವ, ಶಿವಗೆ ಇಂದ್ರ । ಬಿಂಬ ಪ್ರತಿಬಿಂಬ ಇದೆ ತಳಿಗಿಯೊಳಗೆ ಉದಕ । ತುಂಬಿರಲದರೊಳಗೆ ಸೂರ್ಯನ । ಬಿಂಬವಿರಲಾ ಬಿಂಬಪ್ರಕಾಶ ಮತ್ತೊಂದರಲಿ ಪ್ರತಿ । ಬಿಂಬ ತೋರಿದಂತೆ ಈ ತೆರದಲಿ ಹರಿಯ ಬಿಂಬವೆ ಕಾಂಬುವರು ಸ್ವಯೋಗ್ಯ ತಪ್ಪದಲೆ । ಬೆಂಬಲವಾಗಿಪ್ಪ ವಿಜಯ ವಿಠಲಸ್ವಾಮಿ । ನಂಬಿದ ಮಾನವರ ಬಳಿಯ ಕುಣಿಕುಣಿದಾಡುವ ॥ ೫ ॥ ಜತೆ ॥ ಭಕ್ತಿಯಿಂದಲೆ ಭಜಿಸೆ ಭವದಿಂದ ಕಡೆಮಾಡಿ । ಮುಕ್ತಿಯಲ್ಲಿ ಇಡುವ ವಿಜಯ ವಿಠಲ ಪೊಳೆದು ॥ ೬ ॥ ಎಂದು. ಬಿಂಬ ಪ್ರತಿಬಿಂಬ ಭಾವ ವಿವರಣೆ ಗೈಯುತ್ತ ಶ್ರೀ ಹರಿಯ ಗುಣ ರೂಪ ಕ್ರಿಯೋಪಾಸನೆ ವರ್ಣಿಸಿದ್ದಾರೆ. ಬಿಂಬಧ್ಯಾನರತರಾದವರು ಈ ಸುಳಾದಿ ನಿತ್ಯಪಠಿಸಿ ಪಾರಾಯಣ ಮಾಡಿದರೆ ದಾಸರಂತರ್ಗತ ಶ್ರೀಹರಿವೊಲಿವನು.

ಇನ್ನು ದಾಸಾರ್ಯರು ೧೨ನೇ ಪದ್ಯದಿಂದ ಕೊನೆಯ ೩೧ನೇ ಪದ್ಯವರೆಗೆ ಬಿಂಬನಾದ ಶ್ರೀಹರಿಯ ಅನಂತ ಗುಣ ಕ್ರಿಯಾ ವ್ಯಾಪಾರ ಬಣ್ಣಿಸುತ್ತಾ ತ್ರಿವಿಧರಲ್ಲಿ ತ್ರಿವಿಧ ಬಗೆ ಉಪಾಸನೆಗೈಸಿ ತ್ರಿವಿಧ ಗತಿಯನ್ನು ಬಿಂಬನು ಕೊಡುವನೆಂದು ನಾನಾ ವಿಧವಾಗಿ ಶ್ರೀಹರಿಯ ಸ್ತೋತ್ರಗೈದಿದ್ದಾರೆ. ಪದ್ಯಾರ್ಥಗಳಲ್ಲಿ ಇದನ್ನು ಸವಿಸ್ತರಿಸಿದೆ. ಇಲ್ಲಿ ಬೇರೆ ಹೇಳುವ ಕಾರಣವಿಲ್ಲ.

ಕರುಣಾಳುಗಳಾದ ಶ್ರೀ ದಾಸಾರ್ಯರು ಬಿಂಬಾಪರೋಕ್ಷ ಸಂಧಿಯನ್ನು ಮುಗಿಸಿ ಮುಂದೆ, ದೇಹದಲ್ಲಿಪ್ಪ ಬಿಂಬರೂಪಗಳಾರಂಭಿಸಿ, ರಮಾಬ್ರಹ್ಮಾದಿ ಸಕಲ ತತ್ವೇಶರ ಗುಣ ತಾರತಮ್ಯದಿಂದ ಧ್ಯಾನೋಪಾಸನೆಗೈಯುವ ತಾರತಮ್ಯ ಅವರೋಹಣ ಬಗೆ ಮುಂದೆ ೨೦ನೇ ಸಂಧಿಯಲ್ಲಿ ಬಿಂಬಾಂಶವನ್ನು

ಬಾಹಿರದಿಪ್ಪ ಸಕಲ ಸ್ಥಾವರಾರಂಭಿಸಿ ಚತುರ್ದಶ ಲೋಕ, ಧಾಮತ್ರಯ ಅಲ್ಲೆಲ್ಲಿಪ್ಪ ಜೀವರಲ್ಲಿ ತೃಣಾಂತ ಬ್ರಹ್ಮಾದಿವರಿಗೆ ಅವರೋಹಣ ತಾರತಮ್ಯ ದಿಂದ ಧ್ಯಾನೋಪಾಸನೆ ಮಾಡಲು ಗುರ್ವನುಗ್ರಹದಿಂದ ಪ್ರಾಣಾಂತರ್ಯಾಮಿ ಬಿಂಬ ಪೊಳೆಯಲು ಸಂಚಿತಾಗಾಮಿ ಕರ್ಮನಾಶವಾಗುವದೆಂದು ಉಪದೇಶಿ ಸಿದ್ದಾರೆ.

**ಈ ಉಪಾಸನೆಯು**

ಸುಲಭವಲ್ಲವಯ್ಯಾ ಬಹು ಜನ್ಮ ಸಾಧನ ಬೇಕು. ನಿಯತ ಗುರು ಪ್ರಸಾದ ಲಭ್ಯವಾಗಬೇಕು. ಜೀವರ ಯೋಗ್ಯತೆ ಕಾಲವರಿತು ಬಿಂಬನಾದ ಹರಿಯು ತನಗೆ ತಾನೆ ಪೊಳೆದು, ಸುಮ್ಮಗೀವನು ಅವರವರ ನಿಜಗತಿಯಾ ಎಂದು ಸಾಧನ ಮಾಡಿಸಿದಂತೆ ಧ್ಯಾನೋಪಾಸನ ಮಾಡಬೇಕು. ಸರ್ವವೂ ಶ್ರೀಹರಿಯ ಅಧೀನವೆಂದು ಚಿಂತಿಸುವದೇ ಪರಮ ಮುಖ್ಯ ಶ್ರೀಹರಿಯೇ ಮಾಡಿಸಬೇಕು.

ಈ ಧ್ಯಾನೋಪಾಸನೆ ವಿಷಯ ಬಹು ಕಠಿಣವಾದುದು. ಸಕಲ ಶಾಸ್ತ್ರಾರ್ಥ ಮುದ್ದೆ ಮಾಡಿ, ಶ್ರೀ ವ್ಯಾಸತತ್ವಜ್ಞರು, ಮಾನಸಸ್ಮೃತಿಯಲ್ಲಿ ಶ್ರೀವಿಜಯದಾಸಾರ್ಯರು ಉಪಾಸನಾ ಭಾಗ ಸುಳಾದಿಗಳಲ್ಲಿ ಉಪಾಸನಾ ಕ್ರಮವನ್ನು ಧ್ಯಾನ ಮೆಟ್ಟಲುಗಳನ್ನು ಕಮಲ ವಿಚಾರ ಹೃತ್ಕಮಲ ವಿವರ ಜೀವಾಂತರ್ಯಾಮಿ ರೂಪಧ್ಯಾನಾದಿ ಕ್ರಮ, ಷೋಡಶೋಪಚಾರ ವಿಧಾನ ಬಿಂಬೈಕ್ಯ ಚಿಂತಿಸುವ ಮರ್ಮವನ್ನು ಸದ್ಗುರುಗಳಿಂದ ತಿಳಿದು ಧ್ಯಾನೋ ಪಾಸನೆ ಮಾಡಿದರೆ ಶ್ರೀಹರಿಯೊಲಿವನೆಂದು, ದಾಸರ ಉಪದೇಶವನ್ನು ಶ್ರೀಶನು ಪ್ರೇರಿಸಿ ಬರೆಸಿದಂತೆ ಬರೆದುದು. ಶ್ರೀಮದ್ಗುರುವರಂತರ್ಯಾಮಿ ಬಿಂಬನಾದ ಮಧ್ವೇಶನಿಗೆ ಅರ್ಪಿತವಾಗಲಿ ಸಕಲಸಜ್ಜನರು ಕರುಣಿಸಿರೆಂದು ಪ್ರಾರ್ಥಿಸುವೆ.

ಶ್ರೀ ಅಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ

ಶ್ರೀ ಗುರುರಾಜೋ ವಿಜಯತೆ

# ೧೮ನೆಯ ಬಿಂಬಾಪರೋಕ್ಷ ಸಂಧಿ

ಶ್ರೀ ರಾಘವೇಂದ್ರಗುರು-ಶ್ರೀ ವರದೇಂದ್ರಗುರು

ಹರಿಕಥಾಮೃತಸಾರ ಗುರುಗಳ। ಕರುಣದಿಂದಾಪನಿತು ಪೇಳುವೆ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲವಿ ॥

**ಮುಕ್ತ ಬಿಂಬನು ತುರಿಯ ಜೀವ।**
**ನ್ಮುಕ್ತ ಬಿಂಬನು ವಿಶ್ವ ಸೃತಿ ಸಂ।**
**ಸಕ್ತ ಬಿಂಬನು ತೈಜಸನು ಅಸೃಜ್ಯರಿಗೆ ಪ್ರಾಜ್ಞ ॥**
**ಶಕ್ತನಾದರು ಸರಿಯೆ ಸರ್ವೋ।**
**ದ್ರಿಕ್ತ ಮಹಿಮನು ದುಃಖ ಸುಖಗಳ।**
**ವಕ್ತೃ(ಕ್ತ್ರಿ) ಮಾಡದಲಿಪ್ಪ ಕಲ್ಪಾಂತದಲಿ ಬಪ್ಪರಿಗೆ ॥ ೧ ॥**

ಅವತರಣಿಕಾ :—ಹಿಂದಿನ ಸ್ವಗತ ಸ್ವಾತಂತ್ರ್ಯ-ದತ್ತ ಸ್ವಾತಂತ್ರ್ಯ ಸಂಧಿಗಳಲ್ಲಿ, ಬಿಂಬನಾದ ಶ್ರೀಹರಿಯು ಚಲಿಸಿದರೆ ಪ್ರತಿಬಿಂಬ ಚಲಿಸುವನೆಂಬ ಧಾರಢ್ಯಜ್ಞಾನದಿಂದ ಶ್ರೀಹರಿಯನ್ನು ಭಜಿಸಬೇಕು. ಶ್ರೀಹರಿ ಸರ್ವ ಕರ್ಮ ಕರ್ತಾ ಕಾರಯಿತಾ, ಸದಾ ಜೀವ ಹರಿಯ ಅಧೀನನೆಂದು ಚಿಂತಿಸಿ ಸಕಲ ಕರ್ಮಗಳು ಶ್ರೀಹರಿಗೆ ಅರ್ಪಿಸಬೇಕೆಂದು ನಿರೂಪಿಸಿದ್ದಾರೆ. ಸಕಲ ಕರ್ಮವೆಂದರೆ ಪುಣ್ಯ-ಪಾಪ ದ್ವಂದ್ವಗಳಿಗೆ ಶ್ರೀಹರಿಕರ್ತೃನೆಂದು ಸಮರ್ಪಿಸಿದರೆ ಕರ್ಮಲೇಪವಾಗುವುದಿಲ್ಲ. ಇದೇ ಸಮರ್ಪಣೆಯೆ ಮುಕ್ತಿಪಥವಾದರೂ ಸಂಚಿತಾಗಾಮಿ ಕರ್ಮನಾಶವಾಗಲು, ಬಿಂಬಾಪರೋಕ್ಷ ಆಗಬೇಕು. ಬಿಂಬಾಪರೋಕ್ಷ ಆಗಬೇಕಾದರೆ ಶ್ರೀಹರಿಯು ಬಿಂಬ-ಜೀವರು ಸದಾ ಪ್ರತಿಬಿಂಬರು, ಆಭಾಸಕರು ಎಂಬ ನಿಜಜ್ಞಾನದಿಂದ, “ಅಪರೋಕ್ಷವಾಗದೆ ಸಂಚಿತಾಗಾಮಿಯು। ನಿಪತನವಾಗದು ಪ್ರಾರಬ್ಧಕರ್ಮವು ಉಪಶಮನದಿಂದ

ಭೋಕ್ತ್ರವಾಗದು ಕಾಣೋ। ಕಪಟನಾಟಕ ಹರಿಯ ರೂಪವ ಬಾಹಿರ। ಅಪರೋಕ್ಷವಾಗಲು ಅದು ನಿಮಿತ್ಯವಲ್ಲ। ಚಪಲ ಸದೃಶವಾದ ಮೂರ್ತಿಯ ಆವಾಗ। ಅಪರೋಕ್ಷಕರಿಸಿ ಮನದಲ್ಲಿ ಕಾಂಬೋದು। ಅಪವರ್ಗಕ್ಕೆ ಕೇವಲ ಸಾಧನವೆನ್ನು। ತಪನಿಯ ಗರ್ಭಾದಿ ದೇವತೆಗಳಿಗೆ। ಅಪರಿಮಿತ ಜನ್ಮ ಸಾಧನವಾಗದೇ। ಅಪರೋಕ್ಷವಾಗದು ಹರಿಯ ಕೂಡಾಡುವ। ಗುಪಿತ ಮಹಿಮ ನಮ್ಮ ವಿಜಯ ವಿಠಲರೇಯ ಜಪತಪಕೆ ವೊಲಿಯನು ಭಕುತಿ ಇಲ್ಲದಲೆ॥ ಎಂದು ಶ್ರೀ ವಿಜಯದಾಸರ ಸುಳಾದಿ, ಉಪಾಸನಾ ಭಾಗ ಪುಟ ೬೨-೬೩ ಮತ್ತು **ಬಿಂಬಮೂರುತಿಯು ಅಪರೋಕ್ಷವಾಗದೆ ಗತಿ।** ಯೆಂಬದು ಸಲ್ಲದು ಎಲ್ಲರಿಗೆ। ಬಿಂಬನೆಂಬ ಪ್ರಾಜ್ಞನನುಭವ ತಿಳಿದು ನಂಬುವಂತೆ ಮಾಡು ವಿಜಯ ವಿಠಲರೇಯಾ॥ ಉ. ಸು. ಪುಟ ೬ ಇಂತಹ ಬಿಂಬೋಪಾಸನವನ್ನು ಮಾನವನು ೪೪೦೦ ವರುಷಗಳ ಪರಿಯಂತ ಸಂತತ ಬಿಡದೆ ಮಾಡಬೇಕು,- ಲೇಶವಾದರೂ ನಡುವೆ ಅವಧಿಯಿಲ್ಲ. ಈ ೪೪೦೦ ವರ್ಷ ಪೂರ್ತಿಯಾಗಬೇಕಾದರೆ ಒಂದು ಸಾವಿರದ ಹದಿಮೂರು ಜನ್ಮಗಳಲ್ಲಿ ಸಾಧನ ಮಾಡಿದರೆ ಬಿಂಬಿರೋಕ್ಷನೆಂದು ದಾಸರ ಉಕ್ತಿಗೆ ಅನೇಕ ಪ್ರಮಾಣ ಗಳಿವೆ. ಮುಖ್ಯ ಕರ್ಮದಿಂದ ಕಡೆ ಬೀಳಬೇಕಾದರೆ ಅಪರೋಕ್ಷ ಜ್ಞಾನ ದಿಂದೇ ಬಿಂಬದರ್ಶನ, ಬಿಂಬದರ್ಶನದಿಂದಲೇ ಮೋಕ್ಷವೆಂಬೋದು ಸಿದ್ಧ. ಕಾರಣ ಸಂಕ್ಷಿಪ್ತದಿಂದ ಅವತರಣಿಕಾ ದಾಸರು ಪ್ರೇರಿಸಿದಷ್ಟು ತೋರಿಸಿದೆ. ಈ ಕಾರಣ ಬಿಂಬಾರೋಕ್ಷ ಸಂಧಿ ವಿವರಣೆಯನ್ನು ದಾಸರಾಯರು ಪ್ರಾರಂಭಿಸಿದ್ದಾರೆ. ಬಿಂಬಮೂರ್ತಿಗಳಾವುವು ಎಲ್ಲಿರುವವುವೆಂಬುದು ಸಂಧಿ ೮-೯ರಲ್ಲಿ ಸವಿಸ್ತರ ದಾಸಾರ್ಯರ ಉಕ್ತಿಯಂತೆ ವಿವರಿಸಿದೆ. ೧೪ನೇ ಸಂಧಿಯ ೩ನೇಪದಲ್ಲಿ ಬಿಂಬಪ್ರತಿಬಿಂಬ ಲಕ್ಷಣ ವಿಸ್ತಾರವಾಗಿ ಅನೇಕ ಪ್ರಮಾಣ ಶಾಸ್ತ್ರಾರ್ಥದೊಂದಿಗೆ ವಿವರಣೆ ಮಾಡಿದೆ. ಮರೆಯಬೇಡಿರೆಂದು ಸಜ್ಜನರ ಅಡಿಗೆರಗುವೆ.

"ದ್ವಿರೂಪಾಮಂಶಕೋ ತಸ್ಯ ಪರಮಸ್ಯ ಹರೇರ್ವಿಭೋ। ಪ್ರತಿ ಬಿಂಬಾಂಶಕಾಶ್ಚಾಥ ಸ್ವರೂಪಾಂಶಕ ಏವ ಚ ॥ ಪ್ರತಿಬಿಂಬಾಂಶಕಾ ಜೀವಾಃ। ಪ್ರಾದುರ್ಭಾವಾ ಪರೇ ಸ್ಮೃತಾಃ॥ ಪ್ರತಿಬಿಂಬೇ ಷ್ವಲ್ಪ ಸಾಮ್ಯಂ ಸ್ವರೂಪಾಣೀ ತರಾಣಿ ತು॥" ಎಂಬ ಪ್ರಮಾಣುಸಾರವಾಗಿ, "ಹೃದಯಸ್ಥ

ಹರೇರ್ಮೂರ್ತೇಃ ಜೀವೋ ಯತ್ಪ್ರತಿಬಿಂಬಕಃ|| ಯದ್ವಶೇ ವರ್ತತೇ ಜೀವಃ ಸಾತುಜೀವ ಕಳಾಸ್ಮೃತಃ" ಇದೇ ಮಂತ್ರವನ್ನು ಧೇನಿಸಿ। ಪದುಮನಾಭನ ದಿವ್ಯ। ಪದಗಳರ್ಚನಿಗಾನಂದದಲಿ ಮನಸು ಮಾಡಿ। ಪದವಿಪ್ರದಾತ **ಶ್ರೀ ವಿಜಯ ವಿಠ್ಠಲರೇಯಾ ನಿದರುಶನವಾಗುವಾ। ಮದಗರ್ವ ನೀಗುವ ||೬||** ಉ. ಸು. ಪುಟ ೬೧ ಈ ಎಲ್ಲ ಕಾರಣದಿಂದ ಮೋಕ್ಷ ವಾಗಲಿಕ್ಕೆ ಬಿಂಬಾರೋಕ್ಷವೇ ಮುಖ್ಯವೆಂದು ದಾಸಾರಾಯರು ಬಿಂಬಾ ಪರೋಕ್ಷ ಸಂಧಿಯನ್ನು ಪ್ರಾರಂಭಿಸುತ್ತಾರೆ.

**ಪದ್ಯಾರ್ಥ :—ಮುಕ್ತಬಿಂಬನು ತುರೀಯಃ** ಲಿಂಗಭಂಗಾನಂತರ ಸ್ವರೂಪಾನಂದಭಾವಲಕ್ಷಣ ದ್ವಿದಳ ಮೋಕ್ಷದಲ್ಲಿ ಆನಂದಪಡುವರಿಗೆ ತುರಿಯ=ವಾಸುದೇವಮುಕ್ತಿಪ್ರದನೆ ಬಿಂಬ=ಜೀವಾಂತರ್ಯಾಮಿಮೂರ್ತಿ, ಜೀವನ್ಮುಕ್ತಬಿಂಬನು ವಿಶ್ವ=ಸಂಚಿತಾಗಾಮಿ ಕರ್ಮನಾಶವಾಗಿ ಬಿಂಬ ಮೂರ್ತಿ ದರ್ಶನವಾಗಲು, ಅಪರೋಕ್ಷ ಜ್ಞಾನಿಗಳ ಬಿಂಬನು. ವಿಶ್ವ= ಪೂರ್ಣನು. "ಜೀವನಿಯಾಮಕದ್ವಾ ವಿಶ್ವಂ ಜೀವಸ್ಯತದಧೀನತ್ವಾ ವಿಷ್ಣು ರ್ವಿಶ್ವ ಇತಿಸ್ಮೃತಃ" (ಜಾಗ್ರತಪ್ರದ) (ವಿದ್ಯಾಧಿರಾಜೀಯ) ಸೃತಿ ಸಂಸಕ್ತ ಬಿಂಬನು ತೈಜಸನು=ಸಂಸಾರಾವಸ್ಥೆಯಲ್ಲಿರುವ ಜೀವರಿಗೆಲ್ಲ, ಬಿಂಬನು, ತೈಜಸನಾಮಕಹರಿಯು, (ಸ್ವಪ್ನಪ್ರದ) ಅಸೃಜ್ಯರಿಗೆ ಪ್ರಾಜ್ಞ=ಸೃಷ್ಟಿಗೆ ಬಾರದೇ ಇದ್ದ ಜೀವರುಗಳಿಗೆಲ್ಲ ಪ್ರಾಜ್ಞನಾಮಕ ಬಿಂಬನು (ಸುಷುಪ್ತಾ ವಸ್ಥಿ ನಿಯಾಮಕ) ಶಕ್ತನಾದರೂ ಸರಿಯೆ=ಅನಂತಾನಂತ ಜೀವರು ಗಳಲ್ಲಿದ್ದು ಅಸೃಜ್ಯಾವಸ್ಥೆಯಲ್ಲಿ, ಕಾರ್ಯಮಾಡಿಸಲು ಶಕ್ತನಾದರೂ, ತನ್ನ ಸ್ವಸಂಕಲ್ಪಾನುಸಾರವಾಗಿ, ಸೃಷ್ಟಿಗೆ ತಂದು ಸಾಧನಮಾಡಿಸುವ ಕಾಲವರೆಗೆ ಅಸೃಜ್ಯ ಜೀವರಲ್ಲಿ ಇದ್ದಾಗ್ಯೂ ಯಾವ ಕಾರ್ಯ ಮಾಡಿಸನು. ಸರ್ವೋ ದ್ರಿಕ್ತ ಮಹಿಮನು="ಸಂಪೂರ್ಣ ಜ್ಞಾನತ್ವಾತ್ಸರ್ವದೃಕ" ಸರ್ವ ಬಲ್ಲವ ನಾದ ಮಹಾಮಹಿಮನಾದುದರಿಂದ ಹರಿಯು ಸರ್ವಶಕ್ತಿಯುಳ್ಳವ ನಾದಾಗ್ಯೂ ಮುಂದಿನ ಕಲ್ಪದಲ್ಲಿ ಸೃಷ್ಟಿಮಾಡಿ ಅವರ ಸಾಧನ ಪೂರ್ತಿ ಯಾಗುವವರೆಗೆ, ಕಲ್ಪಾಂತಲಿಬಪ್ಪರಿಗೆ=ಮುಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿಗೆ ತಂದು ಸಾಧನಮಾಡಿಸುವ ಜೀವರಿಗೆ, ದುಃಖಸುಖಗಳ ವ್ಯಕ್ತಿಮಾಡದ ಲಿಪ್ಪ=ಅಸೃಜ್ಯ ಜೀವರ ದೈತ್ಯಾದಿಗಳಿಗೆ ದುಃಖ, ಮುಕ್ತಿಯೋಗ್ಯರಿಗೆ

ಅವರ ಸುಖ ವಕ್ತ್ಯ=ಸ್ಪಷ್ಟ ವಿಶದಮಾಡಿ ತೋರಿಸದೇ ಇರುವದು. ಶಕ್ತ ನಾದ ಹರಿಯು ಮಹಿಮೆ. ಇಂತು ಪ್ರಾರಂಭದಲ್ಲಿ ನಾಲ್ಕು ಅವಸ್ಥಾ ಜೀವರಿಗೆ ಬಿಂಬರೂಪನಾದ ಶ್ರೀಹರಿಯ ರೂಪಗಳನ್ನು ನಿರೂಪಿಸಿದ್ದಾರೆ.

**ಭಾವಸೂಚನ :—**ಈಗ್ಗೆ ಬಿಂಬ ಪ್ರತಿಬಿಂಬಭಾವ ಹೇಳುತ್ತ ಸೂಚನಾ ಮಾಡುತ್ತಾರೆ. || ಹರೀತಿ || ಮಂಜೂಷಾಯಾತು

**ಭಾಮಿನಿ**

ಬಿಂಬ ದೇವನು ಜೀವತತಿಪ್ರತಿ ।
ಬಿಂಬನೆನಿಪದಧೀನ ಸದೃಶಗ ।
ಳಿಂಬ ವೃತ್ತಾಂತವನು ಶಾಸ್ತ್ರದಿ ಗಹನವದರಿಂದ ॥
ಹಂಬಲಿಸಿ ಕರುಣಾಸಮುದ್ರರು ।
ನಂಬಿಕೊಂಡಿಹ ಜನಕೆ ಸುಲಭದಿ ।
ಇಂಬುತೋರ್ದರು ವಿಶದ ಮಾಡುತ ಬಿಂಬ ಸಂಧಿಯಲಿ ॥ ೧೮ ॥

**ಮುಕ್ತೇತಿ ॥** ಮುಕ್ತಾನಾಂ ಬಿಂಬಭೂತಾಸ್ತು ತುರ್ಯಾ ವಿಶ್ವೋ ಪರೋಕ್ಷಿಣಾಮಿತಿ ಪ್ರಮೇಯಸಾರೆ। ಸಂಸಾರಿಣಾಂ ತೈಜಸಸ್ತು ಅಸೃಜ್ಞಾಶಿ ನಾಂ ಪ್ರಾಜ್ಞ ಉಚ್ಯತ ಇತಿ ಶಬ್ದತತ್ವೇ। ಕಾಲ್ಪಾಂತ ಪ್ರಳಯಾನಂತರ ಎರಡನೆ ಬ್ರಹ್ಮಕಲ್ಪ || ೧ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಶ್ರೀರಸ್ತು। ಹರಿಃ ಓಮ್ "ಯತಸ್ತ್ವಾಭಾಸಃ ತ್ವದೀ ಯೋಽಹಂ ಸಮ" ಇತಿ ಜ್ಞಾನಸ್ಯ "ಮೋಕ್ಷ ಪ್ರದೇತಿ" ಮೋಕ್ಷ ಸಾಧನತ್ವೋಕ್ತೇಃ ತದವ ಗಮಾರ್ಥಂ ಬಿಂಬಸಂಧಿಃ ಆರಭ್ಯತೇ–"ಮುಕ್ತ" ಇತಿ। "ಮುಕ್ತಾನಾಂ ಸರ್ವ ವ್ಯಾಪಾರ ಹೇತುರೇವ ತುರೀಯತಃ। ಮುಕ್ತಾನಾಂ ಪ್ರಾಪ್ಯ-ರೂಪೋಽಸೌ।" ಇತ್ಯುಕ್ತೇಃ। ಸಂಚಿತ ಕರ್ಮಭಿಃ ತದ್ದೇಹೈರಪಿ ಅಬಂಧ ಕತ್ವಾತ್ ಆರಬ್ಧ ತತ್ಕಾರ್ಯೈರೇವ ಬಂಧಕತ್ವಾತ್ ವಿಶ್ವಃ ಅಪರೋಕ್ಷಿಣಾಂ ಬಿಂಬಃ || ತೈಜಸಃ ಸೃತಿಗಾನಾಂ ತು ಜ್ಞಾನಿನಾಂ ವಿಶ್ವನಾಮಕಃ ||

ಅಸೃಜ್ಯಾನಾಂ ಪ್ರಾಜ್ಞನಾಮಾ" ಇತ್ಯುಕ್ತೇಃ ವಿವೃತಂ ಚ|| ತತ್ರ ಕಾರ್ಯಾರ್ಜನನಂ ನಾಶಕ್ತ್ಯಾ ಕಿಂ ತು ಇಚ್ಛಯೈವ ಇತ್ಯಾಹ–"ಶಕ್ತ" ಇತಿ | ಬಪ್ಪ–ಬರುವ | |೧||

## ಕನ್ನಡಾರ್ಥ

"ಜೀವನು ಪರಮಾತ್ಮನ ಪ್ರತಿಬಿಂಬನು." ಎಂದು ಸೂತ್ರಗಳಲ್ಲಿ ಹೇಳಲಾಗಿರುತ್ತದೆ ಮತ್ತು ಬಿಂಬರೂಪಿಯ ಹರಿಯನ್ನು ಕಾಣುವದು-ತಿಳಿಯುವದು ಮೋಕ್ಷಕ್ಕೆ ಕಾರಣವೆಂದು ಪುರಾಣಾದಿಗಳಲ್ಲಿಯೂ ನಿರೂಪಿತವಾಗಿರುತ್ತದೆ. ಆದುದರಿಂದ ಬಿಂಬಜ್ಞಾನವಾಗಲು ಬಿಂಬಸಂಧಿಯನ್ನು ಪ್ರಾರಂಭಿಸುತ್ತಾರೆ–"ಮುಕ್ತಬಿಂಬನು" ಎಂಬ ಪದ್ಯದಿಂದ.

"ತುರೀಯನಾಮಕ ಭಗವದ್ರೂಪವು ಮುಕ್ತರಿಗೆ ಬಿಂಬವೆನಿಸಿರುತ್ತದೆ. ಅವರ ಸಕಲ ವ್ಯಾಪಾರಗಳಿಗೆ ಕಾರಣವಾಗಿರುತ್ತದೆ. ಮುಕ್ತರು ಅದನ್ನೇ (ಆ ರೂಪವನ್ನೇ) ಹೊಂದಿ ಸುಖಿಸುವರು" ಎಂದು ಪ್ರಮಾಣಗಳನ್ನನುಸರಿಸಿ "ಮುಕ್ತಬಿಂಬನು ತುರಿಯ" ಎಂದು ಹೇಳಿದ್ದಾರೆ. ಅಪರೋಕ್ಷ ಜ್ಞಾನಿಗಳಿಗೆ ವಿಶ್ವನಾಮಕ ಭಗವದ್ರೂಪವು ಬಿಂಬವಾಗಿರುತ್ತದೆ. ಸಂಚಿತಾಗಾಮಿ ಕರ್ಮಗಳಿದ್ದರೂ ಅವರಿಗೆ ಆ ದೇಹಗಳಿಂದ ಅವರಿಗೆ ಬಂಧನವಿಲ್ಲ. ಅಪರೋಕ್ಷ ಜ್ಞಾನದಿಂದ ಸಂಚಿತ ಪೂರ್ವದ, ಆಗಾಮಿ-ಉತ್ತರದ, ಕರ್ಮಗಳು ನಾಶವಾಗುತ್ತವೆ. ಆದುದರಿಂದ ಪ್ರಾರಬ್ಧ ಕರ್ಮದಿಂದ ಬರುವ ದೇಹಗಳಿಂದ ಮಾತ್ರ ಅವರಿಗೆ ಬಂಧನವಿರುತ್ತದೆ. (ಆರಬ್ಧ ಕರ್ಮಕ್ಕೂ ಭಗವದನುಗ್ರಹದಿಂದ ಉಪಮರಣವಾಗುತ್ತದೆ.) ಆದುದರಿಂದ ವಿಶ್ವನಾಮಕನು ಅಪರೋಕ್ಷ ಜ್ಞಾನಿಗಳಿಗೆ ಬಿಂಬನು. ಸಂಸಾರದಲ್ಲಿ ಇರುವ-ಅಪರೋಕ್ಷ ಜ್ಞಾನವಿಲ್ಲದವರಿಗೆ-ತೈಜಸ ನಾಮಕ ರೂಪವು ಬಿಂಬವಾಗಿರುತ್ತದೆ. ಅಸೃಜ್ಯರಿಗೆ ಸೃಷ್ಟಿಗೆ ಬಾರದೇ ಕಲ್ಪಾಂತರದಲ್ಲಿ ಸೃಷ್ಟಿಯನ್ನು ಹೊಂದತಕ್ಕವರಿಗೆ ಪ್ರಾಜ್ಞನಾಮಕ ಭಗವದ್ರೂಪವು ಬಿಂಬವಾಗಿರುತ್ತದೆ.

ಅಸೃಜ್ಯ ಜೀವರಲ್ಲಿ–ಪ್ರಾಜ್ಞನಾಮಕ ಬಿಂಬರೂಪಿಯು ಯಾವ ವ್ಯಾಪಾರವನ್ನೂ ಮಾಡಿಸದೇ ಇರುವದು. ಅಸಮರ್ಥತೆಯ ಮೂಲಕ

ವಾಗಿರುವದಿಲ್ಲ. "ಅಸೃಜ್ಯಜೀವರು ಯಾವ ವ್ಯಾಪಾರವಿಲ್ಲದವರಾಗಲಿಕ್ಕೆ ನಿರ್ವ್ಯಾಪಾರರು-ನಿಷ್ಕ್ರಿಯರಾಗಲೀ" ಎಂಬ ಅವನ ಇಚ್ಛೆಯೇ ಅದಕ್ಕೆ ಕಾರಣವೆಂದು ತಿಳಿಯಲು "ಶಕ್ತನಾದರು" ಎಂದು ಉತ್ತರಾರ್ಧಚರಣ ಗಳು ಹೊರಟಿರುವವು. ||೧||

**ಅವತರಣಿಕಾ :—** ಹಿಂದೆ ಮುಕ್ತರು, ಅಪರೋಕ್ಷ ಜ್ಞಾನಿಗಳು ಸಂಸಾರಾಸಕ್ತರು, ಅಸೃಜ್ಯರ ಬಿಂಬ ರೂಪವನ್ನು ವರ್ಣಿಸಿ ಇನ್ನು ಸೃಷ್ಟಿ ಕ್ರಮವಾಗಿ ಶ್ರೀಹರಿಯ ಬಿಂಬರೂಪಗಳನ್ನು ಲಿಂಗಪ್ರಕೃತಿಯಲ್ಲಿ ವಿಶದೀ ಕರಿಸುತ್ತಾರೆ. ಅತಿ ವಿಶ್ವತೈಜಸ ಪ್ರಾಜ್ಞರೂಪಗಳ ಕಾರ್ಯ ಬೇರೆ ರೀತಿ ಬಿಂಬನಾಮುವನ್ನು ಹೇಳುತ್ತಾರೆ.

**ಅನ್ನನಾಮಕ ಪ್ರಕೃತಿಯೊಳಗ ।**
**ಚ್ಛಿನ್ನವಾಗಿಹ ಪ್ರಾಜ್ಞನಾಮದಿ ।**
**ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು ॥**
**ಅನ್ನದಾಂಬುಜನಾಭ ವಿಶ್ವನು ।**
**ಭಿನ್ನ ನಾಮ ಕ್ರಿಯಗಳಿಂದಲಿ ।**
**ತನ್ನೊಳಗೆ ತಾ ರಮಿಪ ಪೂರ್ಣಾನಂದ ಜ್ಞಾನಘನ ॥ ೨ ॥**

**ಪದ್ಯಾರ್ಥ :—** ಅನ್ನನಾಮಕ=ಸರ್ವರಿಗೂ ಉಪಜೀವ್ಯನಾದುದ ರಿಂದ ಶ್ರೀಹರಿಗೆ ಅನ್ನನಾಮಕನೆಂದು ಹೆಸರು. ಪ್ರಕೃತಿಯೊಳಗಚ್ಛಿನ್ನ ನಾಗಿಹ ಪ್ರಾಜ್ಞನಾಮದಿ=ತ್ರಿಗುಣಾಭಿಮಾನಿ ಶ್ರೀರಮಾ, ಶ್ರೀ ಭೂದುರ್ಗಾ ಮೂರು ರೂಪಗಳಾಗಿ ಪ್ರಕೃತಿಯೊಳಗೆ=ಅನಾದಿಲಿಂಗವಾದ ಅಸೃಜ್ಯರ ಲಿಂಗದಲ್ಲಿ ಅನ್ನ ಉಪಜೀವ್ಯನಾಗಿ ಪ್ರಾಜ್ಞನಾಮದಿಂದ ಇರುತ್ತಾನೆ. ಸೊನ್ನೊ ಡಲ=ಭಂಗಾರ ಒಡಲ ಹಿರಣ್ಯಗರ್ಭನಾದ ಬ್ರಹ್ಮದೇವರು ಮೊದಲಾದ ವರೊಳು=ಬ್ರಹ್ಮಾದಿ ತೃಣಾಂತ ಸಕಲ ಜೀವರಲ್ಲಿ ಅನ್ನಾದ=ಅನ್ನ ಭಕ್ಷಣ ಮಾಡುತ್ತಾನೆಂದು, ಅನ್ನಾದ ತೈಜಸನು=ಅನ್ನಾದ ನಾಮದದಿ ತೈಜಸ ನಾಮಕ ಹರಿಯು ಸೃಜ್ಯರಾದ ಬ್ರಹ್ಮಾದಿ ಜೀವರ ಲಿಂಗದಲ್ಲಿ ಇರುವನು. ಅನ್ನದಾಂಬುಜನಾಭ ವಿಶ್ವನು=ಅನ್ನದ ಅನ್ನವನ್ನು ಕೊಡತಕ್ಕಂಥ,

ಅಂಬುಜನಾಭ=ಕಮಲವೇ ಹೊಕ್ಕಳಾಗಿ ಉಳ್ಳ ಪದ್ಮನಾಭಿರೂಪಿ ಹರಿಯು, ಜೀವನ್ಮುಕ್ತರಾದ ಲಿಂಗ ಪ್ರಕೃತಿಯೊಳಗೆ ವಿಶ್ವನಾಮಕನಾಗಿ ಸೃಷ್ಟಿ ಕ್ರಮವಾಗಿ ಲಿಂಗಾಂಗ ಪ್ರಕೃತಿಯೊಳಗೆ ಇದ್ದು, ಭಿನ್ನನಾಮ ಕ್ರಿಯೆಗಳಿಂದಲಿ= ಬೇರೆ ಬೇರೆ ನಾಮದಿಂದಲೂ, ಬೇರೆ ಬೇರೆ ಕ್ರಿಯಗಳನ್ನು ಮಾಡುತ್ತಾ ಅಂದರೆ ಅಸೃಜ್ಯರಾದ ಪ್ರಕೃತಿ ಲಿಂಗದಲ್ಲಿ ಪ್ರಾಜ್ಞ, ಸೃಜ್ಯರಾದ ಬ್ರಹ್ಮಾದಿಗಳ ಲಿಂಗಪ್ರಕೃತಿಯಲ್ಲಿ ತೈಜಸನಾಮಕನಾಗಿ ಜೀವನ್ಮುಕ್ತರಾದ ಬ್ರಹ್ಮಾದಿಗಳ ಲಿಂಗಪ್ರಕೃತಿಯಲ್ಲಿ ವಿಶ್ವನಾಮಕ ನಾಮದಿಂದ ಬೇರೆ ಕಾರ್ಯಗಳನ್ನು ಮಾಡುತ್ತ, ತನ್ನೊಳಗೆ ತಾ ರಮಿಪ=ಜೀವಾಂತರ್ಯಾಮಿ, ಲಿಂಗಪ್ರಕೃತಿ ಅಂತರ್ಯಾಮಿರೂಪಿ ಹರಿಯು, ಭಿನ್ನಕ್ರಿಯೆಗಳುಳ್ಳವನಾದಾಗ್ಯೂ, ತನ್ನ ರೂಪಗಳಲ್ಲಿಯೇ ತಾನು ವಿಹಾರಮಾಡುತ್ತಾ ಆನಂದಪಡುತ್ತಾ ಜೀವರಿಗೆ ಯೋಗ್ಯಾನುಗುಣವಾದ ಆನಂದಾದಿಗಳನ್ನು ಕೊಡಲು ಮೂಲಕಾರಣನಾದ ಬಿಂಬನೇ ಲಿಂಗಪ್ರಕೃತಿಯಲ್ಲಿ ರಮಿಸುತ್ತಾನೆಂತ ಭಾವ.

**ಭಾವಸೂಚನ :—**ಅನ್ನೇತಿ || ಸೊನ್ನೊಡಲ=ಹಿರಣ್ಯ ಗರ್ಭ ||೨||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನ್ನ" ಇತಿ || ಸರ್ವೋಪಜೀವ್ಯತ್ವಾತ್ ಲಿಂಗೇ ತತ್ವಾತ್, ತೇಷಾಂ ಅಸೃಜ್ಯಾನಾಂ ಲಿಂಗಸ್ಯ ಪ್ರಕೃತ್ಯಾತ್ಮಕತ್ವಾತ್, ಜೀವನ್ಮುಕ್ತತ್ವಾತ್ ಸೃತಿಗತತ್ವಾಚ್ಚ ಅಜಾದೀನಾಂ ಉಭಯ ಪ್ರತಿವಿವೇತ್ತಾ || "ತನ್ನೊಳಗೆ" ಇತಿ || "ಏಕೋಪಿ ನಿರ್ವಿಶೇಷೋಪಿ ಚತುರ್ಧಾ ವ್ಯವಹಾರ ಭಾತ್" ಇತ್ಯುಕ್ತೇಃ|| ಅನೇನ ಪೂರ್ವೋತ್ತಂ ವಿವೃತಂ ಭವತಿ || ಸೊನ್ನ=ಸ್ವರ್ಣ || ೨ ||

## ಕನ್ನಡಾರ್ಥ

ಸರ್ವರಿಂದ ಉಪಜೀವಿಸಲ್ಪಡುವರು-ಸರ್ವರು ಇವನನ್ನು (ಹರಿಯನ್ನು) "ಅನ್ನ"ವೆನ್ನುತ್ತಾರೆ. ಅಸೃಜ್ಯಜೀವರ ಲಿಂಗವು ಸೂಕ್ಷ್ಮ ಪ್ರಕೃತಿ ರೂಪವಾದುದರಿಂದ ಆಲಿಂಗದಲ್ಲಿರುವದರಿಂದಲೂ ಅನ್ನವೆಂದು ಕರೆಯುತ್ತಾರೆ. ಅಜ ಮುಂತಾದವರು ಜೀವನ್ಮುಕ್ತರೂ, ಅಪರೋಕ್ಷ ಜ್ಞಾನಿಗಳೂ ಸಂಸಾರದಲ್ಲಿರುವವರೂ ಆದುದರಿಂದ ತೈಜಸ ವಿಶ್ವನಾಮಕ ರೂಪ

ಗಳಿಂದ ಅವರಲ್ಲಿ ಅನ್ನಾದ ಅನ್ನದ ಎಂಬ ಹೆಸರಿನಿಂದ ವ್ಯಾಪಾರಮಾಡಿ ಸುತ್ತ ಇರುತ್ತಾನೆ.

ಪರಮಾತ್ಮನು ಒಬ್ಬನೇ ಆಗಿದ್ದರೂ, ತನ್ನ ರೂಪಗಳಿಂದ ಭೇದವಿಲ್ಲ ದಿದ್ದರೂ ಅನ್ನ ಅನ್ನಾದ ಅನ್ನದ ಎಂದು ಮುಂತಾಗಿ ಹೇಳಿಸಿಕೊಳ್ಳು ತ್ತಾನೆ. ವಿಶೇಷಗಳೇ ಈ ವ್ಯವಹಾರ ಕಾರಣಗಳು. ಹೀಗೆ ಪ್ರಮಾಣ ಗಳಿರುತ್ತವೆ.

ಈ ಪದ್ಯವು ಹಿಂದಿನ ಪದ್ಯಾರ್ಥವನ್ನು ವಿವರಿಸಿರುತ್ತದೆ ಎಂದು ತಿಳಿಯಬೇಕು ॥ ೨ ॥

**ಅವತರಣಿಕಾ :—**ಶ್ರೀಹರಿಯು, ವಿಶ್ವ ತೈಜಸ, ಪ್ರಾಜ್ಞರೂಪಗಳಿಂದ ವಿಷ್ಣು, ಬ್ರಹ್ಮ, ಶಿವ ನಾಮದಿಂದ ಅವ್ಯಕ್ತನಾಗಿ ಕಾರಣ ಕಾರ್ಯರೂಪ ಗಳಿಂದ ಜೀವರಿಗೆ ಆನಂದಕೊಡುತ್ತಾ ತೃಪ್ತಿಬಡಿಸುತ್ತಾನೆಂದು ದೃಷ್ಟಾಂತ ಪೂರ್ವಕ ಶ್ರೀಹರಿಯ ವಿಚಿತ್ರ ಮಹಿಮಾ ಸ್ತೋತ್ರಮಾಡುತ್ತಾರೆ.

**ಬೂದಿಯೊಳಗಡಗಿಪ್ಪನಳನೋ ।**
**ಪಾದಿ ಚೇತನ ಪ್ರಕೃತಿಯೊಳು ಅ।**
**ನ್ನಾದ ಅನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪಿ ॥**
**ಓದನಪ್ರದ ವಿಷ್ಣುಪರಮಾ ।**
**ಲ್ಹಾದ ನೀವುತ ತೃಪ್ತಿ ಬಡಿಸುವ ।**
**ಗಾಥ ಮಹಿಮನ ಚಿತ್ರಕರ್ಮವನಾವ ಬಣ್ಣಿಸುವ ॥ ೩ ॥**

**ಪದ್ಯಾರ್ಥ :—**ಬೂದಿಯೊಳಗಡಗಿಪ್ಪ ಅನಳನೋಪಾದಿ=ಬೂದಿಯ ಒಳಗೆ ಅಡಕವಾಗಿ (ಬೂದಿಮುಚ್ಚಿದ ಕೆಂಡದಂತೆ) ಇರುವ ಅಗ್ನಿಯಂತೇ ತೇಜೋರೂಪನಾಗಿ ಅವ್ಯಕ್ತದಿಂದ ಅಂದರೆ ಅಜ್ಞರಿಗೆ ತಿಳಿಯಗೊಡದೇ, ಚೇತನ=ಜೀವರುಗಳಲ್ಲಿ ಮತ್ತು ಚೇತನ ಪ್ರಕೃತಿ=ಜೀವರುಗಳಿಗೆ ಸಂಬಂಧ ವಾದ ಲಿಂಗಪ್ರಕೃತಿ ತ್ರಿಗುಣಾತ್ಮಕವಾದ ಲಿಂಗದಲ್ಲಿ ಅಥವಾ ಲಿಂಗಾಭಿಮಾನಿ ಚೇತನ ಪ್ರಕೃತಿಯಲ್ಲಿ ಅನ್ನಾದ=ಅನ್ನ ಭಕ್ಷಣಮಾಡುವನು. ತಾನು ಜೀವರುಗಳಿಂದ ಕರ್ಮರೂಪವಾದ ಅನ್ನವನ್ನು ಭಕ್ಷಣ ಮಾಡಿಸುವಲ್ಲಿ,

ಮತ್ತು ಅನ್ನಾಹ್ವಯ=ಅನ್ನನಾಮದಿಂದ ಕರೆಸುತ್ತ, ಜೀವರಿಗೆ (ಅನ್ನ) ಉಪಜೀವ್ಯನಾಗಿ ಬ್ರಹ್ಮಶಿವರೂಪಿ ಓದನಪ್ರದವಿಷ್ಣು=ಲಿಂಗ ಉಪಚಯ ದ್ವಾರಾ ಜೀವರನ್ನು ಸೃಷ್ಟಿಗೆ ತರಲು, ಬ್ರಹ್ಮಾಂತರ್ಯಾಮಿಯಾಗಿ ಬ್ರಹ್ಮ ರೂಪದಿಂದ ತೈಜಸನು, ಓದನಪ್ರದವಿಷ್ಣು=ಅನ್ನವನ್ನು ಕೊಟ್ಟು ರಕ್ಷಣ ಪಾಲನಮಾಡುವ ಕಾರಣ, ವಿಷ್ಣು ಸ್ವಯಂರೂಪದಿಂದ ಇರುವ, ಶಿವರೂಪಿ=ಮಂಗಳಕರನಾದ ರುದ್ರದೇವರಲ್ಲಿ ನಿಂತು ರುದ್ರ ರೂಪದಿಂದ ಲಯ ಮಾಡುವನು. "ಋಜಂ ದ್ರಾವಯತೇ ಯಸ್ಮಾತ್ ರುದ್ರನೆಂದೂ, "ಬ್ರಹ್ಮಣಿ ಬ್ರಹ್ಮರೂಪೋಸೌ ಶಿವರೂಪೀ ಶಿವೇ ಸ್ಥಿತಃ ಎಂಬುವ ವಚನದಂತೆ ಸೃಷ್ಟಿ ಸ್ಥಿತಿ ಲಯಾ ಮಾಡುತ್ತ ಜೀವರಿಗೆ ಪರಮಾಲ್ಹಾದ ವೀವುತ= ಅವರವರ ಯೋಗ್ಯತಾ ಸ್ವಭಾವಾನುಸಾರವಾಗಿ ಉತ್ತಮವಾದ ಸಂತೋಷ ಆನಂದವನ್ನು ಕೊಡುತ್ತಾ ತೃಪ್ತಿಬಡಿಸುವ=ಸಾಕಷ್ಟು ಇಚ್ಛಾಶಾಂತಿ ಗೊಳಿಸುತ್ತಾನೆ. ಅಗಾಧ ಮಹಿಮನ=ನೆಲೆಗಾಣದ ಬಹು ಮಹತ್ಮೆ ಯುಳ್ಳವನ ವಿಚಿತ್ರ ಕರ್ಮವು=ನಾನಾ ಬಗೆಯ ತರತರದ ಅತ್ಯಾಶ್ಚರ್ಯ ಕರ ಕರ್ಮವ=ಕ್ರಿಯೆಗಳ ನಾವ ಬಣ್ಣಿಸುವ=ಶ್ರೀಹರಿಯ ಮಹಾ ವಿಚಿತ್ರಕ್ರಿಯೆಗಳನ್ನು ಯಾರು ವರ್ಣಿಸಬಲ್ಲರು. ಸಂಪೂರ್ಣವಾಗಿ ಹರಿಯ ಕ್ರಿಯಗಳು, ಗುಣ ರೂಪಗಳ ಮಹಿಮೆ ಸ್ತೋತ್ರಮಾಡಲು ಯಾರಿಂದಲೂ, ಶಕ್ಯವಿಲ್ಲ.

**ಭಾವಸೂಚನ :—** ಭೂದೇತಿ ॥ ಬಣ್ಣಿಸುವ=ಸ್ತುತಿಸುವ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಬೂದಿ" ಇತಿ ॥ ಅನ್ನಾದಃ ಬ್ರಹ್ಮಣಿ ॥ "ಅತ್ತಿ" ಇತಿ ಹರೇಃ ಅನ್ನಮ್ ॥ ಬ್ರಹ್ಮೇತಿ ॥ "ಬ್ರಹ್ಮಣಿ ಬ್ರಹ್ಮ ರೂಪೋಸೌ ಶಿವರೂಪೀ ಶಿವೇ ಸ್ಥಿತಃ" ॥ ಇತ್ಯುಕ್ತೇಶ್ಚ ॥ "ಓದನ" ಅನ್ನ॥ "ವಿಷ್ಣುರೂಪೇಣ ಪಾತಿ" ಇತ್ಯುಕ್ತೇಶ್ಚ ॥ ೩ ॥

## ಕನ್ನಡಾರ್ಥ

ಹರಿಯು ಅವ್ಯಕ್ತವಾಗಿರುವದನ್ನು ದೃಷ್ಟಾಂತದಿಂದ ನಿರೂಪಿಸು ತ್ತಾರೆ–"ಬೂದಿ" ಎಂಬ ಪದ್ಯದಿಂದ.

ಬ್ರಹ್ಮನಲ್ಲಿ ಅನ್ನಾದ ಎಂಬ ನಾಮದಿಂದ ಇರುತ್ತಾನೆ. ಅತ್ತಿ ತಿನ್ನುವನು ಸಂಹರಿಸುವನು ಆದುದರಿಂದ ಹರಿಗೆ ಅನ್ನವೆಂದು ನಾಮ. (ಚೇತನ ಪ್ರಕೃತಿ ಲಕ್ಷ್ಮೀದೇವಿಯಲ್ಲಿ ಅನ್ನನಾಮಕನಾಗಿ ಇರುವನು) "ಬ್ರಹ್ಮಶಿವರೂಪೀ" ಎಂದರೆ ಬ್ರಹ್ಮಶಿವರಿಂದ ಅಭಿನ್ನನೆಂದು ಅರ್ಥವಲ್ಲ. "ಬ್ರಹ್ಮನಲ್ಲಿ ಬ್ರಹ್ಮರೂಪದಿಂದಲೂ ಶಿವನಲ್ಲಿ ಶಿವರೂಪದಿಂದಲೂ ಹರಿಯು ಇರುವನು" ಎಂಬು ವಚನಗಳಿದ್ದುದರಿಂದ "ತದಂತರ್ಯಾಮಿ ತನ್ನಾಮಕ" ಎಂದು ಅರ್ಥ ತಿಳಿಯಬೇಕು. ವಿಷ್ಣುರೂಪದಿಂದ ಸಂರಕ್ಷಿಸುವದರಿಂದ "ಅನ್ನದ-ಓದನಪ್ರದ"ವೆಂದು ತಿಳಿಯಬೇಕು. ॥ ೩ ॥

**ಅವತರಣಿಕಾ :—**ಹಿಂದೆ ಭೋಜನಸಂಧಿ (೪) ಯಲ್ಲಿ ಅನಾದಿ ಕರ್ಮ ಜೀವರಿಗೆ ಭೋಜನವನ್ನು ಹೇಗೆ ಮಾಡಿಸುವನೆಂದು ಹೇಳಿದ್ದಾರೆ. ಲಿಂಗ ಉಪಚಯದ್ವಾರಾ, ಜೀವರಿಗೆ ಕರ್ಮಭೋಜನ ಮಾಡಿಸುವಲ್ಲಿ ಬಿಂಬ ರೂಪಗಳನ್ನೂ ಮತ್ತು ಅವೇ ರೂಪಗಳಿಂದಲೇ ಪ್ರಸಿದ್ಧವಾದ ಸ್ಥೂಲಾನ್ನ ಭೋಜನದಲ್ಲಿಯೂ, ಓಂಕಾರ ಪ್ರತಿಪ್ರಾದ್ಯನಾದ ಅಕಾರ–ಉಕಾರ–ಮಕಾರ ವಿಶ್ವ–ತೈಜಸ–ಪ್ರಾಜ್ಞ ರೂಪಗಳಲ್ಲಿ ಹಿಂದೆ ಹೇಳಿದ್ದಲ್ಲದೆ ನಾದಬಿಂದು ಮೊದಲಾದ ಐದು ಭಗವದ್ರೂಪಗಳ ಕಾರ್ಯ ಹೇಳುತ್ತಾರೆ.

**ನಾದ ಭೋಜನ ಶಬ್ದದೊಳು ಬಿಂ ।**
**ದೋದನೋದಕದೊಳಗೆ ಘೋಷನು ।**
**ನಾದದೊಳು ಶಾಂತಾಖ್ಯ ಜಠರಾಗ್ನಿಯೊಳಗಿರುತಿಪ್ಪ ॥**
**ವೈದಿಕ ಸುಶಬ್ದದೊಳು ಪುತ್ರ ಸ ।**
**ಹೋದರಾನುಗರೊಳತಿ ಶಾಂತನ ।**
**ಪಾದ ಕಮಲನವರತ ಚಿಂತಿಸು ಈ ಪರಿಯಲಿಂದ ॥ ೪ ॥**

**ಪದ್ಯಾರ್ಥ :—**ಕರ್ಮವಿಪಾಕ ಭೋಜನಶಬ್ದವೆಂದರೆ, ಭೋಜನ ಮಾಡುವ ಕಾಲ ಆಗುವ ಸಪ್ಪಳ, ಶಬ್ದದಲ್ಲಿ **ನಾದ** ವಾಚ್ಯ ಓಂಕಾರ ಗತನಾದ ಹರಿಯು ಬಿಂಬನಾಗಿ ಮಾಡಿಸುವನು. ಓದನೋದಕದೊಳಗೆ ಬಿಂದು ಅನ್ನ (ಪ್ರಥಿವಿ) ಉದಕ (ಅಪ್ಪು) ಜಲದಲ್ಲಿ **ಬಿಂದು** ಶಬ್ದವಾಚ್ಯ

ನಾಗಿರುವನು. ವಾದದೊಳು ಘೋಷನು=ಘೋಷಾನುವಾದ ಶಬ್ದೇಷು= ಪುನಃ ಪುನಃ ಮೆಲ್ಲುವ ಕಾಲ ಆಗುವ ಶಬ್ದದಲ್ಲಿ ಅಥವಾ ಮೆಲುವಾಗ ಅಚ್ಯುತಾನಂತಗೋವಿಂದ ಶಬ್ದ ಉಚ್ಚರಿಸುವಲ್ಲಿ **ಘೋಷನಾಮಕ** ಹರಿಯು, ಜಠರಾಗ್ನಿಯೊಳು=ಜಠರ ಉದರಲ್ಲಿರುತಿಪ್ಪ ಪ್ರಜ್ವಲಿಸುವ ಅಗ್ನಿಯಲ್ಲಿ, **ಶಾಂತಾಖ್ಯ**=ಶಾಂತನಾಮಕನಾದ ಹರಿಯು, ಇರುವದರಿಂದಲೇ ದೇಹಕ್ಕೆ ಅಗ್ನಿಬಾಧೆ ಇಲ್ಲ. ವೈದಿಕ ಶಬ್ದದೊಳು=ವೇದಶಾಸ್ತ್ರಾದಿಗಳಲ್ಲಿ ಅಂದರೆ ಭೋಜನ ಮಾಡುವ ಮಾಡಿಸುವ ನಾದ ಕಾರ್ಯಾಖ್ಯ ರೂಪ ವಿಚಾರ ವೇದಶಾಸ್ತ್ರಗಳಲ್ಲಿ ಮತ್ತು ಭೋಜನ ಮಾಡತಕ್ಕ ಸಹಭೋಜಿಗಳಾದ ಅನೇಕ ಸೃಜ್ಯರಾದ ಪುತ್ರ=ಮಕ್ಕಳು ಸಹೋದರ=ಅಣ್ಣ ತಮ್ಮಂದಿರು ಅನುಗ=ಸೇವಕರಲ್ಲಿ **ಅತಿಶಾಂತನಾದ ಹರಿಯು** ಅತಿ ಸುಖವನ್ನು ಕೊಡುವನೆಳೆದು, ಪಾದ ಕಮಲ ನವರತ ಚಿಂತಿಸು=ಬಿಂಬ ರೂಪಿ ಪರಮಾತ್ಮ ಪಾದಕಮಲದಲ್ಲಿರುವ ಶ್ರೀ ಕೃಷ್ಣನ ರೂಪವನ್ನು ನಿರಂತರವಾಗಿ ಈ ಪರಿಯಲಿಂದ=ಮೇಲೆ ವಿವರಿಸಿದಂತೆ ಪಂಚ ರೂಪಗಳಿಂದ ಬಿಂಬನಾಗಿ ಕಾರ್ಯಮಾಡುವನೆಂದು ಧೇನಿಸುತ್ತಿರು.

**ಭಾವಸೂಚನ** :—ನಾದೇತಿ ॥ ಈಗ್ಗ್ಯೆ ಪ್ರಣವಗತ ಅಕಾರಾದ್ಯತಿ ಶಾಂತಾಂತ ಅಷ್ಟಾಕ್ಷರಗಳಿಗೆ ನಿವಾಸಸ್ಥಾನ ಹೇಳುತ್ತಾರೆ. ಭೋಜನೇತಿ। ನಾದಾಭಿಮಾನೀ ಕ್ರೋಡಸ್ತು ಭೋಜನಸ್ತು ರವೇಷು ಚಾ। ಬಿಂದು ಮಾನೀ ವಿಷ್ಣುದೇವೋ ಜಲಾನ್ನಸ್ಥಃ ತ್ರಿವೃತ್ಪ್ರಭುಃ ।। ಘೋಷಾನುವಾವ ಶಬ್ದೇಷು ಶಾಂತೋ ಜ್ಯೋತಿಃ ಪರಂ ಮಹಾನ್ಸ್ನಾ ಜಾಠರಾಗ್ನೌ ಪುತ್ರ ಮಿತ್ರ ವೇದಶಾಸ್ತ್ರೇಷು ಸರ್ವದಾ ॥ ಅತಿಶಾಂತಾಖ್ಯ ಕೃಷ್ಣಸ್ಯ ಪಾದಪದ್ಮಂ ನಿಬೋಧಯೇತಿ ಪ್ರಮೇಯ ರತ್ನಾಕರೇ ।। ೪ ।।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಕಾರಾದ್ಯತಿ ಶಾಂತಾಂತಃ ಪ್ರಣವೋಷ್ಟಾಕ್ಷರೋ ಮತಃ ॥" ಇತಿ ತಥಾ ಅನ್ಯತ್ರ ಬ್ರಹ್ಮರುದ್ರಾಂತರ್ಗತಸ್ಯ ಅಕಾರ್ಯೋಕಾರ ವಾಚ್ಯತಾಭಿಧಾನಾತ್ ಶಿಷ್ಟಾನಾಂ ಸ್ಥಾನಮಾಹ–"ನಾದ" ಇತಿ ।। ನಾದಃ ವೇದಃ ।।

ತದ್ವಾಚ್ಯತ್ವಾತ್ । ಪೃಥಿವ್ಯಪಾರ ಬಹುತ್ವಾತ್ ಆಧಿಕ್ಯಾಭಿಧಾಯಿ ಬಿಂದು ವಾಚ್ಯಃ । ನಾದೇ ಘೋಷೇತಿ ಶ್ರುತೇಃ ಘೋಷಃ ॥ ಶಾಂತಃ ಹರಿಃ ಯಸ್ಮಾದಸ್ತಿ ಅತಃ ಏವ ನ ದಹ್ಯತೆ ಇತಿ ಗಾತ್ರಮ್ ॥ ಅತಿ ಸುಖದತ್ವಾತ್ ತಥೋಕ್ತಃ ॥ ೪ ॥

## ಕನ್ನಡಾರ್ಥ

"ಅಕಾರ, ಉಕಾರ, ಮಕಾರ, ನಾದ, ಘೋಷ ಬಿಂದು, ಶಾಂತ, ಅತಿಶಾಂತಗಳೆಂದು ಪ್ರಣವ—ಓಂಕಾರದಲ್ಲಿ ಎಂಟು (೮) ಅಕ್ಷರಗಳು." ಎಂದು ನಿರೂಪಿಸಿರುತ್ತಾರೆ. ಅಕಾರ ಉಕಾರಗಳಿಂದ ಹೇಳಿಸಿಕೊಳ್ಳುವವನು ಬ್ರಹ್ಮಾಂತರ್ಗತನು, ಹಾಗೂ ರುದ್ರಾಂತರ್ಗತನು." ಎಂದು ಬೇರೆ ಕಡೆಗೆ ಹೇಳಿದುದರಿಂದ ಮಿಕ್ಕವುಗಳ ಸ್ಥಾನಗಳನ್ನು ನಿರೂಪಿಸುತ್ತಾರೆ. "ನಾದ" ಎಂಬ ಪದ್ಯದಿಂದ. ವೇದವಾಚ್ಯನಾದುದರಿಂದ ನಾದವೆನ್ನುತ್ತಾರೆ. ಪೃಥಿವೀ-ಜಲಗಳು ಬಹಳವಿರುವದರಿಂದ (ಓದನೋದಕಗಳಲ್ಲಿ) ಅವುಗಳಲ್ಲಿ ಬಿಂದು ಶಬ್ದವಾಚ್ಯನಾಗಿ ಇರುತ್ತಾನೆ. ವಾದದಲ್ಲಿ ಘೋಷ ನಾಮಕನಾಗಿರುತ್ತಾನೆ. ಹರಿಯು ಶಾಂತನಾಗಿ ಶಾಂತನಾಮದಿಂದ ಜಠರಾಗ್ನಿಯಲ್ಲಿ ಇರುವದರಿಂದಲೇ ದೇಹವು ಸುಟ್ಟುಹೋಗುವದಿಲ್ಲ. ಅತಿ ಸುಖವನ್ನು ಕೊಡುವದರಿಂದ ಅತಿಶಾಂತನೆಂದು ಹೇಳಿಸಿಕೊಳ್ಳುತ್ತಾನೆ. ॥ ೪ ॥

**ಅವತರಣಿಕಾ :—**ಬಿಂಬ ರೂಪಿಯಾದ ಶ್ರೀಹರಿಯನ್ನು ಶ್ರೀ ರಮಾದೇವಿಯಿಂದಲೂ, ಪೂರ್ಣ ಉಪಾಸನೆಮಾಡಲು ಶಕ್ಯವಲ್ಲವಾದುದರಿಂದ ಪರಮ ಮುಖ್ಯ ವೃತ್ತಿಯಿಂದ ಶ್ರುತಿಗಳು ಶ್ರೀಹರಿಯನ್ನೆ ಪೊಗಳುತ್ತವೆ ಆದುದರಿಂದ "ನಿಷುಸೀದ ಗಣಪತಿ" ಎಂಬ ವೇದಋಚವು ಶ್ರೀಹರಿಯು ತನ್ನ ಅನಂತಗುಣವನ್ನು ತಾನೆ ತಿಳಿದುದನ್ನು ಸೇವ್ಯಸೇವಕ ಭಾವದಿಂದ ತನ್ನ ಪೂಜಾ ತಾನೇ ಮಾಡಿಕೊಳ್ಳಲು ಶಕ್ತನು. ರಮಾದೇವಿ ಅನಂತ ಗುಣಗಳನ್ನು ತಿಳಿಯಲು ಶಕ್ತಳಲ್ಲನೆಂದು ಶ್ರೀಹರಿಯ ವಿಚಿತ್ರ ಮಹಿಮೆ ಕೊಂಡಾಡುತ್ತಾರೆ.

**ವೇದಮಾನಿ ರಮಾನುಪಾಸ್ಯ ಗು ।**
**ಣೋದಧಿ ಗುಣತ್ರಯ ವಿವರ್ಜಿತ ।**
**ಸೋದರಸ್ಥಿತ ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು ॥**
**ಸಾಧು ಸಮ್ಮತವೆನಿಸುತಿಹ ನಿಷು ।**
**ಸೀದ ಗಣಪತಿಯೆಂಬ ಶ್ರುತಿ ಪ್ರತಿ ।**
**ಪಾದಿಸುವದನವರತವನ ಗುಣಪ್ರಾಂತಗಾಣದಲೆ ॥ ೫ ॥**

**ಪದ್ಯಾರ್ಥ :—**ವೇದಮಾನಿ=ವೇದಗಳಿಗೆ ಶ್ರುತಿಗಳಿಗೆ ಅಭಿಮಾನಿಯಾದ, ರಮಾನುಪಾಸ್ಯನು=ಶ್ರೀ ಲಕ್ಷ್ಮಿದೇವಿಯರಿಂದ ಶ್ರೀಹರಿಯು ಅನುಪಾಸ್ಯನು=ಸಂಪೂರ್ಣವಾಗಿ ಭಗವಂತನ ಅನಂತಗುಣ ಪ್ರಾಂತ ಗಾಣದಲೆ ಇರುವ ರಮೆಯು ಪೂರ್ಣವಾಗಿ ಭಗವಂತ ಉಪಾಸನೆ ಮಾಡಲು ಶಕ್ಯಳಲ್ಲವಾದರೂ ಬ್ರಹ್ಮಾದಿಗಳಿಗಿಂತಲೂ ಹೆಚ್ಚಿನ ಉಪಾಸನೆ ಮಾಡುವಳಾದರೂ, ಶ್ರೀಹರಿಯ ನಖಾಗ್ರ ಗುಣಗಳ ಪಾರುಗಾಣದಲೆ ಆತ್ಯಾಶ್ಚರ್ಯಚಕಿತಳಾಗಿ ಗುಣೋಧದಿ=ಶ್ರೀಹರಿಯು ಅನಂತ ಗುಣ ಸಮುದ್ರನು, ಗುಣತ್ರಯ ವಿವರ್ಜಿತ=ಸತ್ವಾದಿ ಪ್ರಕೃತಿ ಗುಣಗಳಿಲ್ಲ ದವನು. ಜ್ಞಾನಾನಂದಾದಿ ಸಂಪೂರ್ಣ ಗುಣಪೂರ್ಣನು, ಸೋದರ ಸ್ಥಿತ ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು=ಬಹಿರಂಗ ವಿದ್ಯಮಾನವಾದ ಜಗತ್ತು, ಮತ್ತು ಅನಂತಾನಂತ ಬ್ರಹ್ಮಾಂಡಗಳನ್ನು ಜೀವರನ್ನು ತನ್ನ ಉದರದಲ್ಲಿ ಸ್ವಶಕ್ತಿಯಿಂದ ಧರಿಸಿದಾಗ್ಯೂ ಅಖಿಳ=ಸಮಸ್ತ ಬ್ರಹ್ಮಾಂಡಾದ್ವಿಲಕ್ಷ ಣನು=ಜಡವಾದ ಬ್ರಹ್ಮಾಂಡಗಳಿಗೂ, ಬ್ರಹ್ಮಾಂಡಗತವಾದ ಸಕಲ ಜೀವರಿಂದಲೂ ಅಂದರೆ ಜಡ ಚೇತನರಿಂದ, ವಿಲಕ್ಷಣನು=ಜಡ ಜೀವರ ಲಕ್ಷಣಕ್ಕೆ ವಿರೋಧವಾದ ಭಿನ್ನ ಗುರುತು ಉಳ್ಳವ. ನೂತನವಾದ ವಿಚಿತ್ರ ಲಕ್ಷಣ ಉಳ್ಳವನೆಂದು ಶ್ರೀರಮೆಯು ಅನಂತಗುಣ ಅಂತ್ಯ ಗಾಣದೆ ಸಾಧು ಸಮ್ಮತವೆನಿಪ=ಜ್ಞಾನಿಗಳಿಗೆ ಸಮ್ಮತವಾದ ಜ್ಞಾನಿಗಳಿಗೆ ಮಾನ್ಯವಾದ ಶ್ರುತಿ ಯಿಂದ ಉಪಾಸಿಸುತ್ತಾಳೆ. “ನಿಷುಸೀದಗಣಪತಿಯೆಂಬ ಶ್ರುತಿ ಪ್ರತಿಪಾದಿ ಸುವದನವರತವನ ಗುಣ ಪ್ರಾಂತ ಗಾಣದಲೆ=ಈ ಶ್ರುತಿಯು ಭಾಗವತ ದಶಮಸ್ಕಂಧ ಉತ್ತರಾರ್ಧ ಶ್ರುತಿಗೀತೆಯಲ್ಲಿ ಬಾದರಾಯಣರು ನಿರೂಪಿಸಿ ರುತ್ತಾರೆ. **ವಿಶೇಷ ಸೂಚನೆ “ನಿಷುಸೀದ ಗಣಪತೇ ಗಣೇಷು**

**ತ್ವಾಮಾಹುರ್ವಿಪ್ರತಮಂ ಕವಿನಾಮ್ ॥ ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವಂ ಚಿತ್ರಮರ್ಚ"** ವ್ಯಾಖ್ಯಾನ= **ಹೇ ಗಣಪತೇ** ದೇವಗಣಪತೇ ಇಂದ್ರಿಯಗಣಪತೇ **ಹೇ ಮಘವನ್** ಮಖವನ್ ತತ್ಪತೇ ಧನಪತೇ । **ಗಣೇಷು**=ದೇವಗಣೇಷ್ವಿಂದ್ರಿಯ ಗಣೇಷು ಚ ನಿಷುಸೀದ=ಅತಿ ಸಮ್ಯಗುಪವಿಶ । ತತ್ರ ತತ್ರ ಸ್ಥಿತ್ವಾ ತತ್ಪ್ರೇರ್ಯೈ ತೈಸ್ತತ್ಕಾರ್ಯಂ ಕಾರಯೇತ್ಯರ್ಥಃ । ಅನ್ಯಸ್ಯೈವ ತತ್ರ ಸ್ಥಿತಿಃ ಕಿನ್ನಸ್ಯಾದಿತ್ಯಾ ಶಂಕ್ಯ ತಥೈವ ಸರ್ವೋತ್ತಮ ಸ್ಸ್ಯಾದಿತ್ಯಾಹ ॥

**ತ್ವಾಮಾಹುರ್ವಿಪ್ರತಮಂ ಕವೀನಾಮಿತಿ ॥** ಕವೀನಾಂ ಜ್ಞಾನಿನಾಂ ಮಧ್ಯೇ ತ್ವಾಮೇವ ವಿಪ್ರತಮಂ ವಿಶೇಷೇಣ ಪ್ರಕೃಷ್ಟತಮಂ ಸರ್ವೋತ್ತಮ ಮಿತಿ ಯಾವತ್ । ಆಹುಜ್ಞಾನಿನೋ ವೇದಾ ವಾ ತತ್ರ ಸ್ಥಿತ್ವಾ ಕಿಂ ಕಾರ್ಯಮಿತಿ ಶಂಕಾಯಾ ಮುಕ್ತಮೇವ ವಿವೃಣೋತಿ । **ನೇತಿ ।** ತ್ವ (ತ್ವ) ತ್ವತ **ಋತೇ** ಆರೇ ದೂರೇ ಸಮೀಪೇ ದೂರಸ್ಥೈಃರ್ವೈತ್ಯೈಃ ಸಮೀಪಸ್ಥೈಃ ರ್ದೇವೈಃ ರ್ವಾ ಕಿಂಚನ ಕ್ರೀಯತೇ ಕಸ್ಮಿನ್ನಪಿ ವಿಷಯೇ ಸ್ವಾತಂತ್ರ್ಯಂ ನಾಸ್ತೀತಿ ಭಾವಃ ॥ ಫಲಿತಮಾಹ ॥ **ಮಹಾಮಿತಿ ।** ಮಹಾಂ ಮಹಪೂಜಾಯಾಂ । ಪೂಜ್ಯತ್ವೇ ಹೇತುಮಾಹ । ಅರ್ಕ ಜ್ಞಾನಸ್ವರೂಪಂ ಚಿತ್ರಂ ತತ್ರ ತತ್ರ ಸ್ಥಿತ್ವಾ ವಿಚಿತ್ರ ಕಾರ್ಯಕರ್ತಾರಂ **ತ್ವಾಂ** ತ್ವಾಮೇವಾ ರ್ಚಯಂತಿ ॥ (ಛಲಾರಿ ಟಿಪ್ಪಣಿ)

**ಭಾವಸೂಚನ :—**ವೇದೇತಿ । ಅಸ್ಯ ಗಣಪತಿ ಪ್ರತಿಪಾದಕತ್ವೇಽಪಿ ಶ್ರೀಕಾಂತ ಪರತ್ವರೂಪ ಪರಮ ಮುಖ್ಯಾರ್ಥಃ । ಶ್ರುತಿಗೀತಾ ಛಲಾರಿ ಪ್ರದರ್ಶಿತಃ ತತ್ರೈವ ಧ್ಯೇಯಃ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವೇದ" ಇತಿ ॥ ಅನುಪಾಸ್ಯ ಸಾಕಲ್ಯೇನ ॥ "ತ್ವಜ್ಞಲವಣಾದಿ ಪೂಜಾಂ ತ್ವಮೇವ ಕುರು" ಇತಿ ಬೋಧಕ ಚಿತ್ರಪದ ಸತ್ವಾತ್ ಏತದುದಾ ಹೃತಮ್ ॥ ೫ ॥

## ಕನ್ನಡಾರ್ಥ

" ವೇದಮಾನಿ ರಮಾನುಪಾಸ್ಯ " ಎಂಬ ಪದಕ್ಕೆ " ವೇದಾಭಿಮಾನಿ ಯಾದ ರಮಾದೇವಿಯು ಪರಮಾತ್ಮನನ್ನು ಉಪಾಸಿಸುವದಿಲ್ಲ " ಎಂದು ಅರ್ಥಮಾಡಬಾರದು. ರಮಾದೇವಿಯು ಪರಮಾತ್ಮನನ್ನು ಮಿಕ್ಕವರಿಗಿಂತ ಹೆಚ್ಚಾಗಿ ಉಪಾಸಿಸುತ್ತಾಳೆ. ಆದುದರಿಂದ ಬಹು ಪ್ರಮಾಣ ವಿರೋಧವು ಬರುತ್ತದೆ. ಹಾಗಾದರೆ ಅನುಪಾಸ್ಯ ಎಂಬುದಕ್ಕೆ ಏನು ಅಭಿಪ್ರಾಯ ವೆಂದರೆ—" ಸಂಪೂರ್ಣವಾಗಿ ಉಪಾಸಿಸಲು ಶಕ್ತಳಲ್ಲ " ಎಂದು ತಿಳಿಯ ಬೇಕು. ಮಿಕ್ಕವರಿಗಿಂತ ಹೆಚ್ಚಾಗಿ ಉಪಾಸಿಸುತ್ತಿದ್ದರೂ ಪರಮಾತ್ಮನ ಗುಣಕ್ರಿಯಾದಿಗಳನ್ನು ಸಂಪೂರ್ಣ ಹಾಗೂ ಸಕಲವಾಗಿ ತಿಳಿದಿರುವದಿಲ್ಲ ವಾದುದರಿಂದ ಸಂಪೂರ್ಣ ಉಪಾಸನೆಯನ್ನು ಮಾಡಲು ರಮಾದೇವಿ ಯವರಿಗೂ ಸಾಧ್ಯವಿಲ್ಲ "ವೆಂದು ತಾತ್ಪರ್ಯವನ್ನು ತಿಳಿಯಬೇಕು.

ಪರಮಾತ್ಮನ ಗುಣಗಳ ಕೊನೆಯನ್ನು ಇಷ್ಟು ಎಂಬ ಕೊನೆಯ ನಿರ್ಣಯವನ್ನು ಯಾರೂ ಕಾಣಲು ಸಮರ್ಥರಲ್ಲ. ಈ ವಿಷಯಾಂಗವಾಗಿ ಪರಮಾತ್ಮನ ಅಗಮ್ಯ ಮಹಿಮೆಯನ್ನು ತಿಳಿಸಲು " ನಿಷುಸೀದ " ಎಂಬ ಶ್ರುತಿವಾಕ್ಯವನ್ನೇ ದಾಸರಾಯರು ಏಕೆ ಉದಾಹರಿಸಿದರು ? ಎಂದರೆ— ಪರಮಾತ್ಮನೇ ತನ್ನ ವಿಷಯಕವಾದ ಶ್ರವಣ ಮನನ ಧ್ಯಾನ ಮುಂತಾದ ರೂಪವಾದ ತನ್ನ ಪೂಜೆಯನ್ನು ತಾನೇ ಮಾಡಿಕೊಳ್ಳುತ್ತಾನೆ ಎಂಬ ಅರ್ಥವನ್ನು ತಿಳಿಸುವ " ಚಿತ್ರ " ಎಂಬ ಪದವಿರುವದರಿಂದ ಈ ಶ್ರುತಿ ವಾಕ್ಯವನ್ನು ಪರಿಗ್ರಹಿಸಿರುತ್ತಾರೆ || ೫ ||

**ಅವತರಣಿಕಾ :—**ಇಂದ್ರಿಯಗಣ ಜೀವಗಣಕ್ಕೆ ಬಿಂಬ, ನಿಯಾಮಕ ನಾದ ಶ್ರೀಹರಿಯು ಸರ್ವೋತ್ತಮತ್ವ ಸ್ವತಂತ್ರ ಸ್ವತಪ್ರೇರಕನಾಗಿರುವನು, ಮುಂದೆ ಸೃಷ್ಟಿಯ ಕ್ರಮಾನುಸಾರವಾಗಿ, ಪುರುಷರೂಪತ್ರಯ ತಾನೇ ಆಗಿ ಮೂರು ಸ್ಥಳದಲ್ಲಿದ್ದು ಮುಂದೇ ಅಂತರ ಬಾಹಿರ ಕಾರ್ಯ ಮಾಡುತ್ತಾ ನೆಂಬುದನ್ನು ಸವಿಸ್ತರ ಬಣ್ಣಿಸುತ್ತಾರೆ.

**ಕರೆಸುವನು ಮಾಯಾರಮಣ ತಾ।**
**ಪುರುಷರೂಪದಿ ತ್ರಿಸ್ಥಳಗಳೊಳು।**
**ಪರಮ ಸತ್ಪುರುಷಾರ್ಥದ ಮಹತತ್ವದೊಳಗಿದ್ದು॥**
**ಸರಸಿಜ ಭವಾಂಡ ಸ್ಥಿತ ಸ್ತ್ರೀ।**
**ಪುರುಷ ತನ್ಮಾತ್ರಗಳ ಏಕೋ।**
**ತ್ತರ ದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದ ॥ ೬ ॥**

**ಪದ್ಯಾರ್ಥ** :—ಮಾಯಾರಮಣ=ಮಾಯಾ ಶ್ರೀ ಲಕ್ಷ್ಮಿಯು, ಶ್ರೀಹರಿಯ ಪ್ರಥಮ ಪ್ರಾದುರ್ಭಾವ ವಾಸುದೇವರೂಪಕ್ಕೆ ಪರಾಧೀನ ಪ್ರಾದುರ್ಭಾವಳಾದ ರೂಪ ಮಾಯಾದೇವಿಯಂತೆ ಶ್ರುತಿಯು ಪೊಗಳುತ್ತವೆ. ಇಂತಹ ಮಾಯಾದೇವಿಗೆ ರಮಣ=ಶ್ರೀ ವಾಸುದೇವನು, ಮುಕ್ತಬಿಂಬನು ತುರಿಯ ಎಂತ ಮೊದಲನೆ ಪದ್ಯದಲ್ಲಿ ನಿರೂಪಿಸಿದಂತೆ ಶ್ರೀ ವಾಸುದೇವ ನಾಮಕ ಶ್ರೀಹರಿಯೇ ತಾ=ತಾನು ಸ್ವತಃ ಮೂಲರೂಪಕ್ಕೂ ಪ್ರಾದುರ್ಭಾವ ರೂಪಗಳಿಗೂ ಅತ್ಯಂತ ಅಭಿನ್ನನಾದುದರಿಂದ, ತಾ=ತಾನೇ ಎಂದು ಬಹು ಗರ್ಭಿತಾರ್ಥ ಪ್ರಯೋಗ ದಾಸಾರ್ಯರು ಮಾಡಿರುವರು. ಪುರುಷ ರೂಪದಿ=ಪುರುಷರೂಪ ತ್ರಯವೆಂದು ೩ನೇ ಸಂಧಿ ಆದ್ಯಪದ್ಯದಲ್ಲಿ ವಿವರಿಸಿ ದಂತೆ ಪುರುಷಃ=(ವೈಕುಂಠಃ ಪುರುಷಃ ಪ್ರಾಣ ವಿಷ್ಣು ಸ. ನಾಮ) ಪುರುಷು ಬಹುಷು ಸೀದತೀತಿ। ಪುರೂಣಿ ಫಲಾನಿ ಸನೋತಿ ದದಾತೀತಿವಾ-ಪುರೂಣಿ ಭೂತಾನಿ ಅಸ್ಯನಿಶ್ವಸತೀತಿವಾ ಪುರುಷಃ॥ (ವಿದ್ಯಾಧಿರಾಜೀಯ)—ಹೀಗೆ ಪುರುಷ ಶಬ್ದವಾಚ್ಯನಾದ ಹರಿಯು, "ಪ್ರಥಮಂಮಹ ತತ್ಸೃಷ್ಟಃ ದ್ವಿತೀಯ ಮಂಡಸಂಸ್ಥಿತಂ। ತೃತೀಯಂ ದೇಹಿನಾಂ ದೇಹೇ ಪುರುಷ ತ್ರಯ॥ ಮುದಾಹೃತಂ" ಎಂಬುವ ಪ್ರಮಾಣಾನುಸಾರ, ತ್ರಿಸ್ಥಳಗಳೊಳು= ಮೂರು ಸ್ಥಾನದಲ್ಲಿ ಅಂದರೆ, ೧) ಮಹತತ್ವದಲ್ಲಿ, ೨) ಬ್ರಹ್ಮಾಂಡಾಂತ ಸ್ವರೂಪ, ೩) ಸಕಲ ಜೀವರಲ್ಲಿ ಹೀಗೆ ಮೂರು ಸ್ಥಳದಲ್ಲಿದ್ದು ಮಹತ್ತತ್ವ, ಸರಸಿಜ ಭವಾಂಡ=ಬ್ರಹ್ಮಾಂಡ ಮತ್ತು ಬ್ರಹ್ಮಾಂಡ ಸ್ಥಿತ ಸ್ತ್ರೀ ಪುರುಷರ ದೇಹದಲ್ಲಿ ಇದ್ದು, ಸ್ತ್ರೀ ಪುರುಷರ ದೇಹದಲ್ಲಿಪ್ಪ, ಏಕೋತ್ತರ ದಶ=ಹತ್ತಕ್ಕೆ ಒಂದು ಹೆಚ್ಚಾದ, ಪಂಚ ಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮನಸ್ಸು, ಹೀಗೆ ಹನ್ನೊಂದು ಇಂದ್ರಿಯಗಳನ್ನೂ ತನ್ಮಾತ್ರಾಗಳ=ಶಬ್ದ, ಸ್ಪರುಶ,

ರೂಪ, ರಸ, ಗಂಧ ಈ ವಿಷಯಗಳನ್ನು ಪುಟ್ಟಿಸುವ ಐದು ಮಾತ್ರಾಗಳನ್ನು, ಮಹಾಭೂತಗಳ ನಿರ್ಮಿಸಿದ ಪಂಚಭೂತಾತ್ಮಕ ಶರೀರದಲ್ಲಿ ಪೃಥಿವ್ಯಾದಿ ಪಂಚಭೂತಗಳನ್ನು ನಿರ್ಮಾಣ ಮಾಡಿದ, ಈ ವಾಸುದೇವನಾಮಕ ಪುರುಷ ರೂಪಿ ಹರಿಯೇ ಪರಮಸತ್ಪುರುಷಾರ್ಥದ=ಜೀವಾಂತರ್ಯಾಮಿಯಾಗಿದ್ದು, ಜೀವರಿಗೆ ಲಿಂಗ ಉಪಚಯದ್ವಾರಾ, ಬ್ರಹ್ಮಾಂಡದಲ್ಲಿ ಸೃಷ್ಟಿಗೆ, ಅನಿರುದ್ಧ ಸ್ಥೂಲ ಶರೀರಗಳನ್ನು ಕೊಟ್ಟು, ಸಾಧನಮಾಡಿಸಿ, ತನ್ನ ಧ್ಯಾನ ಉಪಾಸನೆ ಜೀವರಲ್ಲಿ ನಿಂತು ತಾನೇ ಮಾಡಿಸಿಕೊಂಡು, ಜೀವರಿಗೆ ಪರಮ ಸತ್ಪುರು ಷಾರ್ಥದ=ಉತ್ತಮವಾದ ದ್ವಿದಳಾತ್ಮಕ ಮುಕ್ತಿ ಎಂಬೋ ಪುರುಷಾರ್ಥ ವನ್ನು ಕೊಟ್ಟು ಆನಂದವೀವನು, ಈ ಬಿಂಬನೇ ಎಂದು ಶ್ರೀಹರಿಯ ಅಪಾರ ಮಹಿಮೆ ಸ್ತೋತ್ರಗೈದಿದ್ದಾರೆ.

**ಭಾವಸೂಚನ :—**ಕರೆಸುವೇತಿ ॥ ಶ್ರೀಹರಿಗೆ ಪುರುಷರೂಪತ್ರಯ ೧) ಮಹತ್ತತ್ವ ನಿರ್ಮಾತೃ ತದಂತರ್ಗತ, ೨) ಮತ್ತೊಂದು ಬ್ರಹ್ಮಾಂಡಂತ ರ್ಗತ ೩) ಮೂರನೇದು ಸಕಲ ಜೀವರ ಬಿಂಬಭೂತ ಅದಕ್ಕೆ ಪ್ರಾಜ್ಞಯೆಂತ ನಾಮ ॥ ತದುಕ್ತಂ ॥ ನಸಾಮಾನ್ಯದಪೀತ್ಯುಪಾಸನಾಪಾದೀ ॥ ತ್ರಯಃ ತ್ರಿಂಶದಧಿಕರಣೀಯ ಶ್ರುತ್ಯರ್ಥ ರತ್ನ ಮಾಲಾಯಾಂ ॥ "ವಿಷ್ಣೋಸ್ತು ಪುರುಷಾಖ್ಯಾನಿ ತ್ರೀಣಿರೂಪಾಣ್ಯತೋ ವಿದುಃ ॥ ಪ್ರಥಮಂ ಮಹತ್ಸ್ರಷ್ಟೃ ದ್ವಿತೀಯಂ ತ್ವಂಡಸಂಸ್ಥಿತಮ್ । ತೃತೀಯಂ ದೇಹಿನಾಂ ದೇಹೇ" ತಾನಿ ಜ್ಞಾತ್ವಾ ವಿಮುಚ್ಯತೇ ॥ ತೃತೀಯ ಪುರುಷಾಖ್ಯಃ ಪ್ರಾಜ್ಞಮೇವ ಜೀವಾನಾಂ ಬಿಂಬಮಿತಿ ವದಂತೀತಿ ॥ ೬ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕರೆಸುವನು" ಇತಿ ॥ "ತ್ರಿಃ"–"ತ್ರಿಸ್ಥಲ" ಮಹದಂಡ ಸರ್ವೇಷು ॥ ಉಕ್ತಂ ಸ್ಮಾರಿತಂ ಮಾತ್ರ ರೂಪಾದಿ ॥ ೬ ॥

### ಕನ್ನಡಾರ್ಥ

ಮಹತ್ತತ್ವ ಬ್ರಹ್ಮಾಂಡ ಸರ್ವರು ಹೀಗೆ ಮೂರು ಸ್ಥಳಗಳನ್ನು ತಿಳಿಯಬೇಕು. ಇವರಿಂದ ಒಮ್ಮೆ ಪುರುಷನಾಮಕನಾಗಿ ಅವತರಿಸಿ

ಶ್ರೀ ಮಾಯಾ ನಾಮಕ ಲಕ್ಷ್ಮಿಯಲ್ಲಿ ವೀರ್ಯಾಧಾನ ಮಾಡಿದ್ದು, ಅನಂತರ ಪ್ರಕೃತಿಯಲ್ಲಿ ಗುಣ ವೈಷಮ್ಯವಾಗಲು ಬ್ರಹ್ಮದೇವರ ದೇಹವಾದ ಮಹತ್ತತ್ತ್ವವನ್ನು ನಿರ್ಮಿಸಿ ಅಲ್ಲಿ ಸ್ಥಿತನಾದದ್ದು, ಅನಂತರ ಬ್ರಹ್ಮಾಂಡವನ್ನು ನಿರ್ಮಿಸಿ ಅಲ್ಲಿ ನಿಂತು ಇಂದ್ರಿಯಾದಿಗಳನ್ನು ನಿರ್ಮಿಸಿದ್ದು ಎಂಬ ಸಂಗತಿಗಳು ಸ್ಮಾರಿತವಾಗುತ್ತವೆ. ॥ ೬ ॥

**ಅವತರಣಿಕಾ :**—ಬಿಂಬನಾದ ಶ್ರೀಹರಿಯೇ ಪುರುಷರೂಪದಿಂದ ಶ್ರೀ ಭೂದುರ್ಗೆಯರಿಂದ ತ್ರಿಗುಣಬದ್ಧವಾದ ಲಿಂಗದೇಹದಲ್ಲಿ ಕಾರಣನಾಗಿದ್ದು ಜೀವರಿಗೆ ಪಂಚತನ್ಮಾತ್ರಾಗಳ ದ್ವಾರಾ ಆಶಾಮೋಹಲೋಭಾದಿಗಳನ್ನು ಪುಟ್ಟಿಸುವನೆಂದು ಈ ಪದ್ಯದಿಂದ ನಿರೂಪಿಸುತ್ತಾರೆ.




**ಈ ಶರೀರಗ ಪುರುಷ ತ್ರಿಗುಣದಿ ।**
**ಸ್ತ್ರೀ ಸಹಿತ ತಾನಿದ್ದು ಜೀವರಿ ।**
**ಗಾಶೆ ಲೋಭಾಜ್ಞಾನ ಮದಮತ್ಸರ ಕುಮೋಹಕ್ಷುಧಾ ॥**
**ಹಾಸ ಹರ್ಷಸುಷುಪ್ತಿ ಸ್ವಪ್ನ ಪಿ ।**
**ಪಾಸ ಜಾಗ್ರತಿ ಜನ್ಮ ಸ್ಥಿತಿ ಮೃತಿ ।**
**ದೋಷ ಪುಣ್ಯ ಜಯಾಪಜಯ ದ್ವಂದ್ವಗಳ ಕಲ್ಪಿಸಿದ ॥ ೭ ॥**

**ಪದ್ಯಾರ್ಥ :**—ಈ ಶರೀರಗ = ಈ ಜೀವಾಂತರ್ಯಾಮಿ ಬಿಂಬನಾದ ಹರಿಯು ಪುರುಷರೂಪದಿಂದ, ತ್ರಿಗುಣದಿ = ಸತ್ವ, ರಜ, ತಮೋ ಮೂರು ಗುಣಮಯ ಲಿಂಗದಲ್ಲಿ ಸ್ತ್ರೀಸಹಿತ, ಶ್ರೀ, ಭೂ, ದುರ್ಗೆಯರು ತ್ರಿಗುಣಾಭಿಮಾನಿ ಲಕ್ಷ್ಮೀರೂಪಗಳು ಇವರಿಂದ ತಾನಿದ್ದು = ತಾನೇ ಲಿಂಗದಲ್ಲಿ ಕಾರಣನಾಗಿದ್ದು ಸ್ಥೂಲದೇಹದಲ್ಲಿ ಕಾರ್ಯರೂಪವಾಗಿ ಜೀವರಿಗೆ, ಆಶೆ = ಅಪೇಕ್ಷೆ ಲೋಭ = ಅತ್ಯಾಶೆ ಕೃಪಣತೆ, ಅಜ್ಞಾನ = ವಿರುದ್ಧ ಜ್ಞಾನಮಜ್ಞಾನಂ, ಅಯತಾರ್ಥಜ್ಞಾನ, ಮದ = ಗರ್ವ ಸೊಕ್ಕು, ಹೆಮ್ಮೆ, ಮತ್ಸರ = ಅಸೂಯೆ ಹೊಟ್ಟೆಕಿಚ್ಚು, ಕುಮೋಹ = ಕೆಟ್ಟ ಮೋಹ, ಮೋಹನಂ ಮೋಹ = ಅವಿವೇಕ, ಕ್ಷುಧಾ = ಹಸಿವೆ, ಹಾಸ = ನಗೆ, ಹರ್ಷ = ಸಂತೋಷ, ಸುಷುಪ್ತಿ = ನಿದ್ರಾ, ಸ್ವಪ್ನ = ಕನಸು, ಪಿಪಾಸ = ಬಾಯಾರಿಕೆ, ನೀರಡಿಕೆ, ಜಾಗ್ರತಿ = ಎಚ್ಚರ,

(ಈ ಮೂರು ಜೀವನ ಅವಸ್ಥಾತ್ರಯಗಳು) ಜನ್ಮ=ಹುಟ್ಟುವಿಕೆ, ಸ್ಥಿತಿ= ಇರುವಿಕೆ, ಮೃತಿ=ಸ್ಥೂಲದೇಹ ವಿಯೋಗಕ್ಕೆ (ಸಾಯುವಿಕೆ ಎಂದು ಪ್ರಸಿದ್ಧ) ಚಿನ್ಮಯನಾದ ಜೀವನಿಗೆ ಮೃತಿ ಇಲ್ಲ. ದೋಷ=ಪಾಪ, ಪುಣ್ಯ=ಧರ್ಮ ಒಳ್ಳೆ ಕೆಲಸ, ಜಯ=ಗೆಲ್ಲುವಿಕೆ, ಅಪಜಯ=ಸೋಲುವಿಕೆ, ದ್ವಂದ್ವಗಳ= ಎರಡರನ್ನೂ ಕಲ್ಪಿಸಿದ=ಲಿಂಗದಲ್ಲಿ ಕಾರಣನಾಗಿ ತಾನೇ ಇದ್ದು ಬಾಹಿರ ಸ್ಥೂಲದಲ್ಲಿ ಕಾರ್ಯರೂಪಕ್ಕೆ ಇವೆಲ್ಲ ಗುಣಗಳನ್ನು ತಂದನೆಂದು ಭಾವ. ಗೀತೆಯಲ್ಲಿ ಬಹು ವಿಸ್ತಾರವಾಗಿದೆ. ಭಾವಸೂಚನಕಾರರು ವಿಶದೀಕರಿಸಿ ರುವರು.

**ಭಾವಸೂಚನ :—**ಈ ಶರೀರೇತಿ ॥ ತ್ರಿಗುಣದಿ, ಸಪ್ತಮಿಾ ॥ ದೀ ಎಂಬ ಪ್ರಯೋಗ ತೃತೀಯದಲ್ಲೂ ಷಷ್ಟಿಯಲ್ಲೂ ಸಪ್ತಮಿಯಲ್ಲೂ ಸಹ ವರ್ತಿಸುತ್ತದೆ. ಆಶೇತಿ ॥ ತದುಕ್ತಂ ಗೀತಾಯಾಂ ॥ "ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗ ಸಮುದ್ಭವಂ ॥ ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ॥ ಪ್ರಮಾದಾಲಸ್ಯ ನಿದ್ರಾಭಿಃ ಸ್ತನ್ನಿಬಧ್ನಾತಿ ಭಾರತ ॥ ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ॥ ರಜಸ್ಯೇತಾನಿ ಜಾಯಂತೇ ಪ್ರವೃದ್ಧೇ ಭರತರ್ಷಭ ॥ ಅಪ್ರಕಾಶೋ ಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ॥ ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ । ರಜಸಸ್ತು ಫಲಂ ದುಃಖಂ ಅಜ್ಞಾನಂ ಲೋಭ ಏವ ಚ । ಪ್ರಮಾದ ಮೋಹೌ ತಮಸೋ ಭವತೋಽಜ್ಞಾನಮೇವ ಚೇತಿ ॥ ೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ಶರೀರ" ಇತಿ ॥ "ಶ್ರೀ" ಇತಿ ॥ "ಶ್ರೀಃ ದೇವಬಂಧಿತಾ" ಇತ್ಯುಕ್ತೇಃ ॥ ಗೌಣ ಕಾರ್ಯಾಣಿ ಆಹ–"ಆಶೆ" ಇತಿ ॥ ೭ ॥

## ಕನ್ನಡಾರ್ಥ

ಶರೀರದಲ್ಲಿರುವ ಪುರುಷರೂಪಿಯ ಕಾರ್ಯಗಳನ್ನು ತಿಳಿಸುತ್ತಾರೆ— "ಈ ಶರೀರಗ" ಎಂಬ ಪದ್ಯದಿಂದ. "ಶ್ರೀದೇವಿಯು ದೇವತೆಗಳಿಗೆ

ಬಂಧಕಳಾಗಿರುತ್ತಾಳೆ" ಎಂದು ಹೇಳಿರುವದರಿಂದ "ಶ್ರೀಸಹಿತ"ನಾಗಿ ಹರಿಯು ಪುರುಷನಾಮಕನಾಗಿದ್ದು ಬಂಧಕ ಕಾರ್ಯಗಳನ್ನು ಅವಳಿಂದ ತಾನು ಮಾಡಿಸುವನು ಎಂದು ಅಭಿಪ್ರಾಯ. ಆಶಾ-ಲೋಭ ಮುಂತಾದ ದ್ವಂದ್ವಗಳು ತ್ರಿಗುಣ ಕಾರ್ಯಗಳು ಅವುಗಳನ್ನೂ ಪರಮಾತ್ಮನೇ ಶ್ರೀಸಹಿತ ನಾಗಿದ್ದು ಜೀವರಲ್ಲಿ ಹುಟ್ಟಿಸುತ್ತಾನೆ ಎಂದು ತಿಳಿಯಬೇಕು ||೭||

ಅವತರಣಿಕಾ :—ಬಿಂಬನಾದ ಶ್ರೀಹರಿಯು, ಲಿಂಗಉಪಚಯಮಾಡಿ ಜೀವರನ್ನು ಸೃಷ್ಟಿಗೆ ತಂದು, ಮಾಯಾಮೋಹವನ್ನು ಪುಟ್ಟಿಸಿ ಸಂಸಾರಕ್ಕೆ ಕಾರಣರನ್ನಾಗಿ ಮಾಡುವನು. ಸಾತ್ವಿಕರಿಗೆ ಶ್ರವಣ ಮನನಾದಿಗಳ ದ್ವಾರಾ ಭವ ಸಂಸಾರಮೋಚನ ಮಾಡಿಸುವನೆಂದು ಶ್ರೀಬಿಂಬನ ಮಹಾ ಮಹಿಮೆ ಕೊಂಡಾಡುತ್ತಾರೆ.

**ತ್ರಿವಿಧ ಗುಣಮಯ ದೇಹ ಜೀವಕೆ |**
**ಕವಚದಂದದಿ ತೊಡಿಸಿ ಕರ್ಮ |**
**ಪ್ರವಹದೊಳು ಸಂಚಾರಮಾಡಿಸುತಿಪ್ಪ ಜೀವರನಾ ||**
**ಕವಿಸಿ ಮಾಯಾರಮಣ ಮೋಹವ |**
**ಭವಕೆ ಕಾರಣನಾಗುವನು ಸಂ |**
**ಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ || ೮ ||**

**ಪದ್ಯಾರ್ಥ:**—ಜೀವಕೆ=ಜೀವನಿಗೆ, ತ್ರಿವಿಧ ಗುಣಮಯ ದೇಹ= ಸತ್ವ-ರಜ-ತಮೋ ಗುಣ ಪ್ರಕೃತಿ ರೂಪವಾದ ಅನಾದಿ ಲಿಂಗ ಶರೀರವು ಜೀವಕೆ ತಗಲದೇ ಇದ್ದೇ ಇರುವದು. ಇಂತಹ ಅನಾದಿ ಅನಿತ್ಯವಾದ ಲಿಂಗ ಶರೀರವನ್ನು, ಕವಚದಂದದಿ ತೊಡಿಸಿ=ಅಂಗಿಯಂತೆ ತೊಡಿಸಿದರೆ ಅಂಗಿಗೂ ಮೈಯಗೂ ಸಂಬಂಧವಾಗುತ್ತದೆಯೋ ಅದರಂತೆ ವಾಸುದೇವನಾಮಕ ಹರಿಯು (ಶ್ರೀ ಲಕ್ಷ್ಮಿ ಸ್ವೇದರೂಪಳಾದ) ತನ್ನ ಮೈ ಬೆವರಿನಿಂದ ಲಿಂಗ ದೇಹ ಉಪಚಯಮಾಡಿ ನೆನೆಸಿ ಜೀವನ ಚಿಚ್ಛರೀರಕ್ಕೆ ಸಂಬಂಧಮಾಡುವನು. ಜಡಕ್ಕೂ ಜೀವನಕ್ಕೂ ಸಂಬಂಧಮಾಡುವನು ಇದೇ ಶ್ರೀಹರಿಯ ಅಘಟಿತ ಶಕ್ತಿ, ಜೀವರನಾ=ಜೀವರನ್ನು, ಕರ್ಮಪ್ರವಾಹದೊಳು ಸಂಚಾರ ಮಾಡಿಸು

ತಿಪ್ಪ=ಅನಾದಿಕರ್ಮರೂಪವಾದುದನ್ನು ವೆಗ್ಗಳಿಸಿ, ಕರ್ಮವೆಂಬೋ ಮಹಾ ಪ್ರವಾಹ=ನೀರು ಹರಿಯಲ್ಲಿ, ಹರಿಯು, ಸಂಚಾರಮಾಡಿಸುತಿಪ್ಪ=ತಿರುಗಿಸು ತಿಪ್ಪನು, ಇದಲ್ಲದೆ, ಮಾಯಾರಮಣ=ವಾಸುದೇವನು ಮೋಹವ ಕವಿಸಿ= ಅಹಂಕಾರ ಮಮಕಾರ ನಾನು ನನ್ನದೆಂಬ ಮೋಹ ಭ್ರಾಂತಿಯನ್ನು, ಕವಿಸಿ=ಮುಸುಗು ಹಾಕಿ, ಭವಕೆ ಕಾರಣನಾಗುವನು=ಸಂಸಾರ ಸಮುದ್ರ ದಲ್ಲಿ ಮುಳಗಿ ತೇಲಿಸಲಿಕ್ಕೆ ಶ್ರೀಹರಿಯೇ ಮುಖ್ಯ ಕಾರಣನಾಗಿ ಸಂಸಾರ ದಲ್ಲಿ ಮುಳುಗಿಸುವನು. ಆದರೆ ಸಂಶ್ರವಣ ಮನನವ ಮಾಳ್ಪರಿಗೆ=ಸತ್ವ ಜೀವರಿಗೆ ಗುರುಗಳ ದ್ವಾರಾ, ತಾನೇ ಪ್ರೇರಿಸಿ, ತನ್ನ ಮಹತ್ಮೆ ಕೇಳಿಸು ವನು, ಕೇಳಿಸಿದ್ದು ಮನನಮಾಡಿಸಿ ಧ್ಯಾನೋಪಾಸನೆಮಾಡಿಸಿ, ಸತ್ವರಿಗೆ ಒಲಿದು ತನ್ನ ರೂಪವನ್ನು ತೋರಿಸಿ, ಅಪರೋಕ್ಷವಿತ್ತು ಸಂಚಿತಾಗಾಮಿ ಕರ್ಮನಾಶಮಾಡಿ, ಪ್ರಾರಬ್ಧಕರ್ಮ ಉಪಮರ್ದಮಾಡಿ, ಬ್ರಹ್ಮಣಾ ಸಹ ವಿರಜಾಸ್ನಾದಿಂದ ಭವಮೋಚಕನೆನಿಸುತಿಪ್ಪ=ಸಂಸಾರಕ್ಕೆ ಕಾರಣವಾದ ಲಿಂಗಾಂಗ ಬಿಡಿಸಿ, ಸ್ವರೂಪಾನಂದ ಸುಖಮುಕ್ತಿ ಕೊಡುವನು.

**ಭಾವಸೂಚನ :—**ತ್ರಿವಿಧೇತಿ ॥ ೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತ್ರಿವಿಧ" ಇತಿ ॥ "ದೇಹ" ಲಿಂಗ ॥ "ಕವಿಸಿ" ವ್ಯಾಪಿಸಿ ॥ "ಸಂಶ್ರವಣಂ"–ಭಕ್ತ್ಯಾ ಮುಹೂರ್ತಂ ವಾ ಅಹರಹಃ ॥ ಶ್ರವಣಂ ತ್ವತ್ಕೃತಂ ಚೇತ್ ಸರ್ವಮಪಿ ಸುದಿನಂ ಸಾರ್ಥಕಮ್ ॥ ಅಪರಥಾ ದುರ್ದಿನಮ್ ॥ ದ್ವಾದಶಾಧ್ಯಾಯೇ ವಿಷ್ಣುರಹಸ್ಯೆ "ದಿವಸೇ ಷಷ್ಠಿನಾಡಿಕೆ ॥ ಮುಹೂರ್ತಮಪಿ ನಿತ್ಯಶಃ ॥ ಸಂಕುಚ್ಯ ಸರ್ವಕರ್ಮಾಣಿ ಮಮ ಶ್ರವಣಮಾ ಚರೇತ್ ॥ ತೇನ ಸಾರ್ಥಕತಾಂ ಯಾತಿ ತದ್ದಿನಂ ತೇನ ಸಂಸೃತಿಃ ॥ ಸಾರ್ಥಕ್ಯಂ ಯಾತಿ ಜೀವನಾಂ ಅನ್ಯಥಾ ದುರ್ದಿನಂ ಭವೇತ್ ॥ ಇತಿ ॥ ೮ ॥

## ಕನ್ನಡಾರ್ಥ

ತ್ರಿವಿಧ ಗುಣಮಯ ದೇಹವೆಂದರೆ ಲಿಂಗದೇಹವೆಂದು ತಿಳಿಯಬೇಕು. ಭಕ್ತಿಯಿಂದ ಮಾಡುವ ಶ್ರವಣವು ಸಂಶ್ರವಣವೆನಿಸುತ್ತದೆ. ದಿನಾಲು,

ಒಂದು ಮುಹೂರ್ತವಾದರೂ ಹರಿಕಥಾ (ತತ್ವಗೋಷ್ಠಿ) ಶ್ರವಣಮಾಡಿದರೆ ಆ ದಿನಗಳು ಸುದಿನಗಳು ಮತ್ತು ಸಾರ್ಥಕಗಳಾಗುತ್ತವೆ. ಇಲ್ಲದಿದ್ದರೆ ದುರ್ದಿನಗಳಾಗುತ್ತವೆ.

ವಿಷ್ಣುರಹಸ್ಯದಲ್ಲಿ ೧೨ನೆಯ ಅಧ್ಯಾಯದಲ್ಲಿ–"ದಿವಸಕ್ಕೆ ೬೦ ನಾಡಿಗಳು (ಘಳಿಗೆಗಳು). ಅವುಗಳಲ್ಲಿ ದಿನಾಲು ಒಂದು ಮುಹೂರ್ತವಾದರೂ ಸಕಲ ಕರ್ಮಗಳನ್ನು ಸಂಕೋಚಮಾಡಿ, ನನ್ನ ವಿಷಯಕವಾದ ಕಥಾ ಶ್ರವಣವನ್ನು ಮಾಡು. ಅದರಿಂದ ಆ ದಿವಸವೂ ಜೀವರ ಸಂಸಾರಗಳೂ ಸಾರ್ಥಕವಾಗುತ್ತವೆ. ಇಲ್ಲದಿದ್ದರೆ–ಆ ದಿನವು ದುರ್ದಿನವೂ ಜೀವನವು ಅಸಾರ್ಥಕವೂ ಆಗುತ್ತದೆ" ಎಂದು ಭಗವಂತನ ವಚನವಿರುತ್ತದೆ. ||೮||

**ಅವತರಣಿಕಾ :—** ಹಿಂದಿನ ಪದ್ಯದಲ್ಲಿ ಶ್ರೀ ಬಿಂಬನಾದ ಶ್ರೀಹರಿಯ ಶ್ರವಣಮನನಾದಿಗಳನ್ನು ಮಾಡಲು ಭವಮೋಚಕನೆನಿಸುವನೆಂದು ಹೇಳಿ ಈ ಪದ್ಯದಲ್ಲಿ ಶ್ರವಣಮನನಾದಿ ಮಾಡಿ, "ಸಾಶನಾನಶನೋ ವಿಭು" ಎಂಬೋ ಪುರುಷಸೂಕ್ತಗತ ರೂಪೋಪಾಸನೆಯನ್ನು ಮಾಳ್ಪ ಭಕ್ತರಿಗೆ ತನ್ನ ನಿಜರೂಪ ತೋರುವನೆಂದು ಹೇಳುತ್ತಾರೆ.

**ಸಾಶನಾಹ್ವಯ ಸ್ತ್ರೀ ಪುರುಷರೊಳು |**
**ವಾಸವಾಗಿಹ್ಯನೆಂದರಿದು ವಿ |**
**ಶ್ವಾಸ ಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರ ||**
**ಕ್ಲೇಶ ನಾಶನ ಅಚಲಗಳೊಳು ಪ್ರ |**
**ಕಾಶಿಸುತಲಿಹ ನಶನ ರೂಪೋ |**
**ಪಾಸನವ ಮಾಳ್ಪರಿಗೆ ತೋರ್ಪನು(ದು) ತನ್ನ ನಿಜರೂಪ ||೯||**

**ಪದ್ಯಾರ್ಥ :—** ಸಾಶನಾಹ್ವಯ=ಸ+ಅಶನ=ಸಾಶನ ನಾಮಕ ಹರಿಯು, ಅಶನೇಚ್ಛಾ ಉಳ್ಳವ, ಅಂದರೆ ಜೀವರಿಗೆ ಕ್ಷುತ್ ಪಿಪಾಸಗಳನ್ನು ಪ್ರಷ್ಟೈಸಿ–ಅಶನ ಭೋಜನದಿಂದ ಸಂತೃಪ್ತಿ ಬಡಿಸಿ, ತನ್ನ ಧ್ಯಾನೋಪಾಸನ ಮಾಳ್ಪರಿಗೆ, (ಮನಕೆ ಬಂದುದನುಂಡುಂಡಣಿಸಿ, ಸಂಹನನಕುಪಜಯಕರಣಕೆ ಆನಂದ, ಅನಿಮಿಷರಿಗೆ ಆತ್ಮಪ್ರದರ್ಶನ ನೀವ ಹರಿ ಎಂದು ೬ನೇ ಸಂಧಿ ಅಧ್ಯ

ಪದ್ಯದಲ್ಲಿ ಹೇಳಿರುವಂತೆ) ಸಾಶನ ನಾಮಕ ಹರಿಯು, ಚೇತನರಾದ ಸ್ತ್ರೀ ಪುರುಷರೊಳು=ಹೆಣ್ಣುಗಂಡು ಈ ಜಾತಿಯ ಮಾನವರಲ್ಲಿ, ವಾಸವಾಗಿಹ ನೆಂದರಿದು, ಸಂತತ ನೆಲಸಿಹನೆಂದು ತಿಳಿದು, ವಿಶ್ವಾಸಪೂರ್ವಕ=ಭಕ್ತಿ ಪುರಸ್ಸರ ಪಂಚಭೇದ ತಾರತಮ್ಯ ಜ್ಞಾನದಿಂದ, ಸ್ವಾವರೋತ್ತಮರ=ತನ್ನ ಕಿಂತ ಅವರರು, ತನ್ನಕಿಂತಲೂ ಉತ್ತಮರಲ್ಲಿ ಸಾಶನನಾಮಕ ಹರಿ ಇರುವ ನೆಂದು, ಭಜಿಸಿ=ಆರಾಧಿಸಿ, ಪೂಜಿಸಿ, ಧ್ಯಾನೋಪಾಸನಗೈದು, ತೋಷಿಸು= ಪ್ರೀತಿ ಬಡಿಸು, ಶ್ರೀಹರಿಯು ಸುಪ್ರಸನ್ನನಾಗುವಂತೆ ಸ್ತೋತ್ರ ಮಾಡಿದರೆ, ಕ್ಲೇಶನಾಶನ=ಆಪತ್ತು, ಎಡರುಕಷ್ಟಗಳನ್ನು ದೂರ ಮಾಡುವನು, ಪ್ರಕಾಶಿ ಸುತಲಿಹ ನಶನ ಅಚಲಗಳೊಳು=ಅಚಲ=ಜಡಗಳಲ್ಲಿ ಅನಶನ=ಅಶ ನೇಚ್ಛಾ ಇಲ್ಲದಿರುವನು, ಜಡಗಳಲ್ಲಿ ಜ್ಞಾನೇಚ್ಛಾಸ್ವರೂಪಶಕ್ತಿ ಇಲ್ಲೇ ಇಲ್ಲದ ಕಾರಣ ಅಚಲಗಳೊಳು (ಇಲ್ಲಿ ಸಾಮೂಹಿಕ ನಪುಂಸಕ ಲಿಂಗ ಪ್ರಯೋಗ ಮಾಡಿದ್ದಾರೆ. ವೇದಾರ್ಥವೂ ಜಡಗಳೆಂದು ಹೇಳುತ್ತದೆ. ಆದರೆ ವ್ಯಾಸ ದಾಸ ಸಿದ್ಧಾಂತ ಕೌಮುದಿಕಾರರು, ಅನಶನರೂಪ ದೇವತೆಗಳಲ್ಲಿ ಎಂದು ಭಾಗವತ ತಾತ್ಪರ್ಯವಾಕ್ಯ ಉದಾಹರಿಸಿ ಬರೆದಾರೆ. ದೇವತೆಗಳು, ಪ್ರಸಿ ದ್ಧಾನ್ನ ಭೋಕ್ತರಲ್ಲ, ಅನಶನರು ಎಂದು ಕರೆಸುತ್ತಾರೆ. ಆದಕಾರಣ ಈ ಅರ್ಥವಾದರೂ ಸರಿ. ಆದರೆ ದೇವತೆಗಳಾದರೂ ಸ್ವಾಹಾರೂಪವಾದ ಅಮೃ ತಾನ್ನ ಭೋಕ್ತರು) ಅಲ್ಲದೆ ಇಲ್ಲಿ ದಾಸಾರ್ಯರು ಚೇತನ ಜಡ ವಿವಿಕ್ಷಾ ಭೇದದಿಂದ ಶ್ರುತ್ಯರ್ಥಬೋಧಕವಾಗಿ ಸಾಶನ-ಅನಶನವೆಂಬ ಎರಡು ರೂಪ ಗಳನ್ನು ಧೇನಿಸಲು ಹೇಳಿದ್ದಾರೆ. ಜ್ಞಾನಿಗಳು ವಿಮರ್ಶೆ ಮಾಡಿ ನಿರ್ಧರಿ ಸುವದು.

ಕಂಠರವೀಣವಾಗಿ ಅಚಲಗಳೊಳು ಎಂತು ಹೇಳಿದ್ದಾರಾದಕಾರಣ ಜಡಗಳೇ ಅಂತ ಅರ್ಥ ಸಮಂಜಸ ತೋರುತ್ತದೆ. ಹೀಗೆ ಜಡಗಳಲ್ಲಿ ಅನಶನ ರೂಪದಿಂದ ಪ್ರಕಾಶಿಸುತ್ತಾನೆ, ಹೊಳೆಯುತ್ತಾನೆ. ಪ್ರಕೃತಿರೂಪ ವಾದ ಜಡಕ್ಕೆ ಶೋಭೆಯನ್ನು ತಂದುಕೊಡುತ್ತಾನೆಂದು ಹೀಗೆ ಚೇತನಗಳಲ್ಲಿ ಸಾಶನರೂಪ ಜಡಗಳಲ್ಲಿ ಅನಶನರೂಪ, ಉಪಾಸನೆ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ="ಉಪಾಸ್ಯತೆ ಇತ್ಯುಪಾಸನಂ ಉಪಾಸನಂ ಸೇವನಮುಪಾ ಸನಾ" ಧ್ಯಾನದಲ್ಲಿ ಕುಳಿತು, ಆತ್ಮಸಮರ್ಪಣರೂಪ, ಸ್ವಾಮಿ ನೀನು ಈಶ,

ನಾನು ದಾಸ, ಸರ್ವದಾ ನಿನ್ನಧೀನ, ಮಮಸ್ವಾಮಿ, ಸರ್ವಸ್ವಾಮಿ, ಎಂದು ಉಪಾಸನೆ ಮಾಡುವರಿಗೆ, ತೋರುವನು ತನ್ನ ನಿಜರೂಪ=ಬಿಂಬರೂಪಿಯಾದ ಹರಿಯು, ಜೀವಾಂತರ್ಯಾಮಿಯಾಗಿದ್ದ ತನ್ನ ನಿಜ ಸತ್ಯ ನಿತ್ಯ ನಿಜಃ=ನಿರ್ಜಾಯತೆ ಇತಿ ನಿಜ=ಪ್ರಾದುರ್ಭಾವ ನಿತ್ಯಾಭೇದರೂಪವನ್ನು ತೋರುವನು=ಅಪರೋಕ್ಷೀಕರಿಸುವನು.

**ಭಾವಸೂಚನ :—** || ಸಾಶನೇತಿ || ೯ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸಾಶನ" ಇತಿ || ಸಾಶನಾಃ ಮಾನವಾಃ || ಅನಶನಾಃ ದೇವಾಃ || ಸಾಶನೇಷು ಸಂಸ್ಥೈವ್ಯ ದೇವೇಷು ಭಜನೀಯಃ ಇತ್ಯರ್ಥಃ || "ತ್ರಿಪಾತ್ ಸ ಏವ ಭಗವಾನ್ ಸರ್ವ ಪ್ರಾಣಿಷು ಸಂಸ್ಥಿತಃ || ನಿರನ್ನೇಷು ಚ ವಿದ್ವತ್ಸು ತ್ರಿದಶೇಷ್ಟಿ ತರೇಷು ಚ" || ಇತಿ ದ್ವಿತೀಯ ತಾತ್ಪರ್ಯೇ || ೯ ||

## ಕನ್ನಡಾರ್ಥ

ಸಾಶನ ನಿರಶನ; ಚಲ ಅಚಲ; ಇವುಗಳಲ್ಲಿ ಬಿಂಬರೂಪಿಯನ್ನು ಉಪಾಸಿಸುವದೆಂದು ನಿರೂಪಿಸುತ್ತಾರೆ–"ಸಾಶನ" ಎಂಬ ಪದ್ಯದಿಂದ ಅನ್ನ ಮುಂತಾದ ಅಶನಗಳಿಂದ ಜೀವಿಸುವದರಿಂದ ಮಾನವರಿಗೆ ಸಾಶನರೆನ್ನುತ್ತಾರೆ. ದೇವತೆಗಳು ನಿರಶನರು ಮಾನವಪ್ರಾಣಿಯಲ್ಲಿ ಇರುವ ಸಾಶನ ನಾಮಕ ಹರಿಯನ್ನು ಪ್ರೀತಿ ವಿಶ್ವಾಸ ಪೂರ್ವಕವಾಗಿ ಸೇವಿಸಬೇಕು, ಅದರಲ್ಲೂ ಸ್ವೋತ್ತಮರು ಸ್ವಾವರರು ಸಮರು ಹೀಗೆ ವಿಭಾಗಮಾಡಿ, ಅವರವರಿಗೆ ಉಚಿತವಾಗುವಂತೆ ಅಲ್ಲಿ ಇರುವ ಹರಿಯನ್ನು ಸೇವಿಸಬೇಕು ಎಂದು ತಾತ್ಪರ್ಯ. ನಿರಶನರಾದ ದೇವತೆಗಳಲ್ಲಿ ಇರುವ ಹರಿಯನ್ನು ಭಕ್ತಿಪೂರ್ವಕವಾಗಿ ಭಜಿಸಬೇಕು ಎಂದು ಭಾವ.

"ಶ್ವೇತದ್ವೀಪ ಅನಂತಾಸನ-ವೈಕುಂಠಗಳಲ್ಲಿ ಸ್ವರೂಪಾಂಶದಿಂದ ಇರುವ ಶ್ರೀಹರಿಯೇ ಸರ್ವಪ್ರಾಣಿಗಳಲ್ಲಿ ಅಂತರ್ಗತನಾಗಿ ಇರುತ್ತಾನೆ. ಅನ್ನವುಳ್ಳವರು-ಅನ್ನ ತಿನ್ನದವರು, ವಿದ್ವಜ್ಜನರು-ಅವಿದ್ವಾಂಸರು, ದೇವತೆಗಳು-ಇತರರು

ಇವರೆಲ್ಲರಲ್ಲಿಯೂ ಅವನೇ ಅಂತರ್ಯಾಮಿಯಾಗಿ ಇರುತ್ತಾನೆ" ಎಂದು ಭಾಗವತ ದ್ವಿತೀಯ ಸ್ಕಂಧ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಉಪದೇಶಿಸಿರುತ್ತಾರೆ. ॥ ೯ ॥

**ಅವತರಣಿಕಾ :—** ಹಿಂದಿನ ಪದ್ಯದಲ್ಲಿ ಅಚಲಗಳಲ್ಲಿ ಅನಶನ ರೂಪ ಧ್ಯಾನ ಮಾಡಬೇಕೆಂದು ಹೇಳಿ, ಈಗ ಬೇರೆ ವಿಧವಾಗಿ ಪ್ರಕೃತಿಯೊಳು ವಿಶ್ವಾದಿ ಅಷ್ಟರೂಪಗಳಿಂದ ಬಿಂಬನಾಗಿ ಎಂಟು ವಿಧ ಪ್ರಕೃತಿಗಳಿಂದ ಸೃಷ್ಟ್ಯಾದಿ ಕಾರ್ಯ ಮಾಡುವನೆಂದು ಹಿಂದಿನ ೧೧ನೇ ಸಂಧಿಯಲ್ಲಿ ಪೇಳಿದ ರೂಪಗಳನ್ನೇ ದೃಷ್ಟಾಂತದಿಂದ ಹೇಳುತ್ತಾರೆ.

**ಪ್ರಕಾರಾಂತರ ಚಿಂತಿಸುವದೀ ।**
**ಪ್ರಕೃತಿಯೊಳು ವಿಶ್ವಾದಿರೂಪವ ।**
**ಪ್ರಕಟ ಮಾಳ್ಪೆನು ಯಥಾಮತಿಯೊಳು ಗುರುಕೃಪಾಬಲದಿ ॥**
**ಮುಕುರನಿರ್ಮಿತ ಸದನದೊಳು ಪೊಗೆ ।**
**ಸ್ವಕಿಯರೂಪವ ಕಾಂಬ ತೆರದಂ ।**
**ತಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ॥ ೧೦ ॥**

**ಪದ್ಯಾರ್ಥ :—** *ಪ್ರಕಾರಾಂತರ = ಬೇರೊಂದು ರೀತಿಯಿಂದ ಚಿಂತಿಸುವದು = ಚಿಂತನೆ ಮಾಡುವದು, ಈ ಪ್ರಕೃತಿಯೊಳು = ಸೃಷ್ಟಿಗೆ ಕಾರಣವಾದ ಈ ಅಷ್ಟ ವಿಧವಾದ ಪ್ರಕೃತಿ, "ಭೂಮಿರಾಪೋನಲೋ ವಾಯುಃ ಖಂ ಮನೋ ಬುದ್ಧಿರೇವಚ ಅಹಂಕಾರ ಇತಿಯಂ ಮೇ ಭಿನ್ನಾಪ್ರಕೃತಿರಷ್ಟಧಾ" ಎಂಬ ಗೀತೋಕ್ತಿಯಂತೆ ಹಿಂದೆ ೧೧ನೇ ಧ್ಯಾನ ಪ್ರಕ್ರಿಯಾ

---

*ಪ್ರಕಾರಾಂತರ=ಈ ಪಾಠವು ದಾಸರಾಯರುಗಳು ಬರೆದ ಮೂಲ ಹಳೇ ಹಳೇ ಪ್ರತಿಯಲ್ಲಿ ಇರುವದು. ಇದು ಛಂದಸ್ಸಿನ ಪ್ರಯೋಗಕ್ಕೆ ವಿರೋಧವಾಗಿಲ್ಲ. ಪದ್ಯಗಣದಲ್ಲಿ ಓಟವೂ ಲಯತಾಳವೂ ಸರಿಯಾಗಿದೆ, ಅಕಾರಕ್ಕೆ ಆಕಾರ, ಆಕಾರಕ್ಕೆ ಅಕಾರ ಪ್ರಯೋಗ ಮಾತ್ರಾಗಣ ಲಯ ತಾಳಗಳಲ್ಲಿ ದೋಷವಿಲ್ಲ. ತಿಳಿಯದೇ ಹಿಂದಿನ ಮುದ್ರಣಕಾರರು ಪ್ರಕೃತಿ ಪುರುಷಾತ್ಮಕರೆನಿಸುವ ಮತ್ತು ಪ್ರಕರದಂತರವೆಂದು ತಿದ್ದಿರುವರು. ಇದು ಸರಿಯಲ್ಲ.

ಸಂಧಿಯಲ್ಲಿ ಹೇಳಿದಂತೆ ಈ ಅಷ್ಟವಿಧ ಪ್ರಕೃತಿಯಲ್ಲಿ ಶ್ರೀಹರಿಯು, ವಿಶ್ವಾದಿ ರೂಪವ=ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ಈ ಎಂಟು ರೂಪಗಳಿಂದ ಬಿಂಬನಾಗಿ ಕಾರ್ಯ ಮಾಡುವನು ಎಂದು ಯಥಾಮತಿಯೊಳು ಗುರುಕೃಪಾ ಬಲದಿ ಪ್ರಕಟ ಮಾಳ್ಪೆನು=ಗುರುಗಳು ಕೃಪೆಮಾಡಿ ಅವರು ಪ್ರೇರಿಸಿ ನುಡಿಸಿದಷ್ಟು, ಸ್ಪಷ್ಟ ರೀತಿಯಿಂದ ಹೇಳುವೆನು, ದೃಷ್ಟಾಂತ ಹೇಗೆಂದರೆ, ಮುಕುರ ನಿರ್ಮಿತ ಸದನದೊಳು ಪೊಗೆ=ಕನ್ನಡಿಗಳ ಸಾಲುಗಳಿಂದ ಕೂಡಿದ ಮನೆಯೊಳು (ಆಯನಾಮಹಲ್) ಕನ್ನಡಿಗಳಿಂದಲೇ ನಿರ್ಮಿಸಿದ ನಿಲಯದಲ್ಲಿ ಪೊಗೆ= ಹೋಗಲು, ಸೇರಲು, ಪ್ರವೇಶಮಾಡಲು, ಸ್ವಕಿಯ ರೂಪವಕಾಂಬ ತೆರ= ಎಲ್ಲ ಕನ್ನಡಿಗಳಲ್ಲಿ ಎಲ್ಲಿ ನೋಡಿದರೂ ತನ್ನ ರೂಪವನ್ನೇ ಕಾಂಬುವಂತೆ ಅಂದರೆ ಪರಮಾತ್ಮನು ಬಿಂಬ ಆತನ ಪ್ರಕಾಶವೇ ಕನ್ನಡಿಯ ಸದನ, ಚರಾಚರಾತ್ಮಕ=ಚರ ನಡೆಯುವ ಪ್ರಾಣಿಗಳು, ಅಚರ=ಜಡಗಳಲ್ಲಿ ಅನಂತ ರೂಪಗಳು. ಪರಮಾತ್ಮನ ಆತ್ಮ ರೂಪಗಳೇ ಸರ್ವತ್ರ ತೋರುವನು=ಎಲ್ಲ ಕಡೆಗೂ ವ್ಯಕ್ತಮಾಡುವನು. ಈ ಆತ್ಮರೂಪಗಳೇ ಅಂತರಾತ್ಮನಾದ ಬಿಂಬಗೆ ಪ್ರತಿಬಿಂಬ ರೂಪಗಳು.

**ಭಾವಸೂಚನ :—**ಪ್ರಕಾರೇತಿ ॥ ಮುಕುರ ಕನ್ನಡಿ ॥ ೧೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಕಾರ" ಇತಿ ॥ "ಮುಕುರ"–ಕನ್ನಡಿ ॥ "ಪೊಗೆ"– ಹೋಗಲು ॥ ೧೦ ॥

## ಕನ್ನಡಾರ್ಥ

ಹರಿಯನ್ನು ಚಿಂತಿಸಲು ಬೇರೊಂದು ಬಗೆಯನ್ನು ಹೇಳುತ್ತಾರೆ- "ಪ್ರಕಾರ" ಎಂಬ ಪದ್ಯದಿಂದ "ಮುಕುರ" ಕನ್ನಡಿ "ಪೊಗೆ" ಹೋಗಲು ಪ್ರವೇಶಿಸಲು ಎಂದು ಅರ್ಥ ॥ ೧೦ ॥ (ಪದ್ಯಾರ್ಥವು ಸ್ಪಷ್ಟವಿದೆ.)

**ಅವತರಣಿಕಾ :—**ಸಂಸಾರ ಬಂಧನಕ್ಕೆ ಮೂಲಕಾರಣವು ತ್ರಿಗುಣಾತ್ಮ ಮೂರು ಪರಿಚ್ಛೇದ ಯುಕ್ತ ಲಿಂಗಪ್ರಕೃತಿ (ದೇಹವು) ಇದರ

ಬಿಡುಗಡೆ ಮಾಡುವನು. ಶ್ರೀಹರಿಯು, ಅಲ್ಲಿ ವಿಶ್ವಾದಿರೂಪಗಳಿಂದ ಕಾರಣ ನಾಗಿರುವನೆಂದು ಧ್ಯಾನಿಸಿದರೆ ಈಷಣತ್ರಯದಿಂದ ದೂರುಮಾಡಿ ಮುಕ್ತಿಸುಖ ವನ್ನು ಕೊಡುವನೆಂದು ವಿವರಿಸುತ್ತಾರೆ.

**ಪರಿಚ್ಛೇದತ್ರಯ ಪ್ರಕೃತಿಯೊಳ ।**
**ಗಿರುತಿಹನು ವಿಶ್ವಾದಿ ರೂಪಕ ।**
**ಧರಿಸಿ ಆತ್ಮಾದಿ ತ್ರಿರೂಪವ ಈಷಣತ್ರಯದಿ ॥**
**ಸುರುಚಿ ಜ್ಞಾನಾತ್ಮ ಸ್ವರೂಪದಿ ।**
**ತುರಿಯ ನಾಮಕ ವಾಸುದೇವನ ।**
**ಸ್ಮರಿಸು ಮುಕ್ತಿ ಸುಖಪ್ರದಾಯಕ ನೀತನಹುದೆಂದು ॥ ೧೧ ॥**

8224

**ಪದ್ಯಾರ್ಥ :**—ಮತ್ತೂ ವಿಶ್ವಾದಿ ರೂಪಗಳು ಬೇರೆಬೇರೆ ಕಾರ್ಯ ಗತ ಪ್ರಕೃತಿಯಲ್ಲಿ ಚಿಂತಿಸಿ ಧ್ಯಾನಿಸುವ ಬಗೆ ವಿವರಿಸುತ್ತಾರೆ. ಪರಿಚ್ಛೇದ ತ್ರಯ=ಸತ್ವ, ರಜ, ತಮ, ಈ ಮೂರು ಗುಣದಿಂದ ಮೂರು ಪ್ರಾಕಾರ ವಾದ ಹೊದಿಕೆ, ಲಿಂಗ ಪ್ರಕೃತಿಯಲ್ಲಿ ವಿಶ್ವಾದಿ ರೂಪಕ=ಸತ್ವಪರಿಚ್ಛೇದ ದಲ್ಲಿ=ವಿಶ್ವ, ರಜೋ ಪರಿಚ್ಛೇದದಲ್ಲಿ ತೈಜಸ, ತಮೋ ಆವರಣದಲ್ಲಿ= ತೈಜಸ ಮೂರು ರೂಪಗಳಿಂದ ಈ ತ್ರಿಗುಣಗಳ ಕಾರ್ಯರೂಪವಾದ ಈಷಣತ್ರಯ=ದಾರೇಷಣ, ಪುತ್ರೇಷಣ, ವಿತ್ತೇಷಣವೆಂದು ಇವು ಮೂರು ಬಂಧಕಗಳು. ದಾರೇಷಣ=ಹೆಂಡತಿಯ ಮೇಲಿನ ಮೋಹ ದುರಾಶೆ, ನನ್ನವ ಳೆಂಬ ಕೆಟ್ಟಭಾವನೆ ಪರಿಹಾರಕ್ಕೆ **ಆತ್ಮರೂಪ,** ಪುತ್ರೇಷಣ=ಮಕ್ಕಳು ನನ್ನವರೆಂಬ ಕೆಟ್ಟ ಆಶಾ ಪರಿಹರಿಸಲು **ಅಂತರಾತ್ಮರೂಪ** ಚಿಂತಿಸಬೇಕು. ವಿತ್ತೇಷಣ=ಧನವು ನನ್ನದೆಂಬ ದುರಾಶೆ ಪರಿಹರಿಸಲು, **ಪರಮಾತ್ಮ ರೂಪ ವನ್ನು** ಧ್ಯಾನಿಸಬೇಕು. ಸುರುಚಿ=ಸುಪ್ರಕಾಶ್ಯನಾದ, ಜ್ಞಾನಾತ್ಮ ಸ್ವರೂ ಪದಿ=ಪ್ರಕೃತಿ ತ್ರಿಗುಣದಿಂದ ದೂರ ಮಾಡಲು ಮತ್ತು ಈಷಣತ್ರಯ ನಾಶಮಾಡಲು, ಸ್ವರೂಪಗತನಾದ ಬಿಂಬನೇ ಜ್ಞಾನಾತ್ಮನಾಗಿ ಇದ್ದು ಜೀವನಿಗೆ ಇಂಥ ಜ್ಞಾನವನ್ನು ತಂದುಕೊಡುವನು. ಇಂತಹ ಸುಜ್ಞಾನದಿಂದ ಮುಕ್ತಿ, ತುರಿಯನಾಮಕ ವಾಸುದೇವನ ಸ್ಮರಿಸು ಮುಕ್ತಿ, ಸುಖಪ್ರದಾಯಕ ನೀತನಹುದೆಂದು=ತುರಿಯ=ನಾಲ್ಕನೇದಾದ ತುರಿಯ ರೂಪವೇ ಮುಕ್ತಿ

ಮೋಕ್ಷಾನಂದವನ್ನು ಕೊಡುವನು. ಮುಕ್ತಿಯಲ್ಲಿ ಸುಖ ಕೊಡುವನು. ಈತನೇ ಇರುವನೆಂದು ಚಿಂತಿಸಬೇಕು. ಹಿಂದಿನ ಪದ್ಯದ ಸಮಸ್ಯೆ ಈ ಪದ್ಯ ದಿಂದ ಪೂರ್ಣವಾಯಿತು ಅಲ್ಲದೇ ವಿಶ್ವಾದಿ ರೂಪಗಳು ಅಧಿಷ್ಠಾನ ಭೇದ ದಿಂದ ಕಾರ್ಯರೂಪಗಳ ವಿವರಣೆಯಾಯಿತು.

**ಭಾವಸೂಚನ :—**ಪರಿಚ್ಛೇದೇತಿ ॥ ಪ್ರಶಿದ್ಧೇತ್ಯರ್ಥಃ ॥ ಪರಿಚ್ಛೇದಿವಾ ಪಾಠಃ ॥ತಥಾವ್ಯಸ್ಥರೂಪ ॥ ತ್ರಯಪ್ರಕೃತಿ ಗುಣತ್ರಯೇ ವಿಶ್ವಾದಿ ರೂಪತ್ರಯ ಆತ್ಮಾದಿ ತ್ರಯರೂಪ । ಅಂತರಾತ್ಮ ಪರಮಾತ್ಮ ಆತ್ಮ ॥ ಈಷಣತ್ರಯ ಪುತ್ರ ದಾರ ವಿತ್ತೇಷಣಾಯತಾ ॥ ಅರುಹುವದೆಂದು ॥ ೧೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರತಿಜ್ಞಾತಮಾಹ "ಪರಿಚ್ಛೇದ" ಇತಿ ॥ ವಿಭಕ್ತ ತ್ರಿಗುಣೇಷು ಪ್ರಕೃತೌ ಚ ವಿಶ್ವಾದಿ ತುರೀಯಾಂತಾಃ ॥ ಆತ್ಮಾದಿ ಪರಮಾತ್ಮಾಂತಾಃ "ಸುತೇಷು ದಾರೇಷು ಧನೇಷು" ಇತ್ಯುಕ್ತೇಃ ಈಷಣತ್ರಯೇ ॥ ಸುರುಚಿಃ ಸುಪ್ರಕಾಶಃ ॥ "ಅಹುದು" ಹವದು. ॥ ೧೧ ॥

## ಕನ್ನಡಾರ್ಥ

"ಪ್ರಕಾರಾಂತರದಿಂದ ಚಿಂತಿಪುದು" ಎಂಬ ಪದ್ಯದಲ್ಲಿ "ಪ್ರಕಟ ಮಾಳ್ಪೆನು" ಎಂದು ಪ್ರತಿಜ್ಞೆಯನ್ನು ಮಾಡಿರುವರಷ್ಟೆ! ಅದನ್ನು ಇಲ್ಲಿ ಪೂರ್ಣ ಮಾಡಲು ಪ್ರತಿಜ್ಞಾತವಾದ ವಿಷಯವನ್ನು ನಿರೂಪಿಸುತ್ತಾರೆ "ಪರಿಚ್ಛೇದ" ಎಂಬ ಪದ್ಯದಿಂದ. ಸತ್ವ ರಜ ತಮ ಎಂದು ವಿಭಕ್ತವಾದ ತ್ರಿಗುಣಗಳಲ್ಲಿ, ಪ್ರಕೃತಿಯಲ್ಲಿ ವಿಶ್ವ-ತೈಜಸ-ಪ್ರಾಜ್ಞ ಈ ಮೂರು ರೂಪಗಳಿಂದ ಇರುತ್ತಾನೆ. ಆತ್ಮ-ಅಂತರಾತ್ಮ-ಪರಮಾತ್ಮ ಈ ಮೂರು ರೂಪಗಳು ಸುತೇ ಷಣ, ವಿತ್ತೇಷಣ, ದಾರೇಷಣಗಳಲ್ಲಿ ಇರುವವು. ಸುಪ್ರಕಾಶ ಪ್ರಚುರಾತ್ಮ ನಾದ ಜ್ಞಾನಾತ್ಮನೇ ತುರ್ಯನಾಮಕ ವಾಸುದೇವರೂಪದಿಂದ ಮುಕ್ತಿ ಯನ್ನು ಕೊಡುವನು." ಎಂದು ತಾತ್ಪರ್ಯ. ॥ ೧೧ ॥

**ಅವತರಣಿಕಾ :—**ಸರ್ವರಿಗೂ ಬಿಂಬನಾದ ಶ್ರೀಹರಿಯೇ ಒಬ್ಬನೇ ಇದ್ದರೂ, ದೇವದೈತ್ಯಾದಿಗಳಲ್ಲಿದ್ದು ಬೇರೆಬೇರೆ ವಿಧದಿಂದ ಸಾಧನ ಮಾಡಿಸುತ್ತಾನೆಂದು ಈ ಪದ್ಯದಿಂದ ವಿವರಿಸುತ್ತಾರೆ.

**ಕಮಲಸಂಭವ ಜನಕ ಜಡ ಜಂ ।**
**ಗಮರೊಳಗೆ ನೆಲಸಿದ್ದು ಕಮ ವ್ಯು ।**
**ತ್ಕ್ರಮದಿ ಕರ್ಮವ ಮಾಡಿ ಮಾಡಿಸುತಿಪ್ಪ ಬೇಸರದೆ ॥**
**ಕ್ಷಮ ಕ್ಷಾಮ ಕ್ಷಮಿಹ(ಸಮಿಹ)ನಾಹ್ವಯ ।**
**ಸುಮನಸಾಸುರರೊಳಗೆ ಅಹಂ ।**
**ಮ್ಮಮ ನಮಮ ಯೆಂದೀ ಉಪಾಸನೆ(ಸ) ಈವ ಪ್ರಾಂತದಲಿ ॥ ೧೨ ॥**

**ಪದ್ಯಾರ್ಥ :—**ಕ ಮ ಲ ಸ ಂ ಭ ವ ಜ ನ ಕ=ಪದ್ಮನಾಭೀರೂಪಿ ಪರಮಾತ್ಮನ ನಾಭಿಕಮಲದಿಂದ ಪದ್ಮ ಸೃಷ್ಟಿಯಲ್ಲಿ ಹುಟ್ಟಿದ ಬ್ರಹ್ಮದೇವನಿಗೆ ತಂದೆಯಾದವನೆ ಪುರುಷರೂಪಿ ಹರಿಯು, ಜಡಜಂಗಮರೊಳಗೆ ನೆಲಸಿದ್ದು=ಜಡ ಸ್ಥಿರವಾದ ಜಡಪ್ರಕೃತಿಯಲ್ಲಿ ಪೃಥಿವ್ಯಾದಿ ಪಂಚಭೂತಾದಿ ಜಡಗಳಲ್ಲಿ, ಜಂಗಮರೊಳಗೆ=ಚಲಿಸುವ ಶಕ್ತಿಯುಳ್ಳ ಪ್ರಾಣಿ—ಸರ್ವ ಪ್ರಾಣಿ ಚೇತನರಲ್ಲಿ, ನೆಲಸಿದ್ದು=ಬಿಂಬನಾಗಿದ್ದು, ಕರ್ಮವ ಕ್ರಮವ್ಯುತ್ಕ್ರಮದಿ=ಜೀವರ ಸ್ವರೂಪ ಯೋಗ್ಯತಾನುಗುಣಾನುಸರಿಸಿ, ಕ್ರಮದಿಂದ ಸೃಷ್ಟಿ ಮಾಡಿದಂತೆ ದೇವತೆಗಳಿಂದ ಕ್ರಮವಾಗಿ ಅಂದರೆ ಸಮಿಾಚೀನಜ್ಞಾನದಿಂದ, ವ್ಯುತ್ಕ್ರಮ= ತದ್ವಿಪರೀತವಾಗಿ, ದೈತ್ಯಾದಿಗಳಿಂದ ಅಸಮಿಾಚೀನ ಮಿಥ್ಯಾಜ್ಞಾನದಿಂದ, ಕರ್ಮಗಳನ್ನು ಕ್ರಿಯಾಗಳನ್ನು (ಮಾಡಿಸುತ್ತಾನೆಂದು ದಾಸರಾಯರ ಹೃದಯ) ಬೇಸರದೆ=ಆಲಸ್ಯ ದಣಿವು ಇಲ್ಲದೆ ನಿರಾಯಾಸವಾಗಿ ಮಾಡಿಸುವನು (ಇಂದಿರೇಶ ಒಂದೇ ನಿನಕ್ರಿಯದ್ವಂದ್ವವಾಗಿ ತೋರಿತು) ಯಾವಯಾವ ರೂಪದಿಂದ ಮಾಡಿಸುತ್ತಾನೆಂದರೆ, ಕ್ಷಮ ಕ್ಷಾಮ ಸಮಿಾಹನಾಹ್ವಯ=(ಎಂದು ವಿಷ್ಣು ಸಾಸಿರನಾಮ) ಕ್ಷಮ=ಸರ್ವಕಾರ್ಯೇಷು ಶಕ್ತಿತ್ವಾತ್ ಸರ್ವಸಹನತ್ವಾದ್ವಾ ಕ್ಷಮಃ ॥ ಸರ್ವಕಾರ್ಯಗಳನ್ನು ಸ್ವತಂತ್ರವಾಗಿ ಮಾಡುವಲ್ಲಿ ಸರ್ವಶಕ್ತಿಪೂರ್ಣವಾದ ಶಕ್ತಿಯುಳ್ಳವನೂ ಸರ್ವವನ್ನು ಭಕ್ತರ ಅಪರಾಧ ಸಹನ ಮಾಡುವನು

ಆದುದರಿಂದ ಕ್ಷಮನೆಂದು ಶ್ರೀಹರಿಗೆ ನಾಮ, ಕ್ಷಾಮ=ಪ್ರಳಯೇ ಸರ್ವ ಭೂತಾನಾಂ ಧಾರಣಾತ್ ಕ್ಷಾಮಃ ॥ ಪ್ರಳಯದಲ್ಲಿ ಸರ್ವಪ್ರಾಣಿಗಳನ್ನು ತನ್ನ ಉದರದಲ್ಲಿ ಧರಿಸಿದವನಾದುದರಿಂದ ಕ್ಷಾಮನೆಂದೂ, ಇವೆರಡು ರೂಪಗಳಿಂದ ಕ್ರಮದಿಂದ ಸೃಷ್ಟಿ ವ್ಯುತ್ಕ್ರಮದಿಂದ ಲಯವೂ ಹೇಳಿದಂತಾಯಿತು. ಸಮೀಹನಃ=ಸೃಷ್ಟ್ಯರ್ಥಂ ಸಮ್ಯಗೀಹತ ಇತಿ ಸಮೀಹನಃ (ಶ್ರೀ ವಿದ್ಯಾಧಿರಾಜೀಯ)—ಸೃಷ್ಟಿಗೋಸುಗವಾಗಿ ಸಮೀಚೀನವಾಗಿ ಒಳ್ಳೆರೀತಿಯಿಂದ ಸತ್ಯ ಸಂಕಲ್ಪಾನುಸರಿಸಿ ಈಹತ=ಇಚ್ಛಾ ಮಾಡುವನು, ಎಂದರೆ ಸೃಷ್ಟಿ, ಸ್ಥಿತಿ ಲಯಾದಿ ಅಷ್ಟ ಕರ್ತೃತ್ವವೂ ಶ್ರೀಹರಿಯಲ್ಲಿ ಪೇಳಿದಂತಾಯಿತು. ಈ ಮೂರು ರೂಪನಾಮದಿಂದ, ತ್ರಿವಿಧರೊಳಗೆ ನೆಲಸಿದ್ದು, ಸುಮನಸಾಸುರರೊಳಗೆ=ಸುಮನಸ=ದೇವತೆಗಳು, ಅಸುರರೊಳಗೆ=ದೈತ್ಯರೊಳಗೆ (ಇದರಲ್ಲಿ ನಿತ್ಯ ಸಂಸಾರಿಗಳೂ ಸಮೀಚೀನ ಜ್ಞಾನವಿಲ್ಲದವರು ಬಂದಂತಾಯಿತು. ಅಹಂ=ಎಂದು ಅಸುರರಿಂದ=ಸಿದ್ಧೋಹಂ ಬಲವಾನಸ್ಮಿ ಅಹಂ ನಾನೇ ಎಂದೂ, ಮಮ=ದಾರಾಪುತ್ರ ಧನಾದಿಗಳನ್ನು ನನ್ನದೆಂದೂ, ನಿತ್ಯ ಸಂಸಾರಿಗಳಿಂದ, ನಮಮಃ=ನಾನಲ್ಲ ನನ್ನದಲ್ಲ "ನಾನ್ಯಾತಕೆ ಸಲ್ಲ ಹರಿ ಎನ್ನಲ್ಲಿ ನಿಂದು ಸಕಲ ಕಾರ್ಯಗಳನ್ನು ಮಾಡಿಸುವನೆಂದು" ಸತ್ವಜೀವರಾದ ತೃಣಾದಿ ಬ್ರಹ್ಮಾಂತ ಜೀವರಿಂದ ಈ ಉಪಾಸನೆ=ಈ ಪ್ರಕಾರ ಉಪಾಸನೆ (ಧ್ಯಾನವನ್ನು) ಮಾಡಿಸಿ ಪ್ರಾಂತ್ಯದಲಿ ಈವ=ಕೊನೆಯ ಜನ್ಮದಲ್ಲಿ ದಾರಢ್ಯವಾಗಿ ಈ ಉಪಾಸನೆ ನೀಡುವನೆಂದು ಭಾವ. ಸತ್ವಜೀವರಿಗೆ ಕೊನೆಯದು ಬ್ರಾಹ್ಮಣ ಜನ್ಮದಿಂದೆ ಮುಕ್ತಿ ಎಂದು ಸರ್ವಜ್ಞರ ಉಕ್ತಿ.

**ಭಾವಸೂಚನ :**—ಕಮಲಸಂಭನೇತಿ ॥ ಕ್ರಮೇತಿ ಪೌರ್ವಾಪರ್ಯ ಇಲ್ಲದೆ, ಕ್ಷಮೇತಿ ॥ ಕ್ಷಮಕ್ಷಾಮಃ ಸಮೀಹನಃ ಇತ್ಯುಕ್ತೇ ॥ ಆಹ್ವಯ ನಾಮ ॥ ಪ್ರಾಂತೆ ವಿಪ್ರ ಜನ್ಮನಿ ॥ ೧೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಮಲ" ಇತಿ ॥ ಕ್ರಮಾತ್ ಸೃಷ್ಟಿಃ । ವ್ಯುತ್ಕ್ರಮಾತ್ ಲಯಃ ॥ "**ಕ್ಷಮಃ**"—ಓಂ ತುರ್ವಶೇ ಶಮಿ ತರುಣಿಂವೋ ಜನಾನಾಂ ತ್ರದು

ವಾಜಸ್ಯ ಗೋಮತಃ । ಸಮಾನಮು ಪ್ರಶಶಿಷಂ ಋಭುಕ್ಷಣಂ ನ ವರ್ತವೇ ॥ ಓಂ ॥ ಅನೇನ ಕ್ಷಮಃ ಶಕ್ತಃ ॥

**"ಕ್ಷಾಮಃ"**—"ಓಂ" ಉತ್ತ್ರೇಷು ತುಗ್ರ್ಯಾವೃಧಂ ಇಂದ್ರ ಸೋಮೇ ಸಚಾ ಸುತೇಯಃ ಕ್ರಂತದಿದ್ವಿ ಯೋನ್ಯಂ ತ್ರಿಶೋಕಾಯ ಗಿರಿಂ ಪ್ರಥುಂ ಗೋಭ್ಯೋ ಗಾತುಂ ನಿರೇತವೇ ॥ ಓಂ ॥ ಕ್ಷಂ ಗವಾಂ ಸಂರೋಧ ವಿಶೇಷಂ ಆಮಿನೋತಿ ಕ್ರಂತತಿ ಇತಿ ತಥೋಕ್ತಃ ॥

**"ಸಮೀಹನಃ"**—ಓಂ ॥ ಯದ್ದಧಿಷೇ ಮನಸ್ಯಸಿ ಮಂದಾನಃ ಪ್ರೇದಿ ಯಕ್ಷಸಿ ಸಾ ತತ್ಕರಿಂದ್ರ ಮೃಳಯ ದಭ್ರಂಚಿದ್ಧಿ ತ್ವಾವತಃ ಕೃತಂ ಶೃಣ್ವೇ ॥ ಓಂ ॥ ಭಕ್ತಾನಾಂ ಸಮ್ಯಕ್ ಹಿತಕರಣ ಅಭೀಷ್ಟದಾನ ತತ್ಕೃತ ಸ್ತುತಿ ಶ್ರವಣಾದಿ ರೂಪಂ ಈಹನಂ ಚೇಷ್ಟಾಯಸ್ಯ ಸ ತಥೋಕ್ತಃ ॥

"ಅಹಂ, ಮಮ, ನಮಮ, ಎಂದು" ಇತಿ ॥ ಅಹಮೀಶ್ವರಃ ॥ ಮಮ ಏತೇ ಭಾರ್ಯಾದಯಃ ॥ ಇತ್ಯಸುರಾಣಾಂ ॥ ವಿಪರೀತಂ ॥ ದೇವಾನಾಮ್ ॥ಷಷ್ಠ ತಾತ್ಪರ್ಯೆ-"ಮದನ್ಯೋ ನಾಸ್ತಿ ದೇವೇಶಃ ಇತಿ ವಿದ್ಯಾಧ್ಯಸುರಂ ಮತಮ್ ॥ ಅಸ್ತೀತಿ ದೈವಮುಭಯೋಃ ಹರಿರೇವ ಹ್ಯಪೇಕ್ಷಿತಃ ॥ ವಿಧಿ ನಿಷೇಧ ಪ್ರವರ್ತಕತ್ವಾತ್ ತದ್ಬುದ್ಧಿ ಕಾರಣತ್ವಾತ್ ಉತ್ತರಂ ತದುಚ್ಚ ನೀಚ ಸ್ಥಾನ ಜನಕತ್ವಾತ್ ಚ" ಇತಿ ॥ ೧೨ ॥

## ಕನ್ನಡಾರ್ಥ

ಸೃಷ್ಟಿಯನ್ನು ಕ್ರಮದಿಂದ ಮಾಡುತ್ತಾನೆ. ವ್ಯುತ್ಕ್ರಮದಿಂದ ಲಯವನ್ನು ಮಾಡುತ್ತಾನೆ.

**"ಕ್ಷಮಃ"**—ಇದು ಸಹಸ್ರನಾಮಾಂತರ್ಗತವಾದುದು. "ಸಮರ್ಥ" ಎಂದು ಬೃಹತೀಮಂತ್ರ ಸಂಸೂಚಿತವಾದ ಅರ್ಥ.

**"ಕ್ಷಾಮ"**—ಕ್ಷ-ಗೋಸಂರಕ್ಷಣ ಅಭಿವೃದ್ಧಿಗಳ ಬಗ್ಗೆ ಅವರ ದ್ವೇಷವನ್ನು, ಆಮಿನೋತಿ-ನಾಶಮಾಡುವವನು ಎಂದು ಬೃಹತೀ ಮಂತ್ರ ಸೂಚಿತವಾದ ಅರ್ಥ.

**"ಸಮೀಹನ"**—ಭಕ್ತರಿಗೆ, ಸರಿಯಾಗಿ ಅತಿಶಯವಾಗಿ ಹಿತವನ್ನು ಮಾಡುವದು, ಅಭೀಷ್ಟಗಳನ್ನು ಪೂರೈಸುವದು, ಅವರ ಸ್ತೋತ್ರಗಳನ್ನು

ಆಲಿಸುವದು, ಈ ಮುಂತಾದ ವ್ಯಾಪಾರಗಳುಳ್ಳವನು. ವ್ಯಾಪಾರಗಳನ್ನು ಮಾಡುವವನು" ಎಂದು ಬೃಹತೀಮಂತ್ರ-ಸೂಚಿತವಾದ ಅರ್ಥ ॥ "ನಾನು ಆಳುವ ಧಣಿಯು, ನಿಯಾಮಕನು ಈ ಭಾರ್ಯಾ (ಹೆಂಡತಿ) ಮುಂತಾದವರು ನನ್ನ ಆಧೀನಕ್ಕೊಳಪಟ್ಟವರು" ಎಂದು ಅಸುರರ ಭಾವನೆಯು ಇರುತ್ತದೆ. ದೇವತೆಗಳಿಗೆ ಮಾತ್ರ ಈ ಅಸುರ ಜ್ಞಾನಕ್ಕೆ ನೇರ ವಿರುದ್ಧವಾದ ಜ್ಞಾನ ವಿರುತ್ತದೆ.

ಷಷ್ಠಸ್ಕಂಧ ಭಾಗವತ ತಾತ್ಪರ್ಯದಲ್ಲಿ-"ನಾನೇ ಸರ್ವೇಶನು ; ನನ್ನ ನ್ನುಳಿದು ಇನ್ನಾರೂ ಸರ್ವೇಶರಿಲ್ಲ" ಎಂಬ ತಿಳುವಳಿಕೆಯು ಅಸುರರ ಮತ ವೆಂದು ತಿಳಿ. "ನಾನು ಈಶ್ವರನಲ್ಲ, ನನ್ನಿಂದ ಬೇರೆಯಾದ ಪ್ರಭುವು ಒಬ್ಬನು ಇರುತ್ತಾನೆ. ಅವನೇ ಶ್ರೀಹರಿಯು" ಎಂದು ತಿಳುವಳಿಕೆಯು ದೇವಮತವು ಎಂದು ತಿಳಿಯಬೇಕು. ಈರ್ವರ ವ್ಯಾಪಾರಗಳೂ ಶ್ರೀಹರಿ ಯಿಂದಲೇ ನಡೆಯುವವು. ಪರಮಾತ್ಮನು ವಿಧಿ ನಿಷೇಧಗಳನ್ನು ಪ್ರವರ್ತಿ ಸುವದರಿಂದ ನಡೆಯಿಸುವನು. ಅವುಗಳಿಗನುಸಾರವಾಗಿ ಯೋಗ್ಯ ಫಲಗಳನ್ನು ಕೊಡುವನು. ಅವರವರ ಬುದ್ಧಿಗಳಿಗೆ ಆಯಾ ಭಾವನೆಗಳಿಗೆ ಕಾರಣನೂ ಆಗಿರುತ್ತಾನೆ. ಮತ್ತು ಮುಂದೆ ಅವರಿಗೆ ಉಚ್ಚ ನೀಚ ಸ್ಥಾನಗಳನ್ನು ಕಲ್ಪಿಸಿಕೊಡುತ್ತಾನೆ. ಆದುದರಿಂದ ಸರ್ವೇಶನು ಶ್ರೀಹರಿಯೇ ಹೊರತು ಮತ್ತಾರೂ ಆಗಲು ಅರ್ಹರೇ ಅಲ್ಲ ಎಂದು ಹೇಳಲಾಗಿರುತ್ತದೆ. ॥ ೧೨ ॥

**ಅವತರಣಿಕಾ :—** ಹಿಂದೆ ಹೇಳಿದ ಸಮಸ್ತ ಚತುರ್ವಿಂಶತಿ ತತ್ವಾತ್ಮಕ ಕಾರ್ಯ ಪ್ರಕೃತಿನಾಶವಾದರೂ ಮೂಲಪ್ರಕೃತಿ ನಿತ್ಯವು ಶ್ರೀಹರಿಗೆ ಜಡ ಪ್ರತಿ ಮೆಯು "ನಿತ್ಯ ಮೂಲ ಪ್ರಕೃತಿ ಅನಾದಿಯಿಂದ ಸಿದ್ಧ"ವೆಂಬ ವಿಜಯರ ವಾಕ್ಯವನ್ನನುಸರಿಸಿ "ಈಶಾವಾಸ್ಯಮಿದಂ ಸರ್ವಂ" ಎಂಬ ಶ್ರುತ್ಯರ್ಥವನ್ನು ವಿವರಿಸಿ ಇಂಥ ಕಾರಣ ರೂಪವಾದ ಮೂಲ ಪ್ರಕೃತಿಯಲ್ಲಿ ಸಾಲಿಗ್ರಾಮ ದಂತೆ ಶ್ರೀಹರಿಯ ಸನ್ನಿಧಾನವು ನಿತ್ಯವಾಗಿರುತ್ತದೆಂದು ವಿವರಿಸುತ್ತಾರೆ.

**ಈ ಸಮಸ್ತ ಜಗತ್ತು ಈಶಾ ।**
**ವಾಸ್ಯವೆನಿಪುದು ಕಾರ್ಯರೂಪವು ।**
**ನಾಶವಾದರು ನಿತ್ಯವೇ ಸರಿ ಕಾರಣ ಪ್ರಕೃತಿ ॥**

**ಶ್ರೀಶಗೆ ಜಡ ಪ್ರತಿಮೆ (ಮಿ) ಯೆನಿಪುದು ।**
**ಮಾಸದೊಮ್ಮಿಗು ಸನ್ನಿಧಾನವು ।**
**ವಾಸವಾಗಿಹ ನಿತ್ಯ ಸಾಲಗ್ರಾಮದೋಪಾದಿ ॥ ೧೩ ॥**

**ಪದ್ಯಾರ್ಥ :—**ಈ ಸಮಸ್ತಜಗತ್ತು = ಈ ಪ್ರಕೃತಸೃಷ್ಟವಾದ ಜಗತ್ತು ಹಿಂದೆ ಆದ ಮುಂದೆ ಆಗತಕ್ಕ ಸಮಸ್ತ ಜಗತ್ತು ೨೪ ಜಡ ಪ್ರಕೃತಿಗಳಿಂದ ಮಿಳಿತವಾಗಿ ಕಾರ್ಯರೂಪವಾದದ್ದು, ಈಶಾವಾಸ್ಯವೆನಿಪುದು = ಈಶನಾದ ಲಕ್ಷ್ಮೀಪತಿಗೆ ಆವಾಸಕ್ಕೆ ಯೋಗ್ಯವಾದದ್ದು, ನಾಶವಾದರೂ = ಬ್ರಹ್ಮಾಂಡವೂ ಸ್ಥೂಲರೂಪವಾದದ್ದು. ನಾಶ = ನಷ್ಟವಾದಾಗ್ಯೂ, ಕಾರಣರೂಪವಾದ ನಿತ್ಯಮೂಲ ಜಡಪ್ರಕೃತಿಯು, ನಿತ್ಯವಾದದ್ದು, ಶ್ರೀ ವಾಸುದೇವ ಪುರುಷ ರೂಪಿಯ ವಕ್ಷಸ್ಥಳದಲ್ಲಿ ವಾಸವಾಗಿ ನಿತ್ಯಹರಿಯ ಆಶ್ರಯ ಪೊಂದಿರುವದೆಂದು ಪ್ರಕಾಶ ಸಂಹಿತೆ ಇಂತೀ ನಿತ್ಯವಾದ ಮೂಲ ಪ್ರಕೃತಿಯಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನವು ಇದ್ದೇ ಇರುವುದು. ಶ್ರೀಶಗೆ ಜಡಪ್ರತಿಮೆ ಎನಿಪುದು = ಶ್ರೀ ಲಕ್ಷ್ಮೀಪತಿಗೆ ಜಡಪ್ರತಿಮಾ ಎಂದು ಕರೆಸುವದು, ನಿತ್ಯ ಸನ್ನಿಹಿತನಾಗಿ ಹರಿಯು ಸಾಲಗ್ರಾಮದಲ್ಲಿ ಹೇಗೆ ಕಾದ ಕಾಂಚನದಂತೆ ಪ್ರಕಾಶಮಾನನಾಗಿ ರುವನೋ ಅದರಂತೆ ಮೂಲಜಡ ಪ್ರಕೃತಿಯು ಶ್ರೀಹರಿಯ ಸನ್ನಿಧಾನವು ಮಾಸದು = ಮಲಿನವಾಗದು, ಕಾಂತಿಹೀನವಾಗದು, ಸಂತತ ಶ್ರೀ ಸನ್ನಿಧಿ ಇದ್ದೇ ಇರುವದು. ಇದೇ ಮೂಲ ನಿತ್ಯ ಜಡ ಪ್ರಕೃತಿ ಉಪಚಯದಿಂದ ಪ್ರತಿಸೃಷ್ಟಿಗೆ ಮೂಲ ಪ್ರಕೃತಿ ಉಪಚಯಗೈಸಿ ಮಹತ್ ಬ್ರಹ್ಮಾಂಡ ಮತ್ತು ಕಾರಣವಾದ ಲಿಂಗ ಪ್ರಕೃತಿ ಉಪಚಯದಿಂದ ಅವ್ಯಕ್ತ, ಪ್ರಾಕೃತ ಅನಿರುದ್ಧ ಸ್ಥೂಲಾದಿ ದೇಹಗಳನ್ನು ಜೀವರಿಗೆ ಕೊಡುವನು. ಲಿಂಗದೇಹ ನಾಶವಾದರೂ ಕಾರಣರೂಪವಾದ ಗುಣಗಳು ನಿತ್ಯವೇ ಸರಿ. "ಗುಣಕಾಲ ದೇಶ ವೇದಜೀವ ಲಕುಮಿ ನಾರಾಯಣ ನಿತ್ಯವೆಂದೆನ್ನಿ" ಎಂದು ಶ್ರೀ ಪುರಂದರದಾಸರ ಸುಳಾದಿ ಯಂತೆ ಶ್ರೀ ವಿಜಯದಾಸರ ವಾಕ್ಯವೂ ಇದೆ.

**ಭಾವಸೂಚನ :—**ಈ ಸಮಸ್ತೇತಿ ॥ **" ಈಶಾವಾಸ್ಯಮಿದಂಸರ್ವಂ ಯತ್ಕಿಂಚತ್ ಜಗತ್ಯಾಂ ಜಗತ್ ಇತಿಶ್ರುತೇಃ ॥** ಮಾಸದೇ = ಸೂಕ್ಷ್ಮ ವಾಗದೇ ಕುಂದದೇ ॥ " ಸನ್ನಿಧಾಯ ಸುಯಾಮುನ ಇತಿ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಈ ಸಮಸ್ತ " ಇತಿ ॥ " ಮಾಸದು " ಹೋಗದು. ॥ ೧೩ ॥

## ಕನ್ನಡಾರ್ಥ

ಕಾರಣ ಪ್ರಕೃತಿಯು ಪರಮಾತ್ಮನಿಗೆ ಜಡಪ್ರತಿಮಾ ರೂಪವೆಂಬುದಾಗಿ ಹೇಳುತ್ತಾರೆ—" ಈ ಸಮಸ್ತ " ಎಂಬ ಪದ್ಯದಿಂದ ॥ ೧೩ ॥

**ಅವತರಣಿಕಾ :—**ಹಿಂದಿನ ಪದ್ಯಗಳಲ್ಲಿ ಪ್ರಕೃತಿ ಕಾಲ ದೇಶ ಗುಣ ಧರ್ಮ, ಆ ಗುಣ ಧರ್ಮ ಪ್ರವರ್ತಕ ಶ್ರೀಹರಿಯೆ ಎಂದು ಹೇಳಿ, ಈಗ ಶ್ರೀಹರಿಯು ಒಬ್ಬನೇ ತಾನೆ ಇರುವನು ಅದ್ವಿತಿಯ ಬೇರೊಂದು ರೂಪವಿಲ್ಲವಾದರೂ ಸಮಸ್ತ ತ್ರಿವಿಧ ಚೇತನರಲ್ಲಿದ್ದು ಆಯಾ ಜೀವರ ಗುಣಧರ್ಮ ಪ್ರವರ್ತಕನಾಗಿ ಆಯಾ ನಾಮಗಳಿಂದ ಕರೆಸುತ್ತಾನೆಂದು ಶ್ರೀಹರಿಯ ಮಹಾ ಮಹಿಮೆಯನ್ನು ಹೇಳುತ್ತಾರೆ.

**ಏಕಮೇವಾದ್ವಿತೀಯ ರೂಪಾ ।**
**ನೇಕ ಜೀವರೊಳಿದ್ದು ತಾ ಪ್ರ ।**
**ತ್ಯೇಕ ಕರ್ಮವಮಾಡಿ ಮೋಹಿಸುತಿಪ್ಪ ತಿಳಿಸದಲೆ ॥**
**ಮೂಕ ಬಧಿರಾಂಧಾದಿ ನಾಮಕ ।**
**ಈ ಕಳೇವರದೊಳಗೆ ಕರೆಸುವ ।**
**ಮಾಕಳತ್ರನ ಲೌಕಿಕ ಮಹಾಮಹಿಮೆಗೇನಂಬೆ ॥ ೧೪ ॥**

**ಪದ್ಯಾರ್ಥ :—**ಏಕಮೇವ ಅದ್ವಿತೀಯ ರೂಪ=ಒಬ್ಬನೇ ಒಬ್ಬನು ಶ್ರೀಹರಿಯು, ಒಂದೇ ರೂಪಿಯು, ಅವನ ಹೊರ್ತಾಗಿ ಬೇರೇ ಮತ್ತೊಬ್ಬರ ರೂಪಗಳು ಇಲ್ಲೇ ಇಲ್ಲ. ಅನೇಕ ಜೀವರೊಳಿದ್ದು=ಅನಂತ ಜೀವರಲ್ಲಿ ಒಬ್ಬನೇ ಶ್ರೀಹರಿಯು ಬಿಂಬರೂಪನಾಗಿದ್ದರೂ, ತಾ ಪ್ರತ್ಯೇಕ ಕರ್ಮವಮಾಡಿ ಮೋಹಿಸುತಿಪ್ಪ ತಿಳಿಸದಲೆ=ಆಯಾ ಜೀವರ ಸ್ವರೂಪ ಯೋಗ್ಯತೆ ಗುಣ ಕರ್ಮ ಕಾಲವನುಸರಿಸಿ, ಆಯಾ ಗುಣಕರ್ಮ ಕಾಲಗತನಾಗಿ ಸಕಲ ಕ್ರಿಯಾ ಮಾಡಿಸುವನು. ಅಜ್ಞರಿಗೆ ತಾನು ಗುಣಪ್ರವೃತ್ತಿ ಗುಣಗತನೆಂದು ತಿಳಿಯಗೊಡದೆ ಮೋಹಿಸುತಲಿಪ್ಪ=ಭ್ರಾಂತಿಗೊಳಿಸುತ್ತಿರುವನು. ಹೇಗಂದರೆ,

ಮೂಕಬಧಿರ ಅಂಧಾದಿ ನಾಮದಿ ಈ ಕಳೇವರದೊಳಗೆ ಕರೆಸುವ=ಜೀವರ ಸ್ಥೂಲದೇಹ ಕರ್ಮಾನುಸರಿಸಿ, ಈ ಸ್ಥೂಲದೇಹದಿ ಮೂಕ=ಮಾತಾಡಲಿಕ್ಕೆ ಬರದವ, ಬಧಿರ=ಕಿವುಡ, ಅಂಧ=ಕಣ್ಣುಕಾಣಿಸದವ, ಆದಿಪದ, ಕುಂಟ ಚೊಂಚ ಇತ್ಯಾದಿ ಅನೇಕ ನಾಮುಗಳಿಂದ ಜೀವರಲ್ಲಿ ನಿಂತು ಅವರ ದುಷ್ಕರ್ಮವನುಸರಿಸಿ, ಮೂಕತ್ವಾದಿಗುಣಗಳ ನಿಯಾಮಕ ಸ್ವಾಮಿಯಾಗಿರುವನಾಗಿ ಆಯಾ ಗುಣಧರ್ಮಗಳು ವ್ಯಕ್ತಮಾಡುವನು. ಹೊರತಾಗಿ ಶ್ರೀ ಸಚ್ಚಿನ್ಮಯನಾದ ಹರಿಗೆ ಮೂಕತ್ವ ಅಂಧತ್ವ ಬಧಿರತ್ವ ಇಲ್ಲೇ ಇಲ್ಲವಾದರೂ ಜೀವರಲ್ಲಿ ನಿಂತು ಆಯಾ ನಾಮದಿಂದ ಕರೆಸುವ ಮಾಕಳತ್ರನ=ಶ್ರೀ ಲಕ್ಷ್ಮಿಪತಿಯ ಲೌಕಿಕ ಮಹಾ ಮಹಿಮೆಗಳಿಗೇನಂಬೆ ?=ಲೋಕವತ್ತು ಲೀಲಾಕೈವಲ್ಯಂ ಎಂಬುವ ಅರ್ಥವನ್ನೇ ಶ್ರೀ ದಾಸಾರ್ಯರು ಶ್ರೀಹರಿಯ ಲೋಕರೀತ್ಯಾ ವರ್ತಿಸುವ ಮಹಾಮಹಿಮನೆಂದು ವರ್ಣಿಸುತ್ತಾರೆ.

**ಭಾವಸೂಚನ :—**ಏಕೇತಿ ॥ ಅಂತರ್ಭೇದ ಇಲ್ಲದವ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಮೂಕೆ " ಇತಿ ॥ " ತದಧೀನತ್ವ ಹೇತುತಃ ॥ ಶಬ್ದಾಃ ಬ್ರಹ್ಮಣಿ ವರ್ತಂತೇ " ಇತ್ಯುಕ್ತೇಃ ॥ ೧೪ ॥

## ಕನ್ನಡಾರ್ಥ

ಹರಿಯು ಅಗಾಧ ಮಹಿಮೆಯನ್ನು ಬಣ್ಣಿಸುತ್ತಾರೆ " ಏಕಮೇವ " ಎಂಬ ಪದ್ಯದಿಂದ.

ಮೂಲತಃ ಏಕರೂಪನಾಗಿದ್ದರೂ ಅದ್ಭುತ ಶಕ್ತಿಯಿಂದ ಅನೇಕ ರೂಪಗಳಿಂದ ಜೀವರಲ್ಲಿ ಇದ್ದು, ಅವರವರ ಕರ್ಮಗಳನ್ನು ಬೇರೆಬೇರೆಯಾಗಿ, ಯಾರೂ ಅರಿಯದಂತೆ ಮಾಡಿಸುತ್ತಾನೆ. ಈ ದೇಹದಲ್ಲಿ ಜಡ, ಬಧಿರ, ಮೂಕ, ಎಂಬ ಶಬ್ದಗಳಿಂದ ಕರೆಯಿಸಿಕೊಳ್ಳುತ್ತ ಇರುತ್ತಾನೆ.

ಹಾಗಾದರೆ ಮೂಕತ್ವ, ಕಿವುಡು, ಕುರುಡತನಗಳು ಪರಮಾತ್ಮನಿಗೆ ಅನ್ವಯಿಸುವವೇ ? ಎಂದರೆ ಇಲ್ಲ. ಈ ಧರ್ಮಗಳಿರದಿದ್ದರೂ ಈ ಮೂಕತ್ವ

ಮುಂತಾದವುಗಳನ್ನು ಮೂಕರಲ್ಲಿ ನಿಯಾಮಿಸುವದರಿಂದಲೂ ಸ್ವಾಮಿಯಾಗಿರುವದರಿಂದಲೂ ಅಂತರ್ಯಾಮಿಯಾಗಿರುವದರಿಂದಲೂ ಮೂಕ, ಬಧಿರ, ಮುಂತಾದ ಶಬ್ದಗಳು ಭಗವಂತನಲ್ಲಿ ಅನ್ವಯಿಸುವವು, ಅನುವ್ಯಾಖ್ಯಾನದಲ್ಲಿ "ಅಧೀನವಾದವರ ಹೆಸರುಗಳು ಸ್ವಾಮಿಗೆ ನಿಯಾಮಕರಿಗೆ ಸಲ್ಲುವದೇ ಹೊರತು ಅಧೀನರಿಗೆ ಸಲ್ಲುವದಿಲ್ಲ. ರಾಜಾಧೀನನಾದ ಭಟನ " ಜಮೀ " ಶಬ್ದವು ರಾಜನಿಗೇ ಹೊರತು ಭಟನಿಗಲ್ಲ. ಹೀಗೆ ಸರ್ವಸ್ವತಂತ್ರ ಸ್ವಾಮಿ ನಿಯಾಮಕನಾದುದರಿಂದ ದುಃಖಬದ್ಧ ಅವರ ಮುಂತಾದ ಶಬ್ದಗಳೂ, ಅನ್ಯತ್ರೈ ಪ್ರಸಿದ್ಧ ಶಬ್ದಗಳು. ಶ್ರೀಹರಿಯಲ್ಲಿಯೇ ಸಮನ್ವಯಿಸುವವು ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. || ೧೪ ||

**ಅವತರಣಿಕಾ :—**ಶ್ರೀಹರಿಯ ಲೌಕಿಕ ಮಹಾಮಹಿಮೆಯನ್ನು ಪ್ರತ್ಯಕ್ಷವಾದ ನಾಮಗಳನ್ನನುಸರಿಸಿ ಶ್ರೀಹರಿಯ ಕಾರ್ಯರೂಪವನ್ನು ವರ್ಣಿಸುತ್ತಾ ಶ್ರೀಹರಿಯ ಮಹಾಮಹಿಮೆ ಕೊಂಡಾಡುತ್ತಾರೆ.

**ಲೋಕಬಂಧುರ್ಲೋಕನಾಥ ವಿ ।**
**ಶೋಕಭಕ್ತರ ಶೋಕನಾಶನ ।**
**ಶ್ರೀಕರಾರ್ಚಿತ ಸೋಕಪಂದಲಿಪ್ಪ ಸರ್ವರೊಳು ॥**
**ಸಾಕುವನು ಸಜ್ಜನರ ಪರಮ ಕೃ ।**
**ಪಾಕರೇಶ ಪಿನಾಕಿಸನ್ನುತ ।**
**ಸ್ವೀಕರಿಸುವಾನತರು ಕೊಟ್ಟ ಸಮಸ್ತ ಕರ್ಮಗಳ ॥ ೧೫ ॥**

**ಪದ್ಯಾರ್ಥ :—**ಲೋಕಬಂಧು ರ್ಲೋಕನಾಥ" (ಎಂದು ವಿಷ್ಣು ಸಾಸಿರನಾಮ) "ಲೋಕಾನಾಂ ಬಂಧನ ಹೇತುತ್ವಾತ್ = ಜೀವರುಗಳ ಬಂಧನಕ್ಕೆ ಕಾರಣನಾದುದರಿಂದ ಅಥವಾ ಲೋಕಜನಕತ್ವಾತ್ = ಜೀವರನ್ನು ಲಿಂಗ ಉಪಜಯದ್ವಾರಾ ಸೃಷ್ಟಿಗೆ ತರುವನಾದುದರಿಂದಲೂ ಅಥವಾ ಲೋಕ ಹಿತೋಪದೇಶಕತ್ವಾತ್ = ಜೀವರುಗಳ ಅನಾದಿ ಸ್ವಭಾವ ಯೋಗ್ಯತೆಯನುಸರಿಸಿ ಸಾಧನಮಾಡಿಸಲು ಅವರವರ ಗುಣಧರ್ಮದಂತೆ ಹಿತ ಉಪದೇಶವನ್ನು ಮಾಡುವನಾದುದರಿಂದಲೂ **ಲೋಕಬಂಧುಃ** ಎಂದು ವಿದ್ಯಾಧಿರಾಜೀಯ,

**ಲೋಕನಾಥಃ**="ಲೋಕೈರ್ನಾರ್ಥ್ಯತೇ ವಾಚ್ಯತ ಇತಿ ಲೋಕನಾಥಃ ॥ ಲೋಕಾನ್ನಾಥತೇ ಉಪತಪತ್ಯಾ ಶಾಸ್ತ್ರ ಇತಿ ಲೋಕನಾಥಃ ॥ (ವಿದ್ಯಾಧಿರಾಜೀಯ) ಲೋಕರಿಂದ ಜೀವರಿಂದ ಯಾಚನಾ ಪ್ರಾರ್ಥನೆ ಮಾಡಿಸಿಕೊಳ್ಳುವನು. ಲೋಕಾನ್ ಯೋಗ್ಯರಾದ ಜನರುಗಳಿಗೆ ಜ್ಞಾನಕೊಟ್ಟು ಶಾಸನ ಮಾಡುವನಾದುದರಿಂದ ಲೋಕನಾಥನೆಂದು ಹರಿಗೆ ಹೆಸರು. ವಿಶೋಕ= ವಿಗತಶೋಕೋಯಸ್ಯೇತಿ ವಿಶೋಕಃ ಹೋಗಲ್ಪಟ್ಟ ಶೋಕ (ಕ್ಲೇಶಾದಿ) ನಾದವನಾದುದರಿಂದ ಭಕ್ತರ ಶೋಕನಾಶನ=ತನ್ನ ಭಕ್ತರ ಕ್ಲೇಶಾದಿಗಳನ್ನು ಕಳೆಯುವವನು ದೂರ ಮಾಡುವವನು ಶ್ರೀಕರಾರ್ಚಿತ=ಸಂತತ ಶ್ರೀ ಲಕ್ಷ್ಮಿಗೆ ಬಿಂಬರೂಪನಾದ ಶ್ರೀಶಬ್ದವಾಚ್ಯನಾದ ವಿಜ್ಞಾನರೂಪಿ ಹರಿಯು ತನ್ನಿಂದ ತಾನೇ ಪೂಜಾಮಾಡಿಕೊಳ್ಳತಕ್ಕವ ಆನಂದಮಯ ಪುರುಷನು ವಿಜ್ಞಾನಮಯನಿಂದ ಅರ್ಚನೆಮಾಡಿಕೊಳ್ಳುವನಾದರೂ ಶ್ರೀ ಲಕ್ಷ್ಮೀದೇವಿಯಳಿಗೆ ಭೂತಿಕೊಡಲು ಲಕ್ಷ್ಮೀ ಕರಕಮಲದಿಂದ ಪೂಜಿತನೆಂದು ಸುಪ್ರಸಿದ್ಧ ನಿತ್ಯಪೂರ್ಣಕಾಮನಾದ ಶ್ರೀಹರಿಯು ಇನ್ನೊಬ್ಬರ ಸೇವೆಯಿಂದ ತೃಪ್ತನಲ್ಲ. ಸರ್ವರೊಳು=ಸಕಲ ಜೀವರೊಳಗೆ ತಾನು ಅಂತರ್ಯಾಮಿಯಾಗಿದ್ದರೂ, ಸೋಕದಂದಲಿಪ್ಪ=ಅವರಿಂದ ಸುಕರ್ಮ ದುಷ್ಕರ್ಮ ಮಾಡಿಸಿದರೂ, ಆ ಕರ್ಮ ತಗಲುವಿಕೆ, ಕರ್ಮಲೇಪವು ಶ್ರೀಹರಿಗೆ ಇಲ್ಲ. ಸಜ್ಜನರ ಸಾಕುವನು=ಮುಕ್ತಿಯೋಗ್ಯ ಸತ್ವಜೀವರನ್ನು ಮುತ್ತೈದೆಯು, ತನ್ನ ಮೂಗಿನೊಳಗಿನ ಮೂಗುತಿಯಂತೆ ಕಾಪಾಡುವನು ರಕ್ಷಿಸುವನು ಆನಂದ ಕೊಡುವನು. ಇಲ್ಲಿ ಅಸಜ್ಜನರಾದ ದೈತ್ಯಾದಿಗಳಿಗೆ ಜೀವನಪ್ರದನಾಗಿ ರಕ್ಷಣ ಮಾಡುವನಲ್ಲವೆಂಬ ಶಂಕಾ ಬಂದೇ ಬರುವದು. ಆದರೆ ಶ್ರೀಹರಿಗೆ ವೈಷಮ್ಯಾದಿಗಳಿಲ್ಲ. ಶಿಷ್ಟರಕ್ಷಕ ದುಷ್ಟಶಿಕ್ಷಕನೆಂಬುವ ಬಿರುದುಂಟು. "ಸಮಪ್ರಿಯ ಸ್ಸುಹೃತ್"ನಾಗಿದ್ದರೂ ತ್ರಿವಿಧರಿಗೆ ತಕ್ಕ ಕರ್ಮಫಲ ಕೊಡುವನು. ದುಷ್ಟರನ್ನು ಮರ್ದನಮಾಡಿ, ಶಿಕ್ಷಿಸಿ ಧರ್ಮರಕ್ಷಣ ಮಾಡುವದೇ ರಕ್ಷಕತ್ವ ಪರಮಕೃಪಾಕರೇಶ=ಉತ್ತಮನಾದವನು ಕೃಪಾಕರುಣಾಕರನೂ, ಶ್ರೇಷ್ಠನೂ ಜಗತ್ರಿಗೆ ಈಶನು, ಪಿನಾಕಿಸನ್ನುತ=ಪಿನಾಕಿಧನು ಧರಿಸಿದ ಮಹರುದ್ರದೇವರಿಂದ ವಂದ್ಯನು ಎಂದರೆ ಸರ್ವೋತ್ತಮ. ಆನತರು=ಶರಣಾಗತ ಭಕ್ತರು ಕೊಟ್ಟ ಸಮಸ್ತ ಕರ್ಮಗಳ=ಭಕ್ತರು ಶ್ರೀ ಹರಿ ಸರ್ವಕರ್ತಾನೆಂದು

ಅರಿದು ಶ್ರೀಹರಿ ಮಾಡಿಸಿದ ಸಕಲ ಪುಣ್ಯ ಪಾಪಕರ್ಮಗಳ ಕ್ರಿಯೆಗಳನ್ನು ಆತ್ಮಸಮರ್ಪಣ ರೂಪವಾಗಿ ಅರ್ಪಿಸಿದರೆ ಆ ಕರ್ಮಗಳನ್ನು ಸ್ವೀಕರಿಸುವನು=ಪ್ರೀತಿಯಿಂದ ಕರ್ಮಜನ್ಯ ಸ್ವಾಖ್ಯ ಫಲವನ್ನು ಮುಖ್ಯವಾಗಿ ತಾನು ತನ್ನ ರಸ ಉಂಡು, ಭಕ್ತರಿಗೆ ಅವರ ಯೋಗ್ಯ ಫಲ ಕೊಡುವನು.

**ಭಾವಸೂಚನ :**—ಲೋಕೇತಿ ॥ "ಲೋಕಬಂಧುರ್ಲೋಕನಾಥೋ ವಿಶೋಕ ಶೋಕನಾಶನ" ಇತಿ ಚ। ಸೋಕದಂದಲಿ ಲಿಪ್ತನಾಗದೇ ! ಪಿನಾಕೀ ಪ್ರಮಥಾದಿತ್ಯಮರಃ ॥ ರುದ್ರ ಇತ್ಯರ್ಥಃ ಆನತರು ಭಕ್ತರು ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ಲೋಕಬಂಧುಃ"** ಇತಿ ॥ ಓಂ ॥ ಜುಷಂತ ಯತ್ ಪ್ರತ್ನವಜ್ಜನಯಾ ಗಿರಃ ಶೃಣುಧೀ ಜರಿತುರ್ಹವಮ್ ॥ ಮದೇ ಮದೇ ವವಕ್ಷಿಥಾ ಸುಕೃತ್ವನೇ (ಕ್ರೀಳಂತ್ವಸ್ಯ) ॥ ಓಂ ॥ ಲೋಕಾನ್ ಸಾಧುಜನಾನ್ ಆತ್ಮನಿ ಬಧ್ನಾತಿ ಇತಿ ತಥೋಕ್ತಃ ॥

**"ಲೋಕನಾಥಃ"**—ಓಂ ॥ ಸೂನೃತಾ ಆಪೋನ ಪ್ರವತಾ ಯತೀಃ ಅಯಾ ಧಿಯಾ ಯ ಉಚ್ಯತೇ ಪತಿರ್ದಿವಃ ಉತೋ ಪತಿರ್ಯ ಉಚ್ಯತೇ ಕೃಷ್ಟೀನಾಮೇಕಃ ॥ ಓಂ ॥ ಲೋಕಾನಾಂ ನಾಥಃ ಐಶ್ವರ್ಯಾತ್ ಇಂದ್ರಃ ॥

**"ವಿಶೋಕ"**—ಓಂ ॥ ವಿದ್ವಾನ್ ಚಕಿತ್ವಾನ್ ಹರ್ಯಶ್ವ ವರ್ಧಸೇ ಇಂದ್ರ ವಿಶ್ವಾ ಅಭಿಶ್ರಿಯಃ ದ್ಯಾಮಿಂದ್ರೋ ಹರಿಧಾಯಸಂ ಪೃಥಿವೀಂ ಹರಿವರ್ಪಸಮ್ ॥ ಓಂ ॥ ವಿಗತಃ ಶೋಕಃ ಯಸ್ಮಾತ್ ತಥೋಕ್ತಃ ॥

**"ಶೋಕನಾಶನಃ"** ॥ ಓಂ ॥ ಆಧಾರಯದ್ಧರಿತೋರ್ಭೂರಿ ಭೋಜನಂ ಯಯೋರಂತರ್ಹರಿಶ್ಚರತ್ ಜಜ್ಞಾನೋ ಹರಿತೋ ವೃಷಾ ವಿಶ್ವಮಾ ಭಾತಿ ರೋಚನಂ ॥ ಓಂ ॥ ಶೋಕಂನಾಶಯತಿ ಇತಿ ತಥೋಕ್ತಃ ॥

"ಸೋಕ"–ಲೇಪ ॥ "ಪಿನಾಕೀ" ರುದ್ರಃ ॥ ಆನತಾಃ ನಮಸ್ಕೃತಃ (ತಾಃ) ॥ ೧೫ ॥

## ಕನ್ನಡಾರ್ಥ

**" ಲೋಕಬಂಧು "** ಸಾಧುಜನರನ್ನು ತನ್ನಲ್ಲಿ ಬಂಧಿಸುವವನು ಆಕರ್ಷಿಸಿ ಬಿಟ್ಟು ಅಗಲದೇ ಇರುವವನು.

**" ಲೋಕನಾಥ "** ಅಖಂಡೈಶ್ವರ್ಯದಿಂದ ಲೋಕಗಳಿಗೆಲ್ಲ ಸ್ವಾಮಿಯಾದವನು ಅಧಿಪತಿಯಾದವನು.

**" ವಿಶೋಕ "** ಶೋಕದಿಂದ ಸರ್ವದಾ ಅತಿ ದೂರದಲ್ಲಿರುವವನು.

**" ಶೋಕನಾಶನ "** ಸಜ್ಜನರ ಶೋಕಗಳನ್ನು ಕಳೆಯುವವನು. ಹೀಗೆ ಬೃಹತೀ ಮಂತ್ರಾಭಿಪ್ರೇರಿತವಾದ ನಾಮಾರ್ಥಗಳ ಸಂಕ್ಷೇಪ ವಿವರಣೆ. ಸರ್ವರಲ್ಲಿ ಇದ್ದರೂ ಲೇಪವಿಲ್ಲ. ಪುಣ್ಯಪಾಪ ಸಂಬಂಧವಿಲ್ಲ ಎಂದು " ಸೋತ ದಂದದಿ " ಎಂಬುದರ ತಾತ್ಪರ್ಯ. "ಪಿನಾಕಿ" ರುದ್ರ ಶಂಭು. "ಆನತರು" ನಮಸ್ಕರಿಸಿದವರು. || ೧೫ ||

**ಅವತರಣಿಕಾ :**—ಪರಮಾತ್ಮನಾದ ಬಿಂಬರೂಪಿ ಹರಿಯಿಂದ ದತ್ತವಾದ ಸಕಲ ಜಡಚೇತನವಸ್ತುಗಳು ಶ್ರೀಹರಿಯ ಅಧೀನವು ಎಂದು ಪರವು ಪ್ರೀತಿಯಿಂದ ಸರ್ವನಾಮಕನಾದ ಶ್ರೀಹರಿಗೆ ಅರ್ಪಿಸುವದೆಂದು ಶಿಕ್ಷಿಸುತ್ತಾರೆ.

**ಆಹಿತ ಪ್ರತಿಮೆಗಳೆನಿಸುವವು ।**
**ದೇಹಗೇಹಾಪತ್ಯ ಸತಿಧನ ।**
**ಲೋಹಕಾಷ್ಟ ಶಿಲಾಮೃದಾತ್ಮಕವಾದ ದ್ರವ್ಯಗಳು ॥**
**ನೇಹ್ಯದಲಿ ಪರಮಾತ್ಮ ಎನಗಿ ।**
**ತ್ತೀಹನೆಂದರಿದನುದಿನದಿ ಸ ।**
**ನ್ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ ॥ ೧೬ ॥**

**ಪದ್ಯಾರ್ಥ:**—ದೇಹ=ತನ್ನ ಸ್ವದೇಹ ಸ್ಥೂಲ ಜಡವಾದ ಶರೀರ, ಗೇಹ=ಜಡ ಅಚಲವಾದ ಮನೆ, ಆಪತ್ಯ=ಚೇತನರಾದ ಸತ್ಪುತ್ರರು, ಸತಿ=ಪತಿಧರ್ಮ ಪರಾಯಣಳಾದ ಪತಿವ್ರತಾ ಹೆಂಡತಿ, ಧನ=ಜಡವಾದ ದ್ರವ್ಯ·ಕನಕಾದಿ ಧಾನ್ಯದವಸಗಳು, ಲೋಹಕಾಷ್ಟ=ಕಬ್ಬಿಣ ಕಟ್ಟಿಗೆ, ಶಿಲಾ=ಕಲ್ಲು, ಮೃದಾತ್ಮಕ, ಉಸುಬಿನಿಂದ ನಿರ್ಮಿತ ಸೈಕತ ಪ್ರತಿಮಾದಿ ದ್ರವ್ಯ

ಗಳು=ಧನ ಪದಾರ್ಥ ನಾನಾಬಗೆಯ ವಸ್ತುಗಳು ಆಹಿತ ಪ್ರತಿಮೆಗಳೆನಿಸು ವವು ೫ನೇ ಸಂಧಿಯಲ್ಲಿ ವಿವರಿಸಿದಂತೆ ಇವುಗಳಲ್ಲಿ ಹರಿಸನ್ನಿಧಾನ ವಿಶೇಷ ವೆಂದು ತಿಳಿದು, ನೇಹದಲಿ=ಪ್ರೀತಿಯಿಂದ, "ಋಣಾನುಬಂಧೇನ ಸತಿಸುತ ಮಿತ್ರಾದಯಃ" ಶ್ರೀಹರಿಯು, ಎನಗಿತ್ತೀಹ=ಎನ್ನಗೆ ಕೊಟ್ಟಿರುವ ಸತಿ ಸುತ ಧನಾದಿಗಳು ನನ್ನವಲ್ಲ. ಶ್ರೀಹರಿಯು ನನ್ನ ಭೋಗಕ್ಕಾಗಿ ಕೊಟ್ಟಿರು ವನೆಂದು, ಅರಿದು=ಶಾಸ್ತ್ರ ವಿಮರ್ಶದಿಂದ ಸತಿ ಸುತ=ಜೀವರೆಲ್ಲ ಹರಿಯು ಆಧೀನರು, ಕನಕಾದಿ ವಸ್ತುಗಳು ಜಡಗಳೂ ಸಹ ಎನ್ನಿಂದ ಭಿನ್ನವೆಂದು ತಿಳಿದು, ಅನುದಿನ=ನಿರಂತರ ಭಗವದತ್ತ ಧರ್ಮಗಳನ್ನು ತಿಳಿಯುತ್ತ, ಸರ್ವ್ಮೋಹಕೊಳಗಾಗದಲೆ=ಸತಿಸುತಧನಾದಿಗಳು ನನ್ನದು ನನ್ನವರೆಂದು ದುರಾಶೆ ಕೆಟ್ಟ ಪ್ರೀತಿ ಹಚ್ಚಿಕೊಳ್ಳದಲೇ ಅಜ್ಞಾನಕೊಳಗಾಗದಲೇ ಪೂಜಿಸು= ಪರಮಾತ್ಮಗೆ ಅರ್ಪಿಸಿ, ಪೂಜಾ ಮಾಡು, ಯಾವ ಹರಿ ರೂಪವನ್ನು ಪೂಜಿಸ ಬೇಕೆಂದರೆ—**ಸರ್ವನಾಮಕನ** "ಸರ್ವ ಶರ್ವ ಶಿವ ಸ್ಥಾಣು" (ಎಂದು ವಿಷ್ಣು ಸ. ನಾಮ) "ಪೂರ್ಣಗುಣತ್ವಾತ್ ಸರ್ವಃ ॥ ವಿಶ್ವಂ ಪೂರ್ಣಸ್ತಥಾ ಸರ್ವಃ ಸಮಸ್ತಾಶ್ಚಾಭಿಧೀಯತ್ ಇತಿ ಅಭಿಧಾನಾತ್ ॥ ಪೂರ್ಣಶಕ್ತಿದ್ವಾ ಸರ್ವಃ, ಸಂಪೂರ್ಣಸಾಮರ್ಥ್ಯಾದಿತಿ ವಚನಾತ್ ॥ ಸರ್ವ ವ್ಯಾಪಕತ್ವಾದ್ವಾ ಸರ್ವಃ ॥ ಸರ್ವಂ ಸಮಾಪ್ನೋಷಿತತೋಽಸಿ ಸರ್ವ ಇತಿ ಗೀತಾ ವಚನಾತ್ ॥ ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವಾಪ್ಯಯಃ ॥ ಸರ್ವಸ್ಯ ಸರ್ವದಾಜ್ಞಾನಾತ್ಸ ಸರ್ವಮೇನಂ ಪಚಕ್ಷತ ಇತಿ ವ್ಯಾಸವಚನಾದ್ವಾ ಸರ್ವಃ (ವಿದ್ಯಾಧಿರಾಜೀಯ) ಪೂರ್ಣಗುಣಪೂರ್ಣಶಕ್ತಿ ಸರ್ವವ್ಯಾಪಕಾದಿ ಅನೇಕ ಗುಣಪರಿಪೂರ್ಣನಾದ ಶ್ರೀಹರಿಗೆ ಸಮರ್ಪಿಸಿ ಪೂಜಿಸು.

**ಭಾವಸೂಚನ :**—ಆಹಿತೇತಿ॥ ಏತದ್ವಿಭೂತಿ ಸಂಧೌ ವ್ಯಕ್ತಂ ॥೧೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆಹಿತ" ಇತಿ ॥ "ನಿತ್ಯಂ ತತ್ರೇಶ ಸನ್ನಿಧೇಃ ॥೧೬॥

## ಕನ್ನಡಾರ್ಥ

ದೇಹಗೇಹಾದಿಗಳು ಆಹಿತ ಪ್ರತಿಮೆಗಳು, ಅಲ್ಲಿ ಪರಮಾತ್ಮನನ್ನು ನೆನೆ ಯುತ್ತ, ಸ್ನೇಹದಿಂದ ವರ್ತಿಸಿ, ಸರ್ವನಾಮಕನನ್ನು ಸರ್ವದಾ ಪೂಜಿಸು

ಎಂದು ಹೇಳುತ್ತಾರೆ. "ಆಹಿತ" ಎಂಬ ಪದ್ಯದಿಂದ. "ನಿತ್ಯದಲ್ಲಿಯೂ ಈ ಆಹಿತ ಪ್ರತಿಮೆಗಳಲ್ಲಿ ಹರಿಯು ಸನ್ನಿಧಾನವಿರುತ್ತದೆ." ॥ ೧೬ ॥

**ಅವತರಣಿಕಾ :—**ಹಿಂದೆ ಜಡ ಪ್ರತಿಮಾಗಳ ಪೂಜಾ ಹೇಳಿ ಇನ್ನು ಶ್ರೀಹರಿಗೆ ಸಕಲ ಜೀವರು ಚೇತನ ಪ್ರತಿಮಾಗಳು ಸಕಲರಲ್ಲಿ ಸರ್ವವ್ಯಾಪಕನಾಗಿ ವ್ಯಾಪಾರಮಾಡುವನಲ್ಲದೆ ಸರ್ವೇಂದ್ರಿಯಗಳನ್ನು ತೃಪ್ತಿ ಬಡಿಸುತ್ತಾ, ತಾನು ಅಂತರಾತ್ಮನಾಗಿ ಗಾಳಿ ಸೋಕದ ದೀಪದಂತೆ ಸದಾ ತೇಜಃಪುಂಜನಾಗಿ ನಿರ್ಭಯನಾಗಿರುವ ಬಿಂಬನನ್ನು ಧೇನಿಸೆಂದು ಉಪದೇಶಿಸುತ್ತಾರೆ.

**ಶ್ರೀತರುಣಿ ವಲ್ಲಭಗೆ ಜೀವರು ।**
**ಚೇತನ ಪ್ರತಿಮೆಗಳು ಓತ ।**
**ಪ್ರೋತನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ॥**
**ಹೋತ ಸರ್ವೇಂದ್ರಿಯಗಳೊಳು ಸಂ ।**
**ಪ್ರೀತಿಯಿಂದುಂಡುಣಿಸಿ ವಿಷಯ ನಿ ।**
**ರ್ವಾತ ದೇಶಗ ದೀಪದಂದಲಿಪ್ಪ ನಿರ್ಭಯದಿ ॥೧೭॥**

**ಪದ್ಯಾರ್ಥ :—**ಶ್ರೀ ತರುಣಿ ವಲಭ=ಶ್ರೀ=ಮೋಕ್ಷಾದಿ ಸಂಪತ್ತಿಗೆ ಕಾರಣಳಾದ, ತರುಣಿ=ಸದಾ ಷೋಡಶ ವರುಷ ಪ್ರಾಯದವಳು ತಾರುಣ್ಯಳಾದ ಶ್ರೀ ಲಕ್ಷ್ಮಿದೇವಿಗೆ ವಲ್ಲಭ=ಪತಿಯಾದ ಶ್ರೀಹರಿಗೆ, ಜೀವರು=ಸಕಲ ಪ್ರಾಣಿಗಳು, ಚೇತನ ಪ್ರತಿಮೆಗಳು=ಚಲಿಸತಕ್ಕ ಮೂರ್ತಿಗಳು, ಗೊಂಬೆಗಳು, ಶ್ರೀಹರಿ ಅಧಿಷ್ಠಾನ ಉಳ್ಳವುಗಳು, ಇಂತಹ ಚೇತನ ಪ್ರತಿಮೆಗಳಲ್ಲಿ, ಓತಪ್ರೋತನಾಗಿದ್ದು=ಅಡ್ಡ ಉದ್ದ ನೇಯ್ದ ವಸ್ತ್ರದಲ್ಲಿ ದಾರಗಳಿದ್ದಂತೆ ಸರ್ವಕಡೆಗೆ ಇದ್ದು, ವ್ಯಾಪಾರ ಮಾಡುತಿಹ=ಸಕಲ ಜೀವಾಂತರ್ಯಾಮಿಯಾಗಿದ್ದು ಪ್ರೇರಿಸಿ ತಾನು ಮಾಡಿ, ಜೀವರಿಂದ ಸಕಲ ವ್ಯಾಪಾರ ಮಾಡಿಸುವನಲ್ಲದೆ, ಹೋತ=ಜುಹೋತೀತಿ ಹೋತಾ=ಹವನ ಮಾಡುವನು, ಇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸಿ, ತಜ್ಜನ್ಯ ಸುಖವನ್ನು, ಪ್ರೀತಿಯಿಂದ ಉಂಡು ಉಣಿಸಿ=ಅತ್ಯಾದರದಿಂದ, ಆ ವಿಷಯ ಪ್ರವರ್ತಕ ಸ್ವಾಖ್ಯರೂಪರಸಗಳನ್ನು ತಾನುಂಡು, ಉಣಿಸಿ=ಜೀವರಿಗೆ ಊಟ ಮಾಡಿಸಿ, ಸದಾ ಸರ್ವಕಾಲ,

ನಿರ್ವಾತದೇಶಗ=ಗಾಳಿ ಇಲ್ಲದ ಸ್ಥಳದಲ್ಲಿ ಇರುವ ದೀಪವು ಹೇಗೆ ಶಾಂತವಾಗಿ ಹೊಯ್ದಾಡದೇ ಪ್ರಕಾಶಮಾನವಾಗಿರುವುದೋ ಅದರಂತೆ ಶ್ರೀಹರಿಯು ಸರ್ವ ಸ್ವತಂತ್ರ ನಿರ್ಭಯದಿ=ಒಬ್ಬರ ಭಯವಿಲ್ಲದೇ ಸದಾ ಸ್ವಪ್ರಕಾಶಮಾನನಾಗಿ ಇರುವನು.

**ಭಾವಸೂಚನ :—**ಶ್ರೀತರುಣೇತಿ || ಹೋತ ಅನುಭವಿಸುವವ, ನಿರ್ವಾತ=ಗಾಳಿ ಇಲ್ಲದ್ದು || ೧೭ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಶ್ರೀತರುಣಿ" ಇತಿ || "ಓತಪ್ರೋತ" ಸಂಬದ್ಧ|| ನಿರ್ವಾತ ನಿರ್ವಾಯು || ೧೭ ||

**ಕನ್ನಡಾರ್ಥ**

ಚೇತನ ಪ್ರತಿಮೆಗಳಲ್ಲಿ-ಜೀವರಲ್ಲಿ ಬಿಂಬನ ವ್ಯಾಪಾರಗಳನ್ನು ತಿಳಿಸುತ್ತಾರೆ, ಹೇಳುತ್ತಾರೆ "ಶ್ರೀತರುಣಿ" ಎಂಬ ಪದ್ಯದಿಂದ. ಪದ್ಯಾರ್ಥವು ಸ್ಪಷ್ಟವಿದೆ. || ೧೭ ||

**ಅವತರಣಿಕಾ :—**ಶ್ರೀವಿಷ್ಣುವಿನ ವ್ಯಾಪಾರವಿಲ್ಲದೇ ಜಗತ್ತಿನ ವ್ಯಾಪಾರ ಸರ್ವಥಾ ಆಗದೆಂದು ದೃಷ್ಟಾಂತಪೂರ್ವಕವಾಗಿ ಹೇಳಿ ಸಕಲ ಜೀವರು ಈಶನಿಂದ ಭಿನ್ನರು ಪ್ರತಿಬಿಂಬರು ಎಂದು ಪುನಃಪುನಃ ನಿಶ್ಚಯಾರ್ಥವಾಗಿ ಉಪದೇಶಿಸುತ್ತಾರೆ.

**ಭೂತ ಸೋಕಿದ ಮಾನವರು ಬಹು।**
**ಮಾತನಾಡುವ ತೆರದಿ ಮಾಹಾ।**
**ಭೂತಾ ವಿಷ್ಣ್ವಾವೇಶದಿಂದಲಿ ವರ್ತಿಪದು ಜಗವು॥**
**ಕೈತವೋಕ್ತಿಗಳಲ್ಲ ಶೇಷ ಫ।**
**ಣಾತ ಪತ್ರಗೆ ಜೀವ ಪಂಚಕ।**
**ವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರಸುವದು ॥ ೧೮ ॥**

**ಪದ್ಯಾರ್ಥ :—**ಭೂತ ಸೋಕಿದ ಮಾನವರು=ಪಿಶಾಚಿ ದೆವ್ವ ಬಡಿದ ಮಾನವರು=ಮನುಜರು, ಬಹು ಮಾತನಾಡುವ ತೆರದಿ=ಆ ಪಿಶಾಚ

ಆವೇಶದಿಂದ ಬಹಳ ಮಾತು ಆಡುತ್ತಾರೆ. ಆಗ್ಗೆ ಮನುಜನ ಮೈಮೇಲಿ ಎಚ್ಚರ ಸಹ ಇರುವದಿಲ್ಲ. ಅದರಂತೆ ಮಹಾಭೂತ ವಿಷ್ಣ್ವಾವೇಶದಿಂದಲಿ= "ಏಕೋ ವಿಷ್ಣುಂ ಮಹದ್ಭೂತಂ" ಎಂಬ ವಚನಾನುಸಾರ, ಆ ಪಿಶಾಚಿ ಭೂತ ಭೂತೇಶ್ವರರಿಗೂ ಪ್ರವರ್ತಕನಾದ, ಮಾಹಾಭೂತ=ದೊಡ್ಡ ದೆವ್ವ ಸಾಮಾನ್ಯ ಅರ್ಥ, ಮಾಹಾಭೂತ=ಸಕಲ ಚೇತನರಲ್ಲಿ ಸಚ್ಚೇತನ, ಸಕಲ ಚೇಷ್ಟಕನಾದ ಭೂತನಾದ, ವಿಷ್ಣ್ವಾವೇಶದಿಂದಲಿ=ವಿಷ್ಣುವಿನ ಆವೇಶ ದಿಂದಲೆ ಅಂದರೆ "ವ್ಯಾಪಕತ್ವಾದ್ವಿಷ್ಣುಃ। ಅಥ ಕಸ್ಮಾದುಚ್ಯತೇ **ಮಹಾ ವಿಷ್ಣು ಇತಿ।** "ಯಸ್ಮಾತ್ ಸುಮಹಿಮ್ನಾ ಸರ್ವಾ೯ ಲೋಕಾನ್ ಸರ್ವಾ೯ ದೇವಾನ್ ಸರ್ವಾತ್ಮನಃ। ಸರ್ವಾಣಿ ಭೂತಾನಿ ವ್ಯಾಪ್ನೋತಿ ವ್ಯಾಪಯ ತೀತ್ಯಾದಿ ತಾಪನೀಯ ಶ್ರುತೇಃ॥ ಅಥ ಷ ಕಾರಣೇಕಾಕಾ ಚೇಷ್ಟಾಬಲವಾಚಿ ನಾ॥ "ಣಕಾರೋ ಬಲಂ ಷಕಾರ ಪ್ರಾಣ ಆತ್ಮೇತಿ" ಶ್ರುತೇ॥ ತಥಾ ಚ ವಿಶಿಷ್ಟ ಚೇಷ್ಟಾ ಬಲಶಾಲಿತ್ವಾದ್ವಿಷ್ಣುಃ॥ ಉಕ್ತಂಚ ವಿಶೇಷ ಬಲ ಚೇಷ್ಟತ್ವಾ ವಿಷ್ಣುರಿತ್ಯಾಭಿಧಾ ಹರೇಃ। ಪ್ರಾಣಂ ಬಲಂ ವಕಾರಂ ಚಾಹ ಹಿಃ ಶ್ರುತಿಃ॥ (ವಿದ್ಯಾಧಿರಾಜೀಯ) ಮಹಾಭೂತನಾದ ಮಹಾವಿಷ್ಣುವಿನ ವಿಶಿಷ್ಟ ಚೇಷ್ಟ ದಿಂದಲೇ ಈ ಜಗವು ವರ್ತಿಪದು=ಜಗತ್ತು ಶಬ್ದ ಜೀವಪರನೂ, ವಾಚ್ಯ, ಹೀಗೆ ಸಕಲ ಜಗತ್ತು ವಿಷ್ಣುವಿನಿಂದಲೇ ವರ್ತಿಪುದು=ಚೇಷ್ಟಾಮಾಡುವದು, ನಡೆಯುವದು, ಕೈತವೋಕ್ತಿಗಳಲ್ಲ=ಇವು ಕಪಟ ವಂಚನೆ ಚಪಲ ಮಾತು ಗಳಲ್ಲ, ಶ್ರುತಿಗಳ ನಿಜಾರ್ಥವು. ಶೇಷಫಣಾತ ಪತ್ರಗೆ ಶೇಷನ ಹೆಡೆಯೇ ನೆರಳು ಮಾಡುವ ಛತ್ತರಿಕೆ ಆಗಿ ಉಳ್ಳ ಅಂದರೆ ಶೇಷ ಅಂತರ್ಯಾಮಿ ಸಂಕರ್ಷಣ ರೂಪಿ ಹರಿಯೇ ತನಗೆ ತಾನೇ ಕೊಡೆಯಾಗಿ ಉಳ್ಳ ಹರಿಗೆ (ಇನ್ನು ಬಹು ಅರ್ಥಗರ್ಭಿತವಾಗಿದೆ), ಜೀವಪಂಚಕವ್ರಾತ=ದೇವ ಋಷಿ ಪಿತೃ ಪ ನರಃ ಎಂದು ಐದು ವಿಧವಾದ ಮುಕ್ತಿಯೋಗ್ಯರಾದ ಸತ್ವ ಜೀವರ ಸಮೂಹವು ವೆಂದಿಗೂ=ಎಂದೆಂದಿಗೂ ನಿತ್ಯದಲ್ಲಿ, ಭಿನ್ನ ಪಾದಾಹ್ವಯದಿ=ಭಿನ್ನಾಂಶರು, ತತ್‌ಸಾದ್ರುಶರು ಪ್ರತಿಬಿಂಬರು ಎಂದು ಕರೆಸುತ್ತಾರೆ "ಭಿನ್ನ ಪಾದಾಸ್ಸರ್ವ ಜೀವಾಸ್ತಸ್ಯ ಸಾದ್ರುಶ ಮಾತ್ರತಃ ಇತಿ ಛಾಂದೋಗ್ಯ ಭಾಷ್ಯೆ॥ ೧೮॥

**ಭಾವಸೂಚನ :—**ಭೂತ ಸೋಕಿದ॥ ಪಿಶಾಚಿ ಹಿಡಿದವ॥ ಭಿನ್ನೇತಿ॥ "ಪಾದೋಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ" ಇತಿ॥ ೧೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭೂತ" ಇತಿ ॥ ಕೈತವ ವಂಚನೆ ॥ ಪಂಚಕಂ ಉಕ್ತಂ ಪೂರ್ವಂ॥೧೮॥

## ಕನ್ನಡಾರ್ಥ

" ವಿಷ್ಣುವಿನ ವ್ಯಾಪಾರವಿಲ್ಲದೆ ಯಾವ ವ್ಯಾಪಾರವೂ ನಡೆಯದು " ಎಂಬುದನ್ನು ದೃಷ್ಟಾಂತದಿಂದ ತಿಳಿಸಿ, "ಜೀವರು ಪರಮಾತ್ಮನ ಭಿನ್ನಾಂಶರು" ಎಂದು ತಿಳಿಸುತ್ತಾರೆ " ಭೂತ " ಎಂಬ ಪದ್ಯದಿಂದ. ದೇವ, ಗಂಧರ್ವ, ಪಿತೃ, ಮನುಷ್ಯ, ಅಸುರರು ಜೀವ ಪಂಚಕರೆನಿಸಿಕೊಳ್ಳುವರು. ||೧೮||

**ಅವತರಣಿಕಾ :—**ಹಿಂದೆ ಹೇಳಿದಂತೆ ಪರಮಾತ್ಮಗೆ, ಭಿನ್ನಾಂಶರೂ ಜೀವರು. ಸ್ವರೂಪಾಂಶವು ಶ್ರೀಹರಿಯ ಮೂರು ಪಾದ, ಒಟ್ಟಿಗೆ ಚತುಷ್ಪಾತು ಶ್ರೀಹರಿಯೆಂದು ಪುರುಷಸೂಕ್ತಗತ ಶ್ರೀಹರಿಯೇ ಬಿಂಬನೆಂದು ಉಪಾಸಿಸಲು ಉಪದೇಶ ಮಾಡುತ್ತಾರೆ.

**ದಿವಿಯೊಳಿಪ್ಪವು ಮೂರು ಪಾದಗ।**
**ಳವನಿಯೊಳಗಿಹದೊಂದು ಈ ವಿಧ।**
**ಕವಿಭಿರೀಡಿತ ಕರಸುವ ಚತುಷ್ಪಾತು ತಾನೆಂಪು ॥**
**ಇವನ ಪಾದ ಚತುಷ್ಟಯುಗಳನು।**
**ಭವಕೆ ತಂದು ನಿರಂತರದಿ ಉ॥**
**ದ್ಧವನ ಸಖ ಸರ್ವಾಂತರಾತ್ಮಕನೆಂದು ನಮಿಸುತಿರು ॥ ೧೯ ॥**

**ಪದ್ಯಾರ್ಥ :—**ದಿವಿಯೊಳಿಪ್ಪವು ಮೂರು ಪಾದಗಳು=ಸ್ವರ್ಗ ಎಂದರೆ ಸ್ವರ್ಗಕ್ಕೆ ಸಮಾನ ದೇಶದಲ್ಲಿ ಮೂರು, ಪಾದವೆಂದರೆ " ಉತ್ತಮಾನಾಂ ಸ್ವರೂಪಂತು ಪಾದ ಶಬ್ದೇನ ಭಣ್ಯತೇ " ಎಂಬುವಂತೆ ಮೂರು ರೂಪ ಗಳಿಂದ ಶ್ರೀಹರಿಯು ಶ್ವೇತದ್ವೀಪ, ಅನಂತಾಸನ, ವೈಕುಂಠದಲ್ಲಿರುವ ಮೂರು ರೂಪಗಳು—" ಸ್ವರೂಪ ಪಾದಾ ವಿಷ್ಣೋಸ್ತು ತ್ರಯೋಹಿ ದಿವಿ ಸಂಸ್ಥಿತಾಃ || ನಾರಾಯಣೋ ವಾಸುದೇವೋ ವೈಕುಂಠ ಇತಿ ಚ" ತ್ರಯ ಇತಿ

ಛಾಂದೋಗ್ಯ ಭಾಷ್ಯೆ, ಅವನಿಯೊಳಗಿಹದೊಂದು=ಭೂಮಿಯ ಮೇಲೆ ಭಗವಂತನ ಒಂದು ರೂಪ "ಪಾದೋಸ್ಯ ವಿಶ್ವಾಭೂತಾನಿ, ತ್ರಿಪಾದಸ್ಯಾಮೃತಂ ದಿವಿ" ಎಂದು ಶ್ರುತಿ ಎಂದರೆ ಸಮಸ್ತ ಭೂಮಂಡಲವಾದ ಜಗತ್ತು ಪೃಥ್ವಿ ಭೂಲೋಕವು ಪರಮಾತ್ಮಗೆ ಆವಾಸಕ್ಕೆ ಯೋಗ್ಯ, ಪರಮಾತ್ಮಗೆ ಭಿನ್ನಾಂಶವಾದ ರೂಪ, ಈ ವಿಧ=ಈ ರೀತಿಯಾಗಿ, ಶ್ರೀಹರಿಯು ಚತುಷ್ಪಾತು ತಾನೆಂದು=ನಾಲ್ಕು ಪಾದ ರೂಪಗಳುಳ್ಳವನೆಂದು ಅಥವಾ "ಗಾಯತ್ರೀ ನಾಮಕೋ ವಿಷ್ಣುಶ್ಚತುಷ್ಪಾತ್ ಸಂಪ್ರಕೀರ್ತಿತ ಇತಿ" ಛಾಂದೋಗ್ಯ ಹೀಗೆ, ಕವಿಭಿರೀಡಿತ=ಜ್ಞಾನಿಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ ಹರಿಯು ಚತುಷ್ಪಾತು ಎಂದು ಕರೆಸಿಕೊಳ್ಳುತ್ತಾನೆ. ಇವನ ಪಾದಚತುಷ್ಟಯಗಳನ್ನು= ಮುಕ್ತಿ ಯೋಗ್ಯರಿಗೆ ಮುಕ್ತಿಯನ್ನು ಕೊಡುವ ಗಾಯತ್ರೀ ಪಾದಚತುಷ್ಟಯ ಪ್ರತಿಪಾದ್ಯ ರೂಪಗಳೇ, ನಾರಾಯಣ, ವಾಸುದೇವ, ವೈಕುಂಠ, ಜಗತ್ತಿನಲ್ಲಿ ವ್ಯಾಪಿಸಿದ ವಿಷ್ಣು ನಾಲ್ಕು ರೂಪಗಳನ್ನು, ನಿರಂತರದಿ=ಪ್ರತಿನಿತ್ಯ ಕಾಲಕಾಲದಲ್ಲಿ, ಅನುಭವಕೆ ತಂದು=ಶ್ರವಣ ಮನನ ದ್ವಾರಾ, ಮಹತ್ಮ್ಯ ಜ್ಞಾನ ಪೂರ್ವಕ ಭಗವಂತನ ಚತುಷ್ಪಾದಗಳನ್ನು ಧ್ಯಾನೋಪಾಸನೆಯಿಂದ ಬಿಂಬನಲ್ಲಿ ಐಕ್ಯ ಚಿಂತಿಸಿ, ಬಿಂಬಮೂರ್ತಿಯನ್ನು ಗುರು ಪ್ರಸಾದದಿಂದ ನೋಡುತ್ತ, ಉದ್ಧವನ ಸಖ=ಯದುಕುಲದಲ್ಲಿ ಶ್ರೀಕೃಷ್ಣಗೆ ಪ್ರಿಯನಾಗಿ, ಅವತರಿಸಿದ ಬುಧ್ಯಭಿಮಾನಿ ಬೃಹಸ್ಪತ್ಯಾಚಾರ್ಯರ ಸಖ= ಮಿತ್ರ ಗೆಳೆಯನೆಂದು ನಿಶ್ಚಿತಾತ್ಮ ಬುದ್ಧಿಯಿಂದ, ಸರ್ವಾಂತರಾತ್ಮಕನೆಂದು ನೆನೆಸುತಿರು=ಸರ್ವರಲ್ಲಿ ಅಂತರಾತ್ಮಕನಾದ ಶ್ರೀಹರಿಯೆ ಎನ್ನ ಬಿಂಬನೆಂದು ನೆನಸುತ್ತಿರು=ಧೇನಿಸು ಚಿಂತಿಸುತ್ತಿರು. "ಶ್ವೇತದ್ವೀಪಗತೋಹ್ಯಾತ್ಮಾ ಹೃತ್ಪದ್ಮೇನ ವ್ಯವಸ್ಥಿತಃ|| ತಯೋರೈಕ್ಯಂ ವಿಜಾನೀಯಾ ಚಿಂತನಂ ಪರಮಾರ್ಚನಂ" ಎಂದು ಮಾನಸ ಸ್ಮೃತಿ || ೧೯ ||

**ಭಾವಸೂಚನ :—** ದಿವೇತಿ ||

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದಿವಿ" ಇತಿ || ಅಮೃತಂ ಕ್ಷೇಮಮಭಯಮ್ || "ಪಾದತ್ರಯಮ್" ಅಂಶತ್ರಯಮ್ || ಶ್ವೇತದ್ವೀಪ, ಅನಂತಾಸನ, ವೈಕುಂಠೇತಿ ನಾರಾಯಣ ಪುರ್ಯಾಖ್ಯದ್ಯುತ್ರಯೇ ||ಅವನಿತುಸ್ಥಜೀವಾಃ ಭಿನ್ನ ಪಾದಾಃ ||೧೯||

## ಕನ್ನಡಾರ್ಥ

" ಪಾದೋಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ " || ಎಂದು ಪುರುಷಸೂಕ್ತದಲ್ಲಿ ಹೇಳಿದ "ಚತುಷ್ಪಾತ್" ರೂಪದ ಉಪಾಸನೆಯನ್ನು ನಿರೂಪಿಸುತ್ತಾರೆ " ದಿವಿ " ಇತಿ ||

ಮುಕ್ತರಿಗೆ ಮುಕ್ತಿ ಯೋಗ್ಯರಿಗೆ ಪರಮ ಸುಖಪ್ರದನೂ ಜ್ಞಾನಾನಂದ ಪರಿಪೂರ್ಣನೂ ಆದ ಪರಮಾತ್ಮನ ಮೂರು ಸ್ವರೂಪ (ಅಭಿನ್ನ) ಅಂಶಗಳು- ತನ್ನ ಪುರಗಳಾದ ಶ್ವೇತದ್ವೀಪ, ಅನಂತಾಸನ, ವೈಕುಂಠಗಳೆಂಬ ದ್ಯುಲೋಕ ದಲ್ಲಿ ವಿರಾಜಿಸುತ್ತಿರುತ್ತವೆ. ಇನ್ನು ಸಮಸ್ತ ವಿಶ್ವವು ಪರಮಾತ್ಮನ ಭಿನ್ನಾಂಶವು ಅಂದರೆ ಪರಮಾತ್ಮನ ಅನಂತಾನಂತ ಅಂಶಗಳಲ್ಲಿಯ ಏಕದೇಶಕ್ಕೆ ಕಿಂಚಿತ್ ಅಂಶದ ಹೋಲಿಕೆಯುಳ್ಳವರು ಅತ್ಯಂತ ಭಿನ್ನರು " ಎಂದು ತಾತ್ಪರ್ಯ ||೧೯||

**ಅವತರಣಿಕಾ :—**ಹಿಂದೆ ವಿವರಿಸಿದ ಬಿಂಬನ ಧ್ಯಾನೋಪಾಸನೆಗೆ ಮುಖ್ಯ ಅಹಂ ಕರ್ತೃತ್ವ ಭಾವ ತ್ಯಜಿಸಿ, "ತದ್ಭೃತ್ಯಭೃತ್ಯ" ಎಂಬ ಭಾಗವತ ವಚನದಂತೆ, ಪುಷ್ಕರಾರಂಭಿಸಿ ಶ್ರೀಹರಿ ಪರಿಯಂತವಾಗಿ ಸೋತ್ತಮರು ಬಿಂಬರು ನಾನು ಅವರ ದಾಸರ ದಾಸರ ದಾಸನೆಂದು ಭಜಿಸಬೇಕು. ಅಹಂಕಾರಯುಕ್ತನಾದರೆ ಭವಗುಣದಿ ಬಂಧಿಸುವನೆಂದು ದೃಷ್ಟಾಂತಪೂರ್ವಕ ಹೇಳುತ್ತಾರೆ.

**ವಂಶಬಾಗಲು ಬೆಲೆಯು ಗಂಡು ನ |**
**ರಾಂಸದಲಿ ಶೋಭಿಪದು ಬಾಗದ |**
**ವಂಶ ಪಾಶದಿ ಕಟ್ಟಿ ಏರುವ ಡೊಂಬನುಸ್ತಕೆ ||**
**ಕಂಸಮರ್ದನ ದಾಸರಿಗೆ ನಿ |**
**ಸ್ಸಂಶಯದಿ ಎರಗದಲೆ ನಾ ವಿ |**
**ದ್ವಾಂಸನೆಂದಾಹಂಕರಿಸೆ ಭವಗುಣದಿ ಬಂಧಿಸುವ ||೨೦||**

**ಪದ್ಯಾರ್ಥ :—**ವಂಶ=ಬಿದರು, ಬಾಗಲು=ಮಧ್ಯ ಪಲ್ಲಕ್ಕಿ ದಂಡಿಗಿಗೆ ಅನುಕೂಲವಾಗುವಂತೆ ಹುಟ್ಟುತ್ತಲೇ ಬಾಗಿದ್ದರೆ, ಬೆಲೆಯು ಗಂಡು=ಬೆಲೆ ಬಾಳಿ, ಹೆಚ್ಚು ಕ್ರಯ ಬಾಳುವದಲ್ಲದೆ, ನರಾಂಸದಲಿ=ಪಾಲಕಿ ಹೊರುವರಾದ ಮನುಜರ ಹೆಗಲಿನಲ್ಲಿ, ಶೋಭಿಪದು=ಚಂದ ಕಾಣಿಸುವದು, ದದ್ವಿಪರೀತ

ವಾದ, ಬಾಗದ ವಂಶ=ಬಗ್ಗದೇ ಇರುವ ಬಿದರು, ಇದನ್ನು, ಡೊಂಬನು= ಕಸರತ್ತು ಮಾಡುವವ, ಗಣಿಯ ಮೇಲೇರಿ ವಿನೋದ ತೋರಿಸುವ ಡೊಂಬ ರವನು, ಬಾಗದ ಬಿದರನ್ನು ಪಾಶದಿ=ಒಳ್ಳೇ ಹುರಿಯಾದ ನೂಲ ಹಗ್ಗದಿ ಚನ್ನಾಗಿ ಕಟ್ಟಿ ಆ ಹಗ್ಗದ ಆಧಾರದಿಂದ ಜಿಗಿಯುತ್ತ ಆಡೊಂಬಿನ ಮಸ್ತಕ= ಶಿಖರ ತಲೆ ಮೇಲೆ ಏರಿ ಆ ಡೊಂಬನು ಚನ್ನಾಗಿ ತುಳಿದು ಮೇಲೆ ನಟನೆ ಮಾಡುವಂತೆಯೇ, ಕಂಸಮರ್ದನ ದಾಸರಿಗೆ=ದುಷ್ಟಮರ್ದನನಾದ ಶ್ರೀ ಕೃಷ್ಣನ ದಾಸರಿಗೆ=ದಾಸರ ಪಾದ ಕಮಲಗಳಿಗೆ, ನಿಸ್ಸಂಶಯದಿ=ಯಾವ ಸಂದೇಹ ಬಡಪಲೇ, ಹರಿದಾಸರು ಮಹತ್ಮರು ಜ್ಞಾನಿಗಳು ಎಂದು ತಿಳಿಯದೆ, ಎರಗದಲೇ=ನಮಿಸದಲೇ, ನಾ ವಿದ್ವಾಂಸನೆಂದಾಹಂಕರಿಸೆ=ನಾನೇ ಪಂಡಿತ ಜ್ಞಾನಿ ಶ್ರೇಷ್ಠ ಸಕಲ ಬಲ್ಲವ ಎಂದು, ಕಂಸಮರ್ದನ ದಾಸರನ್ನು ಅಹಂಕಾರ ಗರ್ವದಿಂದ ನಿರಾಕರಿಸಿ ಅವಮಾನಿಸಿ ಅವರ ಪಾದಕ್ಕೆರಗದೆ ಶಠಭಾವದಿಂದಿರು ವವನನ್ನು ಡೊಂಬನಂತೆ ಬಾಗದ ಬಿದರುಗಣೆಯನ್ನು ಕಟ್ಟುವಂತೆ ಶ್ರೀಹರಿಯು ಮಹಾ ಡೊಂಬರವ, ಜಗತ್ತಿನಲ್ಲಿ ತನ್ನ ಲೀಲೆ ಆಟವನ್ನು ಅಚ್ಚರವಾಗಿ ತಿಳಿಸುವ ಶ್ರೀ ಹರಿಯು, ಭವಗುಣದಿ=ಸಂಸಾರವೆಂಬ ತಂತು ತ್ರಿಗುಣಾತ್ಮಕ ಹಗ್ಗದಿಂದ ಕಟ್ಟುವನು. ದಾಸಾರ್ಯರು ಪೂರ್ವದಲ್ಲಿ ಶ್ರೀ ವಿಜಯದಾಸರಲ್ಲಿ ಅಹಂಕರಿಸಿದ್ದನ್ನು ನೆನಪಿಸಿ, ತಮಗಾದ ಅನುಭವವನ್ನು ತಿಳಿಯಿರಿ, ನೀವು ಹರಿದಾಸರನ್ನು ಸರ್ವಥಾ ನಿಂದಿಸಬೇಡಿರೆಂದು ಒತ್ತಿ ಹೇಳಿ ಶಿಷ್ಯರನ್ನು ಶಿಕ್ಷಿಸು ತ್ತಾರೆ.

**ಭಾವಸೂಚನ :—**ವಂಶೇತಿ ॥ ಬಾಗಿದ ವೇಣು ಬೆಲೆಯನ್ನು ಕಾಂಬು ವದು, ಬಾಗದೇ ಇದ್ದ ವೇಣುನ್ನಾ ಡೊಂಬರವ ರಂಗಸ್ಥಳಕ್ಕೆ ತಂದು ಹಗ್ಗ ದಿಂದ ಕಟ್ಟಿ ತುದಿಗೆ ಏರುವ ಹಾಗೆ, ವೈಷ್ಣವರಿಗೆ ನಮನ ಮಾಡದೇ ಇದ್ದ ಉದ್ಧಟ ಮನುಜನ್ನ ಸಂಸಾರವೆಂಬ ಹಗ್ಗದಿಂದ ಕಟ್ಟುವ ಚತುರತರ ಕೃಷ್ಣ ಎಂತ ಈ ದೃಷ್ಟಾಂತ ಅರ್ಥ ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

“ವಂಶ” ಇತಿ ॥ ವಂಶಃ ಬಿದುರು ॥ “ಬಾಗಲು” ಬಗ್ಗಲು ॥ “ಬೆಲೆ” ಮೌಲ್ಯ ॥ “ನರಾಂಸೇತಿ ॥ ಶಿಬಿಕಾ ಮಧ್ಯಗತ್ವಾತ್ ॥ ಭವ ಗುಣೇತಿ ॥ ಗುಣಃ ತಂತುಃ ತದಾಖ್ಯ ॥ ೨೦ ॥

## ಕನ್ನಡಾರ್ಥ

"ಜಡಸದೃಶನಾದ ಸರ್ವದಾ ಪರಾಧೀನನಾದ ಜೀವನು ಪರಮಾತ್ಮನ ದಾಸನಾದರೆ ಅವನು ಪರಮಾತ್ಮನಿಂದ ಪ್ರೀತಿ ಅನುಗ್ರಹವನ್ನೈದುವನು. ಅವನಲ್ಲಿ ದಾಸಭಾವವನ್ನಿಡದೆ, ಅಹಂಕಾರಮತ್ತನಾದರೆ ಹರಿಯು ಸಂಸಾರದಿಂದ ಅವನನ್ನು ಬಂಧಿಸುವನು" ಈ ವಿಷಯದಲ್ಲಿ "ವಂಶದ ಬಿದರಿನ" ದೃಷ್ಟಾಂತವನ್ನು ಹೇಳುತ್ತಾರೆ. ದಂಡಿಗೆಯ ಮಧ್ಯದಲ್ಲಿರುವದರಿಂದ ನರರು ಮಣಿದು ಡೊಂಕಾಗಿರುವ ಬಿದುರನ್ನೇ ಹೆಗಲ ಮೇಲಿರಿಸಿ ಹೊರುತ್ತಾರೆ. ಸೆಟೆದ ಬಿದುರನ್ನು ಡೊಂಬರವನು ಕಟ್ಟಿ ನಿಲ್ಲಿಸಿ ಅದರ ಮೇಲೆ ಹತ್ತಿ ನಿಲ್ಲುವನು ಇದು ದಾಸ-ಅಹಂಕಾರ ಭಾವಗಳಲ್ಲಿ ದೃಷ್ಟಾಂತ. ಸಂಸಾರವೆಂಬ ಹಗ್ಗದಿಂದ ಜೀವನನ್ನು ಬಂಧಿಸುತ್ತಾನೆ. ॥ ೨೦ ॥

**ಅವತರಣಿಕಾ :—** ಹಿಂದೆ ವಿಭೂತಿ ಸಂಧಿಯಲ್ಲಿ ಆಹಿತ ಪ್ರತಿಮೆಗಳ ಸಲ್ಲಕ್ಷಣ ಹೇಳಿದ್ದರೂ, ಇಲ್ಲಿ ಶ್ರೀಹರಿಗೆ ಜಡ ಚೇತನ ಪ್ರತಿಮೆಗಳೆರಡರಲ್ಲಿ ಮೊದಲು ಈ ಪದ್ಯದಲ್ಲಿ ಜಡ ಪ್ರತಿಮಾಗಳು ಶ್ರೀಬಿಂಬನಾದ ಶ್ರೀಹರಿಗೆ ಯಾವಾವು ಅವುಗಳ ಲಕ್ಷಣವೇನೆಂದು ಈ ಜಡಪ್ರತಿಮಾದಲ್ಲಿ ಚಿಂತನೆಯಿಂದ ವಾಸನಾಮಯ ಬಿಂಬಾರೋಕ್ಷವಾಗುತ್ತದೆ ಕಾರಣ ಸಲ್ಲಕ್ಷಣವಾದ ಪ್ರತಿಮಾಗಳನ್ನು ವಿವರಿಸುತ್ತಾರೆ.




**ಜ್ಯೋತಿ ರೂಪಗೆ ಪ್ರತಿಮಿ(ಮೆ)ಗಳು ಸಾಂ।**
**ಕೇತಿಕಾರೋಪಿತ ಸು ಪೌರುಷ।**
**ಧಾತು ಸಪ್ತಕ ಧೈರ್ಯಶೌರ್ಯೌದಾರ್ಯ ಚಾತುರ್ಯ॥**
**ಮಾತುಮಾನ ಮಹತ್ವ ಸಹನ ಸು।**
**ನೀತಿ ನಿರ್ಮಲ ದೇಶ ಬ್ರಾಹ್ಮಣ।**
**ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯಸ್ಥಾನ॥ ೨೧ ॥**

**ಪದ್ಯಾರ್ಥ :—** ಜ್ಯೋತಿರೂಪಗೆ=ಪ್ರಕಾಶಮಾನ ಜ್ಞಾನಾನಂದಾದಿ ಚಿನ್ಮಯನಾದ ಶ್ರೀಹರಿಯು, "ಸೂರ್ಯಕೋಟಿ ಪ್ರತೀಕಾಶಂ ಚಂದ್ರಕೋಟಿ ಸುಶೀತಲಂ" ಇಂಥ ಸುಪ್ರಕಾಶ್ಯನಾದ ಹರಿಗೆ=ಪ್ರತಿಮೆಗಳು=ಅಧಿಷ್ಠಾನಕ್ಕೆ

ಯೋಗ್ಯವಾದವುಗಳು, ಸಾಂಕೇತಿಕ=ಕೃತಕ ಪಂಚಲೋಹಾದಿಗಳಿಂದ ಮಾಡಿ ಕರಚರಣಾಯುಧಗಳ ಸಂಜ್ಞೆಯಿಂದ ರಾಮ ಕೃಷ್ಣಾದಿ ಸಂಕೇತ=ಚಿಹ್ನೆಗಳನ್ನು ತೋರಿಸುವ ಕೃತಪ್ರತಿಕಾಗಳು, ಆರೋಪಿತ=ಸ್ವಯಂ ವ್ಯಕ್ತಗಳು, ಸು ಪೌರುಷ=ಅಪೌರುಷೇಯವಾದ ವೇದಗಳಲ್ಲದೇ ಶ್ರೀವೇದವ್ಯಾಸದೇವರು, ಪುರುಷಶಬ್ದವಾಚ್ಯನಿಂದ ನಿರ್ಮಿತವಾದ, ಜಡವಾದವು. ಬ್ರಹ್ಮಸೂತ್ರಪುರಾಣ ಸಂಹಿತಾದಿ ಗ್ರಂಥಗಳೂ, ಸಹ ಪರಮಾತ್ಮನ ಆವಾಸಕ್ಕೆ ಯೋಗ್ಯವಾದ ಪ್ರತಿಮೆಗಳು, ಈ ಶಾಸ್ತ್ರ ಶ್ರವಣ ಮನನಾದಿಗಳಿಂದಲೇ ಬಾಹ್ಯವಾದ ಶಾಸ್ತ್ರ ಪರೋಕ್ಷವಾಗುತ್ತದೆ. ಇದೇ ಮುಖ್ಯಾಭಿಪ್ರಾಯ, ಅಥವಾ ಸಮೀಚೀನವಾಗಿ ಪುರುಷರಿಂದ ಸಪ್ತ ಧಾತುಗಳಿಂದ ನಿರ್ಮಿತವಾದ ಪ್ರತಿಮಾಗಳು. ಇದು ಅಮುಖ್ಯಾರ್ಥ, ಮೇಲೆ ಕೃತ ಪ್ರತಿಕಾ ಸಾಂಕೇತಿಕದಲ್ಲಿ ಇವು ಬಂದಿವೆ. ಅಥವಾ ಸುಪೌರುಷ=ಸುಸತ್ವಜೀವಿಗಳಾದ ಪುರುಷ ಶರೀರದಲ್ಲಿ ಸಂಬಂಧಿಸಿರುವ, ಜಡಗಳಾದ ತ್ವಕ್ ಚರ್ಮಾದಿ ಸಪ್ತ ಧಾತುಗಳು ಮನುಜನಲಿಪ್ಪ ಧೈರ್ಯ=ತಾಳ್ಮೆ ಸಹನ ತಡೆದುಕೊಳ್ಳುವ ಶಕ್ತಿ, ಶೌರ್ಯ=ಪರಾಕ್ರಮ, ಸಹಾಸ, ಔದಾರ್ಯ=ಉದಾರತನ, ದೊಡ್ಡಸ್ಥಿಕೆ, ಮಹತೆ, ಚಾತುರ್ಯ=ನಿಪುಣತೆ, ದಕ್ಷತೆ, ಮಾತು=ಭಗವನ್ಮಹಿಮಾ ಸಂಬಂಧಿಸಿದ ಒಳ್ಳೇ ಪ್ರೀತಿಯುಕ್ತವಾದ ನುಡಿಗಳು, ವಚನ, ಮಾನ=ಸನ್ಮಾನ ಮರ್ಯಾದೆ ಗೌರವ, ಸಹನ=ತಾಳ್ಮೆ ತಡೆದುಕೊಳ್ಳುವ ಶಕ್ತಿ, ಶಮದಮಾದಿ ಇಂದ್ರಿಯ ನಿಗ್ರಹದಿಂದ ಶ್ರೀಹರಿಯಲ್ಲಿ (ಮನ್ನಿಷ್ಟತಾ) ಇಷ್ಟತಾ ಬುದ್ಧಿ, ಸುನೀತಿ=ಸಮೀಚೀನವಾಗಿರುವ ವೇದವಿಹಿತವಾಗಿಯೂ, ಶ್ರೀಹರಿಗೆ ಪ್ರೀತಿಕರವಾದ ಆಚಾರ, ನಿರ್ಮಲ ದೇಶ=ಬಾಹ್ಯಶುಚಿಯಾದ ದೇಶದಲ್ಲಿ ಶ್ರೀಹರಿ ಅಧಿಷ್ಠಾನವಲ್ಲದೆ ದೇಹದಲ್ಲಿ ಅಂತಃಶುಚಿಯಾದ ಮನೋ ಮೊದಲಾದ ಸ್ಥಾನಗಳು, ಬ್ರಾಹ್ಮಣ =ಬ್ರಹ್ಮಜಿಜ್ಞಾಸ ಮಾಡುವವನೇ ಬ್ರಾಹ್ಮಣ ಶ್ರೀಹರಿಗೆ ಮುಖ್ಯ ಅಧಿಷ್ಠಾನ ಅಥವಾ ಪರಬ್ರಹ್ಮನನ್ನು ತಿಳಿಯುವ ಬ್ರಾಹ್ಮಣದೇಹದಲ್ಲೇ ಶುಚಿ, ನಿರ್ಮಲಾದಿ ಮೇಲೆ ವಿವರಿಸಿದ ಎಲ್ಲ ಗುಣಪ್ರವರ್ತಕನಾದ ಶ್ರೀಹರಿಯು ವಿಶೇಷ ವ್ಯಕ್ತನಾಗಿರುವ, ಭೂತ ಪಂಚಕ, ಬ್ರಾಹ್ಮಣನ ಪಾಂಚ ಭೌತಿಕ (ಪೃಥಿವ್ಯಾದಿ ಪಂಚ) ದೇಹ, ಮತ್ತು ಬುದ್ಧಿ=ನಿಶ್ಚಯಾತ್ಮಕವಾದುದು, ಮನೋ-ಬುದ್ಧಿ-ಅಹಂಕಾರ-ಚಿತ್ತ-ಚೇತನ ಮನೋ ಐದು ಪ್ರಭೇದ

ಗಳಲ್ಲಿಯೂ, ಇವೇ ಮೊದಲಾಗಿ ಇಂದ್ರಿಯ, ದಶೇಂದ್ರಿಯ ಸ್ಥಾನಗಳು=ಸ್ಥಳಗಳು ಶ್ರೀಹರಿಗೆ ಪ್ರತಿಮಾ ಶ್ರೀಹರಿ ಈ ಜಡವಾದ ದೇಹದಲ್ಲಿ ಇದ್ದು ಸಕಲ ಕಾರ್ಯ ಪ್ರವರ್ತಿ ಮಾಡಿಸುವ.

**ವಿಶೇಷ ಸೂಚನೆ :**—ಸೃಷ್ಟಿ (ಸ್ಥೂಲ ದೇಹ) ಸುಳಾದಿ ಮತ್ತು ಧ್ಯಾನೋಪಾಸನೆ "ಸಪ್ತಾವರಣ ದೇಹ ಸತತ ಸಾಧನ ಗೇಹ" ಉಪಾ. ಸು. ೧೦ ಪುಟ ೨೩ ಮುಂತಾದ ಶ್ರೀ ವಿಜಯರಾಯರ ಸುಳಾದಿಯಿಂದಲೇ ಈ ಪದ್ಯದ ನಿಜಾರ್ಥವಾಗುತ್ತದೆ. ಸಪ್ತ ಧಾತು, ಇಂದ್ರಿಯಗಳಲ್ಲಿಪ್ಪ ಭಗವದ್ರೂಪ ಚಿಂತನೆ ಮಾಡುವ ಕ್ರಮ ವಿವರಿಸಿದ್ದಾರೆ.

**ಭಾವಸೂಚನ :**—ಜೋತೀತಿ । ಸಾಂಕೇತಿಕಾ ಕೃಷ್ಣಾದಿ ನಾಮ ಯುಕ್ತಾ ಆರೋಪಿತಾ=ಚತುರ್ಭುಜಯುಕ್ತ ಪ್ರತಿಮಾದಲ್ಲಿ ತೋರುವ ಕೃಷ್ಣಾದಿಗಳು. ||ಸಪ್ತಾ|| ೧) ಸುವರ್ಣ, ೨) ರಜತ, ೩) ಹಿತ್ತಾಳೆ, ೪) ತಾಮ್ರ, ೫) ಕಂಚು, ೬) ಕಬ್ಬಿಣ, ೭) ಸತು ಇವುಗಳಿಂದ ನಿರ್ಮಿತ ||೨೧||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜ್ಯೋತಿ" ಇತಿ || "ಬಿಂಬಗೇತಿ" || "ಸಾಂಕೇತಿಕ" ಕೃತಕ || "ಆರೋಪಿತ" ಸ್ವಯಂವ್ಯಕ್ತ || "ಮಾತು" ವಚನ ||೨೧||

## ಕನ್ನಡಾರ್ಥ

ಬಿಂಬೋಪಾಸನೆಯ ಸಲುವಾಗಿ ಶ್ರೀಹರಿಯ ಅಧಿಷ್ಠಾನಭೂತಗಳಾದ ಪ್ರತೀಕಗಳನ್ನು ಹೇಳುತ್ತಾರೆ "ಜ್ಯೋತಿರೂಪನು" ಎಂಬ ಪದ್ಯದಿಂದ.

"ಸಾಂಕೇತಿಕ"=ಕೃತಕ. "ಆರೋಪಿತ" ಸ್ವಯಂವ್ಯಕ್ತ. ಹೀಗೆ ಪ್ರತಿಮೆಗಳನ್ನು ತಿಳಿಯಬೇಕು.

ಪರಮಾತ್ಮನಿಗೆ ಮೂಲ ಪದ್ಯದಲ್ಲಿ ಹೇಳಲಾಗಿರುವವುಗಳೆಲ್ಲವೂ ಪ್ರತೀಕಳಾಗಿರುತ್ತವೆ ಎಂದು ತಿಳಿಯಬೇಕು. ||೨೧||

**ಅವತರಣಿಕಾ :—**ಹಿಂದೆ ಶ್ರೀಹರಿಗೆ ಜಡಪ್ರತಿಮೆಗಳಾವುವು ಅಲ್ಲಿ ಅಧಿಷ್ಠಾನ ಹೇಗೆಂಬುದನ್ನು ಬಿಂಬರೂಪಿ ಶ್ರೀಹರಿಯ ಮಹಿಮೆ ವರ್ಣಿಸಿ ಈ ಪದ್ಯದಿಂದ ಶ್ರೀ ಬಿಂಬನು ಜೀವರಾಶಿಯೊಳಗೆ ಯಾವ ನಾಮದಿಂದಿರುತ್ತಾನೆಂಬುದನ್ನು ಶ್ರುತ್ಯರ್ಥಬೋಧಕವಾದ ಮಹಿಮೆ ವರ್ಣಿಸುತ್ತಾರೆ.

**ಜೀವರಾಶಿಯೊಳಮೃತ ಶಾಶ್ವಿ(ಶ್ವ)ತ ।**
**ಸ್ಥಾವರಗಳೊಳು ಸ್ಥಾಣು ನಾಮಕ ।**
**ಆವಕಾಲದಲಿಪ್ಪ ಅಜಿತಾನಂತನೆಂದೆನಿಸಿ ॥**
**ಗೋವಿದಾಂಪತಿ ಗಾಯನಪ್ರಿಯ ।**
**ಸಾವಯುವ ಸಾಹಸ್ರನಾಮ ಪ ।**
**ರಾವರೇಶ ಪವಿತ್ರ ಕರ್ಮ ವಿಪಶ್ಚಿತ ಸುಸಾಮ ॥ ೨೨ ॥**

**ಪದ್ಯಾರ್ಥ :—**ಜೀವರಾಶಿಯೊಳಮೃತ ಶಾಶ್ವತ=ಸಕಲ ಪ್ರಾಣಿ ಚೇತನ ರಾಶಿಗಳು, ಸಮೂಹದಲ್ಲಿ, **ಅಮೃತ**=“ನ ವಿದ್ಯತೇ ಮರಣಂ ಯಸ್ಯೇತಿ ಅಮೃತಃ” | “ಅತಿ ರೋಹಿತವಿಜ್ಞಾನಾದ್ವಾಯುುರಪ್ಯಮೃತಃಸ್ಮೃತಃ॥ ಮುಖ್ಯಾಮೃತ ಸ್ವಯಂರಾಮ ಪರಮಾತ್ಮಾ ಸನಾತನಃ|| ಇತಿ ವ್ಯೋಮ ಸಂಹಿತಾಯಾಂ || (ವಿದ್ಯಾಧಿರಾಜೀಯ) ಯಾವನಿಗೆ ಮರಣಾದಿಗಳಿಲ್ಲವೋ ಅಮೃತನೆಂದು ಶ್ರೀ ಹರಿಯು ಕರೆಸುತ್ತಾನೆ ಮತ್ತು ವಾಯುದೇವರಿಗೆ ಜ್ಞಾನ ತಿರೋಭಾವವಿಲ್ಲವೋ ವಾಯುವು ಸಹ ಅಮೃತನೆಂದು ಕರೆಸುತ್ತಾನೆ. ಆದರೆ ಮುಖ್ಯ ಅಮೃತನೆಂಬ ನಾಮ ರಾಮರೂಪಿಯಾದ ಪರಮಾತ್ಮನು. ಅನಾದಿ ಕಾಲದಿಂದ ಜೀವರಂತರ್ಯಾಮಿಯಾಗಿ ಸನಾತನನಾಗಿ ಇದ್ದಾನೆ. ಅಮೃತನೆಂದು ಕರೆಸುತ್ತಾನೆಂದು “ವ್ಯೋಮ ಸಂಹಿತೆ”ಯಲ್ಲಿ ಹೇಳಿದೆ. ಸ್ಥಾವರಗಳೊಳು ಸ್ಥಾಣುನಾಮಕ=ಇಲ್ಲಿ ಸ್ಥಾವರವೆಂದರೆ ಜಡವಲ್ಲ, ಸ್ಥಾವರ ಜೀವರುಗಳಾವವೆಂದರೆ, ತುಲಸಿ, ಬಿಲ್ವ, ಪಾರಿಜಾತಾದಿ ಸಾಂಶ ಸ್ಥಾವರಮರಗಳು. ಇತರಮರಬಳ್ಳಿಗಿಡಗಳು ಚಲಿಸದೇ ಇದ್ದ ಜೀವರಲ್ಲಿ, ಶಾಶ್ವತ ಸ್ಥಾಣುನಾಮಕ =“ಅಮೃತಃ ಶಾಶ್ವತಃ ಸ್ಥಾಣು” (ಎಂದು ವಿಷ್ಣುಸಾಸಿರನಾಮ) ಶಾಶ್ವತಶ್ಚಾಸೌಸ್ಥಾಣುಶ್ಚೇತಿ ಶಾಶ್ವತಃಸ್ಥಾಣುಃ || ಒಂದೇ ಸಮನಾಗಿ ನಿರಂತರ ಇರುವನು. ಚಲಿಸದೇ ಇರುವವನು ಎಂದು ಅರ್ಥ ಜಡನಲ್ಲ ಅಥವಾ || ಶಾಶ್ವ

ತೇಷು ಮುಕ್ತೇಷು ಅಪಿ ನಿಯಾಮುಕ ತಯೊತಿಷ್ಟತಿವಾ ಶಾಶ್ವತಃ ಸ್ಥಾಣುಃ (ವಿದ್ಯಾಧಿರಾಜೀಯ) ಶಾಶ್ವತವಾಗಿ ನಿತ್ಯ ಮುಕ್ತರು ಏಕಪ್ರಕಾರ ಇರುವರಲ್ಲಿ ನಿಯಾಮುಕನು. ಶಾಶ್ವತ ಸ್ಥಾಣುನಾಮದಿಂದ ಇರುವನು ಅಥವಾ "ವಿಸ್ತಾರಃ ಸ್ಥಾವರಸ್ಥಾಣು"=ಸ್ಥಿತಿ ಶೀಲ ಸ್ಥಾವರ=ಸರ್ವರ ಸ್ಥಿತಿ ಅಸ್ತಿತ್ವ ಇರುವಿಕೆಗೆ ಕಾರಣನಾದವನು, ಸ್ಥಾವರನೆಂದೂ ಪೃಥಿವ್ಯಾದೀನಿತಿಷ್ಟಂತ್ಯಸ್ಮಿನ್ನಿತಿಸ್ಥಾಣು =ಪೃಥಿವ್ಯಾದಿಗಳಲ್ಲಿ ಇರುವವನಿಗೆ ಸ್ಥಾಣುವೆಂತಲೂ ವಿದ್ಯಾಧಿರಾಜರು ಹೇಳಿದ್ದಾರೆ. ಈ ಪ್ರಕಾರ ಸ್ಥಾವರಸ್ಥಾಣು ನಾಮುಕನು, ಆವಕಾಲದಲಿಪ್ಪ=ಈ ನಿತ್ಯವಾದ ವಸ್ತುಗಳಲ್ಲಿ ಅಂದರೆ " ದ್ರವ್ಯಂಕರ್ಮಚಕಾಲಶ್ಚಸ್ವಭಾವವೋಜೀವ ಏವಚ ಯದನುಗ್ರಹತಃ ಸಂತಿ ನಸಂತಿ ಯದುಪೇಕ್ಷಯಾ " ಅನಾದಿನಿತ್ಯವಾದ ಜೀವಾದಿ ೬ ವಸ್ತುಗಳಲ್ಲಿ ಅನಾದಿ ಕಾಲದಿಂದಲೂ ಬಿಡದೇ ಇರುವನು. ಇದೊಂದೇ ನಾಮವಲ್ಲ ರೂಪವಲ್ಲ, ಅಜಿತಾನಂತನೆಂದೆನಿಸಿ=ಅಜಿತ="ನಕೇನಾಪ್ಯವತಾರೇಷು ಜಿತ ಇತ್ಯಜೀತಃ=ಯಾವ ಅವತಾರಗಳಲ್ಲಿಯೂ, ಯಾರಿಂದಲೂ ಸೋಲಲ್ಪಟ್ಟವನಲ್ಲ, ಎಲ್ಲ ಅವತಾರಗಳಲ್ಲಿ ಜಿತ ಶಾಶ್ವತ ಒಂದೇ ಪ್ರಕಾರನಾಗಿರುವ, ಅನಂತ="ದೇಶಕಾಲಗುಣಪರಿಚ್ಛೇದಭಾವಾದನಂತಃ ||ಏತನ್ನೋಪಲಭ್ಯತೇತಿರ್ಯಗೂರ್ಧ್ವಮಧ್ಯಮಧಸ್ತಾತಸ್ಮಾದುಚ್ಯತೇನಂತನ ಇತಿ ಶ್ರುತೇ ಅನಂತಃ|| ವಿದ್ಯಾಧಿರಾಜೀಯ, ಗೋವಿದಾಂಪತಿ= ಗಾಂವಾಣೀಂವಿಂದಯತಿ ವಾ ಗೋವಿಂದಃ || ತೇಷಾಂಪತಿರ್ಗೋವಿದಾಂಪತಿ|| ಗಾಯನಪ್ರಿಯ=ಸಾಮಗಾಯನಲೋಲ, ಸಾಮಗಾನಸ್ತುತಿಗೆ ಪ್ರಿಯ ಒಲಿಯುವ, ಸಂತೋಷಪಡುವ, ಸಾವಯವ=ಸಚ್ಚಿನ್ಮಯರೂಪಿ ಹರಿಯು, (ಪ್ರಾಕೃತ ದೇಹ ನಿರವಯವ ನಿರ್ವಿಕಾರನಾದರೂ) ಸಚ್ಚಿದಾನಂದ ರೂಪಿ ಕರಚರಣಾದಿ ಅವಯುವಗಳಿಂದ ಶೋಭಿತನು. ಸಹಸ್ರನಾಮ=ವಿಶ್ವಾದಿ ಸಹಸ್ರನಾಮಗಳುಳ್ಳವ, ಪರಾವರೇಶ=ಪರ ಉತ್ತಮಳಾದ ಲಕ್ಷ್ಮಿಗೂ, ಅವರರಾದ ಬ್ರಹ್ಮಾದಿಗಳಿಗೂ ಪರ ಉತ್ತಮ ಈಶ=ಸ್ವಾಮಿ, ನಿಯಾಮುಕ, ಶ್ರೇಷ್ಠನಾದವ, ಪವಿತ್ರಕರ್ಮ=ನಿರ್ದುಷ್ಟ ಕ್ರಿಯಾವುಳ್ಳವ, ದುಷ್ಟನಿಗ್ರಹ ಶಿಷ್ಟಪರಿಪಾಲನಾದಿಂದ ಧರ್ಮರಕ್ಷಣ ಮಾಡಲು ಅವತಾರವೆತ್ತಿ ಅನಂತ ಲೀಲಾಗಳನ್ನು ಮಾಡುವ, ಶ್ರೀಹರಿಯ ವ್ಯಾಪಾರಗಳು ಯಾವಾಗಲೂ ಪರಿಶುದ್ಧವಾದವು. ವಿಪಶ್ಚಿತ=ವಿಪ್ರಕೃಷ್ಟಂ ಚಿಂತಯತೀತಿ ವಿಪಶ್ಚಿತ್=ಜ್ಞಾನಿ

ಸರ್ವಜ್ಞ, ಪಂಡಿತರೊಡೆಯ, ಸುಸಾಮ=ಸಮತ್ವಾತ್ಸಾಮಃ ಸಮತ್ವಾಚ್ಚ ನಿಜರೂಪೇಷು ಸಾಮ ಇತ್ಯುಚ್ಚತೇ ನಿಜ ಮೂಲರೂಪ, ಅವತಾರಾದಿ ರೂಪ ಬಿಂಬರೂಪಿ ಹರಿಗೆ, ಸು=ಸಮೀಚೀನವಾಗಿ ಸಮತ್ವ ಇರುವದರಿಂದ ಶ್ರೀ ಹರಿಯು ಸುಸಾಮನೆಂದು ಕರೆಸುತ್ತಾನೆ.

**ಭಾವಸೂಚನ :—** ಜೀವೇತಿ ॥ ಜೀವಗೋ ಜೀವನಾಮಾ ಚ ಸ್ಥಾಣು ಸ್ಥಾವರ ಗತಸ್ತಥಾ ॥ ಅಜಿತಾನಂತನಾಮೇತಿ ತರತಮದೀಪನೇ ॥ ಗೋವಿಂದೇತಿ ॥ ಗೋವಿಂದೋ ಗೋವಿದಾಂ ಪತಿ ಇತ್ಯುಚ್ಯತೇ ॥ ಸುಸಾಮ ॥ ವೈಕುಂಠಾದಿ ಲೋಕ ಉತವಾ ॥ ಅಥವಾ ನಿರ್ದುಷ್ಟಸ್ವರೂಪಾ ಯದ್ವಾ ಅತಿಶಯ ಕಾಂತಿಯುಕ್ತಾ ॥ ತೇಜಸ್ವರೂಪಂಚ ಗ್ರಹಂ ಪ್ರಾಜ್ಞೈರ್ಧಾಮೇತಿ ಗೀಯತ ಇತ್ಯಭಿಧಾನಾತ್ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜೀವ" ಇತಿ ॥ **ಅಮೃತ** ಓಂ ॥ ಯುಧ್ಮೋ ಅನರ್ವಾ ಖಜಕೃತ್ಸಮದ್ವಾ ಶೂರಃ ಸತ್ರಾಷಾಟ್ ಜನುಷೇ (ಮ)ಮಾಷಾಹಂ ವ್ಯಾಸ ಇಂದ್ರಃ ಪೃತನಾ ಸ್ವೋಜಾ ಅಥ ವಿಶ್ವಮ್ ॥ ಓಂ ॥ ನ ಮೃತಃ ಅಮೃತಃ ॥

**"ಶಾಶ್ವತ"**—ಓಂ ಶತ್ರ್ರೋಯಂತ ಜಘಾನ ಉಭೇ ಚಿದಿಂದ್ರ ರೋದಸೀ ಮಹಿತಾ ಪಪ್ರಾದ ತವಿಕ್ಷೀಭಿಸ್ತುವಿಷ್ಮಃ ನಿವಜ್ರಮಿಂದ್ರೋ ಹರಿವಾನ್ ॥ ಓಂ ॥ ಶಶ್ವದೇತ ಪ್ರಕಾರೇಣ ವರ್ತತೆ ಇತಿ ॥

**"ಸ್ಥಾಣು"**—ಓಂ ವಿಮರ್ಕ್ಷ ಸಮುಂಧಸಾ ಮದೇಷು ಗಾ (ವಾ) ಉವೋಚ ವೃಷಾ ಜಜಾನ ವೃಷಣೇ ರಣಾಯತಮು ಚಿನ್ನಾರೀ ನರ್ಯಂ ಸಸೂವ ಪ್ರಥಃ ॥ ಓಂ ॥ ಸರ್ವಜೀವೇಷು ಸಂತಿಷ್ಟತೇ ಇತಿ ಸ್ಥಃ ॥ ಆ ಸಮ್ಯಕ್ ಣಂ ಆನಂದೋ ಯಸ್ಯ ಸಃ ಆಣುಃ ॥ ಸಚಾಸೌ ಸ ತಥೋಕ್ತಃ ॥

**ಗೋವಿದಾಂಪತಿ—**ಓಂ ತದ್ಯುತುಥಾ ವಿವೋಚದ್ದ ಸದಿದ್ಧಿ ತೇ ತುವಿಜಾತಸ್ಯ ಮನ್ಯೇ ಸಹ ಸಹಿಷ್ಠ ತುರತಸ್ತುರಸ್ಯ ಉಗ್ರಮುಗ್ರಸ್ಯ ತವಸಃ ॥ ಓಂ ॥ ಗೋವಿದಾಂ ತೇಜಸ್ವಿನಾಂ ಪತಿಃ ॥

**" ಸಾಮಗಾಯನಃ "** (ಗಾಯನಪ್ರಿಯ) ಓಂ ವಿದುಷ್ಟೇ ತಸ್ಯ ಮೇಧಿರಾಸ್ತೇಷಾಂ ಶ್ರವಾಂಸ್ಯುತ್ತಿರ ಇಂದ್ರಮೀಶಾನ ಮೋಜಸಾಭಿಸ್ತೋಮಾ ಅನೂಷತ ಸಹಸ್ರಂ ಯಸ್ಯ ರಾತಯಃ ।। ಓಂ ।। ಸಾಮಾನಿ ಸ್ತೋಮ ವಿಶೇಷಾಃ ಗಾಯಂತಿ(ತೇ) ಅಸ್ಮಿನ್ ಇತಿ ಸಾಮಗಾಯನಃ ।।

**"ಸು-ಸಾಮ"**—ಓಂ ಉದ್ರೀವ ವಜ್ರಿನ್ನವತೋ ವಸುತ್ವನಾ ಸದಾ ಪೀಪೇಥ ದಾಶುಷೇ ಯದ್ಧನೂನಂ ಪರಾವತಿ ಯದ್ವಾ ಪೃಥಿವ್ಯಾಂ ದಿವಿ ।। ಓಂ ।। ಅಭೀಷ್ಟಾನಿ ಸತಿ ದದಾತಿ ಇತಿ ಸಾಮ ।। ೨೭ ।।

## ಕನ್ನಡಾರ್ಥ

**" ಅಮೃತ "**—ಮರಣರಹಿತನು ।। **" ಶಾಶ್ವತ "**—ಯಾವಾಗಲೂ ಒಂದೇ ರೀತಿಯಾಗಿ ನಿರ್ವಿಕಾರನಾಗಿ ಇರುವವನು.

**"ಸ್ಥಾಣು"**—ಸರ್ವ ಜೀವರಲ್ಲಿ ಇರುವವನು, ಹಾಗೂ ಪೂರ್ಣಾನಂದ ಮಯನು.

**" ಗೋವಿದಾಂಪತಿ "**—ತೇಜಸ್ವಿಗಳಿಗೆ ಪತಿಯು. "ಸಾಮಗಾಯನ" ಸ್ತೋಮಗಳೆಂಬ ಸಾಮಗಳಿಂದ ಹಾಡಲ್ಪಡುವವನು ; ಸಾಮಗಾಯನ ಪ್ರಿಯನು. **ಸುಸಾಮ**—ಸಜ್ಜನರಿಗೆ ಅಭೀಷ್ಟಗಳನ್ನು ಪೂರೈಸುವವನು. ಪದ್ಯಾರ್ಥವು ಸುಲಭವಿದೆ. ।। ೨೭ ।।

**ಅವತರಣಿಕಾ :**—ಭಗವಂತನ ಸ್ಮೃತಿಯಿಂದ ಭಗವತ್ಪೂಜಾ ಸಾಧನಕ್ಕೆ ಕರ್ತವ್ಯಯೋಗ್ಯ ಕರ್ಮಗಳು ನಿಷಿದ್ಧ ಕರ್ಮಗಳಾದರೂ, ಆಪದ್ಧರ್ಮದಲ್ಲಿ ವಿಧಿವತ್ತಾಗಿರುತ್ತವೆ. ಅಹಂಕಾರ ಮಮಕಾರಯುಕ್ತ ವಾದವು ಸಾಧುಕರ್ಮಗಳು, ಭಗವಂತನ ವಿಸ್ಮೃತಿಯಿಂದ ಮಾಡಿದವು ನಿಷೇಧ ಕರ್ಮಗಳು ಎಂಬುದನ್ನು ಶ್ರೀ ವಿಜಯದಾಸರ ಸುಳಾದಿ ಅರ್ಥಗರ್ಭಿತವನ್ನೇ ಪ್ರತಿಪಾದಿಸುತ್ತಾರೆ.

**ಮಾಧವನ ಪೂಜಾರ್ಥವಾಗಿ ನಿ ।**
**ಷೇಧ ಕರ್ಮವ ಮಾಡಿ ಧನ ಸಂ ।**
**ಪಾದಿಸಲು ಸತ್ಪುಣ್ಯ ಕರ್ಮಗಳೆನಿಸಿಕೊಳುತಿಹವು ॥**

**ಸೋದರಂಭರಣಾರ್ಥ ನಿತ್ಯದಿ ।**
**ಸಾಧು ಕರ್ಮವ ಮಾಡಿದರು ಸರಿ ।**
**ಯೈದುವನು ದೇಹಾಂತರವ ಸಂದೇಹವಿನಿತಿಲ್ಲ ॥ ೨೩ ॥**

**ಪದ್ಯಾರ್ಥ:**—ಮಾಧವನ=ಲಕ್ಷ್ಮೀಪತಿಯ, ಅಥವಾ ಮುಕ್ತರಿಗೆ ಆನಂದ ಕೊಡುವ ಸ್ವಾಮಿ, ಪೂಜಾರ್ಥವಾಗಿ=ಶ್ರೀಹರಿಯ ಬಹಿರಂಗ ಷೋಡಶ ಉಪಚಾರ ಪೂಜಾರ್ಥವಾಗಿ, ಸಕಲ ಸಾಮಗ್ರಿಗಳು ಬೇಕು, ಆ ಸಾಮಗ್ರಿಗಳ ಪ್ರಾಪ್ತಿಗೋಸುಗ, ನಿಷೇಧ ಕರ್ಮವ ಮಾಡಿ=ಶಾಸ್ತ್ರ ವಿರುದ್ಧ ವಾದ ಕರ್ಮ, ಜಡಮೂರ್ತಿ ಪೂಜೆಗೆ ಕಾಶಿಗೆ ಹೋಗುವೆನೆಂದು ಅನೃತ ನುಡಿದು ದ್ರವ್ಯ ಸಂಪಾದಿಸಿ, ಮತ್ತು ದೇವರ ಸಮಾರಾಧನೆಗೆ ಕಂಡಕಂಡವರು ನಿಷಿದ್ಧ ಕರ್ಮದಿಂದ ದ್ರವ್ಯಾರ್ಜನೆ ಮಾಡಿದ್ದನ್ನು ಯಾಚಿಸಿ ತಂದು, ಮತ್ತು ಆಪತ್ಕಾಲದಲ್ಲಿ, ಭಗವತ್ಪೂಜಾರ್ಥವಾಗಿ ಪ್ರಾಣರಕ್ಷಣೆ ಮಟ್ಟಿಗೆ ವಿಧಿ ಕುಲಾಚರಣೆ ಮೀರಿದ, ಆಪದ್ಧರ್ಮ, ಕೃಷಿಧರ್ಮ ನಿಷೇಧವಾದರೂ ಫಲಪುಷ್ಪ ಗಿಡಗಳನ್ನು ಬೆಳೆಸಿ ಅವುಗಳಿಂದ ಬಂದ ಧನದಲ್ಲಿ ಭಗವಂತನ ನೈವೇದ್ಯ ಮಾಡುವುದು ನಿಷೇಧವಲ್ಲ ಮತ್ತು ಪುಣ್ಯ ಬೀಜ ಪಾಪಕರ್ಮಗಳು ನಿಷೇಧ ವೆನಿಸುವದಿಲ್ಲ, ಇನ್ನು ಅನೇಕ ಸೂಕ್ಷ್ಮ ಧರ್ಮಕರ್ಮಗಳು ನಿಷೇಧವಾದರೂ ಭಗವಂತನ ಸ್ಮರಣೆ ಭಗವಂತನ ಕರ್ತೃತ್ವ ಅನುಸಂಧಾನಪೂರ್ವಕ ಆಕಸ್ಮಿಕ ಜ್ಞಾತ ಅಜ್ಞಾತ ನಿಷೇಧ ಕರ್ಮಗಳಾದರೂ ನಿಷೇಧವೆನಿಸುವದಿಲ್ಲ, ಸತ್ಪುಣ್ಯ ಕರ್ಮಗಳೆನಿಸುವವು. ಆದರೆ ಕೊಲೆಗಡಕತನ, ಕಳವು, ತುಡುಗು, ಕಪಟ, ವಂಚನದಿಂದ ಧನ ಸಂಪಾದಿಸಬೇಕೆಂದು ದಾಸರ ಅಭಿಪ್ರಾಯವಲ್ಲ, ಕೆಟ್ಟ ಕರ್ಮವೇ ಆಗುವವು.

ಭಗವಂತನ ಪೂಜಾ, ಬ್ರಾಹ್ಮಣ ಸಮಾರಾಧನೆ, ಬಡಪ್ರಾಣಿಗಳಿಗೆ ಯೋಗ್ಯ ಸಹಾಯ ಮಾಡುವದು ಬಿಟ್ಟು, ಸೋದರಂಭರಣಾರ್ಥನಿತ್ಯದಿ= ಕೇವಲ ತನ್ನ ಹೊಟ್ಟೆ ತುಂಬಿಕೊಳ್ಳಲು ದಾರಾಪುತ್ರಾದಿಗಳ ಸಂವರಕ್ಷಣೆ ನಾನೇ ಮಾಡುವೆನೆಂದು ದುರಹಂಕಾರದಿಂದ, ಭಗವಂತ ಸಕಲನ್ನು ಪುಟ್ಟಿ ಸಿರುವ “ ಅಣುರೇಣು ಪೊಟ್ಟಗೆ ಕೊಡುತಿಹ ದೇವನು, ಎನಗೀಹದೀಹನೆ ವಿಜಯವಿಜಯ ವಿಠ್ಠಲರೇಯಾ ” ಎಂದು ಚಿಂತಿಸದೆ ಸದಾ ಜನರಿಗೆ ಸಾಧು

ಲಿಂಗಪ್ರವರ್ತಕರಂತೆ ತೋರುತ್ತ, ಸಾಧುಕರ್ಮವ ಮಾಡಿದರು=ಒಳ್ಳೇ ಶಾಸ್ತ್ರ ವಿಹಿತವಾದ ಕರ್ಮಗಳನ್ನು ಮಾಡಿದರೂ ಸರಿಯೇ ಇವನು, ಯೈದುವನು ದೇಹಾಂತರವ ಸಂದೇಹವಿನಿತಿಲ್ಲ=ಪುನಃಪುನಃ ಜನ್ಮ ತಾಳುವನು ಕಿಂಚಿತ್ತಾದರೂ ಸಂದೇಹವಿಲ್ಲೆಂದು ಉಪದೇಶಿಸುತ್ತಾರೆ.

**ಭಾವಸೂಚನ :—**ಮಾಧವೇತಿ ||

**ವಿಶೇಷ ಸೂಚನೆ :—**ಶ್ರೀ ವಿಜಯದಾಸರು ಪೂಜಾ ಸುಳಾದಿ "ನರರಿಂದ ನಿರ್ಮಿಸಿದಂಥ ಉಪವನಗಳಲ್ಲಿ | ಪರಿಪರಿ ಇಪ್ಪಂಥ | ಫಲಪುಷ್ಪಾದಿಗಳು | ಹರುಷದಿ ತಂದು ನೀನು ಹರಿಪಾದಕರ್ಪಿಸಲು | ಹರುಷ ಪಡುವನು ಹಾನಿಗೈಸನು ನಿನ್ನ || "ಉನ್ನತವಾಗಿ ಅನ್ನ ಮಾಣಿಕ್ಯ ಕನಕ ಕೋಟಿ ಕನ್ನ್ಯಾದಾನ ವಸ್ತ್ರ ಅಗ್ರಹಾರ ಅಶ್ವದಾನ ಕ್ಷೇತ್ರಮಿಕ್ಕಾ | ಸನ್ನ್ಯಾಸ ಮೊದಲಾದ ನಾನಾ ಆಶ್ರಮಗಳು ಕೊಂಡು ವೇದಾದಿಗಳು ಒಲಿಸಿದಂಥವ ಧನ್ಯನಾಗನು ಕಾಣೋ ಹರ್ಷ ತೀರಿದ ಮೇಲೆ || ಎಂದು ಶ್ರೀ ದಾಸಾರ್ಯರು ನಿಷೇಧ ಕರ್ಮಗಳನ್ನು ವಿವರಿಸಿರುವರು. ಸದ್ಗುರುಗಳಿಂದ ಹೆಚ್ಚಿಗೆ ತಿಳಿಯತಕ್ಕದ್ದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಮಾಧವ " ಇತಿ || " ಇನಿತು " ಇಷ್ಟು || ೨೩ ||

## ಕನ್ನಡಾರ್ಥ

ಭಗವತ್ಪೂಜೆಯ ಮಹತ್ವವನ್ನು ನಿರೂಪಿಸುತ್ತ ಕರ್ತವ್ಯವೆಂದು ಬೋಧಿಸುತ್ತಾರೆ " ಮಾಧವನ " ಎಂಬ ಪದ್ಯದಿಂದ.

ಇಲ್ಲಿ " ನಿಷೇಧ ಕರ್ಮಗಳನ್ನು ಮಾಡಬೇಕು " ಎಂದು ತಾತ್ಪರ್ಯವಲ್ಲ. ಹಾಗೂ ಸಾಧು ಕರ್ಮಗಳನ್ನು ಬಿಡಬೇಕೆಂದೂ ತಾತ್ಪರ್ಯವಲ್ಲ. ಭಗವತ್ಪೂಜೆಯು ಕರ್ಮಗಳಲ್ಲಿರುವ ಛಿದ್ರ ದೋಷಗಳನ್ನು ನಾಶಗೊಳಿಸಿ, ಲೋಪಗಳನ್ನು ತುಂಬಿ ಸಫಲಗೊಳಿಸುವದು. ಪ್ರಮಾದಾಜ್ಞಾನ ಮುಂತಾದ ಕಾರಣದಿಂದ ಅನಿವಾರ್ಯವಾಗಿ ಸಂಘಟಿಸುವ ಕರ್ಮಗಳು ಕೇವಲ ಭಗವತ್ಪೂಜೆಯೇ ಉದ್ದೇಶವಾಗಿರುವಾಗ ಆ ಪೂಜಾಫಲದಿಂದ ಶುದ್ಧಿಯನ್ನು

ಹೊಂದಿ ಪುಣ್ಯಪರ್ಯವಸಾಯಿಗಳಾಗುತ್ತವೆ" ಎಂದು ತಾತ್ಪರ್ಯ. ಶಾಸ್ತ್ರ ನಿಷಿದ್ಧ ಕರ್ಮಗಳನ್ನು ಬುದ್ಧಿಪೂರ್ವಕ ಮಾಡಿ ಆ ದ್ರವ್ಯಾದಿಗಳಿಂದ ಅದರಿಂದ ಭಗವತ್ಪೂಜೆಯನ್ನು ಮಾಡಿದರೆ ಅದು ಪುಣ್ಯಕಾರಿಯೂ ಭಗವತ್ಪೂಜೆಯೂ ಆಗುವದಿಲ್ಲ. ಶ್ರುತಿಸ್ಮೃತಿಗಳು ಪರಮಾತ್ಮನ ಆಜ್ಞೆಗಳಾದುದರಿಂದ ಸ್ವಸ್ವವರ್ಣ ವಿಹಿತ ವೃತ್ತಿ ಆಚಾರಗಳಿಂದ ಪ್ರಾಪ್ತವಾದುದರಿಂದಲೇ ಭಗವತ್ಪೂಜೆಯನ್ನು ಮಾಡಬೇಕು." ಶಾಸ್ತ್ರನಿಷಿದ್ಧ ವೃತ್ತಿಯಿಂದ ಭಗವತ್ಪ್ರೀತಿಯು ಆಗುವದಿಲ್ಲವಾದುದರಿಂದ ನಿಷಿದ್ಧವೃತ್ತಿಯಿಂದ ಭಗವತ್ಪೂಜೆಯೇ ಆಗುವದಿಲ್ಲ. ಸ್ವಸ್ವವರ್ಣನಿಹಿತ ವೃತ್ತಿಗಳಲ್ಲಿ ಕಾಲದೇಶವಿಹಿತವಾದ ಕನಿಷ್ಠವಾದ ವೃತ್ತಿಯಿಂದಲೂ ಸಹ ದ್ರವ್ಯಾದಿಗಳನ್ನು ಗಳಿಸಿ, ಆ ದ್ರವ್ಯದಿಂದ ಭಗವತ್ಪೂಜಾ ರೂಪವಾದ ಕರ್ಮಗಳನ್ನೇ ನಿಷ್ಕಾಮವಾಗಿ ಮಾಡಿದರೆ ಅವು ಪುಣ್ಯಗಳೆನಿಸುತ್ತವೆ" ಎಂದು ತಾತ್ಪರ್ಯ. ॥ ೨೩ ॥

**ಅವತರಣಿಕಾ :**—ಸರ್ವಸಾರ ಭೋಕ್ತೃನಾದ ಶ್ರೀಹರಿಯು ತಾನು ನಿರಾಶ್ರಯನಾದರೂ ಎಲ್ಲರಲ್ಲಿಯೂ ಇದ್ದು ಮೋಹ ಪುಟ್ಟಿಸುವನು, ತಾನು ಅಕಾಯನಾದ ಮನ್ಮಥ ಜನಕನಾದರೂ, ಚಿನ್ಮಯವಾದ ಕೃಷ್ಣಾದಿ ರೂಪಗಳಿಂದ ಗಜಗಳಂತೆ ಜೀವರಲ್ಲಿ ನಿಂತು ತನ್ನ ಸ್ವಾಖ್ಯರಸವನ್ನು ಉಣ್ಣುವನೆಂದು ಶ್ರೀ ಬಿಂಬನ ಮಹಿಮೆ ಕೊಂಡಾಡುತ್ತಾರೆ.

**ಅಪಗತಾಶ್ರಯ ಎಲ್ಲರೊಳಗಿ ।**
**ದ್ದುಪಮನೆನಿಪಾನುಪಮ ರೂಪನು ।**
**ಶಫರಕೇತನ ಜನಕ ಮೋಹಿಪ ಮೋಹಕನ ತೆರದಿ ।**
**ತಪನಕೋಟಿಸಮ ಪ್ರಾಭಾಸಿ(ನ್ವಿ)ತ ।**
**ವಪುವೆನಿಪ ಕೃಷ್ಣಾದಿ ರೂಪಕ ।**
**ದ್ವಿಪಗಳಂತುಂಡುಂಬ ಸರ್ವತ್ರದಲಿ ನೆಲಸಿದ್ದು ॥ ೨೪ ॥**

ಮೂಲ: (ದ್ವಾಭ್ಯಾಂ ಪಿಬತೀತಿ ದ್ವಿಪಃ ಇತಿ ಸಮಾಸ)

**ಪದ್ಯಾರ್ಥ :**—ಅಪಗತಾಶ್ರಯ=ಹೋಗಲ್ಪಟ್ಟ ಆಶ್ರಯ ಉಳ್ಳವ ನಿರಾಶ್ರಯ ಶ್ರೀಬಿಂಬನಾದ ಹರಿಗೆ ಒಬ್ಬರ ಆಸರ ಎಡೆ ಇಲ್ಲದವನಾದರೂ, ಎಲ್ಲರೊಳಗಿದ್ದು, ಸರ್ವ ಜೀವರಲ್ಲಿ ತದಾಕಾರತಚ್ಛಬ್ದ ತನ್ನಾಮವಾಚ್ಯನಾಗಿ,

ಉಪಮೆ ಎನಿಪ=ಆ ಜೀವರ ಸಾದೃಶನಾಗಿದ್ದು ಹೋಲುವಿಕೆ ಸಮಾನನಾಗಿ ಇರುವನಾದರೂ, ಅನುಪಮರೂಪನು=ಅಸಾಮಾನ್ಯ, ಹೋಲುವಿಕೆ ಇಲ್ಲದ ಅಂದರೆ ಆಯಾಜೀವರಿಂದ ಭಿನ್ನ ಅಸದೃಶ ಶ್ರೀಹರಿಯು ಸರ್ವರಿಗೆ ಅನುಪನು, ಸಚ್ಚಿದಾನಂದರೂಪನು, ಶಫರಕೇತನ ಜನಕ=ಮೀನವೇ ಧ್ವಜವಾಗಿ ಉಳ್ಳ ಮನ್ಮಥನ ತಂದೆಯು, ಇಲ್ಲಿ ಮನ್ಮಥಜನಕನೆಂಬ ಪದಪ್ರಯೋಗವು ಬಹು ರಹಸ್ಯವಾಗಿದೆ. ಮನ್ಮಥನು ಅಕಾಯನಾಗಿ ಸರ್ವರಲ್ಲಿದ್ದು ಕಾಮುಬಾಣಗಳಿಂದ ಹೇಗೆ ಮೋಹಪುಟ್ಟಿಸುವನೋ ಶ್ರೀಹರಿಯು ಅಕಾಯನ ತಂದೆಯಾದಮೇಲೆ ಅವನ ಶಕ್ತಿ ಮನ್ಮಥನಕಿಂತ ಮೀರಿದುದು ಎಂದು ತೋರಿದ್ದಾರೆ. ಎಲ್ಲರೊಳಗಿದ್ದು ಮೋಹಿಪನು=ಭ್ರಾಂತಿ, ಅಜ್ಞಾನ, ಅಹಂಕಾರ ಮಮಕಾರವನ್ನು ಹುಟ್ಟಿಸುವನು, ಹೇಗಂದರೆ, ಮೋಹಕನ ತೆರದಿ=ಮರುಗೊಳಿಸುವ ಭ್ರಾಂತಿ ಪುಟ್ಟಿಸುವ ಧರ್ಮವುಳ್ಳವನಂತೆ ತನ್ನ ಇಚ್ಛೆಯಿಂದ ಜೀವರನ್ನು ಮರುಳು ಮಾಡುವನು. ಶ್ರೀಹರಿಯು, ಸರ್ವಜೀವರಲ್ಲಿದ್ದು ಅಕಾಯನೆಂದು ಕರೆಸಿದರೂ, ಅವನು ಅಕಾಯನಲ್ಲ, ಸಚ್ಚಿನ್ಮಯ ರೂಪಿ, ತಪನಕೋಟಿ ಸಮಪ್ರಭಾನ್ವಿತ=ಕೋಟಿ ಸೂರ್ಯರ ಕಾಂತಿಗೆ ಮಿಗಿಲೆನಿಸಿದ, ವಪುವೆನಿಪ=ಚಿದಾನಂದರೂಪ ದೇಹ ತಾನು ಅಪರಿಚ್ಛಿನ್ನನಾದರೂ ಪರಿಚ್ಛಿನ್ನರೂಪನಾಗಿ ಜನರಿಗೆ ಕೃಷ್ಣಾದಿ ರೂಪಗಳಿಂದ ತೋರುವನು. ಸರ್ವತ್ರದಲಿ ನೆಲಸಿದ್ದು=ಸರ್ವ ಜೀವರಲ್ಲಿ ಆಶ್ರಯನಾಗಿ ಇದ್ದು, ದ್ವಿಪಗಳುಂತುಂಡುಂಬ="ದ್ವಾಭ್ಯಾಂಪಿಬತೀತಿ ದ್ವಿಪಃ" (ಎಂದು ಮೂಲಪ್ರತಿಯಲ್ಲೇ ದಾಸರು ಸಮಾಸ ತೋರಿದ್ದಾರೆ) ವಿಗ್ರಹಕೋಶಕಾರರು ಇದೇ ಸಮೀಚೀನ ಅರ್ಥ ಬರೆದಾರೆ. ಮುಖ ಮತ್ತು ನಾಶಿಕಾದಿಂದ ನೀರನ್ನು ಕುಡಿಯುತ್ತದೆ ಕಾರಣ ಗಜಕ್ಕೆ ದ್ವಿಪವೆಂತ ನಾಮ, ಆನೆಯು ನೀರು ಕುಡಿಯಬೇಕಾದರೆ ಮೊದಲು ಸೊಂಡೆಯಲ್ಲಿ ತುಂಬಿಕೊಂಡು, ಮುಖದಲ್ಲಿ ಸೊಂಡೆಯಿಂದ ಹಾಕಿಕೊಂಡು ಕುಡಿಯುತ್ತದೆ. ಗಜಗಳಂತೆ ಶ್ರೀಹರಿಯು, ತಾನು ಉತ್ತಮರಾದ ಬ್ರಾಹ್ಮಣರ ಮುಖದಲ್ಲಿ ಅನ್ನ ಕೊಟ್ಟರೆ, ಆ ಅನ್ನವು ಬ್ರಾಹ್ಮಣರಲ್ಲಿ ನಿಂತು ಉಂಡು, ತಾನುಂಬ, ತನ್ನ ಸ್ವಾಖ್ಯರಸವನ್ನು ಸ್ವೀಕರಿಸುವನೆಂದು ದಾಸರ ಹೃದ್ಗತ.

ಇದನ್ನರಿಯದೇ ಹಿಂದೆ ಅಚ್ಚು ಆದ ಟೀಕಾಗಳಲ್ಲಿ ಮೂಲದಲ್ಲೇ ತಿದ್ದಿ ದ್ವಿಪದ ವಿಷ ಎಂದು ತಿದ್ದಿ ಅಪಾರ್ಥಗಳನ್ನು ಮಾಡಿದ್ದಾರೆ. ಶ್ರೀಹರಿಯೇ ಗತಿ.

**ಭಾವಸೂಚನ :—**ಅಪಗತೇತಿ ಇಲ್ಲದೇ ಇದ್ದ ಉತ್ತಮಾಶ್ರಯ ಉಳ್ಳವ ತನಗೆ ತಾನೇ ಆಶ್ರಯ ॥ ಉಪಮನನುಪಮರೂಪನು ॥ ಈ ಭಗವದ್ರೂಪಾಂತರ ಸದೃಶ ಅಸದೃಶ ॥ ಶಫರಕೇತನ ಕಾಮ, ತಪನ=ಸೂರ್ಯ, ದ್ವಿಪ=ಗಜ ॥ ೨೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

“ಅಪಗತ” ಇತಿ ॥ “ತತ್ತದಾಕಾರ ಸಂಯುಕ್ತಮ್” ಇತ್ಯುಕ್ತೇಃ ॥ ಅನುಪಮಃ ಅಸದೃಶಃ ॥ ಶಫರ ಮೀನ ॥ ತಪನ ಸೂರ್ಯ ॥ ದ್ವಿಪ ಗಜ॥೨೪॥

## ಕನ್ನಡಾರ್ಥ

ಸರ್ವತ್ರದಲ್ಲಿ ಇದ್ದು, ಸರ್ವಭೋಕ್ತೃವೆನಿಸಿ, ಜೀವರನ್ನು ಅಹಂಕಾರ ಮಮಕಾರಗಳಿಂದ ಮೋಹಿಸುವನು. “ಅವನೇ ಬಂಧಕನು” ಎಂಬುದನ್ನು ವಿಶದಪಡಿಸುತ್ತಾರೆ “ಅಪಗತ” ಎಂಬ ಪದ್ಯದಿಂದ. ಜೀವರಲ್ಲಿ ತತ್ತದಾಕಾರ ನಾಮ ರೂಪಗಳಿಂದ ಇರುವದರಿಂದ ಹರಿಗೆ ಉಪಮೆ ಸಾದೃಶ್ಯವಿರುವದು ಎಂದು ತಿಳಿಯಬೇಕು. ಹೀಗೆ ಸಾದೃಶ್ಯವೇ ಹೊರತು ಸ್ವಾತಂತ್ರ್ಯಪೂರ್ಣತೆಯಿಂದ ಸಾದೃಶ್ಯವಿಲ್ಲ. ಆದುದರಿಂದ “ಅನುಪಮ” ಎಂದು ಹೇಳಲಾಗಿರುತ್ತದೆ ॥೨೪॥. (ಮಿಕ್ಕ ಪದ ಪದಾರ್ಥವು ಸ್ಪಷ್ಟವಿರುತ್ತದೆ.)

**ಅವತರಣಿಕಾ :—**ಇಂಥ ಅನುಪಮನಾದ ಶ್ರೀಹರಿಯು ಅನಿಮಿತ್ತ ಬಾಂಧವನಾಗಿ, ಭಕ್ತರ ಭಕ್ತಿ ಸ್ತೋತ್ರಕ್ಕೆ ಮೆಚ್ಚಿ ಭಕ್ತರಿದ್ದೆಡೆಗೆ ಬಂದು ಸುಜ್ಞಾನ ಅಪರೋಕ್ಷವಿತ್ತು ಸಲಹುವನೆಂದು ದೃಷ್ಟಾಂತದಿಂದ ಪೇಳುತ್ತಾರೆ.

**ಅಡವಿಯೊಳು ಬಿತ್ತದಲೆ ಬೆಳೆದಿಹ ।**
**ಗಿಡದ ಮೂಲಿಕೆ ಸಕಲ ಜೀವರ ।**
**ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ ॥**
**ಜಡಜ ಸಂಭವ ಜನಕ ತ್ರಿಜಗ ।**
**ದ್ವಡೆಯ ಸಂತೈಸೆನಲು ಅವರಿ ।**
**ದ್ದೆಡೆಗೆ ಬಂದೊದಗುವನು ಭಕ್ತರ ಭಿಡಿಯ ಮೀರದಲೆ ॥೨೫॥**

**ಪದ್ಯಾರ್ಥ :—**ಅಡವಿಯೊಳು=ಅರಣ್ಯ ಕಾನನದಲ್ಲಿ ಅನೇಕ ತರು ಗಿಡವ ಮೂಲಿಕೆ ಬಿತ್ತಿದವರಾರು? ಮನುಷ್ಯರು ಆ ಗಿಡ ಮೂಲಿಕೆಗಳನ್ನು ಹಚ್ಚಿ ಬೆಳೆಸಿರುವರೇ ಇಲ್ಲ. ಆ ಗಿಡ ಮೂಲಿಕೆಗಳು ತನ್ನಿಂದ ತಾವೇ ಬೆಳದಿರುವವು (ಇದು ಅಜ್ಞರ ದೃಷ್ಟಿ). ಶ್ರೀಹರಿಯು ವೃಷ್ಟಿಯ ದ್ವಾರಾ ನಾನಾ ಬೀಜಗಳನ್ನು ಭೂಮಿಯಲ್ಲಿ ಹಾಕಿ ಬೆಳಸುವನು. ಬೀಜವನ್ನು ಬಿತ್ತುವನು ಬೆಳಸುವನು, ಆಯಾ ಮೂಲಿಕಾ ಗುಣಧರ್ಮಪ್ರವರ್ತಕನು ಸಹ ಶ್ರೀಹರಿ ಅಲ್ಲವೇನಯ್ಯಾ? ಜೀವರುಗಳಿಗೆ ದುಷ್ಕರ್ಮದಿಂದ ಬರುವ ರೋಗ ಪರಿಹಾರಕ್ಕಾಗಿ ಆಯಾ ಗುಣಧರ್ಮಗಳನ್ನಿಟ್ಟು, ಸಕಲ ಜೀವರ ಒಡಲೊಳಿಪ್ಪಾಮಯವ=ಎಲ್ಲ ಪ್ರಾಣಿಗಳ ಹೊಟ್ಟೆಯಲ್ಲಿರುವ ರೋಗಗಳನ್ನು ಪರಿಹಾರ ಮಾಡುವ ಶಕ್ತಿ ಜಡಗಳಲ್ಲಿ ಉಂಟೆಂದು (ಏಕದೇಶೀಯ ದೃಷ್ಟಾಂತ) ಆಯಾ ಆ ಗಿಡ ಮೂಲಿಕೆ ಆಯಾ ರೋಗ ಪರಿಹಾರಕವೆಂದು ತಿಳಿದ ವೈದ್ಯನು ತಿಳಿದು ಕೊಟ್ಟರೆ ರೋಗ ಪರಿಹಾರವಾಗುವದು. ಇದರಂತೆ ಜಡಜಸಂಭವಜನಕ=ಕಮಲದಲ್ಲಿ ಪುಟ್ಟಿದ ಬ್ರಹ್ಮನ ತಂದೆ, ಶ್ರೀಹರಿಯೇ, ಧನ್ವಂತರಿಯೇ, ನೀನೇ ತ್ರಿಜಗದ್ವಡೆಯ=ಮೂರು ಲೋಕಕ್ಕೂ ಮೂರು ವಿಧ ಜೀವರಿಗೂ ಸ್ವಾಮಿ, ರಕ್ಷಕ, ಪ್ರೇರಕನೇ ಎಂದು ಸಂತೈಸೆನಲು=ರಕ್ಷಿಸೆಂದು ಮೊರೆ ಇಟ್ಟು ಅನನ್ಯ ಭಾವದಿಂದ ಕೂಗಲು, ಭಕ್ತರ ಭಿಡಿಯ ಮೀರದಲೆ=ದ್ರೌಪದಿ, ಪ್ರಲ್ಹಾದ, ಗಜರಾಜ ಮೊದಲಾದ ಭಕ್ತರ ಭಕ್ತಿ ಪ್ರೀತಿಯ ಭಿಡಿಯ=ದಾಕ್ಷಿಣ್ಯವನ್ನು ಮೀರಲಾರದೇ, ಅವರಿದ್ದೆಡೆಗೆ=ಭಕ್ತರು ಇರುವ ಸ್ಥಳಕ್ಕೆ ಬಂದೊದಗುವನು. ಬಿಂಬರೂಪನಾದ ಶ್ರೀಹರಿಯು ಪ್ರತ್ಯಕ್ಷನಾಗುವನು, ಶ್ವೇತದ್ವೀಪಾದಿಯಲ್ಲಿದ್ದ ಶ್ರೀಹರಿಯೇ ಬಿಂಬ.

**ಭಾವಸೂಚನ :—**ಅಡವೇತಿ || ಅನಿಮಿತ್ಯ ಬಂಧುತ್ವದಲ್ಲಿ ದೃಷ್ಟಾಂತವಿದು || ಜಡಜ || ಪದ್ಮ || ಭಿಡಿಯಾ=ದಾಕ್ಷಿಣ್ಯ ||೨೫||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಡವಿ" ಇತಿ || ವಿಷ್ಣುರಹಸ್ಯೇ "ಯದಾ ನಾನೌಷಧಿ ಗಣಾಃ || ಸರ್ವವ್ಯಾಧಿ ಹರಾ ಪ್ರೋಕ್ತಾಃ ಪ್ರಯುಕ್ತಾಶ್ಚ ಚಿಕಿತ್ಸಕೈಃ || ದಯಯಾ ರೋಗಿ

ಸಂಘೇಷು ಭವಂತಿ ವ್ಯಾಧಿ ಘಾತಕಾಃ ॥ ತಥಾ ಸಂತತದುಃಖೇನ ಸಂತಾಪೈಃ ತ್ರಿವಿಧೈ ಅಪಿ॥ ಅನಿಶಂ ಪೀಡ್ಯಮಾನಾನಾಂ ಪರಮಂ ದುಃಖಮೋಚನಮ್॥ ದೀಕ್ಷಾಯಾಃ ಗ್ರಹಣಂ ವಿಷ್ಣೋಃ ಏಕಮೇವ ನಚಾನ್ಯಥಾ" ॥ ಇತಿ॥

## ಕನ್ನಡಾರ್ಥ

ಪರಮಾತ್ಮನಲ್ಲಿ ದೀಕ್ಷಾ ಭಕ್ತಿ ಶ್ರದ್ಧೆಗಳು ಭವರೋಗ ಪರಿಹಾರಕಗಳೆಂಬುವದನ್ನು ದೃಷ್ಟಾಂತದಿಂದ ತಿಳಿಸುತ್ತಾರೆ " ಅಡವಿ " ಎಂಬ ಪದ್ಯದಿಂದ. " ವ್ಯಾಧಿಹಾರಿಗಳೆಂದು ಪ್ರಸಿದ್ಧವಾದ ಔಷಧಿಗಳನ್ನು-ವೈದ್ಯರ-ಚಿಕಿತ್ಸಕರು ರೋಗಿಗಳಲ್ಲಿ ದಯೆಯಿಂದ ಪ್ರಯೋಗಿಸಿದರೆ ವ್ಯಾಧಿ ನಾಶವಾಗುವುದು. ಅದರಂತೆ ತ್ರಿವಿಧ ತಾಪಗಳಿಂದ ಸಂತತ ಸಂತಪ್ತರಾದ ಸಜ್ಜನರ ದುಃಖಪಡಿಸುವ ಒಂದೇ ಶ್ರೇಷ್ಠ ಉಪಾಯವೆಂದರೆ ವಿಷ್ಣು ಭಕ್ತಿ ದೀಕ್ಷಾ ಸ್ವೀಕಾರವು " ಎಂದು ವಿಷ್ಣು ರಹಸ್ಯದಲ್ಲಿ ಹೇಳಲಾಗಿರುತ್ತದೆ. ಅದನ್ನೇ ಇಲ್ಲಿ ಹೇಳಿದ್ದಾರೆ. ॥೨೫॥

**ಅವತರಣಿಕಾ :—**" ನಿನ್ನ ಚಿತ್ತಕ್ಕೆ ಬಂದದ್ದೆನ್ನ ಚಿತ್ತಕ್ಕೆ ಬರಲಿ ಅನ್ಯಥಾ ಒಂದು ಬಯಸೆ ನಾನು " ಎಂಬ ದಾಸರ ವಚನದಂತೆ ಸುಜ್ಞಾನ, ಹರಿ ಕೊಟ್ಟದ್ದುಂಡು ಸುಖದಿಂದಿರು ಎಂದು ಶಿಷ್ಯರನ್ನು ಶಿಕ್ಷಿಸುತ್ತಾರೆ.

**ಶ್ರೀನಿಕೇತನ ತನ್ನವರ ದೇ।**
**ಹಾನುಬಂಧಿಗಳಂತೆ ಅನ್ಯವ।**
**ಧಾನದಲಿ ನೆಲಸಿಪ್ಪ ಸರ್ವದ ಸಕಲ ಕಾಮದನು॥**
**ಏನು ಕೊಟ್ಟರು ಭುಂಜಿಸುತ ಮ।**
**ದ್ದಾನೆ ಎಂದದಿ ಸಂಚರಿಸು ಮ।**
**ತ್ತೇನು ಬೇಡದೆ ಭಜಿಸುತಿರು ಅವನಂಘ್ರಿಕಮಲಗಳ॥೨೬॥**

**ಪದ್ಯಾರ್ಥ :—**ಶ್ರೀನಿಕೇತನ=ಶ್ರೀದೇವಿಗೆ ಅಶ್ರಯನಾಗಿ ಉಳ್ಳ, ಅಥವಾ ಶ್ರೀದೇವಿಯನ್ನೆ ತನ್ನ ವಕ್ಷ ಸ್ಥಳದಲ್ಲಿ ಆಶ್ರಯ ಕೊಟ್ಟಿರುವ ಬಿಂಬ ರೂಪನಾದ ಶ್ರೀ ಹರಿಯು, ದೇಹಾನುಬಂಧಿಗಳಂತೆ=ಈ ಸ್ಥೂಲ ದೇಹಕ್ಕೆ ಅನುಬಂಧಿಗಳಾದ ಆಪ್ತರು ಇವನ ಕಷ್ಟ ಕಾಲದಲ್ಲಿ ರಕ್ಷಿಸಲು ಬದಿಯಲ್ಲಿ ಇದ್ದಂತೆ, ಅನ್ಯವಧಾನದಲಿ ನೆಲಸಿಪ್ಪ ಸರ್ವದ=ವ್ಯವಧಾನ ಒಂದು ಅರ

ಲವ ಕ್ಷಣವಾದರೂ ಬಿಡದೇ ಬಿಂಬರೂಪ ಹರಿಯಲ್ಲಿ ಇದ್ದೇ ಇರುವನು, ಇಂತಹ ಪರಮಾಪ್ತನು, ಸಕಲ ಕಾಮಧೇನು=ಭಕ್ತಾನಾಂ ಕಾಮಾನ್ ಪ್ರಕರ್ಷೇಣ ದದಾತೀತಿ ಕಾಮದಃ ॥ ಭಕ್ತರ ಯೋಗ್ಯತೆಯಂತೆ ಸರ್ವ ಅಭೀಷ್ಟ ಗಳು ಬಯಸಿದ್ದನ್ನು ಕೊಡುವನು. ಸತ್ಯ ಸಂಕಲ್ಪನು ತನ್ನ ನಿಜೇಚ್ಛ ಯಂತೆ=ಜೀವರ ಯೋಗ್ಯತೆ, ಗುಣಕಾಲ ದೇಶವನುರಿಸಿ ಯಾವ ಕಾಲ ದಲ್ಲಿ ಶ್ರೀ ಹರಿಯು ಏನು ಕೊಟ್ಟದ್ದು=ಹರಿ ಇಚ್ಛೆಯಿಂದ ಬಂದ ಸುಖಾ ಸುಖಗಳನ್ನು, ಭುಂಜಿಸುತ್ತ=ಭೋಜನ ಮಾಡುತ್ತ ಅನುಭೋಗಿಸುತ್ತ, ಮದ್ದಾನೆ ಎಂದದಿ ಸಂಚರಿಸು, ಮದ ಸೊಕ್ಕು ಏರಿದ ಆನೆಯು, ನಿರ್ಭೀತ ವಾಗಿ ಹೇಗೆ ಸಂಚರಿಸುವಂತೆ, ಶ್ರೀ ಹರಿಯ ಭಕ್ತಿ ರಸವೆಂಬ ಮದೋದಕ ಪಾನ ಮಾಡಿ, ಹರಿಯು ಹೊರತು ಇನ್ಯಾರು ರಕ್ಷಕರಿಲ್ಲರೆಂಬ ದಾರಢ್ಯವಾದ ಮದವೇರಿ ನಿರ್ಭಯದಿಂದ ಸಂಚರಿಸು=ದೇಹಮಾತ್ರಾ ಸರ್ವಕ್ರಿಯಗಳನ್ನು ಶ್ರೀ ಹರಿಗೆ ಸಮರ್ಪಣ ಮಾಡು, ಮತ್ತೇನು ಬೇಡದೆ=ಹರಿ ಇತ್ತುದ ವಿನಾ ಇನ್ನೊಂದರಲ್ಲಿ ಅಪೇಕ್ಷವಿಲ್ಲದೇ ಅವನಂಘ್ರಿ ಕಮಲಗಳ=ಶ್ರೀಬಿಂಬ ರೂಪಿ ಹರಿಯ ಅಂಘ್ರಿಯೇ ಶ್ರೀ ಕೃಷ್ಣ ರೂಪವನ್ನು ಸದಾ ಭಜಿಸುತ್ತಿರು. "ಸುಖವಾಗಲಿ ಬಹು ದುಃಖವಾಗಲಿ ಸಖ ನೀನಾಗಿರು ಪಾಂಡುರಂಗ ॥ ನಿಖಿಳಾಂತರ್ಗತ ವ್ಯಾಸ ವಿಠಲ ತವ ಮುಖ ಪಂಕಜದೋರೊ ಪಾಂಡುರಂಗ॥ ಪೂಜಿಸುತಿರು, ಸ್ತೋತ್ರ ಗೈಯುತ್ತಲಿರು.

**ಭಾವಸೂಚನ :—**ಶ್ರೀನಿಕೇತನಾ ಇತಿ ॥ ೨೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀನಿಕೇತನ" ಇತಿ ॥ **ಕಾಮದ(ಪ್ರದ)** ಓಂ ಯಜ್ಞಂಚ ನಸ್ತನ್ವಂ ಚ ಪ್ರಜಾಂ ಚಾದಿತ್ಯೈರಿಂದ್ರಃ ಸಹ ಸಗಣೋ ಮರುದ್ಭಿರಸ್ಮಾಕಂ ಭೂತು ॥ ಓಂ ॥ ಕಾಮಂ ಕಾಮಿತಂ ತನು ಪ್ರಜಾಧಿಕಂ, ದದಾತಿ ಕಲ್ಪಯತಿ ಇತಿ ತಥೋಕ್ತಃ ॥೨೬॥

## ಕನ್ನಡಾರ್ಥ

"ಕಾಮಪ್ರದ ಶ್ರೀಹರಿಯು ಕೊಟ್ಟುದನ್ನು ಪ್ರಸಾದ ಭಾವನೆಯಿಂದ

ಸ್ವೀಕರಿಸಿ, ಅವನ ಅಂಘ್ರಿಕಮಲವನ್ನು ಭಜಿಸುವವರಿಗೆ ಯಾವ ಭಯವಿಲ್ಲ" ಎಂದು ಹೇಳುತ್ತಾರೆ " ಶ್ರೀನಿಕೇತನ " ಎಂಬ ಪದ್ಯದಿಂದ. **"ಕಾಮಪ್ರದ"** (ಕಾಮದ) ಅಪೇಕ್ಷಿತವಾದ ಹೆಂಡರು ಮಕ್ಕಳು ವಿತ್ತ ಮುಂತಾದ ಸಕಲಾಭೀಷ್ಟ ವಸ್ತುಗಳನ್ನು ಒದಗಿಸಿಕೊಡುವವನು ಎಂದು ಬೃಹತೀ ಮಂತ್ರಾನುಸಾರಿ ಯಾದ ಅರ್ಥ. ॥೨೬॥

**ಅವತರಣಿಕಾ :—**ಶ್ರೀಹರಿಯು ಸಕಲಕಾಮದನೆಂದು, ಹಿಂದಿನ ಪದ್ಯದಲ್ಲಿ ಹೇಳಿದರು. ಆದರೆ ಯಾವ ಯಾವ ಜೀವರಿಗೆ ಹೇಗೆ ಅಭೀಷ್ಟ ಗಳನ್ನು ಕೊಡುವನೆಂಬುದನ್ನು ದೇವ ಮಾನವ ದಾನವರ ಸ್ವಭಾವಾನುಸಾರ ವಾಗಿ ಫಲಗಳನ್ನೀಯುವನೆಂದು ಶ್ರೀಹರಿಯ ಸಮುತ್ಪ ಗುಣೋತ್ಕರ್ಷಣ ಗೈಯುತ್ತಾರೆ.

**ಬೇಡದಲೆ ಕೊಡುತಿಪ್ಪ ಸುರರಿಗೆ।**
**ಬೇಡಿದರೆ ಕೊಡುತಿಹನು ನರರಿಗೆ।**
**ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ ॥**
**ಮೂಢರನುದಿನ ಧರ್ಮಕರ್ಮವ।**
**ಮಾಡಿದರು ಸರಿ ಅಹಿಕಫಲಗಳ।**
**ನೀಡಿ ಉನ್ಮತ್ತರನ ಮಾಡಿ ಮಹಾ ನಿರಯವೀವ॥೨೭॥**

**ಪದ್ಯಾರ್ಥ :—**ಪುರುಷಾರ್ಥಃ= ಧರ್ಮಾರ್ಥಕಾಮಗಳಲ್ಲಿ ನಾಲ್ಕನೇ ದಾದ ಮೋಕ್ಷಸುಖಾನಂದ ಪುರುಷಾರ್ಥ ಮುಖ್ಯವಾದುದು. ಇಂತಹ ಮೋಕ್ಷವಾದ, ಪುರುಷಾರ್ಥವನ್ನು ಸುರರಿಗೆ ಬೇಡದಲೆ ಕೊಡುತಿಪ್ಪ= ಭಕ್ತಿ ಯೋಗಿಗಳಾದ ಸಕಲ ತತ್ವಾಭಿಮಾನಿದೇವತೆಗಳು ಶ್ರೀಹರಿಯ ವಿನಾ ಒಂದೂ ಇಚ್ಛಿಸುವದಿಲ್ಲ, ಕಾರಣ ಅವರಿಗೆ ಮೋಕ್ಷವು ಬೇಡದಲೆ ಅವರಿಂದ ಯಾಚಿ ಸದೇ ಸಾಧನ ಕಲ್ಪಾವಸಾನಕ್ಕೆ ಕೊಡುವನು. ಇದರಲ್ಲಿ ಜ್ಞಾನಯೋಗಿಗಳಾದ ಸುರರು ಬಂದರು. ಬೇಡಿದರೆ ಕೊಡುತಿಹನು ನರರಿಗೆ= ಕರ್ಮಯೋಗಿಗಳಾ ರಂಭಿಸಿ ಮನುಜರಾದ ಮುಕ್ತಿಯೋಗ್ಯರಿಗೆ ಅವರ ಸಾಧನಾನುಸರಿಸಿ ಅವರಿಂದ ಪ್ರಾರ್ಥಿಸಿಕೊಂಡು, ಸಾಧನ ಪೂರ್ತಿಮಾಡಿಸಿ, ಮೋಕ್ಷವನ್ನು ಕೊಡುವನು,

ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥಃ= ದೈತ್ಯದಾನವಾದಿಗಳು ಅನೇಕ ತಪಸ್ಸು ಯಜ್ಞಕಾಮಿಗಳಾಗಿ ಮಾಡಿದರೂ ಅವರ ದುಷ್ಟ ಸ್ವಭಾವಗಳನುಸರಿಸಿ, ಎಂದೆಂದಿಗೂ ಪುರುಷಾರ್ಥವನ್ನು ಕೊಡುವದಿಲ್ಲ. ಆದರೆ ಆ ಮೂಢರನುದಿನ ಧರ್ಮಕರ್ಮವ ಮಾಡಿದರು ಸರಿ= ಆ ಅಜ್ಞಾನಿ ಮಿಥ್ಯಾಜ್ಞಾನಿಗಳಾದ ಮೂಢರು ನಿತ್ಯದಲ್ಲಿ, ಧರ್ಮ= ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟ ಕರ್ಮ, ಯಜ್ಞಯಾಗಾದಿ ಕರ್ಮ= ಕ್ರಿಯೆಗಳು ಮಾಡಿದರೂ, ಆಗಲಿ ಅವರಿಗೆ ಅಹಿಕ ಫಲಗಳ ನೀಡಿ= ಇಹದ ಸೌಖ್ಯ ಧನಕನಕಾದಿ ಸಂಪತ್ತು ಕೊಟ್ಟು ಆ ಸಂಪತ್ತು ಧನಮದದಿಂದ ಅವರನ್ನು ಉನ್ಮತ್ತರನ ಮಾಡಿ= ಸೊಕ್ಕಿದ ಮಹಾಗರ್ವಿ ಮಧಾಂದರನ್ನು ಮಾಡಿ, ಕೊನೆಗೆ ಮಹಾನಿರಯವೀವ= ಅಂಧಃತಮರೂಪವಾದ ಮಹಾನರಕವನ್ನು ಕೊಡುವನು. ತಾರತಮ್ಯ ಜ್ಞಾನಶೂನ್ಯ ಮಿಥ್ಯಾಜ್ಞಾನಿಗೆ ಫಲ ನಿರಯ.

**ಭಾವಸೂಚನ :—** ಬೇಡದಲೇತಿ ॥ ೨೭ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಬೇಡದಲೆ " ಇತಿ ॥ " ಮುಖ್ಯೇಷ್ಟಂ ವಾ " ಇತ್ಯುಕ್ತೇ ॥ ೨೭ ॥

## ಕನ್ನಡಾರ್ಥ

ದೇವ ಮಾನವ ದಾನವರಲ್ಲಿ ಶ್ರೀಹರಿಯು ಅವರವರ ಸ್ವಭಾವಯೋಗ್ಯತೆಗಳನ್ನು ಅನುಸರಿಸಿ (ನಿಮಿತ್ತೀಕರಿಸಿ) ಅವರಿಗೆ ಫಲಗಳನ್ನೀಡುವನೆಂಬುದನ್ನು ವಿವರಿಸುತ್ತಾರೆ " ಬೇಡದಲೆ " ಎಂಬ ಪದ್ಯದಿಂದ. ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ " ದೇವತೆಗಳಿಗೆ ಪರಮಾತ್ಮನೇ ಮುಖ್ಯ ಇಷ್ಟವಸ್ತುವು " ಎಂದು ಶ್ರುತಿ ಸ್ಮೃತಿಗಳಿಂದ ಸಮರ್ಥಿಸುತ್ತಾರೆ. ಅದರಂತೆ ಅವನೇ ಇಷ್ಟರೂಪನಾದುದರಿಂದ, ಮಿಕ್ಕ ಇಷ್ಟ ವಸ್ತುಗಳೇ ಅವರಿಗೆ ಇರುವದಿಲ್ಲವಾದುದರಿಂದ ದೇವತೆಗಳು ಪರಮಾತ್ಮನನ್ನು ಏನೂ ಬೇಡುವದಿಲ್ಲ ಎಂದು ತಿಳಿಯಬೇಕು. ॥ ೨೭ ॥

**ಅವತರಣಿಕಾ :—** ತ್ರಿವಿಧರಿಗೆ ತ್ರಿವಿಧ ಗತಿ ಈವನೆಂಬುದನ್ನು

ಸೂರ್ಯ–ಸೂರ್ಯನ ಕಿರಣ ಛಾಯಾ ದೃಷ್ಟಾಂತದಿಂದ ಹರಿಯ ಮಹಾತ್ಮೆ ವರ್ಣಿಸುತ್ತಾರೆ.

**ತರಣಿ ಸರ್ವತ್ರದಲಿ ಕಿರಣವ।**
**ಹರಹಿ ತತ್ತದ್ವಸ್ತುಗಳನನು।**
**ಸರಿಸಿ ಅದರದರಂತೆ ಛಾಯವು ಕಂಗೊಳಿಪ ತೆರದಿ॥**
**ಅರಿಧರೇಜಾನೇಜ ಜಗದೊಳ।**
**ಗಿರುವ ಛಾಯಾ ತಪನೆನಿಸಿ ಸಂ।**
**ಕರುಷಣಾಹ್ವಯ ಅವರವರ ಯೋಗ್ಯತೆಗಳಂತಿಪ್ಪ ॥೨೮॥**

**ಪದ್ಯಾರ್ಥ :—**ತರಣಿ=ಸೂರ್ಯನು, ಸರ್ವತ್ರದಲಿ ಪೃಥ್ವಿಯಲ್ಲಿ ಎಲ್ಲ ಕಡೆಗೆ, ತನ್ನ, ಕಿರಣವ ಹರಹಿ=ಕಿರಣವ ಪಸರಿಸಿ, ವ್ಯಾಪಿಸಿ, ತತ್ತ ದ್ವಸ್ತುಗಳನನುಸರಿಸಿ=ಆಯಾ ಪದಾರ್ಥಗಳ ಇರುವಿಕೆಯಂತೆ ಅದರದ ರಂತೆ=ಆಯಾ ವಸ್ತುಗಳಂತೆ, ಛಾಯವು=ನೆಳಲು, ಕಂಗೊಳಿಪ ತೆರದಿ= ಕಾಣಿಸುವಂತೆ, ಅಥವಾ, ಯಾವ ವಸ್ತುಗಳು ಯಾವ ಬಣ್ಣ ರೂಪಗಳು ಸೂರ್ಯನ ಪ್ರಭೆಯಿಂದ ಕಾಣಿಸುತ್ತದೆ. ಹಸರು, ಬಿಳುಪು, ಕೆಂಪು, ಇತ್ಯಾದಿ ಗಿಡ ಹೂವುಗಳ ಮೇಲೆ ಸೂರ್ಯನ ಕಿರಣ ಬಿದ್ದರೆ ಆ ಪದಾರ್ಥದಂತೆ ತೋರುತ್ತದೆ. ಮತ್ತು ಆಯಾ ಮರ ಬಳ್ಳಿ ಗುಡ್ಡಕಲ್ಲುಗಳ ನೆಳಲು ಬಿದ್ದು ಕಣ್ಣಿಗೆ ಕಾಣಿಸುವಂತೆಯೇ, ಅರಿಧರೇಜಾನೇಜ=ಅರಿಧರ=ಚಕ್ರಧಾರಿ ಯಾದ ಸೂರ್ಯನಂತೆ ಪ್ರಭೆಯುಳ್ಳ ಹರಿಯು, ಏಜ=ಏಜಕಂಪನೇ ಈಶಾ ವಾಸ್ಯ ಭಾಷ್ಯೆ॥ ಏಜಕಂಪನೆ ಚಲನ ಮಾಡತಕ್ಕ ಪ್ರಾಣಿಗಳು, ಬ್ರಹ್ಮಾದಿ ಜೀವರುಗಳು ಪರಮಾತ್ಮನ ಆಧೀನದ ಭಯಗೊಳ್ಳುತ್ತಾರೆ. ಅನೇಜ= ಚಲಿಸದಿದ್ದ ಜಡಗಳು, ಜಗದೊಳಗಿರುವವು, “ ಭೀಷೋ ಜ್ಯೋತಿ ಸೂರ್ಯಃ” ಇತ್ಯಾದಿ ವಾಕ್ಯಗಳಂತೆ ಜಗದೊಳಗೆ= ಈ ಜಗತ್ತಿನಲ್ಲಿ ಛಾಯಾ=ನೆಳಲಿನಂತೆ ಸಜ್ಜನರನ್ನು ರಕ್ಷಿಸುವ, ಆತಪ ಸೂರ್ಯಕಿರಣವು ಕಲ್ಲು ಮುಂತಾದ ಉಸಿಬಿನ ಬೀಳಲು ಕಾದು ತಪ್ತಮಯವಾಗುವವೋ ಅದರಂತೆ. ಜಡಸದೃಶರಾದ ಪಾಪಿ ಗಳಿಗೆ ಆತಪದಂತೆ=ಸೂರ್ಯ ಕಿರಣದಂತೆ, ಸಂಕರುಷಣಾಹ್ವಯ=ಸಂ ಕರ್ಷಣನಾಮಕ ಹರಿಯು, ಅವರವರ ಯೋಗ್ಯತೆಗಳಂತಿಪ್ಪ=ಆಯಾ ಜೀವರ

ಯೋಗ್ಯತೆ ಸ್ವಭಾವದಂತೆ ತಾನೂ ಇರುವನು.

**ಭಾವಸೂಚನ :—** ತರಣೀತಿ ॥ ಕಂಗೊಳಿಪಾ ॥ ತೋರುವಾ । ಅರಿ ಚಕ್ರ । ಛಾಯೈವವಿದುಷಾಂ ಪ್ರಭುಃ ॥ ಆತಪಃ ಪಾಪಿನಾಮಿತ್ಯುಕ್ತೇ ॥೨೮॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತರಣಿ" ಇತಿ ॥ "ತರಣಿ" ಸೂರ್ಯ ॥ ಅರಿ ಚಕ್ರ ॥ "ಏಜಾನೇಜ" ಚೇತನಾಚೇತನ ॥ (ಯ) "ತದೇಜತಿ" ಇತ್ಯಾದ್ಯುಕ್ತೇಃ ॥ "ಛಾಯಾತಪೌ ಬ್ರಹ್ಮ ವಿದೋಃ" ಇತ್ಯುಕ್ತೇಃ ॥ ತದ್ಭಾಷ್ಯೇ "ಛಾಯೇನ ವಿದುಷಾಂ ಪ್ರಭುಃ ॥ ಆತಪಃ ಪಾಪಿನಾಮ್" ಇತಿ ಚ ॥ ೨೮ ॥

## ಕನ್ನಡಾರ್ಥ

ದೇವದಾನವರ ಫಲವ್ಯತ್ಯಾಸಗಳಲ್ಲಿ ಸೂರ್ಯ ಕಿರಣದ ಛಾಯಾ ಆತಪಗಳ ದೃಷ್ಟಾಂತವನ್ನು ಹೇಳುತ್ತಾರೆ "ತರಣಿ" ಎಂಬ ಪದ್ಯದಿಂದ. "ಏಜಾನೇಜ" ಚೇತನಾಚೇತನಗಳು. ಪರಮಾತ್ಮನಿಂದಲೇ ಸಮಸ್ತ ವಿಶ್ವವು ಭಯಗೊಳ್ಳುತ್ತದೆ" ಎಂದು ಹೇಳಿರುತ್ತಾರೆ. ಅಂದರೆ ಚೇತನವರ್ಗವು ಭಯಹೊಂದುವದರಿಂದ "ಏಜ" ಶಬ್ದಕ್ಕೆ ಚೇತನವೆಂದು ಅರ್ಥವಾಗುತ್ತದೆ. "ಪರಮಾತ್ಮನು ಬ್ರಹ್ಮಜ್ಞಾನಿಗಳಿಗೆ ಛಾಯೆಯಂತಲೂ, ಪಾಪಿಗಳಿಗೆ ಆತಪ ಬಿಸಿಲಿನಂತೆಯೂ ಫಲದಾಯಕನು" ಎಂಬುದಾಗಿ "ಛಾಯಾತಪೌ" ಎಂಬ ಉಪನಿಷತ್ತಿನ ಭಾಷ್ಯದಲ್ಲಿ ನಿರೂಪಿಸಲಾಗಿರುತ್ತದೆ. ಆದುದರಿಂದ ಈ ದೃಷ್ಟಾಂತವು ಯುಕ್ತವಿರುತ್ತದೆ. ॥ ೨೮ ॥

**ಅವತರಣಿಕಾ :—** ಬಿಂಬರೂಪಿಯಾದ ಶ್ರೀಹರಿಯು ತನ್ನ ಸ್ವಾಂಶಗಳಿಗಳಿಂದ ಬ್ರಹಾಂಡದಲ್ಲೆಲ್ಲ ತುಂಬಿ, ಶ್ರೀ ಭೂದೇವಿಯರಿಂದ ಕೂಡಿಕೊಂಡು ವಿಹಾರ ಮಾಡಿ, ತನಗೆ ತಾನೇ ಸೇವಕನೆನಿಸಿ, ಸೇವೆಯನ್ನು ಕೈಕೊಂಬುವನೂ ತಾನೆಂದು ಶ್ರೀ ಹರಿಯ ಮಹಿಮೆಯನ್ನು ಕೊಂಡಾಡುತ್ತಾರೆ.

**ಈ ವಿಧದಿ ಸರ್ವತ್ರ ಲಕ್ಷ್ಮೀ ।**
**ಭೂವನಿತೆಯರ ಕೂಡಿ ತನ್ನ ಕ ।**
**ಳಾ ವಿಶೇಷಗಳೆಲ್ಲ ಕಡೆಯಲಿ ತುಂಬಿ ಸೇವ್ಯತಮ ॥**

**ಸೇವಕನು ತಾನೆನಿಸಿ ಮಾಯಾ।**
**ದೇವೀರಮಣ ಪ್ರವಿಷ್ಟ ರೂಪವ।**
**ಸೇವೆ ಮಾಳ್ಪ ಶರಣ್ಯ ಶಾಶ್ವತ ಕರುಣಿ ಕಮಲಾಕ್ಷ॥೨೯॥**

**ಪದ್ಯಾರ್ಥ :—**ಈ ವಿಧದಿ ಸರ್ವತ್ರ=ಹಿಂದೆ ಹೇಳಿದ ಪ್ರಕಾರದಿಂದ ತನ್ನ ಸ್ವಾತಂತ್ರ್ಯದಿಂದ, ಶ್ರೀ ಲಕ್ಷ್ಮೀ, ಭೂವನಿತೆಯರ ಕೂಡಿ=ಶ್ರೀ, ಭೂ ಸಮೇತನಾಗಿ, ಕಳಾವಿಶೇಷಗಳೆಲ್ಲ ಕಡೆಯಲಿ ತುಂಬಿ=ಬಿಂಬರೂಪಿ ಮೂಲ ರೂಪಿ ಹರಿಯು ತನ್ನ ಸ್ವಾಂಶ ಕಳೆಗಳ ವಿಭೂತಿ ಜಗದೊಳಗೆಲ್ಲ ಇಟ್ಟು ಪಸರಿಸಿ, ಸೇವ್ಯತಮ=ಶ್ರೇಷ್ಠವಾಗಿ ಉತ್ತಮವಾಗಿ ಸೇವಾ ಕೈಕೊಂಬುವನು ಹೇಗಂದರೆ, ಮಾಯಾದೇವಿರಮಣ=ಮಾಯಾದೇವಿ (ಲಕ್ಷ್ಮೀ ರೂಪಕ್ಕೆ) ಪತಿಯಾದ ವಾಸುದೇವನಾಮಕ ಹರಿಯು, ಪ್ರವಿಷ್ಟರೂಪವ=ಸುಕಳೆಗಳಿಂದ ತುಂಬಿದ ರೂಪಗಳನ್ನು ಸೇವೆ ಮಾಳ್ಪ=ಪೂಜಾಮಾಡುವನು, ಶರಣ್ಯ=ಶರ ಣಾಗತರನ್ನು ರಕ್ಷಿಸುವ, ಶಾಶ್ವತ ಕರುಣಿ=ಸದಾ ನಿತ್ಯವಾಗಿ ಜೀವನಲ್ಲಿ ಬಿಂಬನಾಗಿದ್ದು ಜೀವನಿಗೆ ತಕ್ಕ ಮುಕ್ತಿ ಕೊಡಲು ಸಾಧನ ಮಾಡಿಸಿ, ಏನಂ ಮೋಚಯಾಮಿ ಎಂಬ ಉತ್ತಮ ಪ್ರಸಾದವನ್ನು ನೀಡುವ ಕರುಣಾಳು, ಸತ್ವಜೀವರನ್ನು ಒಳ್ಳೇ ಅರಳಿದ ಕಮಲದಂತೆ ವಿಶಾಲವಾದ ದಯಾಪಾಂಗ= ದೃಷ್ಟಿಯಿಂದ ನೋಡುವ, ಕಮಲಾಕ್ಷನು=ಕಮಲ ಪತ್ರದಂತೆ ನೇತ್ರ ಉಳ್ಳವನು.

**ಭಾವಸೂಚನ :—**ಈ ವಿಧೇತಿ ॥ ರೂಪಕ=ರೂಪ ಉಳ್ಳವ ॥ ೨೯ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಈ ವಿಧ" ಇತಿ ॥ ಸ್ವಸನ್ಯ ತ ಮಿತ್ಯುಕ್ತೇಃ ॥ ಸ್ವಕೃತ ಮಿತಿ ಚ॥೨೯॥

**ಕನ್ನಡಾರ್ಥ**

ಶ್ರೀಹರಿಯೇ ತನ್ನ ರೂಪಗಳಿಂದ ಸೇವಾ ಮುಂತಾದ ವ್ಯಾಪಾರಗಳನ್ನು ಮಾಡಿಸುವದರಿಂದ "ಸೇವ್ಯ ಸೇವಕ"ನೆನಿಸಿಕೊಳ್ಳುವನೆಂದು ಹೇಳುತ್ತಾರೆ "ಈ ವಿಧದಿ" ಎಂಬ ಪದ್ಯದಿಂದ.

• ಶ್ರುತಿ ಗೀತೆಯಲ್ಲಿ "ಪರಮಾತ್ಮನು ತನ್ನನ್ನು ತಾನು ಪೂಜಿಸಿಕೊಳ್ಳುವನು" ಎಂದು ಹೇಳಲಾಗಿರುತ್ತದೆ. ಅದನ್ನೇ ಇಲ್ಲಿ ನಿರೂಪಿಸಲಾಗಿರುತ್ತದೆ. ||೨೯||

**ಅವತರಣಿಕಾ :—**ದಾಸಾರ್ಯರು, ಬಿಂಬಾಧೀನರಾಗಿ, ಭಕ್ತ್ಯುದ್ರೇಕದಿಂದ ಬಿಂಬನಾದ ಹರಿಯ ಅನಂತ ಗುಣಗಳನ್ನು ಸ್ತೋತ್ರ ಪೂರ್ವಕ ಮೂಲರೂಪಿ ಬಿಂಬಕಾರಣ, ಕಾರ್ಯರೂಪಗಳನ್ನು ಉಪಸಂಹಾರ ಗೈಯುತ್ತ ಹೊಗಳುತ್ತಾರೆ.

**ಪ್ರಣವ ಕಾರಣ ಕಾರ್ಯ ಪ್ರತಿಪಾ।**
**ದ್ಯನು ಪರಾತ್ಪರ ಚೇತನಾಚೇ।**
**ತನ ವಿಲಕ್ಷಣನಂತ ಸತ್ಕಲ್ಯಾಣ ಗುಣಪೂರ್ಣ॥**
**ಅನುಪಮನುಪಾಸಿತ ಗುಣೋದಧಿ।**
**ಅನಘ ಅಜಿತಾನಂತ ನಿಷ್ಕಿಂ।**
**ಚನ ಜನಪ್ರಿಯ ನಿರ್ವಿಕಾರ ನಿರಾಶ್ರಯಾವ್ಯಕ್ತಾ॥೩೦॥**

**ಪದ್ಯಾರ್ಥ :—**ಸೃಷ್ಟಿ ಪ್ರಾರಂಭದಿಂದ–ಓಂಕಾರ ಗತ–ಸ್ವರವರಣಾದಿ ಅಭಿವ್ಯಂಜಕ ಶಕ್ತಿ ಇಪ್ಪ ಮೂಲರೂಪಿ ಹರಿಯು, ಪ್ರಣವಗತ, ಓಂಕಾರಗತ ಅಕಾರ, ಉಕಾರ ಮಕಾರಾದಿಗಳಿಗೆ ಮೂಲಕಾರಣರೂಪಿ ಹರಿಯು, ಕಾರ್ಯ ಪ್ರತಿಪಾದ್ಯನು=ಜೀವರ ಲಿಂಗ ಪ್ರಕೃತಿ ಮತ್ತು ಸ್ಥೂಲ ಜಡ ಪ್ರಕೃತಿ ಉಪಚಾಯಕ ಕಾರ್ಯರೂಪಗಳಿಂದ ಹೊಗಳಿಸಿಕೊಳ್ಳುವವನು, ಪರಾತ್ಪರ=ಪರ ಉತ್ತಮಳಾದ ಶ್ರೀಲಕ್ಷ್ಮೀದೇವಿಯರಿಗೂ ಪರ=ಉತ್ತಮನಾದವನು, ಚೇತನಾಚೇತನ ವಿಲಕ್ಷಣ=ಚೇತನರು ಜೀವರು, ಅಚೇತನರು ಜಡಗಳಿಂದ ಅತ್ಯಂತ ಭಿನ್ನನು, ವಿಚಿತ್ರ ಲಕ್ಷಣನು, ನೂತನನು, ಅನಂತ ಸತ್ಕಲ್ಯಾಣ ಗುಣಪೂರ್ಣ=ಶ್ರೀಹರಿಯ ಅನಂತರೂಪಗಳು, ಪರಸ್ಪರ ಅಭಿನ್ನವಾದವು, ಒಂದು ರೂಪದೊಳಗೂ ಅನಂತ ಬಹು, ಸಂಖ್ಯಾ ಇಲ್ಲದ ಮಂಗಳಪ್ರದ ಸುಖ ಜ್ಞಾನ ಆನಂದಾದಿ ಗುಣಗಳಿಂದ ತುಂಬಿದವನು, ಅನುಪಮ=ಉಪಮೆ ರಹಿತನು, ಅಸದೃಶನು, ಅನುಪಾಸಿತ ಗುಣೋದಧಿ=ಶ್ರೀ ಲಕ್ಷ್ಮೀದೇವಿಯರಿಂದಲೂ, ಪೂರ್ಣವಾಗಿ ಉಪಾಸನೆ ಮಾಡಲಿಕ್ಕೆ ಅಶಕ್ಯವಾದ ಗುಣ

ಸಮುದ್ರನು. ಅನಘ="ನವಿದ್ಯತೇ ಅಘಂ ದುಃಖಂ ಪಾಪಂ ಚೇತ್ಯನಘಃ"॥ "ನಿರನಿಷ್ಟೋ ನಿರವದ್ಯೇತಿ ಶ್ರುತೇಃ" ಪಾಪದೂರನು, ಅಜಿತ="ನಕೇನಾಪ್ಯವತಾರೇಷು ಜಿತಃ ಇತ್ಯಜೀತಃ॥ ಯಾವ ಅವತಾರದಲ್ಲೂ ಯಾರಿಂದಲೂ ಯಾವ ಕಾಲದಲ್ಲಿಯೂ, ಸೋಲ್ದವನಲ್ಲ ಕಾರಣ ಅಜಿತ, ಅನಂತ="ದೇಶ ಕಾಲ ಗುಣ ಪರಿಚ್ಛೇದಾಭಾವ ಅನಂತಃ" (ವಿದ್ಯಾಧಿರಾಜೀಯ) ನಿಷ್ಕಿಂಚನ ಜನಪ್ರಿಯ=ಜ್ಞಾನಿ ಜನರಿಗೆ ಪ್ರಿಯನಾದವ, ನಿರ್ವಿಕಾರ=ಪ್ರಾಕೃತ ಗುಣ ರಹಿತ, ವಿಕಾರ ಶೂನ್ಯ, ಚಿನ್ಮಯ, ಸಚ್ಚಿದಾನಂದ ಮೂರ್ತಿ, ನಿರಾಶ್ರಯಾ =ಶ್ರೀಹರಿಯಾದ ಬಿಂಬನಿಗೆ ಇನ್ನೊಬ್ಬರು ಆಶ್ರಯರು ಇಲ್ಲ. "ಶ್ರೀಹರಿಗೆ ಬಿಂಬರುಂಟೆ?" ಎದು ಶ್ರೀ ವಿಜಯದಾಸರ ವಚನ. ಅವ್ಯಕ್ತಾ= ಜೀವಾಂತರ್ಯಾಮಿಯಾಗಿ ಸದಾ ಇದ್ದರೂ ಸಾಧನ ಪೂರ್ತಿಯಾಗದ ಅನಪರೋಕ್ಷಿಗಳಿಗೆ ಕಾಣಿಸದಿರುವನೆಂದು ಶ್ರೀಹರಿಯ ಅನಂತ ಕಲ್ಯಾಣಗುಣಗಳು ಸ್ತೋತ್ರ ಮಾಡಿದ ದಾಸಾರ್ಯರ ಅಡಿದಾವರೆಗಳಿಗೆ ಸದಾ ನಮೋನಮಃ.

**ಭಾವಸೂಚನ :—**ಪ್ರಣವ ॥ ಓಂಕಾರ ಕಾರಣಕಾರ್ಯಶಬ್ದವಾಚ್ಯ ॥ ಅನುಪಮ |ಅನುಪಾಸಿತ ಸಾಕಲ್ಯೇನ || ೩೦ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪ್ರಣವ" ಇತಿ ॥ "ಅನುಪಾಸಿತ" ಸಾಕಲ್ಯೇನ ॥ ವರ್ಣೋತ್ಪತ್ತಿಶ್ಚ ವಿಸ್ತೃತಾ || ಪ್ರಕಾಶಸಂಹಿತಾಯಾಂ ಪ್ರಥಮ ಪರಿಚ್ಛೇದೇ ||೩೦||

## ಕನ್ನಡಾರ್ಥ

ಹರಿಯ ಗುಣಗಳನ್ನು ಭಕ್ತ್ಯುದ್ರೇಕದಿಂದ ಅತಿಶಯವಾಗಿ ಹೊಗಳುತ್ತಾರೆ "ಪ್ರಣವ" ಎಂಬ ಪದ್ಯದಿಂದ.

"ಅನುಪಾಸಿತ" ಎಂಬುದಕ್ಕೆ "ಸಮಗ್ರವಾಗಿ ಯಾರಿಂದಲೂ ಉಪಾಸಿಸಲ್ಪಡದ ಗುಣರೂಪಗಳುಳ್ಳವನು" ಎಂದು ಅರ್ಥ. ಪ್ರಣವ ಮುಂತಾದ ವರ್ಣಗಳು ಹೇಗೆ ಪರಮಾತ್ಮನಿಂದ ಅಭಿವ್ಯಕ್ತವಾದವು? ಈ ವಿಷಯವನ್ನು ಪ್ರಕಾಶ ಸಂಹಿತೆಯ ಪ್ರಥಮ ಪರಿಚ್ಛೇದದಲ್ಲಿ ನೋಡಬಹುದು. ಅಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿರುತ್ತದೆ. || ೩೦ ||

**ಅವತರಣಿಕಾ :—** ಬಿಂಬಾಪರೋಕ್ಷ ೧೮ನೇ ಸಂಧಿಯನ್ನು ಉಪಸಂಹರಿಸುತ್ತಾ ಶ್ರೀಹರಿಯ ಮಹಿಮೆಯುಕ್ತ, ಶ್ರೀ ಹರಿಕಥಾಮೃತಸಾರ ಮಹಾಮಹಿಮೆಯನ್ನು ವರ್ಣಿಸುತ್ತಾರೆ "ತಾರಕವಿದು ಹರಿಕಥಾಮೃತಸಾರ ಜನಕೆ" ಎಂದು ದಾಸರ ವಚನ. ಶ್ರೀ ಹರಿಕಥಾಮೃತಸಾರ ಮಹಿಮೆ ಅನಂತವಾದುದು.




**ಗೋಪಭೀಯ ಭವಾಂಧಕಾರಕೆ।**
**ದೀಪವಟ್ಟಿಗೆ ಸಕಳ ಸುಖ ಸದ।**
**ನೋಪರಿಗ್ರಹನೆನಿಸುತಿಪ್ಪದು ಹರಿಕಥಾಮೃತವು॥**
**ಗೋಪತಿ ಜಗನ್ನಾಥ ವಿಠಲ ಸ।**
**ಮೀಪದಲಿ ನೆಲಸಿದ್ದು ಭಕ್ತರ।**
**(ಅ) ಪವರ್ಗರ ಮಾಡುವನು ಮಹದುಃಖ ಭಯದಿಂದ॥೩೧॥**

ಅಂತು ಸಂಧಿ ೧೮ಕ್ಕೆ ಪದ ೫೫೫ ಬಿಂಬೋಪಾಸನಾ ಸಂಧಿ ಸಮಾಪ್ತ ಮಂಗಳಮಹ
॥ ಶ್ರೀ ಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :—** ಗೋಪ= ಗೋವುಗಳನ್ನು ಪ= ಪಾಲನ ಮಾಡತಕ್ಕ ಶ್ರೀಕೃಷ್ಣ, ಗೋಪ= ಸ್ವರ್ಗಾಧಿಪತಿಯಾದ ಇಂದ್ರಪತಿ ಪಾಲಕ, ಗೋ= ವೇದ, ವೇದ ಸಮೂಹವನ್ನು ಪಾಲನ ಮಾಡುವ, ಗೋಪ= ಋಷಿಗಳನ್ನು (ಜ್ಞಾನಿಗಳ) ಸಂರಕ್ಷಕ, ಗೋಪ= ಮುಕ್ತರನ್ನು ಪಾಲನ ಮಾಡುವ ಶ್ರೀಹರಿಯು, ಭೀಯ= ಭೀಕರವಾದ, ಭವಾಂಧಕಾರಕೆ= ಸಂಸಾರವೆಂಬ ಮಹಾ ಕತ್ತಲೆಗೆ ಅಜ್ಞಾನಕ್ಕೆ, ದೀಪವಟ್ಟಿಗೆ= ದೀಪ, ದೀಪನ ಪ್ರಕಾಶ ಮಾಡತಕ್ಕ, ಕತ್ತಲೆಯ ಮಾರ್ಗದಲ್ಲಿ ನಡೆಯುವಾಗ್ಗೆ ರಾತ್ರಿ ಕಾಲದಲ್ಲಿ ಬೆಳಕು ಮಾಡುವ ಉರವಲ ಕಟ್ಟಿಗೆ (ಗೊರವಿ ಕಟ್ಟಿಗೆ) ಪೂರ್ವದಲ್ಲಿ ನಮ್ಮ ನೆನಪಿನಲ್ಲಿದ್ದವು. ಇಂತಹ ದೀಪವಟ್ಟಿಗೆಯು, ಗೋ ಸೂರ್ಯ ಕಿರಣಗಳು ಪ್ರಕಾಶದಿಂದ ಅಜ್ಞಾನಾಖ್ಯ ಅಂಧಕಾರವನ್ನು ನಾಶ ಮಾಡುವವನು, ಸಕಲ ಸುಖ ಸದನ ಉಪರಿಗ್ರಹ= ಸಮಸ್ತ ಸುಖಗಳಿಗೆ ಮೇಲಾದ, ಮನೆಗಳಿಗೆ, ಉಪರಿಗ್ರಹ= ಏಳು ಅಂತಸ್ತಿನ ಮೇಲುಪ್ಪರಿಗೆ, ಸತ್ಯಲೋಕಕ್ಕೆ ಮೇಲಿರುವ, ಮೇಲಾದ ಸುಖ ಸದನವಾದ ವೈಕುಂಠ ಲೋಕವನ್ನು ಈ ಹರಿಕಥಾಮೃತವು ಕೊಡುವದು. ಶ್ರೀಕಥಾಮೃತ

ಪಾನ ಮಾಡಿದರೆ, ನಿತ್ಯವಾದ, ಸತ್ಯವಾದ ವೈಕುಂಠ ಲೋಕವೇ ಪ್ರಾಪ್ತಿ, ಗೋಪತಿ= "ಗೋರ್ಭೂರ್ಮೇಗವಾಂ ಧೇನೂನಾಂ ಪತಿಃ ಗೋಪತಿ (ವಿದ್ಯಾಧಿ ರಾಜೀಯ) ಜಗನ್ನಾಥ ವಿಠ್ಠಲ=ಜಗತ್ತಿಗೆ ಸಕಲ ಲೋಕಗಳಿಗೆ, ಅಥವಾ ಸಕಲ ಜೀವರಿಗೆ, ನಾಥ=ಒಡೆಯನಾದವ, ಸ್ವಾಮಿಯಾದವನು, ವಿಠ್ಠಲ ರೂಪಿ ಹರಿಯು=ಅಜ್ಞಾನಿಗಳ ಅಜ್ಞಾನವನ್ನು ದೂರೋಡಿಸಿ ಸುಜ್ಞಾನವನ್ನು ಕೊಡುವ ವಿಠ್ಠಲ ರೂಪಿ ಹರಿಯು, ಶ್ರೀದಾಸಾರ್ಯರ ಬಿಂಬರೂಪಿ ಪರ ಮಾತ್ಮನು, ಸಮೀಪದಲಿ ನೆಲಸಿದ್ದು=ಜೀವಾಂತರ್ಯಾಮಿ ಹರಿ ಅತಿ ಸಾಮಿಪ್ಯದಲಿ ಇದ್ದು ಪ್ರತ್ಯಕ್ಷನಾಗಿ ಅಪರೋಕ್ಷೀಕರಿಸಿ, ಅಪರೋಕ್ಷ ಜ್ಞಾನಿ ಗಳನ್ನು ಮಾಡಿ, ಭಕ್ತರ ಮಹದುಃಖ ಭಯದಿಂದ ದೂರ ಮಾಡಿ, ಅಂದರೆ ಮಹಾದುಃಖಕ್ಕೆ ಕಾರಣವಾದ ಲಿಂಗಭಂಗಗೈಸಿ ಆಪವರ್ಗರ ಮಾಡುವನು= ನಿತ್ಯ ನಿಜಾನಂದವಾದ ಮುಕ್ತಿಯನ್ನು ಕೊಡುವನು.

ಇಂತು ಶ್ರೀ ದಾಸಾರ್ಯರು ನನ್ನ ದೇಹಾಲಸ್ಯದಲ್ಲಿಯೂ ಬಿಡದೆ ಪದ್ಯಾರ್ಥ ಪ್ರೇರಿಸಿ ಧಾರಣವಿತ್ತು ಬರೆಸಿದಂತೆ ಬರೆದದು ತಪ್ಪೋ ಒಪ್ಪೋ ಅಪ್ಪನಪ್ಪನೇ ಬಲ್ಲ. ಸುಜ್ಞಾನಿಗಳು ಕರುಣಿಸಿರೆಂದು ಮಧ್ವಾಂತರ್ಯಾಮಿ ಮದ್ಬಿಂಬನಾದ ಶ್ರೀಕೃಷ್ಣನ ಅಡಿದಾವರೆಗಳಿಗೆ ಅರ್ಪಿಸುವೆ. ಶ್ರೀಹರಿಯು ಪ್ರೀತನಾಗಲಿ.

|| ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು ||

**ಭಾವಸೂಚನ :—**ಗೋಪನೀಯೇತಿ || ಆಚ್ಛಾದನ ಮಾಡುವ || ದೀಪವಟ್ಟಿಗೆ=ದೀಪ ಹಚ್ಚುವ ಕಾಷ್ಟ ವಿಶೇಷ || ಆಪವರ್ಗ ಮುಕ್ತರ || ೩೧ ||

ಇತಿ ಭಾವಸೂಚನೆ ಬಿಂಬಸಂಧಿ ಸಮಾಪ್ತ

|| ಶ್ರೀ ಗುರುಮಧ್ವೇಶಾರ್ಪಣಮಸ್ತು ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ "ಗೋಪ" ಇತಿ || ಓಂ ಪಾವಕ ವರ್ಣಾಃ ಶುಚಯೋ ವಿಪಶ್ಚಿತೋಭಸ್ತೋಮೈರನೂಷತ ಅಯಂ ಸಹಸ್ರ ಮೃಷಿಭಿಃ ಸಹಸ್ಕೃತಃ ಸಮುದ್ರ ಇವಪಪ್ರಥೇ || ಓಂ ಋಷೀಣಾಂ ಗೋಪ್ತಾ ||

**ಗೋಪತಿ :**—ಓಂ ಯಥಾ ಮನೌ ವಿವಸ್ವತಿ ಸೋಮಂ ಶಕ್ರಾಪಿಬಃ ಸುತಂ ಯಥಾ ತ್ರಿತೇ ಛಂದ ಇಂದ್ರ ಜುಜೋಷಸ್ಯಾಯೌ ಮಾದಯಸೇ ಸಚಾ || ಓಂ || ಇತಿ ಸ್ತುತಿಶ್ರೋತಾ ||

**"ಗೋಪ್ತ"**—ಓಂ ಪೃಷಧ್ರೇ ಮೇಧ್ಯೇ ಮಾತರಿಶ್ವನೀಂದ್ರ ಸುವಾನೇ ಅಮಂದಥಾಃ ಯಥಾ ಸೋಮಂ ದಶಶಿಪ್ರೇ ದಶೋಣ್ಯೇ ಸ್ಯೂಮ ರಶ್ಮಾವೃ ಜೂನಸೀ || ಓಂ || ನೃಪವತ್ || ಗೋಪನಾತ್ ಗೋಪ್ತಾ ||

ಗೋಪನೀಯೇತಿ ಪಾಠೇ "ಜೀವಸ್ವರೂಪ ಗೂಹತಃ" ಇತ್ಯರ್ಥಃ || ಯದ್ವಾ ಗ್ರಂಥ ವಿಶೇಷಣವ್ || ಭೀಮ ಭಯಂಕರ || ವಟ್ಟಿಗೆ ಸ್ಥಂಭ ||೩೧||

ಇತಿ ಶ್ರೀಹರಿಕಥಾಮೃತಸಾರ ವ್ಯಾಖ್ಯಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಬಿಂಬೋಪಾಸನ ಸಂಧಿಃ ಸಮಾಪ್ತಃ || ೧೮ ||

## ಕನ್ನಡಾರ್ಥ

ಬಿಂಬೋಪಾಸನ ಸಂಧಿಯನ್ನು ಮುಗಿಯಿಸುತ್ತಾರೆ "ಗೋಪ" ಎಂಬ ಪದ್ಯದಿಂದ. "ಗೋಪ"ವೆಂಬುದನ್ನು ಪ್ರತ್ಯೇಕ ಪದ ಮಾಡಬೇಕು.

**"ಗೋಪ" :**—ಋಷಿಗಳನ್ನು ಸಂರಕ್ಷಿಸುವವನು.

**"ಗೋಪತಿ" :**—ಭಕ್ತರ ಸ್ತುತಿಗಳನ್ನು ಶ್ರವಣ ಮಾಡುವವನು.

**"ಗೋಪ" :**—ರಾಜನಂತೆ ರಕ್ಷಿಸುವದರಿಂದ "ಗೋಪ".

ಹೀಗೆ "ಗೋಪ" ಶಬ್ದಕ್ಕೆ (ನಾಮಕ್ಕೆ) ಬೃಹತೀಮಂತ್ರಾನುಗುಣವಾಗಿ ಸಂಕ್ಷಿಪ್ತಾರ್ಥ.

"ಗೋಪನೀಯ" ಎಂದು ಪಾಠವಿದ್ದರೆ "ಜೀವಸ್ವರೂಪವನ್ನು ಮುಚ್ಚುವದು" ಎಂದು ಅರ್ಥವನ್ನು ಹೇಳಿ, ಸಂಸಾರಕ್ಕೆ ಅನ್ವಯಿಸಬೇಕು. ಅಥವಾ "ರಹಸ್ಯ" ವೆಂಬ ಅರ್ಥದಲ್ಲಿ ಗ್ರಂಥಕ್ಕೆ ಹರಿಕಥಾಮೃತಸಾರಕ್ಕೆ ಅನ್ವಯಿಸಬೇಕು. "ಭೀಮ" ಎಂಬ ಪಾಠದಲ್ಲಿ ಭಯಂಕರವೆಂದು ಅರ್ಥ. ವಟ್ಟಿಗೆ ದೀಪಸ್ಥಂಭ || ೩೧ ||

ಇಲ್ಲಿಗೆ ಶ್ರೀವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ ಬಿಂಬೋಪಾಸನಾ ಸಂಧಿಯ ಕನ್ನಡಾರ್ಥಾನುವಾದವು ಮುಗಿದುದು.

|| ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ||

# —ಒ ಪ್ಪೋ ಲೆ—

[ತಿದ್ದಿಕೊಂಡು — ಓದಲು ಪ್ರಾರ್ಥನೆ]

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೪೮೯ | ೧೦ | ಪ್ರಿತಿ | ಪ್ರೀತಿ |
| ೧೪೯೦ | ೨೧ | ವರಿಷ್ಠ | ವಶಿಷ್ಠ |
| ೧೪೯೨ | ೪ | ಪ್ರಾಣೇಸಗೆ | ಪ್ರಾಣೇಶಗೆ |
| ೧೪೯೧ | ೧೫ | ಸರ್ಗದ | ಸ್ವರ್ಗದ |
| ೧೪೯೪ | ೨ | ಕಳೆಯುತಾರೆ | ಶಳೆಯುತಾರೆ |
| ೧೪೯೯ | ೧೧ | ಮಾತ | ಮಾತ್ರ |
| ೧೫೧೨ | ೧೪ | ಅಣುಕಾಲಗಳು ನಿತ್ಯ | ಅಣುಕಾಲಗಳು ಅನಿತ್ಯ |
| ೧೫೩೪ | ೪ | ಅಂಕಿ | ಅಂಶಿ |
| ೧೫೪೦ | ೨೬ | ಉನ್ಮೂಲಯಿಡುಂ | ಉನ್ಮೂಲಯಿತುಂ |
| ೧೫೪೬ | ೧೯ | **ನಾವು** | ನಾವಃದಿ (ಮೂಲದಿ) |
| ೧೫೫೫ | ೨೪ | ಮಾಡತ್ಕವರು | ಮಾಡತಕ್ಕವರು |
| ೧೫೬೯ | ೨೩ | ಕಾಂತಿಪತಿ | ಶಾಂತಿಪತಿ |
| ೧೫೬೮ | ೧೧ | ಪ್ರದ್ಯುಮ | ಪ್ರದ್ಯುಮ್ನ |
| ೧೫೮೧ | ೧೮ | ಎಂದಿದು | ಎಂದರಿದು |
| ೧೬೦೫ | ೧ | **ಭಾವಸೂಚನೆ** | ವಿಶೇಷ ಸೂಚನೆ |
| ೧೬೦೧ | ೧ | ಪ್ರಾಣರಾಶಯನ್ | ಪ್ರಾಣಿರಾಶಯನ್ |
| ೧೬೨೦ | ೨೭ | ಪ್ರಾಣಾಂರ್ತಯಾಮಿ | ಪ್ರಾಣಾಂತರ್ಯಾಮಿ |
| ೧೬೨೮ | ೧೫ | ವನದೊಳಗೆ | ವದನದೊಳಗೆ |
| ೧೬೨೮ | ೧೨ | ಜೀವಾಭಿಮಾನಿ | ಜಿಹ್ವಾಭಿಮಾನಿ |
| ೧೬೪೦ | ೨೦ | ಸಂಜ್ಞಾಪಕವಾಗಿದೆ | ಸಂಜ್ಞಾ ಜ್ಞಾಪಕವಾಗಿದೆ |
| ೧೬೫೭ | ೯ | **ವಿನುತವಮಲ** | **ವಿನುತನವಮಲ** (ಮೂಲದಿ) |
| ೧೬೬೫ | ೨೨ | **ಸರ್ವ** | **ಸರ್ವಶ** । (ಮೂಲದಿ) |
| ೧೬೬೭ | ೮ | ಸುಕ್ಷಯಃ | ಸುಷಯಃ |
| ೧೬೬೭ | ೮ | ಸುಕ್ಷಿಃ | ಸುಷಿಃ |
| ೧೬೬೯ | ೨೪ | ಸ್ಸತಂತ್ರನಾಮಕ | ಸ್ವತಂತ್ರನಾಮಕ |

(ಪುಟ ೧೬೭೬ ರಿಂದ ಮುಂದೆ ೧೭೪೦ ಪುಟದವರೆಗೆ) ನಜರ ಚೂಕಿಯಿಂದ ತಪ್ಪಾಗಿ ೧೭೭೬ ಎಂದು(೧೦೦) ಪುಟ ಹೆಚ್ಚು ೧೮೪೦ ತಪ್ಪು ಬಿದ್ಧಿದೆ ತಿದ್ದಿಕೊಳ್ಳಲು ವಿನಂತಿ.

| | | | |
|---|---|---|---|
| ೧೭೭೭-೧೬೭೭ | | ಮುಂದಿವರನ್ನೈದಿ | ಮುಂದಿರವನ್ನೈದಿ (ಮೂಲದಿ) |
| ೧೭೮೩-೧೬೮೩ | ೧೧ | ಬೆಳಗಿಧೂಜೆಯುಲಿ | ಬೆಳಗಿಧೂಜೆಯು(ಮೂಲದಿ) |
| ೧೭೯೨-೧೬೯೨ | ೪ | ಅನಂತನಂತ | ಅನಂತಾನಂತ |
| ೧೮೧೦-೧೭೧೦ | ೨೬ | ಪ್ರತಿಸಷಿಗೆ | ಪ್ರತಿಸೃಷ್ಟಿಗೆ |
| ೧೮೧೪-೧೭೧೪ | ೪ | ಸ್ಂನತ್ರ | ಸ್ವತಂತ್ರ (ಮೂಲದಿ) |
| ೧೮೧೫-೧೭೧೫ | ೨೧ | ಪದ್ಯಾರ್ದ | ಪದ್ಯಾರ್ಥ |
| ೧೮೧೬-೧೭೧೬ | ೨೬ | ಹಗರಣೆನದಲೆ | ಹಗರಣೆನದೆಲೆ |
| ೧೮೧೭-೧೭೧೭ | ೧೬ | ಶೀ ವ್ಯಾಸದಾಸ ಸಿದ್ಧಾಂತ (ಕೌಮುದಿ) | |
| ೧೮೨೦-೧೭೨೦ | ೧೫ | ಬಹಾ | ಬ್ರಹ್ಮಾ |
| ೧೮೨೭-೧೭ ೭ | ೨೬ | ವಾಪಾರ | ವ್ಯಾಪಾರ |
| ೧೮೩೭-೧೮೩೭ | ೨೨ | ಕರ್ತೃವಲ್ಲಿ | ಕರ್ತೃವಲ್ಲ |
| ೧೮೩೯-೧೭೩೯ | ೧೮ | ಕೊಂಡಾಡಲೆ | ಕೊಂಡಾಡದಲೆ (ಮೂಲ) |
| ೧೭೪೪ | ೪ | ಮುಂತಾದ್ನ | ಮುಂತಾದ |
| ೧೭೪೯ | ೨೦ | ಭಕಾಪರಾಧ | ಭಕ್ತಾಪರಾಧ |
| ೧೭೫೭ | ೧೨ | ಮೂಡುವ್ನ | ಮಾಡುವ |
| ೧೭೫೭ | ೧೩ | ಅನ | ಅನ್ನ |
| ೧೭೬೮ | ೩೮ | ಕೆೊಡುತ್ತದೆ | ಕೊಡುತ್ತದೆ |
| ೧೭೮೭ | ೧ | ನಿಜೆ ಇಚೆ | ನಿಜ ಇಚ್ಛೆ |
| ೧೭೯೦ | ೮/೯ | ಕಸಸ್ವಿದ್ಧನವ್ | ಕಸ್ಯಚಿದ್ಧನವ್ |
| ೧೮೧೧ | ೨೫ | ಹಯಗ್ರೀವೇಣ | ಹಯಗ್ರೀವೇನ |
| ೧೮೧೩ | ೧೩ | ತಾಕ್ಷೆಗೆ | ತಾಕ್ಷಗೆ (ಮೂಲ) |
| ೧೮೧೩ | ೨೦ | ನ್ಯಾಯಾನಾಯ | ನ್ಯಾಯಾನ್ಯಾಯ |
| ೧೮೪೦ | ೧೦ | ಮುಖಬ್ರಹ್ಮ | ಮುಖ್ಯವಾಗಿ ಬ್ರಹ್ಮ |
| ೧೮೬೬ | ೧೬ | ಮುಖವಿತ್ಯಾಡಿ | ಮುಖಮಿತ್ಯಾದಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೮೬೯ | | ಸುಖಸ್ಪರ್ಷ | ಸುಖಸ್ಪರ್ಶ |
| ೧೮೭೪ | ೧೨ | ವಕ್ತ್ಯ | ವ್ಯಕ್ತ (ಮೂಲದಿ) |
| ೧೮೮೦ | ೧೯ | ಪೂರ್ವೋತ್ತ್ರಂ | ಪೂರ್ವೋಕ್ತ್ರಂ |
| ೧೮೮೨ | ೯ | ಲಯಾ | ಲಯ |
| ೧೮೮೪ | ೧೧ | ಕೊಡುವನೆಳೆದು | ಕೊಡುವೆನೆಂದು |
| ೧೮೮೯ | ೯ | ಮಾಯಾದೇವಿಯಂತೆ | ಮಾಯಾದೇವಿಯೆಂದು |
| ೧೮೮೯ | ೨೦ | ಪ್ರಥಮಂಮಹ | ತತ್ತೃಷ್ಟ |
| | | (ಒಪ್ಪು) ಪ್ರಥಮಂ ಮಹತತ್ಸೃಷ್ಟ | |
| ೧೮೮೯ | ೫ | ತನ್ಮಾತ್ರೆಗಳ | ತನ್ಮಾತ್ರಗಳ (ಮೂಲ) |
| ೧೮೯೦ | ೨೨ | ಉತ್ತಂ | ಉಕ್ತಂ |
| ೧೯೦೨ | ೫ | ಕಮು | ಕ್ರಮು (ಮೂಲ) |
| ೧೯೦೪ | ೩ | ಉತ್ತೇಷು | ಉಕ್ತೇಷು |
| ೧೯೧೮ | ೨೭ | ಅವನಿತುಸ್ಥ | ಅವನಿತಳಸ್ಥ |
| ೧೯೩೪ | ೭ | ವೈದ್ಯರ | ವೈದ್ಯರ |
| ೧೯೩೫ | ೧೧ | ದೇಹಮಾತ್ರಾ | ದೇಹಯಾತ್ರಾ |
| ೧೯೪೨ | ೯ | ಎದು | ಎಂದು |
| ೧೯೪೪ | ೨೪ | ವಿಪರ್ಶ್ಚಿತೋಭ | ವಿಪಶ್ಚಿತೋಭಿ |
| | | ಮೇಲ್ಭಾಗದಲ್ಲಿ | |
| ೮ | ೪ | ಆತನ | ಆರನ |
| ೯ | ೧೭ | ೨೫ ನೇ | ೨೩ ನೇ |
| ೧೧ | ೫ | ೧೩ ವರ್ಷ | ೩ ವರ್ಷ |
| ೧೪ | ೨೩ | ಪ್ರಣೀತು | ಪ್ರಣೀತ |
| | | ಬುಡಭಾಗದಲ್ಲಿ | |
| ೧೨ | ೧೦ | ದೇಹವನ್ನು | ದೇಹವೆನ್ನೊ |
| ೧೨ | ೧೨ | ವ್ಯಾಕ್ಹುಲ | ವ್ಯಾಕುಲ |

## ೬೯ ನೆ ಪ್ರಕಟನೆಯಿಂದ ಮುಂದೆ

### ಪೋಷಕ ಮಹಾಶಯರ ಮಹದುಪಕಾರ

ಶ್ರೀಮಾನ್ **ಕೆ. ಹನುಮಂತಯ್ಯನವರು ಮೈಸೂರ ಮಾಜಿ ಮುಖ್ಯಮಂತ್ರಿಗಳು**, ಶ್ರೀ ಆಂಜನೇಯಸ್ವಾಮಿಯ ಪರಮ ಭಕ್ತರೂ, ಧರ್ಮಾಭಿಮಾನಿಗಳೂ, ಉದಾರರೂ, ಸಾಹಿತ್ಯ ಅಭಿಮಾನಿಗಳೂ ಆದ ಧರ್ಮವಂತರು ನಮ್ಮ ಮಂಡಲದ ಎಲ್ಲ ಪುಸ್ತಕಗಳನ್ನು ಅತ್ಯಾದರದಿಂದ ಸ್ವೀಕರಿಸಿ ಆನಂದಪಟ್ಟು ಮುಂದಿನ ಮಹತ್ಕಾರ್ಯ ಶ್ರೀ ಹರಿಕಥಾಮೃತಸಾರ ಪಂಚರತ್ನ ಪ್ರಕಾಶಿಕ ಭಾಗ ೫-೬ಕ್ಕೆ ಯೋಗ್ಯ ಸಹಾಯ ನೀಡಿ ಮತ್ತು ಮಂಡಲದಿಂದ ನೂರಾರು ಗ್ರಂಥ ಪ್ರಕಟಿಸಲು-ಸ್ವಪರಹಸ್ತಗಳಿಂದ ಸಹಾಯ ನೀಡಲು ವಾಗ್ದಾನವಿತ್ತ ಮಹಾಧಾರ್ಮಿಕರನ್ನು ಮಂಡಲಿ ಅಭಿನಂದಿಸುತ್ತದೆ.

೧೦೧ ರೂ. ಶ್ರೀಮಾನ್ **ಅನಂತರಾಯರು - ಶ್ರೀನಿವಾಸರಾಯರು** ಪಾಟೀಲ್ರ ಅಥಣಿ.

೧೦೧ ರೂ **ಶ್ರೀರಾಮಸೇವಾ ಸಂಘ**, ನಾಲ್ಕನೇ ಬೀದಿ ಚಾಮರಾಜಪೇಟೆ ಬೆಂಗಳೂರು. (**ಶ್ರೀ ಎಂ. ಶ್ರೀಧರರಾವ ದ್ವಾರಾ**)

೧೦ ರೂ. ಶ್ರೀಮಾನ್ **ಡಾಕ್ಟರ್. ಜಿ. ರಾಘವೇಂದ್ರರಾಯರು** (ಪೋಷಕರು) ಚಿತ್ರದುರ್ಗ. ೧೦ ರೂ ಹೆಚ್ಚಿಗೆ ಸಹಾಯ.

೧೦ ರೂ. ಶ್ರೀ K. N. **ರಂಗರಾಯರು** (ಪೋಷಕರು ಹೆಚ್ಚಿನ ಸಹಾಯ.

ಶ್ರೀಮಾನ್ **ಎನ್. ಎಸ್. ಕಠಾವಿ** ಯವರು A. C. ಅಸಿಸ್ಟಂಟ್ ಕಮಿಷನರ ಲಿಂಗಸೂಗರ ಜಿಲ್ಲಾ ರಾಯಚೂರ ಇವರು ನಮ್ಮ ಮಂಡಲಿ ಎಲ್ಲ ಪುಸ್ತಕಗಳನ್ನು ಬಹು ಆದರದಿಂದ ಸ್ವೀಕರಿಸಿ ೧೦೧ ರೂ. ಕೊಟ್ಟು ಪೋಷಕರಾಗುವೆನೆಂದು ವಚನವನ್ನಿತ್ತ ಸಾಹಿತ್ಯ ಪ್ರೇಮಿಗಳಲ್ಲಿ ಮಂಡಲವು ಆಭಾರ ಮನ್ನಿಸುತ್ತದೆ.

# ೨೫ರೂ. ಚಂದಾ ಮುಂಗಡ ಪೂರ್ತಿ ಕಳುಹಿಸಿದವರ ಉಪಕಾರಸ್ಮರಣೆ

ಚಂದಾ ನಂಬರ — ಹೆಸರು—ಅಡ್ರೆಸು — ರೂ ಬಂದ ತಾರೀಖು ಕ್ರಮವಾಗಿ.

೧೨೮ ಶ್ರೀ ಜಯತೀರ್ಥಾಚಾರ್ಯರು ಕ್ಲಾರ್ಕ, A.C.ಆಫೀಸ ಡಿವಿಜನ, ಲಿಂಗಸೂಗೂರು.

೧೫೫ ಶ್ರೀ ಟಿ. ಆರ್. ಜಹಗೀರದಾರ S/o ರಂ ಗಾ ಚಾ ರ ಟೀಚರ ಗಂಗಾವತಿ.

೧೬೩ ಶ್ರೀ ಕೇಶವಾಚಾರ್ಯ ಬಿಂದಾಚಾರ್ಯರು, ಬ್ರಹ್ಮಪುರ ಗುಲಬರ್ಗಾ

೨೦೧ ಶ್ರೀ ಬಾಪು ರಘುನಾಥರಾಯರು C/o S. S. ಬುಕ್ ಎಂಪೋ

೨೦೨ ರಿಯಂ ವೆಸೌಂಟ ಜಾಯ ರೋಡ ಬಸವನಗುಡಿ ಬೆಂಗಳೂರು ೨ ಪ್ರತಿ.

೨೦೪ ಶ್ರೀ ಡಾ|| ವಿುರ್, ವಿುರಾ ರಾಮರಾಯರು N. 32 ಐದನೇ ಮೇನ್ ರೋಡ ಚಾಮರಾಜಪೇಟೆ ಬೆಂಗಳೂರು.

೨೦೬ ಶ್ರೀ ಎನ್. ವಿ. ಕೃಷ್ಣಮೂರ್ತಿಗಳು, ಷ್ಟೇನೋಗ್ರಾಫರ 75 ಗವಿಪುರ ಎಕ್ಸ್ಟೆನ್ಷನ ಬೆಂಗಳೂರು-19. ೪5 ರೂ. ಪುಸ್ತಕಗಳನ್ನು ಹೆಚ್ಚಿಗೆ ತೆಗೆದುಕೊಂಡಾರೆ.

೨೧೯ ಶ್ರೀ ಎಂ. ಶ್ರೀಧರಮೂರ್ತಿಗಳು, ಬಿ. ಎಸ್. ಸಿ., (20) ಐದನೇ ಮೇನ್ ರೋಡ್ ಚಾಮರಾಜಪೇಟೆ ಬೆಂಗಳೂರು.

೨೧೫ ಶ್ರೀ ಪಿ. ಎನ್. ಗುಡೂರು, S.A.P. P.W.D. ಗುಲಬರ್ಗಾ.

೨೧೭ ಶ್ರೀ ಎಂ. ರಾಘವೇಂದ್ರರಾವ, ರಿ|| ಸಬ್ಬ ಇಂಜನಿಯರ್ ದೇವನಾಥಾಚಾರ್ಯ ಸ್ಟ್ರೀಟ, (135) ಚಾಮರಾಜಪೇಟೆ ಬೆಂಗಳೂರು.

೨೧೮ ಶ್ರೀ ಲಕ್ಷ್ಮಣರಾವ, ಕು|| 236. ಬ್ಲಾಕ 3 ರಾಜಾಜಿನಗರ ಬೆಂಗಳೂರು.

೨೨೬ ಶ್ರೀ ಶ್ರೀನಿವಾಸರಾವ ಗೋನವಾರ ಟ್ರೆಜರಿ. ರಿ. ಪೇಷ್ಕಾರ ಗಂಗಾವತಿ.

೨೩೯ ಶ್ರೀ ವೆ| ಶ್ರೀನಿವಾಸಾಚಾರ್ಯರು ಹಾವೇರಿ, ಸರ್ವಾಧಿಕಾರಿಗಳು. ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಸೀತಾಪತಿ ಅಗ್ರಹಾರ. ಚಾಮರಾಜಪೇಟೆ ಬೆಂಗಳೂರು.

೨೪೭ ಶ್ರೀ ಸಿ. ಆರ್. ನರಸಿಂಗರಾಯರು, ಆಡೀಟರ್, ಮಂಡ್ಯ ಮೈಸೂರು.

೩೫೪ ಶ್ರೀ ಯಲ್. ಬಾಲಾಜಿರಾಯರು, C. 27-556. Padiyath Road Ernakulam (Kerala State)

೨೬೫ ಶ್ರೀ ಕೊಳೂರು ಪ್ರಲ್ಹಾದಾಚಾರ್ಯರು, ಕ್ಲಾರ್ಕ್ ಅಬಕಾರಿ ತಾಲ್ಕು ಆಫೀಸ್, ಬಳ್ಳಾರಿ.

೨೬೮ ಶ್ರೀ ಭೀಮಸೇನರಾವ ದೇಶಪಾಂಡೆ, C/o ಶ್ರೀ ಕಿಶನರಾವ ದೇಶ ಪಾಂಡೆ, ಗದ್ವಾಲ್ ಹೌಸ್ - ನಾಮಪಲ್ಲಿ ಸ್ಟೇಷನ್ ರೋಡ್ ಹೈದರಾಬಾದ್.

೨೬೯ ಶ್ರೀ ಡಾ|| ಸಿ. ರಾಘವೇಂದ್ರರಾವ, ನಿಯರ್ ಸ್ಟೇಷನ್, ಆದವಾನಿ.

೨೭೭ ಶ್ರೀ ಎಂ. ಎನ್. ರಾಘವೇಂದ್ರರಾವ, E. N. R. S. E. B. N. 3. Gehlote Bhavan, New-Colony Jaipur (Rajastan).

೨೭೯ ಶ್ರೀ ಗೋಪಾಲರಾವ, ಕಂ|| ದಂಡವತಿ, 3-3-235 ಚಪ್ಪಲ್ ಬಾಜಾರ ಹೈದರಾಬಾದ A-P.

೨೮೦ ಶ್ರೀ ಹೆಚ್. ಪಿ. ಶಾಮಣ್ಣಾ, B.E. Ex. Engineer ಮೈಸೂರು. ಇವರು ಬೇರೆ ಇತರ ೭೦ ಪುಸ್ತಕ ತೆಗೆದುಕೊಂಡು ಸಹಾಯ ನೀಡಿದ್ದಾರೆ.

೨೮೧ ಶ್ರೀ ಬಿ. ವಿ. ರಾಘವೇಂದ್ರರಾವ್, ಲೈಬರಿನ್, ಇಂಡಿಯನ್ ಇನ ಸ್ಟ್ಯೂಟ್ ಆಫ್ ಸೈನಸ್, ಬೆಂಗಳೂರು-12.

೨೮೩ ಶ್ರೀ ಜಿ. ಕೆ. ವಾಸುದೇವರಾವ, ಅಸಿಸ್ಟಂಟ ಮ್ಯಾನೇಜರ್, ಟಾಟಾ ಆಯಿಲ್ ಮಿಲಸ್, L.L.1. 7/75 ಪಾಂಡಿತ್ಯಾ ರೋಡ ಕಲಕತ್ತಾ 27.

೨೮೫ ಶ್ರೀ ಎಸ್. ಆರ್. ನರಸಿಂಹಮೂರ್ತಿಗಳು, ಕಾಸ್ಟ ಅಶಿಸ್ಟಂಟ್, ಶ್ರೀ ರಾಜೇಂದ್ರ ಮಿಲ್ಸ, ಮೈಸೂರು.

೨೭೬ ಶ್ರೀ ಆರ್. ಜಿ. ಮುರನಾಳ ಸಬ್ಬ ರಿಜಿಷ್ಟ್ರಾರ್ ಪೋಸ್ಟ್, ಕಲ್ಘಟಗಿ ಧಾರವಾಡ, ಇವರು ಸ್ವತಃ ೬ ಭಾಗವಾಗುತ್ತವೆಂದು ತಿಳಿದು ೧೫+೧೫ ರೂದಂತೆ ೩೦ ರೂ. ಕಳುಹಿಸಿರುವರು.

೨೮೭ ಶ್ರೀ ಕೆ. ರಾಘವೇಂದ್ರರಾವ, B. A. L. L. B. ಅಡ್ವಕೇಟ್, ಸೋಮವಾರಪೇಟೆ ರಾಯಚೂರು.

೨೮೯ ಶ್ರೀ ಭೀಮದಾಸರು, ಹೂಗಾರ ಶ್ರೀ ರಾಘವೇಂದ್ರಸ್ವಾಮಿಗಳ ಮಠ ಅಥಣಿ. ಜಿ. ಬೆಳಗಾವ ೩ ಭಾಗಗಳ ಸಾರ ಸವಿದು ವೈಕುಂಠವಾಸಿಗಳಾದರು.

೨೯೧ ಶ್ರೀ ಡಾ|| ಆರ್. ಬಿ. ಕುಲಕರ್ಣಿ, ಬೀಳೂರಕರ ಶ್ರೀ ಲಕ್ಷ್ಮೀನಿವಾಸ ವಿಕ್ರಮಪುರ ಅಥಣಿ.

೧೯೫ ಶ್ರೀ ಅನಂತರಾವ್ ಶ್ರೀನಿವಾಸರಾವ, ಹಿಡಕಲ್ ದೇಶಪಾಂಡೆ ವಕೀಲರು ಅಥಣಿ.

೨೯೬ ಶ್ರೀ ಎಸ್. ಆರ್. ಜೋಸಿ, ಅಕೋಟೆಂಟ್, ಬೆಳಗಾಂವ ಬ್ಯಾಂಕ, ಲಿ|| ಅಥಣಿ.

೨೯೭ ಶ್ರೀ ಡಿ. ರಾಮಚಂದ್ರಯ್ಯ, ಕಂಟ್ರಾಕ್ಟರ್, P. W. D. ಗಾಂಧೀನಗರ ತುಮಕೂರು.

೨೯೮ ಶ್ರೀ ವೈ. ಭೀಮಸೇನರಾಯರು ರಿ|| ತಹಶೀಲದಾರರು ಗಾಂಧಿನಗರ ಬಳ್ಳಾರಿ.

೨೯೯ ಶ್ರೀ ಕಳಲೆ ರಂಗರಾಯರು ಲ್ಯಾಂಡಲಾರ್ಡ ನಂಜನಗುಡ ಡಿ|| ಮೈ.

೩೦೫ ಶ್ರೀ ಬಿ. ಕೆ. ರಾಘವೇಂದ್ರರಾಯರು, D.K. 27 ನ್ಯೂಕಾಲೋನಿ ಭದ್ರಾವತಿ.

೩೦೬ ಶ್ರೀ ಬಿ. ಕೆ. ಶ್ರೀಧರರಾಯರು D.K. ನ್ಯೂ-ಕಾಲೋನಿ, ಭದ್ರಾವತಿ

೩೦೭ ಶ್ರೀ ಕೆ. ನಾರಾಯಣರಾಯರು " " "

೩೦೮ ಶ್ರೀ ವೆಂಕಟರಾವ ರಾಮಚಂದ್ರರಾವ ಕುಲಕರ್ಣಿ ಟಕ್ಕಳಕಿ ಕುಷ್ಟಿಗಿ ಜಿ. ರಾಯಚೂರು.

೩೦೯ ಶ್ರೀ ಕೆ ಎಸ್. ಕೃಷ್ಣರಾವ, ಎಂ. ಎ. ಲೆಕ್ಚರಾರ ಫಿಲಾಸಫಿ ಫಸ್ಟ ಗ್ರೇಡ್ ಕಾಲೇಜ, ತುಮಕೂರು.

೩೧೦ ಶ್ರೀ ಎಸ್. ಆರ್. ಗೋಪಾಲಕೃಷ್ಣರಾಯರು, ಎಂ. ಎ., ಎಲ್. ಎಲ್. ಬಿ. ಅಡ್ವಕೇಟ್, ಗಾಂಧಿನಗರ ತುಮಕೂರು.

೩೧೧ ಶ್ರೀ ಎಂ. ಆರ್. ಕೃಷ್ಣಮೂರ್ತಿರಾವ, B. A. B. E. (MIE) ರಿಟೈರ್ಡ್ ಸುಪರಟೆಂಡಿಂಗ ಇಂಜನಿಯರ್, ಜಯನಗರ ಮೈಸೂರು.

೩೧೭ ಶ್ರೀ ಕೆ. ಮಂಜುನಾಥಶೆಟ್ಟಿ, ಜನರಲ್ ಮರ್ಚಂಟ ದೊಡ್ಡಪೇಟೆ ಚಿತ್ರದುರ್ಗ.

೩೧೮ ಶ್ರೀ ಬಿ. ಕೆ. ರಾಮಚಂದ್ರರಾಯರು, ಅಡ್ವಕೇಟ್ ಚಿತ್ರದುರ್ಗ ಇವರು ಶ್ರೀ ವಿಜಯದಾಸರ ಎಲ್ಲ ಸುಳಾದಿಗಳು ೨೨ ಪುಸ್ತಕ ತೆಗೆದುಕೊಂಡು ಸಹಾಯ ನೀಡಿರುವರು.

೩೧೯ ಶ್ರೀ ವೇ|| ಸಿ. ಆರ್. ಕೃಷ್ಣದ್ವೈಪಾಯನಾಚಾರ್ಯರು, ಉತ್ತರಾದಿ ಮಠ, ಚಿತ್ರದುರ್ಗ.

೩೨೨ ಶ್ರೀ ಕೆ. ಸಿ. ನರಸಿಂಹಮೂರ್ತಿಶೆಟ್ಟಿ, 928 ದೊ ಡ್ಡ ಪೇ ಟೆ ಚಿತ್ರದುರ್ಗ.

೩೨೮ ಶ್ರೀ ಪ್ರಲ್ಹಾದನಾಯಕರು, ಪ್ಲೀಡರ ರಾಣಿಬೆನ್ನೂರು.

೩೨೯ ಶ್ರೀ ವೆ| ವಿದ್ಯಾಧೀಶಾಚಾರ್ಯರು, ಪಾಂಡುರಂಗಿ, ಸೆಕ್ರಟರಿ ಶ್ರೀ ಗುರುರಾಜ ಭಜನಾ ಮಂಡಲ ರಾಣೆಬೆನ್ನೂರು.

೩೩೦ ಶ್ರೀ ನಾರಾಯಣರಾವ, ರಾಮಚಂದ್ರರಾವ ಕೆರೂರು, ವಕೀಲರು (ಅಧ್ಯಕ್ಷ ಭಜನಾ ಮಂಡಲಿ) ರಾಣೆಬೆನ್ನೂರು.

೩೩೧ ಶ್ರೀ ಪ್ರೊಫೆಸರ್ ಆರ್. ಎಸ್. ಟಿಲವಲ್ಲಿ, ವಾಲಚಂದ ಕಾಲೇಜ ಸಾಂಗಲಿ.

೩೩೩ ಶ್ರೀ ವೇದವ್ಯಾಸಾಚಾರ್ಯ, ಕಡಕೋಳ ಮಾಳಮಡ್ಡಿ, ಧಾರವಾಡ.

೩೩೪ ಶ್ರೀ ವೇ || ಬರ್ಲಿ ಬಿಂದು ಮಾಧವಾಚಾರ್ಯ, ಮಿಂಚನಬಳ್ಳಿ ಧಾರವಾಡ.

೩೩೭ ಶ್ರೀ ಹನುಮಂತರಾಯರು, ರಿ|| ಮಾಮಲೇದಾರ, ಕಾಮಲಾಪುರ. (ಚಂದ್ರಿಕಾ) ಮಾಳಮಡ್ಡಿ ಧಾರವಾಡ.

೩೩೯ ಶ್ರೀ ನರಸಿಂಗರಾಯರು ಹುದ್ದಾರ, ಭಾರತ ಬುಕ್ ಡಿಪೋ, ಧಾರವಾಡ.

೩೪೨ ಶ್ರೀ ಪ್ರಿನಸಪಾಲರು, ಜನತಾ ಕಾಲೇಜ. ಧಾರವಾಡ.

೩೪೩ ಶ್ರೀ ರಾಮರಾಯರು ಹುಕ್ಕೇರಿ, ಪೌಂಡರ ಜನತಾ ಕಾಲೇಜ ಧಾರವಾಡ.

೩೪೪ ಶ್ರೀ ವೆ| ಬೋಧರಾಯಾಚಾರ್ಯ, ರಾಘವೇಂದ್ರಾಚಾರ್ಯರು, ಗುತ್ತಲಗಣಾಚಾರಗಲ್ಲಿ, ಮಂಗಳವಾರಪೇಟೆ ಧಾರವಾಡ.

೩೪೭ ಶ್ರೀ ಎಂ.ಎಸ್. ಟಿಲವಲ್ಲಿ, ಮ್ಯಾನೇಜರ ಸುಪರಿಟೆಂಡೆಂಟಿP.W.D. ಬೆಳಗಾಂವ.

೩೫೦ ಶ್ರೀ ರಾಮಚಂದ್ರ ಅಣ್ಣಾರಾವ ಬಾಬಾನಗರ, ಪೊ॥ ಕಾಖಂಡಿ, ಜಿ. ವಿಜಾಪುರ.

೩೫೬ ಶ್ರೀ ಎ. ನಾರಾಯಣಮೂರ್ತಿಗಳು, ಪ್ಲೀಡರ,S.K.P.ದಾವಣಗೆರೆ.

೩೦೧ ಶ್ರೀ ಪಿ. ಎಸ್. ಶ್ರೀಪತಿರಾವ, **H. N.** (55) ಶಿರಸಿರೋಡ ಚಾಮರಾಜಪೇಟೆ, ಬೆಂಗಳೂರು–18.

೩೬೩ ಶ್ರೀ ಡಾ॥ ಎಸ್. ವಿ. ರಾಮರಾಯರು, ವಿಜಯನಗರ ಹುಬ್ಬಳ್ಳಿ.

೩೭೬ ಶ್ರೀ ಕೆ. ಎನ್. ಗುಂಡಪ್ಪ, C/o ಬಿ. ಕೆ. ಕೃಷ್ಣಮೂರ್ತಿ, ಮೆಡಿಕಲ್ ಆಫೀಸರ 115/1 ನೇ ಮೇನ ರೋಡ ಚಾಮರಾಜಪೇಟೆ.

೩೬೪ ಶ್ರೀ ಜಿ. ಪದ್ಮನಾಭರಾಯರು, ದಿ. ಜನರಲ್ ಎಜನಿಸಿ, ತುಮಕೂರು (ಮೈಸೂರು ಸ್ಟೇಟ) ಇನ್ನು ಇಬ್ಬರು ಒಟ್ಟಿಗೆ ಮೂರು ಜನ.

೩೭೧ ಶ್ರೀ ವೆ। ಡಾ॥ ವಾಮನಾಚಾರ್ಯರು ಹುಣಸಗಿ, ಕೋಟೆ ರಾಯಚೂರು.

೩೭೩ ಶ್ರೀ ತಟ್ಟಿ ಕೃಷ್ಣರಾಯರು, ಅಡ್ವೊಕೆಟ್. ಅಧ್ಯಕ್ಷರು, ಶ್ರೀರಾಮ ಸೇವಾ ಸಂಘ ಹೊಸಪೇಟೆ. (೩೦ ರೂ. ೩ ಭಾಗದ್ದು ಮುಂಗಡ.)

೩೭೫ ಶ್ರೀ ಜಿ. ಯಚ್. ಭಬ್ಬಿಯವರು, L. L. B. ಮುನಿಸಿಫರು, ಹೊಸಪೇಟೆ. (೩೦ ರೂ.)

೩೭೭ ಶ್ರೀ ಎ. ಗೋಪಾಲಕೃಷ್ಣ, ಅಡ್ವಕೆಟ್ ಹೊಸಪೇಟೆ.

೩೬೫ ಶ್ರೀ ಟಿ. ಕೆ. ಲಕ್ಷ್ಮಣ, ಜಯಲಕ್ಷ್ಮೀ ಇಂಡಸ್ಟ್ರೀಸ್ ತುಮಕೂರು.

೩೬೬ ಶ್ರೀ ಕೆ. ಆರ್. ಸುಬ್ಬರಾವ, ಕ್ಯಾತ್ಸಂದ್ರ ತಾ॥ ತುಮಕೂರು.

೩೨೨ ಶ್ರೀ ಎಂ. ರಾಮಾಚಾರ್ಯರು, C/o ಎಂ. ಜಗನ್ನಾಥರಾವ ಅಗ್ರಿಕಲ್ಚರ ಫೀಲ್ಡ್‌ಮೆನ್ A. R. S. ಫಾರಮ Babboor ಜಿ. ಚಿತ್ರದುರ್ಗ.

೩೩೮ ಶ್ರೀ ವಿ. ಎಸ್. ಒಡವಿ, ಅಕೌಂಟೆಂಟ್, ಕರ್ನಾಟಕ ಯೂನಿವ್ಹರಸಿಟಿ ಧಾರವಾಡ.

ಶ್ರೀ ಜಿ. ಬಿ. ರಾಘವೇಂದ್ರಾಚಾರ್ಯರು, ರಿ॥ ಹೈಸ್ಕೂಲು ಹೆಡ್ ಮಾಸ್ಟರ ಅ. ಸೇವಾ ಸಹಕಾರಸಂಘ ಹೊಳವನಹಳ್ಳಿ.

ಶ್ರೀ ಹೆಚ್. ಹನುಮಂತರಾವ, ಜಮೀನದಾರ, ಅಧ್ಯಕ್ಷರು, ಟೌನ್ ಸಹಕಾರಸಂಘ, ವೈ. ಯನ್. ಹೊಸಕೋಟೆ ತಾ| ತುಮಕೂರು.

ಶ್ರೀ ಕೆ. ನಂಜಯ್ಯ, ಮಾಲಕರು, ಕುಣೆಗಲ್ - ಮುದ್ರಣಾಲಯ, ಕುಣೆಗಲ್ ತುಮಕೂರು ತಾ||.

ಶ್ರೀಮತಿ ಸುಂದರಮ್ಮ-ಡಾಟರ್ ಆಫ್ A. R. ಸಂಜೀವರಾವ ಅರಕೆರೆ - ತುಮಕೂರು ತಾ||

ತುಮಕೂರಲ್ಲಿ ಜಿ. ಪದ್ಮನಾಭರಾಯರು, ಜನರಲ್ಲಿ ಏಜೆನಸ್ಸಿ ಪ್ರಿಂಟಿಂಗ್. (೬ ಜನ ಚಂದಾದಾರನ್ನು ಮಾಡಿದವರ ಉಪಕಾರ ಸ್ಮರಿಸುತ್ತದೆ.)

## ಇತರ ಸಹಾಯಕರ ಉಪಕಾರಸ್ಮರಣೆ

೧. ಶ್ರೀ ಕೆ. ವಿ. ರಾಮಚಂದ್ರರಾಯರು ಲೋಕಲ್ ಇಂಜನಿಯರ(308) 3 ನೇ ಕ್ರಾಸ್ ರೋಡ್, N. R. ಕಾಲೋನಿ ಬೆಂಗಳೂರು. ೫ ಸೆಟ್ಟು ಪುಸ್ತಕ ಖರ್ಚು ಮಾಡಿಸಿ ೨೫೦ ರೂ ವರೆಗೆ ಸಹಾಯ ನೀಡಿದ್ದಾರೆ. ಇವರು ಮೊದಲಿಗೆ ಮಂಡಲದ ಪೋಷಕರಾಗಿದ್ದಾರೆ.

೨. ಶ್ರೀ ರಾಮಚಂದ್ರರಾವ ಪಟವಾರಿ ಎಂ. ಎ. ಹೆಡ್ ಆಫ್ ಕನ್ನಡಾ ಉಸ್ಮಾನಿಯಾ ಯೂನಿವರಸಿಟಿ ಹೈದರಾಬಾದ (A.P) ಇವರು ೧೦೦ ರೂ. ಪುಸ್ತಕಗಳನ್ನು ಕೆಗೆದ ಸಹಾಯಕರು.

೩. ಅಥಣಿಯಲ್ಲಿ ಶ್ರೀ ವೆ| ಗೋಪಾಲಾಚಾರ್ಯ, ಬೀಳೂರು ಮತ್ತು ಶ್ರೀ ವಿ. ಎಸ್. ದೇಶಪಾಂಡೆಯವರು 15 ಜನ ಚಂದಾದಾರರನ್ನು ಪ್ರಯತ್ನಪೂರ್ವಕ ಮಾಡಿಕೊಟ್ಟಿದ್ದಾರೆ.

೪. ತುಮಕೂರಿನಲ್ಲಿ ಶ್ರೀ ಆರ್. ಎಸ್. ಗೋಪಾಲಕೃಷ್ಣರಾಯರು ಅಡ್ವಕೇಟ್ ೫ ಜನರನ್ನು ಶ್ರೀ ವೆ| ರಾಮೋತ್ತ್ಯಾಚಾರ್ಯರು 3 ಜನ ಚಂದಾದಾರ ಮಾಡಿದ ಸಹಾಯಕರು.

೫. ಚಿತ್ರದುರ್ಗದಲ್ಲಿ ಶ್ರೀ ಡಾಕ್ಟರ-ಜಿ. ರಾಘವೇಂದ್ರರಾಯರ ಸೂಚನೆಯಂತೆ ಶ್ರೀ ವೆ| ಸಿ. ಆರ್. ಕೃಷ್ಣದ್ವೈಪಾಯನಾಚಾರ್ಯ ಉತ್ತರಾದಿ ಮಠಾಧಿಕಾರರು ೯ ಜನರನ್ನು ಚಂದಾದಾರರನ್ನಾಗಿ ಮಾಡಿ ಸಹಾಯ ನೀಡಿದ್ದಾರೆ.

೭. **ದಾವಣಗೆರೆಯಲ್ಲಿ** ಶ್ರೀ ಭೀಮರಾಯರು ಪ್ಲೀಡರ, ಇವರು ೭ಜನ ಚಂದಾದಾರರನ್ನು ಕಳಿಸಿ ಸಹಾಯ ನೀಡಿದ್ದಾರೆ.

೭. **ರಾಣೆಬೆನ್ನೂರಿನಲ್ಲಿ** ಶ್ರೀ ನಾರಾಯಣರಾವ ರಾಮಚಂದ್ರರಾವ, ಕೆರೂರು ವಕೀಲರು 3 ಜನ ಚಂದಾದಾರರನ್ನು ಕಳಿಸುವದಲ್ಲದೆ ಇತರ ಕೆಲ ಪುಸ್ತಕಗಳನ್ನು ಖರ್ಚ ಮಾಡಿಸಿ ಸಹಾಯ ಮಾಡಿದ್ದಾರೆ.

೮. **ಹುಬ್ಬಳ್ಳಿಯಲ್ಲಿ** ಶ್ರೀ ಹುಚ್ಚರಾಯರು, ಬೆಂಗೆರಿ ಎಂ. ಎ. (ನಮ್ಮ ಮಂಡಲ ಪೋಷಕರು) ಅಭಿಮಾನದಿಂದ 3 ಜನ ಚಂದಾದಾರರನ್ನು ಮಾಡಿದ್ದಾರೆ.

೯. **ಧಾರವಾಡದಲ್ಲಿ** ಶ್ರೀ ಡಾ|| ಕೆ. ಎಸ್. ಕಾಮಲಾಪುರ, ಮತ್ತು ವೇ| ಬುರ್ಲಿ ಬಿಂದುಮಾಧವಾಚಾರ್ಯರು ಮಿಂಚಿನಬಳ್ಳಿ ಉಭಯರು ಆಲೋಚಿಸಿದಂತೆ ಶ್ರೀ ಬುರ್ಲಿ ಬಿಂದುಮಾಧವಾಚಾರ್ಯರು ಮನೆ ಮನೆ ತಿರುಗಿ 15 ಜನ ಚಂದಾದಾರರನ್ನು ಸಂಗ್ರಹಿಸಿ ಉಪಕಾರ ಮಾಡಿದ್ದಾರೆ.

೧೦. **ಬೆಂಗಳೂರಿನಲ್ಲಿ** ಶ್ರೀ ಎಂ. ಶ್ರೀಧರರಾಯರು, ಈ ಎರಡುವರ್ಷದಲ್ಲಿ ಒಟ್ಟಿಗೆ ಇಬ್ಬರು ಪೋಷಕರನ್ನೂ ಮತ್ತು 15 ಜನ ಒಟ್ಟಿಗೆ ಚಂದಾದಾರನ್ನು ಒದಗಿಸಿಕೊಟ್ಟಿರುವರಲ್ಲದೆ-ನಮ್ಮ ಮಂಡಲದ ಇತರ ಅನೇಕ ಕೆಲಸಗಳಲ್ಲಿ ದಾಸರಲ್ಲಿ ಭಕ್ತಿಯಿಂದ ಸಹಾಯ ನೀಡುತ್ತಿರುವರು.

೧೧. **ಹೊಸಪೇಟೆಯಲ್ಲಿ** ಶ್ರೀ ತಟ್ಟಿ ರಂಗರಾಯರು ಅಡ್ವಕೇಟ್ ಮತ್ತು ಅವರ ಅಣ್ಣಂದಿರಾದ ಶ್ರೀ ತಟ್ಟಿ ಮಾಧವರಾಯರು 9-10 ಜನ ಚಂದಾದಾರನ್ನು ಒದಗಿಸಿಕೊಟ್ಟಿದ್ದಾರೆ.

ಎಲ್ಲ ಸ್ಥಳಗಳಲ್ಲಿ ಪ್ರತಿಯೊಬ್ಬ ಸಹಾಯಕರು, ದಾಸರಲ್ಲಿ ಭಕ್ತಿಯುಳ್ಳವರಾಗಿ ಮನೆ ಮನೆ ತಿರುಗಿ ಶ್ರಮವಹಿಸಿ ಸಹಾಯ ಮಾಡಿದವರ ಉಪಕಾರ ಮತ್ತೊಮ್ಮೆ ಸ್ಮರಿಸುತ್ತದೆ.

೫ ಭಾಗಕಿಂತಲೂ, ಒಂದು ಭಾಗ ಹೆಚ್ಚಾಗಿ ೬ ನೇ ಭಾಗವೂ ೬೦೦ ೭೦೦ ಪುಟವಾಗುವದು. ೨೪ ರೂ. ಕಳಿಸಿದವರು ೩೦ ರೂ. ಕೊಟ್ಟವರ ಹೆಸರು ಪ್ರಕಟಿಸಿದೆ. ಇನ್ನು ಎಷ್ಟೋ ಜನ ಚಂದಾದಾರರು, ಪೂರ್ತಿ ಕಳಿಸಿಲ್ಲ. ೩೦ ರೂ. ಚಂದಾಕ್ಕೆ ಭರ್ತಿಮಾಡಿ ಬೇಗನೆ ಕಳಿಸಿದರೆ ಮುಂದೆ ಅವರ ಹೆಸರು ಪ್ರಕಟಿಸುತ್ತದೆ.

ಈ ವರ್ಷ ಮಾನ್ಯ ಮೈಸೂರ ಸರಕಾರದವರು ಈ ಹರಿಕಥಾಮೃತಸಾರ ಭಾಗ 1-2 ಕ್ಕೆ ೬೦೦ ರೂ. ಬಹುಮಾನ ನೀಡಿದವರ ಪುನಃ ಉಪಕಾರ ಸ್ಮರಿಸಿ, ವಂದನೆಗಳನ್ನರ್ಪಿಸುತ್ತೇವೆ. ಈ ೬೦೦ರೂ. ಮತ್ತು ಕೆಲ ಭಾಗ ಚಂದಾದಾರರೂ ಮತ್ತು ಇತರ ಪುಸ್ತಕಗಳ ಬೆಲೆ ಬಂದುದರಲ್ಲಿ ಹಿಂದಿನ ೧೭೫೦ ರೂ ಸಾಲದಲ್ಲಿ ೧೫೦೦ರೂ. ಸಾಲ ತೀರಿಸಿದೆ.

ಮತ್ತು ಈ ನಾಲ್ಕನೇ ಭಾಗವೂ ಅಚ್ಚಾಗಿ ೪ ನೇ ಭಾಗಕ್ಕೆ ಇನ್ನು ೫೦೦ ರೂ. ಸುಮಾರು ಸಾಲವಾಗಿದೆ. ದಾಸರೇ ಗತಿಯು ನಮಗೆಂದು ದಾಸರನ್ನು ಮೊರೆ ಹೊಗುವೆ.

—ಹ. ಗೊ.

## ಕಣ್ಮರೆ

**ನಮ್ಮ ಮಂಡಲದ ಸದಸ್ಯರು ಮಹದುಪಕಾರಮಾಡಿದ ಶ್ರೀ ವೆ। ವೆಂಕಟಾಚಾರ್ಯರು ಅಡ್ವಕೇಟ್ ರಾಯಚೂರ ಇವರ ಕಣ್ಮರೆಯಿಂದ ಮಂಡಲವು ಶೋಕಾಕುಲ ಅಶ್ರುಪೂರಿತವಾಗಿ ದುಃಖದಿಂದ ಎರಡು ನಿಮಿಷಗಳವರೆಗೆ ಮೌನತಾಳಿ ವೈಕುಂಠವಾಸಿಗಳ ಗುಣಗಾನಮಾಡಿತು.**

೧ ಶ್ರೀ ವೆಂಕಟಾಚಾರ್ಯರು ದಳವಾಯಿ, ಅಡ್ವಕೇಟ್ ಇವರು. ಅಪರೋಕ್ಷ ಜ್ಞಾನಿಗಳಾದ ಶ್ರೀಶ ಪ್ರಾಣೇಶವಿಠಲರ ಕುಟುಂಬದ ಸಮೀಪದ ಆಪ್ತರು.

೨ ಪೂರ್ವ ವಯಸ್ಸಿನಿಂದ ಸದಾಚಾರ ಸಂಪನ್ನರೂ, ಶ್ರೀಶ ಪ್ರಾಣೇಶ ವಿಠಲರ ಗೃಹವನ್ನು ಶ್ರೀ ವರದೇಂದ್ರಗುರು ಸಾರ್ವಭೌಮರು ಲಿಂಗಸೂಗೂರ ಇವರ ಮಠಕ್ಕೆ ಗೃಹದಾನವನ್ನು ಮಾಡಿ ಮಠವಿಸ್ತಾರಗೈಸಿದ ಪುಣ್ಯಾತ್ಮರು.

೩ ನಮ್ಮ ಮಂಡಲ ಸದಸ್ಯರೂ, ತಾರತಮ್ಯ ಸುಳಾದಿ ಪ್ರಕಟಿಸುವದಕ್ಕೆ ರಾಯಚೂರಲ್ಲಿ ಸುಮಾರು ೪೦೦ ರೂ. ಚಂದಾ ಮಾಡಿಕೊಟ್ಟ ಧರ್ಮಶೀಲರು.

೪ ಶ್ರೀ ಶ್ರೀಶ ಪ್ರಾಣೇಶ ವಿಠಲರು ೧೦೫-೧೧೦ ಹಿಂದೆ ಬರೆದಿಟ್ಟ ಶ್ರೀ ಮೂಲಪ್ರತಿ ಹರಿಕಥಾಮೃತಸಾರವನ್ನು ಬರೆದಿಟ್ಟದ್ದು. ತಮ್ಮ ವಶದಲ್ಲಿದ್ದುದು. ತಿದ್ದಿಕೊಳ್ಳಲು ಮಂಡಲಕ್ಕೆ ಕೊಟ್ಟ ಉಪಕಾರಿಗಳು.

೫ ವಕೀಲಿ ವೃತ್ತಿಯಲ್ಲಿ ಪ್ರಸಿದ್ಧಿಹೊಂದಿ ಕಾಯದೇ ಕಾನೂನ ಅರಿತ ಬುದ್ಧಿಮಾನರು.

೬ ಸದಾಚಾರದಿಂದಿದ್ದು ಗುರೂಪದೇಶದ್ವಾರಾ ಶ್ರವಣ ಮನನಾದಿ ರತ ಹರಿಭಕ್ತರು.

೭ ಧಾರ್ಮಿಕರೂ, ಸತ್ಪಾತ್ರದಾನಶೀಲ ವೈಷ್ಣವ ದೀಕ್ಷೆಯುಳ್ಳವರು.

೮ ಸಂಚಾಲಕನ ಬಾಲ್ಯಮಿತ್ರರೂ ಶಾಸ್ತ್ರ ಪ್ರಮೇಯ ವಿಚಾರಕರ್ತೃರು ವೈಕುಂಠವಾಸಿಗಳಾದುದರಿಂದ, ಅವರ ದೇಹವನ್ನು ಹವಿಸ್ತನ್ನು ಶ್ರೀಹರಿ ಪರುಶರಾಮನಿಗೆ ಅರ್ಪಿಸಿ ಪರಲೋಕದಲ್ಲಿ ಅವರ ಆತ್ಮಕ್ಕೆ ಶಾಂತಿ ಸುಖಗಳನ್ನೂ, ವ್ಯಾಕುಲರಾದ ಅವರ ಎಲ್ಲ ಕುಟುಂಬಕ್ಕೆ ಮನಸ್ಸು ಶಾಂತಿ ಧೈರ್ಯವೀಯಲೆಂದು ಶ್ರೀ ಹರಿಯ ಮೊರೆ ಪೊಗುವೆವು.

---

# ಚಂದಾದಾರರಲ್ಲಿ ವಿನಂತಿ

೧. ಈ ಗ್ರಂಥವ ಪ್ರಾರಂಭಕ್ಕೆ ಸುಮಾರು ೨ ಸಾವಿರ ಪುಟಗಳಾಗುವವೆಂದು ಭಾವಿಸಿ, ೪ ಭಾಗಗಳಾಗುವವೆಂದು ತಿಳಿದು, ೨೦ ರೂ. ಚಂದಾ ಇಟ್ಟಿತು. ಕೆಲವರು ೨೦ ರೂ. ಚಂದಾ ಕಳಿಸಿದ್ದಾರೆ.

೨. ಮೊದಲನೇ ಭಾಗಕ್ಕೇನೇ ಗ್ರಂಥ ಟಿಪ್ಪಣಿಗಳು ವಿಸ್ತಾರವಾದುದರಿಂದ (೫೬೦) ಪುಟಗಳಾದವು. ಹೆಚ್ಚಿಗೆ ೫೦೦ ಪುಟ—೨೫೦೦ ಪುಟಗಳು ಆಗುವ ನಂಬಿಕೆಯಿಂದ ೫ ಭಾಗಗಳಾಗುವವು. ಈ ಅಂದಾಜಿನಿಂದ ೫ ಭಾಗಗಳಿಗೆ ೨೫ ರೂ. ಚಂದಾ ಅಂಚೆ ವೆಚ್ಚ ಸಹಿತ ಇಟ್ಟಿತು. ೨೦-೨೫ ರೂ. ಕಳಿಸಿದ ಚಂದಾದಾರರ ಹೆಸರು ಪ್ರಕಟಗೈಸಿದೆ.

೩. ಈ ನಾಲ್ಕನೇ ಭಾಗಕ್ಕೇನೇ ಬಹು ವಿಶ್ವಪ್ರಯತ್ನದಿಂದ ೧೪ ಸಂಧಿಯಿಂದ ೧೮ ಸಂಧಿ ಪೂರ್ತಿಗೆ ಸುಮಾರು ಎರಡು ಸಾವಿರ ಪುಟಗಳಾದವು. ಸಂಧಿಯು ಸಾರ-ಪದಾರ್ಥಗಳು ಬಹು ವಿಸ್ತಾರವಾಗಿವೆ. ಅಲ್ಲದೇ ಕೆಲವು ಕಡೆಗೆ ಟೀಕಾ ವಿಸ್ತಾರವೂ ಬಹಳವಿದೆ. ಕಾರಣ ೫ ಭಾಗಗಳಲ್ಲಿ ಗ್ರಂಥ ಪೂರ್ತಿಯಾಗುವದಿಲ್ಲ. ಕಾರಣ ೬ನೇ ಭಾಗ ಒಂದು ಹೆಚ್ಚಿಗೆ ಆಗುತ್ತದೆ. ಸುಮಾರು ೩೨೫೦ ಪುಟಗಳಾಗುತ್ತವೆಂದು ನಿಶ್ಚೈಸಿ ಹಿಂದಿನಂತೆ ಅಂಚೆ ವೆಚ್ಚ ಸಹಿತ ೩೦ ರೂ. ಚಂದಾ ಇಟ್ಟಿರುವದು. ಈಗಿನ ಅಚ್ಚಿನ ಪರಿಸ್ಥಿತಿ ಮೇಲಿಂದ ಬಹಳ ಅಲ್ಲ.

೪. ಕಾರಣ ೨೦ ರೂ. ಕಳಿಸಿದ ಚಂದಾದಾರರು ಇನ್ನು ೧೦ ರೂ.ಗಳನ್ನೂ, ೨೫ ರೂ. ಕಳಿಸಿದವರು ಇನ್ನು ೫ ರೂ.ಗಳನ್ನೂ ಬೇಗನೆ ಮನಿ ಆರ್ಡರು ಕಳಿಸಿಕೊಡಬೇಕಾಗಿ ಪ್ರಾರ್ಥಿಸುತ್ತೇವೆ.

—ಸಂಚಾಲಕ ಮಂಡಲ.